**ಚರ್ಮ** (ನಾ). ೧. ತೊಗಲು ; ತ್ವಕ್ಕು ; ಅಜಿನ : "ತೋಲ್ ತೊವಲುಂ ಸಮ್ಮವುದಿರದಕ್ಕುಂ ಚರ್ಮ" (ಕವಿಕಂ. ೮೫). ೨. ಗುರಾಣಿ; ಢಾಲು: "ಖೇಟಕಂ, ಫಳಕಂ, ಚರ್ಮ, ಆವರಣಂ–ಈ ೪ ಹರಿಗೆ" (ಹಲಾಯು. ೭೩–೩೦೭). [ಸಂ. ಚರ್ಮನ್]

**ಚರ್ಮಕಶೆ** (ನಾ). ಸೀಗೆಮರ ಮತ್ತು ಅದರ ಕಾಯಿ [<ಸಂ. ಚರ್ಮಕಷಾ]

**ಚರ್ಮಕಾರ** (ನಾ). ಮೆಟ್ಟು ಹೊಲಿಯುವವನು; ಚಮ್ಮಾರ; ಸಮಗಾರ: "ಡೋಹಾರಃ– ಚರ್ಮಕಾರಂ" (ಕಾಶಕ್ಕ. ೬೭) ; ಹೊಲೆಯನೊಮ್ಮೆಯು ಪಾಡಲಿಕೆಯರವಿಂದನಾಭನ ನಾಮಮಾತ್ರದಲಿ ರೂಢಿಸಿಯೆನುತ ಚರ್ಮಕಾರರ ಗೂಡಿನಲಿ ಜನಿಸುವನು (ಕುವ್ಯಾಅ. ಓರಿಇ. ಪರಿ. ೩೪೩). [ಸಂ.]

**ಚರ್ಮಕೃತ್ತು** (ನಾ).=ಚರ್ಮಕಾರ : "ಚರ್ಮಕೃತ್, ಪಾದುಕಾಕಾರಃ– ಈ ೨ ಸಮ್ಮಗಾಱಂ" (ಹಲಾಯು. ೯೮–೪೪೨). [ಸಂ. ಚರ್ಮಕೃತ್]

**ಚರ್ಮಗತ** (ಗು). ಚರ್ಮಕ್ಕೆ ಸೇರಿದ; ಚರ್ಮಕ್ಕೆ ಸಂಬಂಧಿಸಿದ: ಅನ್ನಗತ ಪ್ರಾಣ, ಚರ್ಮಗತ ದೃಷ್ಟಿ (ಗಾದೆ). [ಚರ್ಮ + ಗತ$_2$]

**ಚರ್ಮಘರ್ಘರ** (ನಾ). ಎಣ್ಣೆ ಮೊದಲಾದುವನ್ನು ಹಾಕಲು ಮಾಡಿದ ಚರ್ಮದ ಬಂದ್ದಲಿ,–ಬುಡ್ಡಿ: "ಚರ್ಮಘರ್ಘರ[ಪಾಠಾಂ. ಗರ್ಪಟ, ಗರ್ಪರ]ಮೆನಲು ಬುದ್ದಳಿಗೆ ನಾಮಮಕ್ಕುಂ" (ಮಂಗರಾ. ೭೩–೨೭). [ಚರ್ಮ + ಘರ್ಘರ$_2$ (<ಗರ್ಘರಿ$_1$)]

**ಚರ್ಮಚಕ್ಷು** (ನಾ). ಪ್ರಾಕೃತಿಕವಾದ ಕಣ್ಣು ; ಭೌತಿಕ ದೃಷ್ಟಿ; ಹೊರಗಣ್ಣು : ಈ ಚರ್ಮಚಕ್ಷುಗಳಿಂ ಕಾಣ್ಬ ಪದಾರ್ಥಮಿಲ್ಲೆನುತೆ (ಜಗವಿ. ೦–೬೩) ; ಚರ್ಮಚಕ್ಷುಗಳಂತೆ ಅಂತಃಚಕ್ಷುಗಳೂ ಉಪಯೋಗಕ್ಕೆ ಬಾರದ ಧೃತರಾಷ್ಟ್ರನಂಥ ವರ್ಗವನ್ನು ಅಪವಾದವೆಂದು ಬಿಟ್ಟು ಬಿಟ್ಟರೂ (ಪ್ರಬಂಧ. ४೭). [ಚರ್ಮ + ಚಕ್ಷು]

**ಚರ್ಮಣ** (ನಾ). ವಾಗ್ಮಿ ; ಅವಧಾನಿ ; ಅನೇಕರ ಪ್ರಶ್ನೆಗಳಿಗೆ ಏಕಕಾಲದಲ್ಲಿ ಕೂಡಲೆ ಉತ್ತರ ಹೇಳಬಲ್ಲವನು : "ಮೇಳೈಸಿ ನಾನಾರವಕ್ಕೆ ಪ್ರತಿಗ್ರೈವವಂ ಚರ್ಮಣಂ ವಾಗ್ಮಿಯಕ್ಕುಂ" (ಮಂಗರಾ. ೦೦೭–೧೭). [?]

**ಚರ್ಮದಂಡ** (ನಾ). ಚರ್ಮದಿಂದ ಮಾಡಿದ ಚಾಟಿ ; ಕಶಾದಂಡ ; ಬಾರುಕೋಲು; ಚಮ್ಮಟಿಗೆ: "ಚರ್ಮದಂಡಃ, ಕಶಾ–ಈ ೨ ಚಮ್ಮಟಿಗೆ" (ಹಲಾಯು. ೭೩–೨೮೮) ; "ಕಸೆ ಚರ್ಮದಂಡಮೆನೆ ಚಮ್ಮಟಿಗೆಯೆನಿಸಿಕ್ಕು" (ಮಂಗರಾ. ೪೦–೦೩). [ಚರ್ಮ + ದಂಡ]

**ಚರ್ಮಪಟ್ಟಿಕೆ** (ನಾ). ೧. ಚರ್ಮದ ಬಾರು. ೨. ಪಗಡೆ ಮೊದಲಾದುದನ್ನು ಆಡಲು ಬಳಸುವ ಚರ್ಮದ ಹಾಸು ; ಪಟ್ಟಿ. [ಚರ್ಮ + ಪಟ್ಟಿಕೆ]

**ಚರ್ಮಪಾದುಕ** (ನಾ). ತೊಗಲಿನ ಹಾವುಗೆ ; ಚರ್ಮದಿಂದ ಮಾಡಿದ ಮೆಟ್ಟು ; ಪಾದರಕ್ಷೆ : "ಚರ್ಮಪಾದುಕಮುಪಾನತಿಯೆನಲ್ ಕೆರವು" (ಮಂಗರಾ. ೬೦–೦೮). [ಸಂ. ಚರ್ಮಪಾದುಕಾ]

**ಚರ್ಮಪಾದುಕೆ** (ನಾ).=ಚರ್ಮಪಾದುಕ. [ಚರ್ಮ + ಪಾದುಕೆ]

**ಚರ್ಮಪಾಶ** (ನಾ). ಚರ್ಮದಿಂದ ಮಾಡಿದ ಹಗ್ಗ,–ಮಿಣಿ : "ಮಿಣು ಚರ್ಮಪಾಶಂ" (ಮಂಗರಾ. ೪೪–೨೫). [ಚರ್ಮ + ಪಾಶ]

**ಚರ್ಮಪ್ರಭೇದಿಕೆ** (ನಾ). ಚಮ್ಮಾರನು ಉಪಯೋಗಿಸುವ ಚೂರಿ,–ಉಳಿ ; "ಚರ್ಮ ಕತ್ತರಿಸುವ ಸಾಧನ" (ಅಮರ. ಟೀಕೆ). [ಸಂ. ಚರ್ಮಪ್ರಭೇದಿಕಾ]

**ಚರ್ಮಪ್ರಸೇವಿಕೆ** (ನಾ). ತಿದಿ : "ಚರ್ಮಪ್ರಸೇವಿಕೆ = ತೊಗಲ ತಿದಿ" (ಗಂಗಾಮು. ೦೨೯). [ಸಂ. ಚರ್ಮಪ್ರಸೇವಿಕಾ]

**ಚರ್ಮಯಷ್ಟಿ** (ನಾ).=ಚರ್ಮದಂಡ : "ಕಶಾಹ್ವಯಂ ಚರ್ಮಯಷ್ಟಿ" (ವಸ್ತುಕೋ. ೮೭–೨೫). [ಚರ್ಮ + ಯಷ್ಟಿ]

**ಚರ್ಮಯಷ್ಟಿಕೆ** (ನಾ).=ಚರ್ಮದಂಡ. [ಚರ್ಮ + ಯಷ್ಟಿಕೆ]

**ಚರ್ಮರತ್ನ** (ನಾ). [ಜೈನ] ಚಕ್ರವರ್ತಿಯಾಗುವವನಿಗೆ ತಾನಾಗಿ ದೊರಕುವ ಏಳು ಅಜೀವರತ್ನಗಳಲ್ಲಿ ಒಂದು ; ೞ ನೀರಿನ ಮೇಲೆ ತೇಲಿ ಹೋಗಲು ಉಪಯೋಗಿಸುವ ಚರ್ಮದ ಸಾಧನ. ಇದರ ಪ್ರಭಾವದಿಂದ ಚಕ್ರವರ್ತಿಯು ಅಗಾಧ ಜಲದುರ್ಗಗಳನ್ನು ಆಕ್ರಮಿಸಬಲ್ಲನು. ಮಳೆ ಬಂದಾಗ ಮೇಲೆ ಛತ್ರರತ್ನವನ್ನು ಹಿಡಿದು, ಚರ್ಮರತ್ನದ ಮೇಲೆ ಅಪಾರ ಸೈನ್ಯದೊಡನೆ ನಿಶ್ಚಿಂತನಾಗಿ ನಿಂತು ಕೊಳ್ಳಬಹುದು : ಅಗಾಧಜಲದುರ್ಗಸಮುತ್ತರಣನಿರತಸಕಲಶಿಬಿರಸಂಧಾರಣಶಕ್ತಿಯುಕ್ತಮಪ್ಪ ವಜ್ರಮಯಮೆಂಬ ಚರ್ಮರತ್ನಮುಂ (ಆದಿಪು. ೧೧–೩ ವ) ; ನೆಲನೆಲ್ಲಮನವರೇಕಾರ್ಣವಂ ಮಾಡಿದೊಡಡಿಯೊಳ್ ಪಾಸಿದ ಚರ್ಮರತ್ನಮುಂ ಮೇಲೆ ಪಿಡಿದ ಛತ್ರರತ್ನಮುಂ ಕಾಯೆ(ಅಜಿಪು. ೯–೩೪ ವ); ಗಗನತಳದಂತೆ ಪೆರ್ಮೆಯಿಂ ತಳೆದ ವಜ್ರಮಯಮೆಂಬ ಚರ್ಮರತ್ನಮುಂ (ಚಂದ್ರಪು. ೬–೧೦೧ ವ). [ಚರ್ಮ + ರತ್ನ]

**ಚರ್ಮವಾದ್ಯ** (ನಾ). ತೊಗಲಿನಿಂದ ಮಾಡಿದ ಹರೆ, ಮೃದಂಗ, ತಬಲ ಮುಂತಾದ ವಾದ್ಯ: ಇಲ್ಲಿ ಚಂಡೆ . . . ಎಂಬ ಒಂದು ಚರ್ಮವಾದ್ಯವನ್ನು ಉಪಯೋಗಿಸುತ್ತಾರೆ (ಯಕ್ಷಗಾ. ೧೭). [ಚರ್ಮ + ವಾದ್ಯ]

**ಚರ್ಮವಾವುಗೆ, ಚರ್ಮಾವುಗೆ** (ನಾ).=ಚರ್ಮಪಾದುಕ: ಸೊಸೆವಿರ್ಗಿಲ್ಲಂಸಲೆ ಚರ್ಮ [ಪಾಠಾಂ. ಮ್ಮ] ವಾವುಗೆಯುನಾ ಲಲನೆ ಮಹೋತ್ಸಾಹದಿಂದ ಮಾಡಿಸಿ ಕೊಟ್ಟಳ್ (ಸುಕುಮಾ. ೧೦–೧೨೦). ಚರ್ಮಾವುಗೆ: ಜನಪದೋಲಗದ ಚಾವಡಿಗೆಯ್ದಿ ಕೇಳ್ದನಾ ಚರ್ಮಾವುಗಾರವೆಂದು (ಗುರುಚಾ. ೦೩–೫೫). [ಚರ್ಮ + ಪಾವುಗೆ]

**ಚರ್ಮಶಾಸ್ತ್ರ** (ನಾ). "ಚರ್ಮ ಮತ್ತು ಚರ್ಮರೋಗ ವಿಷಯಕವಾದ ಶಾಸ್ತ್ರ ; ಚರ್ಮಶಾಸ್ತ್ರ" (Dermatology. ಇಂಕಣಿ). [ಚರ್ಮ + ಶಾಸ್ತ್ರ]

**ಚರ್ಮಸೇವನ** (ನಾ). ತಿದಿ : "ಧೃತಿ ಚರ್ಮಸೇಚ[ಪ]ನಮೆನಲ್ಕೆ ತಿದಿಯಕ್ಕು" (ಮಂಗರಾ. ೧೩೩–೩೦). [ಸಂ. (ಚರ್ಮ + ಸೇವನ)]

**ಚರ್ಮಾಂಬರ** (ನಾ). ತೊಗಲಿನ ಬಟ್ಟೆ,–ವಸ್ತ್ರ,–ಉಡುಗೆ : ಹರಿಣಶಾರ್ದೂಲಾದಿ ಚರ್ಮಾಂಬರವೆ ಸವುಕಟ್ಟೆಮುಗೆ ರತ್ನಾಭರಣವೇ ರುದ್ರಾಕ್ಷಿಯೆಂದಳು ನಗುತ ತರಳಾಕ್ಷಿ (ಕುವ್ಯಾಅ. ೨೧–೭). [ಚರ್ಮ + ಅಂಬರ]

**ಚರ್ಮಾಕ್ಷಿ** (ನಾ). = ಚರ್ಮಚಕ್ಷು : ಹರನನೀ ಚರ್ಮಾಕ್ಷಿಯಲಿ ಗೋಚರಿಸೆ ಬೇಡಿದುದಂಬು ಮರ್ತ್ಯದೊಳಿರವು ಮರುಳು ಭಾಪೆನ್ನ ಪುಣ್ಯವೆನುತ್ತ ಬಿಸುಸುಯ್ದು (ಕುವ್ಯಾಅ. ೭–೨). [ಚರ್ಮ + ಅಕ್ಷಿ]

**ಚರ್ಮಾಯತನವಕ್ಕಿ** (ನಾ). ಬಾವಲಿ ; ಕಣ್ಣುಕಪ್ಪಡಿ : ಜತನದಪ್ಪದ ಕೊನೆವಿಡಿದು ನೇಲುವ ಚರ್ಮಾಯತನವಕ್ಕಿಯು ಕಂಡು ನಗುತೆ (ಮೋಹತ. ೨೮–೬೨). [ಚರ್ಮ + ಆಯತನ + ಪಕ್ಕಿ$_1$]

**ಚರ್ಮಾವುಗೆ** 'ಚರ್ಮವಾವುಗೆ' ನೋ.

**ಚರ್ಮಿ** (ಗು). ೧. ಗುರಾಣಿಯನ್ನು ಹಿಡಿದುಕೊಂಡ.(ನಾ). ೨. ಹರಿಗೆ; ಗುರಾಣಿ : "ಫಳಕಂ ಖೇಟಕಂ ಚರ್ಮಿ ಹರಿಗೆಯಕ್ಕುಂ" (ಮಂಗರಾ. ೮೭–೩೦). ೩. ಗುರಾಣಿಯನ್ನು ಹಿಡಿದುಕೊಂಡವನು ; ಯೋಧ: "ಚರ್ಮಿ, ಫಲಕಪಾಣಿ–ಕಡಿತಲೆಗಾಱ" (ನಾಚಿರಾ. ೬). ೪. "ಭುಜಪತ್ರೆಗಿಡ" (ಅಮರ. ಟೀಕೆ). [ಸಂ. ಚರ್ಮಿನ್]

**ಚರ್ಮೇಂದ್ರಿಯ** (ನಾ). ೧. ಪಂಚೇಂದ್ರಿಯಗಳಲ್ಲಿ ಒಂದಾದ ಚರ್ಮ ; ಸ್ಪರ್ಶೇಂದ್ರಿಯ. ೨. ಭೌತಿಕಜಗತ್ತಿಗೆ ಸೀಮಿತವಾದ ಇಂದ್ರಿಯ ; ಚರ್ಮೇಂದ್ರಿಯಗಳಿಗೆ ಗೋಚರಿಸುವ ಮಹಾಭೌತಿಕ ಸೃಷ್ಟಿ; ಶಬ್ದಗಳಿಂದ ಸೂಚಿತವಾಗುವ ಸಾಹಿತ್ಯ ಸೃಷ್ಟಿ; ಮನಸ್ಸಿಗೇ ಹೊಳೆಯುವ ಕಲ್ಪನಾಸೃಷ್ಟಿ (ಸಾಹಿವಿ. ೦೮೨). [ಚರ್ಮ + ಇಂದ್ರಿಯ]

**ಚರ್ಯ** (ನಾ). ೧. ನಡತೆ; ನಡೆವಳಿ: ನಾವು ಅವಳ ವಿಷಯದಲ್ಲಿ ತೋರಿಸಿದ ಚರ್ಯವು ಅಷ್ಟು ಶ್ಲಾಘ್ಯತರವಾದ್ದೆಂದು ಕಾಣುವುದಿಲ್ಲ (ಪೆಟಿಮಾ. ೩೦). ೨. ಆಚರಣೆ ; ಅನುಷ್ಠಾನ : ಶೈವಾಗಮಗಳೆಲ್ಲವೂ ಜ್ಞಾನ, ಯೋಗ, ಕ್ರಿಯಾ, ಚರ್ಯ ಎಂಬ ನಾಲ್ಕು ವಿಷಯಗಳನ್ನು ವಿವರಿಸತಕ್ಕವುಗಳಾಗಿವೆ (ಭಾರದ. ೨೦೦). [ ಸಂ. ಚರ್ಯಾ ]

**ಚರ್ಯಾಧಿಕಾರ** (ನಾ). ೧. ಅನುಷ್ಠಾನದ ಯೋಗ್ಯತೆ. ೨. ಅನುಷ್ಠಾನ ಮಾಡಿ ಸಿದ್ಧಹಸ್ತನಾದವನು : ಆರ್ಯಾಶತಕಮಂ . . . ಚರ್ಯಾಧಿಕಾರನತ್ಯಾಶ್ಚರ್ಯಾಮರವಾಣಿಯಿಂದಮೆಸಗಿದನೊಲವಿಂ ( ಶಾ ಕುಂ ತ . ೬-೦೧). [ ಸಂ. (ಚರ್ಯಾ + ಅಧಿಕಾರ) ]

**ಚರ್ಯಾಪಾದ** (ನಾ). [ವೀಶೈ] ಆಚಾರ ಸಂಪ್ರದಾಯ ಹಾಗೂ ವ್ರತಗಳನ್ನು ತಿಳಿಸುವ ಆಗಮಭಾಗ : ಚರ್ಯಾಪಾದವು ಆಚಾರಸಂಪ್ರದಾಯಗಳನ್ನೂ ವ್ರತನಿಯಮಗಳನ್ನೂ ಹೇಳುತ್ತದೆ (ಭಾರದ. ೨೦೦).
[ ಸಂ. (ಚರ್ಯಾ + ಪಾದ) ]

**ಚರ್ಯಾಮಾರ್ಗ** (ನಾ). ೧. [ಶೈವ] ಚರ್ಯಾಮಾರ್ಗ, ಕ್ರಿಯಾಮಾರ್ಗ, ಯೋಗಮಾರ್ಗ ಮತ್ತು ಜ್ಞಾನಮಾರ್ಗ ಎಂಬ ಮೋಕ್ಷ ಸಾಧನೆಯ ನಾಲ್ಕು ಮಾರ್ಗಗಳಲ್ಲಿ ಒಂದು : ಚರ್ಯಾಮಾರ್ಗ ಅಥವಾ ದಾಸ ಮಾರ್ಗದಲ್ಲಿ ಸಾಧಕನು ದೇವಸ್ಥಾನಗಳಲ್ಲಿ ಶಿವಾರ್ಚನೆಗೆ ಸಲಕರಣೆಗಳನ್ನೊದಗಿಸಿ . . . ಶಿವಭಕ್ತರ ಸೇವೆ ಮಾಡಿಕೊಂಡು . . . ಸಾಲೋಕ್ಯ ಪದವಿಯನ್ನು ಹೊಂದುವನು (ಭಾರದ. ೨೦೭). ೨. [ಜೈನ] ಚರಿಗೆಗಾಗಿ ಹೋಗುವ ಉದ್ದೇಶ : ಚಂಪಾನಗರಕ್ಕೆ ಚರ್ಯಾಮಾರ್ಗದಿಂ ಬರುತ್ತಂ (ಸುಕುಮಾ. ೪-೩೫ ವ). [ ಸಂ. (ಚರ್ಯಾ + ಮಾರ್ಗ) ]

**ಚರ್ಯೆ** (ನಾ). ೧. ನಡೆ ; ನಡತೆ ; ವರ್ತನೆ : ಗುರು ಆಕೆಯ ಚರ್ಯೆಗೆ ವಶನಾಗಿ, ಆಕೆಗೆ ಧರ್ಮವನ್ನು ಉಪದೇಶ ಮಾಡಿದನು (ಹತ್ತುಮ. ೦೮) ; ಹೆಂಡತಿಯಾದವಳಿಗೆ ಗಂಡನ ಚರ್ಯೆಯಲ್ಲಿ ಮರುಅಭಿಪ್ರಾಯವನ್ನು ಸೂಚಿಸುವ ಅಧಿಕಾರವಿದೆಯೇ? (ಕಾವೇರಿ. ೧೮೫). ೨. ಅಭಿವ್ಯಕ್ತಿ. 'ಮುಖಚರ್ಯೆ' ಪರಾ. ೩. [ಜೈನ] ಅಹಿಂಸೆಯ ಪ್ರತಿಜ್ಞೆ,-ಆಚರಣೆ: ಚರ್ಯೆಯೆಂಬುದು ದೇವತಾರ್ಥಮುಂ ಮಂತ್ರಸಿಧ್ಯರ್ಥಮುಂ ಮೇಷಣಾರ್ಥಮುಂ ಆಹಾರಾರ್ಥಮುಂ ಭೋಗಾರ್ಥಮುಮಾಗಿ ಜೈನನಪ್ಪಾತಂ ಹಿಂಸೆಗೆಯ್ವನಲ್ಲಂ (ಚಾವುಂಪು. ೨೪೭). [ ಸಂ. ಚರ್ಯಾ ]

**ಚರ್ವಣ** (ನಾ). ೧. ಅಗಿದು ತಿನ್ನುವುದು ; ನುರಿಸುವುದು : ಸಮ್ಮಾರ್ಜಿತೋಜ್ವಲದಶನನಿಚಯತಾಂಬೂಲಚರ್ವಣಭರಿತಕಪೋಲರುಂ ಗೋ ೦ ನಿಯೋಗ ದಂಡಧರರುಮಾಗಿ(ಜಗವಿ. ೪-೮೦ ವ). ೨. ಮನಸ್ಸಿನಲ್ಲಿ ಮೆಲುಕು ಹಾಕುವಿಕೆ; ಪುನಶ್ಚಿಂತನೆ: ಅನುಭವದ ಚರ್ವಣರೂಪದ ಪುನರನುಭವವೇ ಕಲಾಸೃಷ್ಟಿಗೆ ಕಾರಣವಾದ ಅನುಭವ (ಸೌಂದಸ. ೦೪). [ ಸಂ. ]

**ಚರ್ವಣೆ** (ನಾ). = ಚರ್ವಣ ೨ : ಅವುಗಳ ಚರ್ವಣೆಯಿಂದ ಆಸ್ವಾದ್ಯವಾದುದೇ ಅಲೌಕಿಕ ಕರುಣರಸ (ಧ್ವನ್ಯಾಲೋ. ೧೮ ಅಡಿಟಿ).
[ ಸಂ. ಚರ್ವಣ ]

**ಚರ್ವಿ** (ನಾ). (?) : ಉದಿಪುದು ಮಮಾಹಮೆಂಬುರು ಭ್ರಾಂತಿ ದುರ್ಮಾರ್ಗ ಪದವಿಯಂ ಪಿಡಿದ ಚರ್ವಿಯು ಜನಿಸಿ ಪೈಶೂನ್ಯ ವಿಧಿಯೆನಿಪ ಕೃಷ್ಣ ಜಿಷ್ಟೆಯು ಮನೋಭ್ರಮೆಯಿಂದ ಭಾವಿಸುತಮವಿಸುತಿಹುದು (ವಂಕಾರಾ. ೩-೨೦-೬೦). [ ? ]

**ಚರ್ವಿತ** (ಗು). ೧. ಅಗಿದು ನುರಿಸಿದ. ೨. ತಿಂದ ; ಉಂಡ ; ರುಚಿ ನೋಡಿದ. 'ಚರ್ವಿತಚರ್ವಣ' ಪರಾ. [ ಸಂ. ]

**ಚರ್ವಿತಚರ್ವಣ** (ನಾ). . ತಿಂದುದನ್ನೇ ಮತ್ತೆ ತಿನ್ನುವುದು ; ಅಗಿದುದನ್ನೇ ಮರಳಿ ಅಗಿಯುವುದು. ೨. (ಅಲಂ) ಮಾಡಿದುದನ್ನೇ ಮಾಡುವಿಕೆ ; ವ್ಯರ್ಥವಾದ ಪುನರುಕ್ತಿ ; ತೌಡು ಕುಟ್ಟುವುದು : ನಿಚ್ಚ ಮಿಾ ಪಿಷ್ಟಪೇಷಣಮಿಾ ಚರ್ವಿತಚರ್ವಣಂ ಸುಖವಿದೇಂ ನಿನ್ನಂ ಮರುಳ್ಮಾಡಿತೋ (ಅಜಿಪು. ೩-೬೯) ; ಭವಜಲರಾಶಿಯೊಳ್ ಮುಂಬುಗಲ ಟ್ಟಿಯೆ ಚರ್ವಿತಚರ್ವಣಕ್ಕೆ (ಅಜಿಪು. ೧೦-೫). [ಚರ್ವಿತ + ಚರ್ವಣ]

**ಚರ್ವಿಸು** (ಕ್ರಿ). ತಿನ್ನು; ಸೇವಿಸು: ಕೈವಾಯಿಗಳ ತೊಳೆದು ತಾಂಬೂಲಮಂ ಚರ್ವಿಸಿ (ನವಮೋ. ೧೦-೭೨). [ ಚರ್ವಣ + – ಇಸು$_3$ ]

**ಚರ್ವು** 'ಜರ್ವು$_1$' ನೋ.

**ಚಲ್**$_1$ 'ಸಲ್$_1$' ನೋ.

**ಚಲ್**$_2$ 'ಚಲ್ಲು$_1$' ನೋ.

**ಚಲ**$_1$, **ಚಳ**$_1$, **ಛಲ**$_1$ (ನಾ). ೧. ಪಟ್ಟುಹಿಡಿಯುವುದು; ಹಿಡಿದುದನ್ನು ಬಿಡದೆ ನಡೆಸುವ ದೃಢಚಿತ್ತತೆ ; ಸ್ಥಿರಸಂಕಲ್ಪ ; ಮನೋನಿಶ್ಚಯ : ಕಂದರ್ಪಂ ಚಲದೆನ್ನೊಳ್ಪಿಂದಂ (ಕವಿರಾ.೨-೬೨). ಚಲದೊಳ್ ದುರ್ಯೋಧನಂ ನನ್ನಿಯೊಳಿನತನಯಂ (ಪಂಪಭಾ. ೧೪-೬೪) ; ಕಿಡದ ಜಸಕ್ಕೆ ತಾನೆ ಗುಬಿಯಾದ ಚಲಂ . . . ಆಳ್ದ ಚಲಂ ಚಲದಂಕರಾಚನ(ಎಕ. II, ೧೩೩-೨೦ ; 982); ಚಲದಿಂ ಯದುಬಲವಾಂತಿಸೆ ಸಲೆ ಶರತತಿ ಖಚರರಪಥನೇಗಳನಾಗಳ್ ಗೆಲೆ . . . ನಭಶ್ಚರಸೈನ್ಯಂ (ನೇಮಿ.ಪು. ೬-೮೪). ೨. ಪೊಂಡುತನ; ಹಟಮಾರಿತನ: ಚಲದಿಂ ಕೃಷ್ಣೆಯ ಕೇಶಮಂ ಪಿಡಿದ ನಿನ್ನಿಂ ದಾ ದ ಟ ಲ್ ನಿನ್ನುರಸ್ಥಲಮಂ ಪೋಟದೆ ಪೋಪುದಲ್ತು (ಪಂಪಭಾ. ೧೨-೧೪೭). ೩. ಹಿಡಿತ ; ಬಿಗಿ : ಶ್ಲೇಷ್ಮದ ಚಲ ಕತ್ತರಿಸಿ ಬೀಳುವುದು (ಸಕವ್ಯ. ೨೨೩). ಚಳ$_1$: ೧. ಪುಗೆ ನೃಪಸಂಕುಳಂ ಮನಸಿಜಗೃಹವಾಗೃಹದಿಂದೆ ಪತ್ತಲಂ ದೊಗೆಯೆ ವಿಕಾರಚೇಷ್ಟೆ ಚಳಮಂ ನುಡಿದು (ನೇಮಿಪು. ೯-೮೪). ಛಲ$_1$: ೧. ಛಲ ಬೇಕು ಶರಣಂಗೆ ಪರಧನವನೊಲ್ಲೆನೆಂಬ (ಬಸವ. ೬೭೬) ; ಛಲದಿಂ ಪೋರಿದರೆಲ್ಲರಂ ಗೆಲಿದು ಬಂದಾ ಪೆಣ್ಣ ಕೊಂಡೋಡಿದಂ (ಸೋಮೇಶ. ೪೪); ಎಲವೆಲವೊ ಕಲಿಯಾಗು ಮಾರುತಿ ಗೆಲಿದನೆಂದಿರಬೇಡ . . . ಛಲವದುಳ್ಳಡೆ ಸಾಕು (ಕುಮ್ಮಾದ್ರಾ. ೧೩-೫೨). 'ಛಲವಿಡಿ' ಪರಾ. ೪. ಹಟಗಾರ; ದೃಢಸಂಕಲ್ಪವುಳ್ಳವನು : ಮೂಜಗದೊಳ್ ಮೆಚಿವ ಮಾನವದೇವಂ ಗೆಲಿದಂ ಅಸ(ಶ)ನ ಬೆಸನವ ಛಲರಧಿಕಂ ಹಾಲ ಬಸವಿದೇವಮುನೀಸಂ (ಎಇ. XXI, ೧೩-೩೯ ; 1260).

**ಚಲಚಲ** (ದ್ವಿರುಕ್ತಿ) : ಚಲಚಲದಾಂತು ಕಾದುವ ಸುಯೋಧನ ಸಾಧನದೊಡ್ಡುಗಳ್ (ಪಂಪಭಾ. ೧೦-೩೩). ಚಲಕೆ ನಲ್ಲಾತಂ=ದೃಢಸಂಕಲ್ಪದಲ್ಲಿ ಆಸಕ್ತಿಯುಳ್ಳವನು ; ಒಂದು ಬಿರುದು : ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾರಕಂ ಚಲಕೆ ನಲ್ಲಾತಂ ಶ್ರೀಮತ್ಕನ್ನರದೇವನ ರಾಜ್ಯಮುತ್ತರೋತ್ತರಾಭಿವೃದ್ಧಿಗೆ ಸಲುತ್ತಮಿರೆ (ಸೌಇಇ. IX-1, ೬೬-೨ ; 956) ; ಚಲಕೆ ನಲ್ಲಾತಂ ಶ್ರೀಮತ್‌ಕನ್ನರದೇವಂ (ಎಇ. IV, ೩೫೨-೨ ; 975). ಚಲಕೆ ಮೊದಲಿಗ=ದೃಢಸಂಕಲ್ಪವನ್ನು ಪಾಲಿಸುವವರಲ್ಲಿ ಮೊದಲಿಗನಾದವನು ; ಒಂದು ಬಿರುದು : ಅಸತಿವಿದೂರನಾಳ್ದಾನಿವೀರಂ ಚಾಳುಕ್ಯಾರ್ಜುನಂ ಚಲಕೆ ಮೊದಲಿಗಮುರಟ್ಟಗಣ್ಡನಕಳಂಕ ಮಹೇಶ್ವರಂ (ಎಕ. XIV, ಮೈಸೂರು. ೦೨೭-೪; ಸು. 900). ಚಲಕ್ಕೆಬಲ್ಗಂಡಂ=ದೃಢನಿಶ್ಚಯಕ್ಕೆ ತಕ್ಕ ಪರಾಕ್ರಮ ಉಳ್ಳವನು ; ಒಂದು ಬಿರುದು : ಉದಾರ ಮಹೇಶ್ವರಂ ಚಲಕ್ಕೆ ಬ[ಲ್ಗ]ಣ್ಡಂ ಶೌರ್ಯ್ಯಮಾರ್ತ್ತಣ್ಡಂ (ಸೌಇಇ. XI-i, ೦೦೩-೭ ; 1074). ಚಲದಂಕ, ಛಲದಂಕ=ಹಟವುಳ್ಳ ವೀರ ; ದೃಢನಿಶ್ಚಯವುಳ್ಳವನು ; ಒಂದು ಬಿರುದು : ಚಲದಂಕ ಕಂಠೀರವ ನರಸೇಂದ್ರು ಭೂತಳವ ಪಾಲಿಸುತಿರ್ಥಿಯಲಿ (ಕಂಸವಿ. ೮-೨) ; ಗಂಟಲಗಾಳಗತ್ತರಿ ಗರಗಸದ ಬಿರುದಾಳಿಗಳ ಛಲದಂಕ ರಾವುತರೊತ್ತಿ ನೂಕಿದರು (ಕುಮ್ಮಾಭೀ. ೪-೩೬) ; ಬಲಗೊಂಬೆನಧಿಕ ಪ್ರವೀಣನ ಬಾಣನ ಕಲೆಗಳಾಸಾರ ಮಯೂರನ ಸುಲಲಿತ ವಾಕ್ಯಭೂಷಣ ಕಾಳಿದಾಸನ ಛಲದಂಕನ ರಾಘವಾಂಕನ (ತ್ರಿಭುತಿ. ೨-೧೬). ಚಲದಂಕಕಾಱ=ಚಲದಂಕ:

ಪರಸೈನ್ಯಮಂ ಪೆಱಂಗೆಡೆಗುಡದಟ್ಟಿ ಕೊಲ್ವ ಚಲಮಾಳ್ದಚಲಂ ಚಲದಂಕ ಕಾಱನ (ಎಕ. II, ೧೩೩-೨೫ ; 982). **ಚಲದಂಕಮಲ್ಲ, ಛಲದಂಕಮಲ್ಲ**=೧. ದೃಢಚಿತ್ತದಿಂದ ಕಾದಾಡುವ ವೀರ ; ಒಂದು ಬಿರುದಂ : ಚಲದಂಕಮಲ್ಲನಾದ ಕಂಠೀರವನರಸರಾಜನು . . . ಪರಾಕ್ರಮದಿಂದ ಕಾದಿದನು (ಕವೀರ. ೧೨೯) ; ಚಲದಂಕಮಲ್ಲನೂ ಅಭಿಮಾನಧನನೂ ಎನಿಸಿದ ಸುಯೋಧನನು ಚಿಂತಾಕ್ರಾಂತನಾದನು (ಭಾಮಚಿ. ೪೦). ೨. ಹಟಗಾರ : 'ಛಲದಂಕಮಲ್ಲರೂ, ಮಾನಧನರೂ' ಆಗಿ ವರ್ತಿಸುತ್ತಾರೆ (ಶಿಕ್ಷದ. ೧೦೫): **ಚಲದಂಕರಾಮ**=ರಾಮನಂತೆ ಸ್ಥಿರಸಂಕಲ್ಪದಿಂದ ಹೋರಾಡುವವನು; ಒಂದು ಬಿರುದಂ : ನರಸಂಕಭೀಮಂ ಚಲದಂಕರಾಮಂ ಗಣ್ಡರ ಗಣ್ಡಂ (ಸೌಇಇ. XX, ೧೮-೯ : 980) ; ಸನಿವಾರಸಿದ್ಧಿ ಗಿರಿದುರ್ಗಮ್ಮಲ್ಲ ಚಲದಂಕ ರಾಮ (ಕಇಅ. ೭೪-೧೨-೧೪ : 1170) ; ಸೇಡಿಂಬದ ವಿಪ್ರರೊಂದಳವನೇ ಪೋಗಳ್ವಂ ಚಲದಂಕರಾಮರ (ಕಇಅ. ೯೭-೪-೫೨ ; 12ನೆಯ ಶತ). **ಚಲದ ವಿನಾಯಕ**=ನಿರ್ಧಾರಕ್ಕೆ ಬರುವ ಅಡ್ಡಿಗಳನ್ನು ನಾಶಪಡಿಸತಕ್ಕವನು ; ಒಂದು ಬಿರುದು : ಪುರುಷಕಾರದ ತಾಯ್ಗುರು ಪೆಂಪಿನಾಗರಃ ಚಲದ ವಿನಾಯಕಂ ನೆಗಳ್ದ ಜಕ್ಕಣಂ (ಕಇ. IV, ೧೦-೩೫: 1121). **ಚಲದುತ್ತರಂಗ**=ಸ್ಥಿರಸಂಕಲ್ಪದಲ್ಲಿ ಮಿಗಿಲಾದವನು ; ಒಂದು ಬಿರುದು : ಪಿಪೊಗಟ್ಟಿನೆನ್ದ ಱಯೆಂ ಚಲದುತ್ತರಂಗನಂ (ಎಕ. II, ೫೯-೮೭; 974): ನನ್ನಗಿರಿನಾಥಂ ಚಲದುತ್ತರಂಗ ಜಗದೇಕವೀರ ನೊಱಂಬಕುಲಾಂತಕದೇವ (ಎಇ. VI, ೨೫೯-೨ ; 975). **ಛಲದಾಳು**=ಹಟಸ್ವಭಾವದವನು; ಚಲಗಾರ: ಕಲಿಯ ಕಾಲ ತೊಡರು ಛಲದಾಳಿಗ[ಪಾಠಾಂ. ಕಲಿತನಕ್ಕ]ಲ್ಲದೆ ಇಕ್ಕಬಾರದು (ಬಸವ. ೭೬೫).

**ಚಲ₂, ಚಳ₂**(ಗು). ೧. ಅಲುಗುವ; ನಡುಗುವ; ಚಂಚಲವಾದ; ಅಸ್ಥಿರವಾದ. ೨. ಚಲಿಸುವ ; ನಡೆಯುವ : ಸಾಗುವ . ಚಲ[ಪಾಠಾಂ. ಳ]ಕಲಹಂಸಸಾರಸರಥಾಂಗಮದಾಲಿನಿನಾದಕೈರವೋತ್ಪಲಶತಪತ್ರ . . . ಗಂಧಬಂಧುರಂ ಲಲಿತನೃಪಾಂಗನಾಲಕಚಯಂಗಳನಾಡಿಪುದಾಯ್ತು (ಆದಿಪು. ೪-೯೫). ೩. ಕದಡಿದ; ಕ್ಷುಬ್ಧವಾದ; ಉದ್ರಿಕ್ತವಾದ. (ನಾ). ೪. ಚಂಚಲನಾದವನು: ಗಾಳಿಗೊಡ್ಡಿದ ದೀಪಾಂಕುರದಂತೆ ತನ್ಮನಿಯುಮಂ ಕಾಮಂ ಚಲಂ ಮಾಡಿದಂ (ಕಾದಂಪೂ. ೭೫೫). ೫. ಕ್ಷೋಭೆ ; ಉದ್ವೇಗ. ೬. ಗಾಳಿ; ವಾಯು. 'ಚಲಗತಿ' ಪರಾ. ೭. ವೇಗಶಾಲಿ. ೬, ೭: ಘನಕು ಘನನ ಚಲಕು ಚಲನ ನೋಡೆನ್ನಿನನ (ಹಂಸದ. ೭೬-೨೨). **ಚಳ₂**: ೧. ಚಳಚಮರರುಹಸಮಾಜಾನಿಳನಿಂದೊಗೆದೆಸೆವ ಚಾರು ಕರ್ಪೂರರಜೋವಳಿಯಿಂ . . . ಗೆಲೆವಂದುದೋಲಗಂ (ಶಾಂತೀಶ್ವ. ೨-೮೪). ೮. ಚಂಚಲವಾದುದಂ: ಚಳವಂಭೋಬಿಂದು ಮುಕ್ತಾಫಲಮೆನಿಸುವವೊಲ್ ಶುಕ್ತಿಕಾಸಂಗದಿಂ (ಮಲ್ಲಿಪು. ೩-೧೯).

**ಚಳವಾಗು**=ತಡವರಿಸು ; ಕ್ರಮತಪ್ಪು : ಅರಗಿಳಿಗಳ್ ನಿರ್ಮಳ(ಲ) ಮುನಿಸೋ(ರೋ)ದುಪೋದಂ ಚಳವಾದೆಡೆಯಱಿದು ಪೇದ್ಸು(ಳ್ಸು) ವಿರುಳುಂ ಪಗಲುಂ (ಎಇ. XVI, ೩-೧೧ ; 980). [ ಸಂ. ]

**ಚಲಂಕು, ಚಲಂಗು, ಚಲಕು, ಚಲಗಂ, ಚಲುಂಕು, ಚಲುಕು, ಚೆಲಂಕಂ, ಚೆಲಂಗು, ಜಲಕು** (ಕ್ರಿ). ೧. ಎರಚು ; ಚಿಮುಕಿಸು ; ಚಲ್ಲು: "ಚಲಕು, ಚಲಂಕು–ಕರವಿಮೋಚನೇ (ಕೈಯಿಂದ ಬಿಡಿಸಿಕೊಳ್ಳು)" (ಶಮಧಾ). **ಚಲಂಗು**: ೧. "ಚ[ಪಾಠಾಂ. ಚೆ]ಲಂಗು–ಕರಮುಕ್ತೌ (ಕೈಯಿಂದ ಬಿಡು)" (ಶಮಧಾ). **ಚಲಕು**: ೧. 'ಚಲಂಕು' ಉಲ್ಲೇಖಕ್ಕೆ ಕೊಟ್ಟಿರುವ 'ಶಮಧಾ' ಪ್ರಯೋಗವನ್ನು ನೋಡಿ. ೨. ಬಿಸಾಡಂ; ಒಗೆ; ಬಿಸುಡು: (ಕ). ೩. ಕಲಕು: ಅಱಲ್ಗಳನುಱ ತಱದೊಲವಿಂ ತಱುಂಬುತ್ತೊಂಬತ್ತು ಗರದಿನೆಕ್ಕಸರಂಗೆಯ್ದೊಱಲ್ದು ತಳೆವುತ್ತೆ ನೆಱ ಬಾಂದೊಱಯಂ ಚಲುಕುತ್ತೆ ತಳರ್ದರಭವಗಣಂಗಳ್ (ವೀರವಿ. ೧೦-೭೦). **ಚಲಗು**: ೨. "ಚ[ಪಾಠಾಂ. ಬ] ಲಗೆ [ಪಾಠಾಂ. ಕೆ]ನೆ ಬಿಸುಡೆಂಬರ್ಥಂ" (ರನ್ನಕಂ. ೪). **ಚಲುಂಕು** : ೧. "ಚಲುಕು, ಚಲುಂಕು–ಜಲೋತ್ಸರ್ಜನೇ (ದ್ರವವನ್ನು ಚೆಲ್ಲು)" (ಶಮಧಾ) ; ನಿತ್ಯಬಿಂದುಗೆ–ಬೆಡಂಗು . . . ಚಲುಂಕಿದಂ, ಪಲುಂಬಿದಂ (ಶಮದ. ೩೬ ಪ್ರಯೋ) ; ಶೀತಳಾಂಬುವಂ ಮಾನಿನಿ ಪಾಣಿಪಲ್ಲವದಿನೆಲ್ಲರ ಮೇಲೆ ಚಲುಂಕಿಯಾಡಿದಳ್ (ನಳಚಂ. ೧೩೩). **ಚಲುಕು** : ೧. 'ಚಲುಕಾಡು' ಪರಾ. **ಚೆಲಂಕು**: ೧. "ಚೆ [ಪಾಠಾಂ. ಚ] ಲಂಕೆಂದು ಕರವಿಮೋಚನಂ" (ಕಶಸಾ. ೨೮-೫೯೯) . ೨. "ಚೆ(ಬೆ)ಲಂಕಿದಂ=ಈಡಾಡಿದಂ" (ಶಮದ. ಪರಿ.೨). **ಚೆಲಂಗು** : ೧. 'ಚಲಂಗು' ಉಲ್ಲೇಖಕ್ಕೆ ಕೊಟ್ಟಿರುವ 'ಶಮಧಾ' ಪ್ರಯೋಗವನ್ನು ನೋಡಿ. **ಜಲಕು**: ೧. "ಜಲಕೆಂದು ಕರವಿಮೋಚನ" (ಕವಿಕಂ. ೨೩೯). 'ಕಲಂಕು'. 'ಚಲ್ಲು₁' ಪರಾ. [ ? ]

**ಚಲಂಗು** 'ಚಲಂಕು' ನೋ.

**ಚಲಂಬಿಡಿ, ಚಲವಿಡಿ, ಛಲವಿಡಿ** (ಕ್ರಿ) ಹಟಹಿಡಿ ; ದೃಢನಿಶ್ಚಯವನ್ನು ತೊಡು : ಕೆಲರ್ ನೆತ್ತರೊಳ್ ಮಿಂದು ತಮಗೆ ದೋಷಮಿಲ್ಲೆಂದದರ್ಕೆ ದಿವ್ಯಂಬಿಡಿಪಂತೆ ನಂಬಿಸಲ್ ಚಲಂಬಿಡಿದು ನಿಂದಾಂತರ್ (ಶಾಂತಿಪು. ೪-೩೦ ವ); ಸ್ಯೂಸೆಂದುಂ ಬಾಂಬರನ್ ಆಳದಿರ್ಕೆಂದು ಚಲಂಬಿಡಿದು ತಱಸಂದರರೆಬರ್ (ಬದ್ಧಪ್ರ. ೧೨-೨೪೬). **ಚಲವಿಡಿ** : ಚಲವಿಡಿದೀಗಳಿಂತುಟು ನೆಲಂಬಿಡಿದಿರ್ಪುದು (ಚಿಕವಿ. ೫-೪೩); ಸತ್ಯಕೀರ್ತಿಯು . . . ಚಲವಿಡಿದನು (ಕವಿಕ. ೬). **ಛಲವಿಡಿ** : ಛಲವಿಡಿದೊಂದನೆಳಸಿ ಚಾರಿವರಿಯದೆ ನೆಲೆವಿಡಿದೊಂದಱೊಳಿರದೆ (ಹದಿಬ. ೩-೩೭). [ ಚಲ₁ + ಪಿಡಿ₁ ]

**ಚಲಕು** 'ಚಲಂಕು' ನೋ.

**ಚಲಗತಿ, ಚಳಗತಿ** (ನಾ). ವೇಗವಾದ ಗತಿ ; ವಾಯುವೇಗ : ನೂಱಾನೆಯಲಿ ನಿನ್ನವನಳವಿಗೊಟ್ಟನು ಭೀಮಸೇನನ ಚಲಗತಿಯ ಚಾತುರ ಚಪೇ... ಪದಪ್ರಹಾರದಲಿ (ಕುವ್ಯಾಗ. ೪-೨೩). **ಚಳಗತಿ** : ಚಳಗತಿಯ ವಾಜಿಗಳು ಕೊಂಡೊಯ್ದಿಳುಹಿದವು ತಮಸೆಯಲಿ (ತೊರರಾ. ೨-೪-೮). [ಚಲ₂+ಗತಿ]

**ಚಲಗಾರ, ಛಲಗಾರ** (ನಾ). ಹಟಗಾರ; ಚಲವುಳ್ಳವನು : (ಕ). ಛಲಗಾರ. 'ಛಲಗಾರ್ತಿ' ಪರಾ. [ ಚಲ₁ + – ಗಾರ ( < –ಕಾಱ) ]

**ಚಲಗು** 'ಚಲಂಕು' ನೋ.

**ಚಲಚಲಿಸು** (ಕ್ರಿ). ಚಂಚಲವಾಗು; ಗಾಬರಿಹೊಂದು: ಅವಳ ಕಣ್ಣುಗಳು ಚಲಚಲಿಸುತ್ತಿದ್ದುವು (ಝೂರಾಚಿ. ೪೬೫). [ <ಚಲ₂ + – ಇಸು₃ ]

**ಚಲಚಿತ್ತ, ಚಳಚಿತ್ತ** (ನಾ). ೧. ಚಂಚಲವಾದ ಮನಸ್ಸು. ೨. ಚಂಚಲವಾದ ಮನಸ್ಸುಳ್ಳವನು : ಅಸ್ಥಿರಬುದ್ಧಿಯವನು : ಮತ್ತನತಿಶ್ರಾಂತನು ಪ್ರಮದೋನ್ಮತ್ತನತಿಕುಪಿತಾನನನು ಚಲಚಿತ್ತನತಿಕಾಮುಕನು . . . ಇಂತೀ ಹತ್ತುಜನವಾವಾಗ ಧರ್ಮದ ತತ್ತ್ವವಣೆಗಳನಱಯರ್ಕೆ (ಕುವ್ಯಾಉ. ೩-೭೬): ನೆತ್ತಿಮುಸುಕಿನ ಕೈಯ ಗಲ್ಲದ ಕುತ್ತದಲೆ ನೆಟ್ಟಾಲಿಗಳ ಚಲಚಿತ್ತರಿದ್ದುದು ಸಕಲನಾಯಕವಾಡಿ ದುಗುಡದಲಿ (ಕುವ್ಯಾದ್ರೋ. ೪-೪). **ಚಳಚಿತ್ತ** : ೨. ಚಳಚಿತ್ತರ್ಗೆ ಬಿಂಕದ ಕದಂ ಸತ್ಯಹೀನರ್ಗೆ ಸೋಂಕದ ಕದಂ (ನಂಬಿರ. ೧೬-೬೫) ; ಚಳಚಿತ್ತಂ ಜಾಡ್ಯವೃತ್ತಂ ಚಪಳಮತಿಮದಾಂಧಂ (ಶಬಶಂ. ೫-೧೮). [ ಚಲ₂ + ಚಿತ್ತ ]

**ಚಲಚಿತ್ರ** (ನಾ). ಚಲನಚಿತ್ರ; ಸಿನೇಮ: ಇಂದಿಗೂ ನಮ್ಮ ಚಲಚಿತ್ರಗಳಲ್ಲಿ ಹತ್ತು ಹದಿನೈದಕ್ಕೆ ಕಡಿಮೆ ಹಾಡುಗಳಿಲ್ಲದಿದ್ದಲ್ಲಿ ಅವು ಯಶಸ್ವಿಯಾಗಲು ಸಾಧ್ಯವೇ ಇಲ್ಲ (ಭಾರದ. ೫೩೫). [ ಚಲ₂ + ಚಿತ್ರ ]

**ಚಲತನ** (ನಾ). ಚಂಡಿತನ ; ಮೊಂಡುತನ ; ಹಟಮಾರಿತನ : ಎಲೆಗೆ ನಿನ್ನೊಡನೆ ನಾನೇಂ ಹರಿಯ ಹೋರುವೆಂ ಚಲ[ಪಾಠಾಂ. ಛಲಿ]ತನಕಲಸಿದೆ ನಾಂ (ಜೈಮಿಭಾ. ೦೦-೩೧). [ ಚಲ₁ + – ತನ ]

**ಚಲತ್ವ** (ನಾ). ೧. ಚಂಚಲತೆ ; ಅಸ್ಥಿರತೆ. ೨. ನಡುಗುವಿಕೆ ; ಕಂಪನ. [ ಸಂ. ]

**ಚಲದಲ, ಚಲದಳ, ಚಳದಳ** (ನಾ). ಅಲುಗಾಡುತ್ತಲೆ ಇರುವ ಎಲೆಗಳನ್ನುಳ್ಳುದು ; ಅ ರ ಳಿ ಮ ರ ; ಅಶ್ವತ್ಥ. ಚಲದಳ : "ಚಲದಳಮಶ್ವತ್ಥಂ" (ವಸ್ತುಕೋ. ೩೩-೪). ಚಳದಳ : "ಚಳದಳಂ ಪಿಪ್ಪಲಂ ಬೋಧಿಯಶ್ವತ್ಥಮೆನಲರಳಿಯಕ್ಕುಂ" (ಮಂಗರಾ. ೩೪-೧೧). [ ಚಲ$_2$ + ದಲ ]

**ಚಲದಳ** 'ಚಲದಲ' ನೋ.

**ಚಲದಿ** 'ಶಲದಿ$_2$' ನೋ.

**ಚಲನ, ಚಳನ** (ನಾ). ೧. ಸರಿದಾಡುವಿಕೆ ; ಸಂಚಾರ ; ಗಮನ ; ಗತಿ; ನಡೆ. ೨. ಅಲುಗಾಟ ; ನಡುಕ ; ಕಂಪನ. ೩. ಅಡಿ ; ಚರಣ ; ಪಾದ : ಕೇಳೀವನಸ್ಥಾನದೊಳ್ ಚಲನನ್ಯಾಸವಿಲಾಸಮಂ ಮೆಱೆದು (ಪಂಠಾಮೂ. ೪-೯೦). ೪. ಗಾಳಿ ; ವಾಯು. 'ಚಲನಭವ' ಪರಾ. ೫. [ನಾಟ್ಯ] ಕಣ್ಣಿನ ಒಂಬತ್ತು ಭಾವವಿನ್ಯಾಸಗಳಲ್ಲಿ ಒಂದು : ಭ್ರಮಣ . . . ಚಲನ . . . ಪ್ರಾಕೃತ ಈ ಒಂಬತ್ತು [ಸ್ವನಿಷ್ಠ] ಆಲಿಯ ಭೇದಂಗಳ್ (ಲಾಸ್ಯರಂ. ೩-೫೪ ವ). ಚಳನ: ೩. ಅದನಾಳ್ವನವನತಾರಾತಿನೃಪಮಣಿಮಯಕಿರೀಟಪ್ರಭಾಲೀಢಚಳನನಳಿನಯುಗ್ಮಂ (ಸು ಕು ಮಾ. ೦-೭೯ ವ) : ಶ್ರುತಕೇವಳಿಗಳ ಚಳನಂ ನಮಗಚಳಸುಖಮನೀಗನವರತಂ (ಚಂದ್ರಪು. ೧-೧೩) : ಚಳನನಿತಂಬಬಿಂಬಕುಚಕರ್ಣಕಪೋಲಲಲಾಟದೇಶದೊಳ್ ತೊಳಗಿ (ಪುಷ್ಪಪು. ೮-೧೧೦). [ ಸಂ. ]

**ಚಲನಕ** (ನಾ). ಅರ್ಧದವರೆಗೆ ತೊಡೆ ಮುಚ್ಚುವ ಹೆಂಗಸರ ಒಳ ಉಡುಪು ; ಅರ್ಧೋರುಕ ; ಚಂಡಾತಕ. [ ಸಂ. ]

**ಚಲನಚಿತ್ರ** (ನಾ).=ಚಲಚಿತ್ರ: ಚಲನಚಿತ್ರದ ಪಟವು ಸುರುಳಿ ಬಿಚ್ಚಿದ ಹಾಗೆ (ಇಂಚಾಪ. ೩೦-೪೦). [ ಚಲನ + ಚಿತ್ರ ]

**ಚಲನಭವ** (ನಾ). ವಾಯುವಿನ ಮಗ ; ಭೀಮಸೇನ: ದುಶ್ಶಾಸ ಚಲನಭವನಂ ಕೆಣಕುತ (ತುರಂಗ. ೬೨-೬). [ ಚಲನ + ಭವ ]

**ಚಲನವಲನ** (ನಾ). ೧. ಸಂಚಾರ ; ಗತಿ : ಭೂಮಿಯ ಚಲನವಲನಗಳು ನಿಂತುಹೋದುವು (ಶಾಂತಲಾ. ೨೬೮). ೨. ಹೋಗುವಿಕೆ, ಬರುವಿಕೆ, ಮಾತಾಡುವಿಕೆ ಮುಂತಾದ ಕ್ರಿಯೆಗಳು ; ಚಟುವಟಿಕೆ ; ಸುಧಾಕರನು ಗುಪ್ತಚಾರನಾಗಿ ಮಾರುವೇಷದಿಂದ ನಮ್ಮ ಚಲನವಲನಗಳನ್ನು ಪತ್ತೆಹಚ್ಚಲು ಈಗಾಗಲೇ ತಿರುಗಾಡುತ್ತಿರುವನು (ದೇಶಧು. ೯೪) : ಅವರ ಚಲನವಲನಗಳಲ್ಲಿ ವ್ಯತ್ಯಾಸವೇನಾದರೂ ಇತ್ತೇ? (ಜೀವಾತ್ಮ. ೨೫೦). [ ಚಲನ + ವಲನ ]

**ಚಲನಶಕ್ತಿ** (ನಾ). ೧. ಚಲಿಸುವ ಶಕ್ತಿ ; ಸಂಚರಿಸುವ ಸಾಮರ್ಥ್ಯ : ವಾಯುವಿನಲ್ಲಿ ಚಲನಶಕ್ತಿಯೂ, ಆಕಾಶದಲ್ಲಿ ವ್ಯಾಪನಶಕ್ತಿಯೂ ಸ್ವಾಭಾವಿಕವಾಗಿ ನೆಲಸಿರುವುದನ್ನು . . . ಕಾಣಬಹುದಾಗಿದೆ (ಶಕ್ತಿವಿ. ೩೦). ೨. ಚಲನೆಯಲ್ಲಿರುವ ಶಕ್ತಿ; ಕಾರ್ಯಮಾಡುತ್ತ ಇರುವ ಶಕ್ತಿ: "ಚಾಲನಶೀಲಶಕ್ತಿ, ಚಲನಶಕ್ತಿ" (Energy, Kinetic. ಪಾಠಿನಿ. ೩೭). ೩. [ವಿಜ್ಞಾ] "ಒಂದು ಕಾಯವನ್ನು ಚಲನಗೊಳಿಸುವ, ಅಳೆಯಲಾಗುವ, ಒಂದು ಪ್ರಭಾವ ; ಬಲ. (ಹಿಂದೆ) ಚಲನಶಕ್ತಿ" (Force. ಇಂಕನಿ). [ ಚಲನ + ಶಕ್ತಿ ]

**ಚಲನಸಂಭವ** (ನಾ). ೧. ವಾಯುವಿನ ಮಗ; ಆಂಜನೇಯ; ಮಾರುತಿ: ಆ ಚಲನಸಂಭವ ನಿದ್ದೆಯಿಂದಬ್ಬರಿಸಿ ಘರ್ಜಿಸಿದ (ಕೌಶಿರಾ. ೨೯-೨೪). ೨. ಭೀಮಸೇನ : ಚಲನಸಂಭವನ್ಲ್ಲೋರ್ವ ತಾನಾಳ ಮೇಲಿದಿರಾದನೆಂಬುದಿದು ಮಿಥ್ಯೆ (ತುರಂಗ. ೬೪-೧೩). [ ಚಲನ + ಸಂಭವ ]

**ಚಲನಸಖ** (ನಾ). ವಾಯುವಿನ ಮಿತ್ರ; ಅಗ್ನಿ: ಚಲನಸಖ ಸಾಕ್ಷಿಕದಲಾ ಕುಂಡಲೆ ಕುಶೇಶಯಲೋಚನೆಯನಿತ್ತಳು ಕುಬೇರಪ್ರಭಗೆ (ನಿ ಭಾ ಗ. ೯-೧೭-೩೮). [ ಚಲನ + ಸಖ ]

**ಚಲನಸುತ** (ನಾ). = ಚಲನಭವ ೨: ಕೊಳುಗುಳದ ಜಯಲಕ್ಷ್ಮಿಗಾಯಿತು ಚಲನಸುತನಲಿ ಮದುವೆ (ಕುಮ್ಯಾಕ. ೧೯-೮೭). [ ಚಲನ + ಸುತ ]

**ಚಲನಾಂಗ** (ನಾ). ಚಲನಕ್ಕೆ ಸಾಧನವಾದ ಅಂಗ,-ಅವಯವ : ಹೀಗೆ ಚಲನಾಂಗಗಳೆಲ್ಲ ಎದೆಗೆ ಸೇರಿವೆ (ಕೀಟಬ. ೧೮). [ ಚಲನ + ಅಂಗ$_2$ ]

**ಚಲನಿ** (ನಾ). = ಚಲನಕ. [ ಸಂ. ಚಲನೀ ]

**ಚಲನೆ** (ನಾ).=ಚಲನ ೨ : ಈ ಪರಿವರ್ತನೆ ಸುಲಭವಾಗಿ ಕಣ್ಣಿಗೆ ಕಾಣಿಸುವುದಿಲ್ಲ, ಗಡಿಯಾರದಲ್ಲಿ ಗಂಟೆಯ ಮುಳ್ಳಿನ ಚಲನೆಯಂತೆ (ದ್ರಾವಿವಿ. ೩೨೪). [ ಸಂ. ಚಲನ ]

**ಚಲನೆಗೈ** (ಕ್ರಿ). ಚಲಿಸುವಂತೆ ಮಾಡು ; ಚಂಚಲಗೊಳಿಸು: ನಿನ್ನ ಪತಿ ತಪೋನ್ನಿಷ್ಟೆಯಿಂದಾನಿರಲು ತತ್ತಪೋ [ ಪವ ] ಚಲನಗೈಯಲು ಕೋಪದಿಂ ನೋಡೆ ದಹನವಾದಾ (ನವಮೋ. ೭-೪೩). [ಚಲನೆ + ಗೈ (<ಕೆಯ್$_1$)]

**ಚಲಪತ್ರ** (ನಾ). = ಚಲದಲ : ಪಲಸು ನೇಱಿಲು ಚೂತ ಪಿಚುಮಂದ ನ್ಯಗ್ರೋಧ ಚಲಪತ್ರ ಬಿಲ್ವಾಮಲಕ . . . ಸಾಲುಮರಗಳೊಪ್ಪಿದುವು (ಮೋಹತ. ೨-೫೪). [ ಚಲ$_2$ + ಪತ್ರ ]

**ಚಲಪದ** (ನಾ). ಹಟದ ಸ್ಥಿತಿ ; ಮೊಂಡುತನದ ರೀತಿ : ನೀತಿಮಾರ್ಗದಿ ತಿಳುಹಿ ಪಾರ್ಥನ ಗಯನ ಕಳುಹೆನೆ ಚಲಪದದಿ ಕೊಡೆನೆನಲು ಮರಳಿ ಸುಭದ್ರೆ ಗಮಿಸಿದಳು (ಕೋಗಯ. ೧೫ ಸೂಚನೆ). [ ಚಲ$_1$ + ಪದ$_3$ ]

**ಚಲಪಿಲ್ಲಿ** (ನಾ). ಒಂದು ಬಗೆಯ ಪಿಲ್ಲಿ : ಕಾಲ್‌ಪಿಲ್ಲಿ ಚಲಪಿಲ್ಲಿ ಕೈ ಬಳೆಯ ದನಿಯಲ್ಲಿ . . . ಬಾ (ಬಳ್ಳಾಬಿ. ೧೨-೧೭). [ ಚಲ$_2$ + ಪಿಲ್ಲಿ$_1$ ]

**ಚಲಪ್ರತಿಮೆ** (ನಾ). ಸ್ಥಳದಿಂದ ಸ್ಥಳಕ್ಕೆ ಸಾಗಿಸಬಹುದಾದ ಪ್ರತಿಮೆ ; ಉತ್ಸವಮೂರ್ತಿ : "ಚಲ" ಪ್ರತಿಮೆಗಳು . . . ಒಂದೆಡೆಯಿಂದ ಮತ್ತೊಂದೆಡೆಗೆ ಸಾಗಿಸಬಹುದು (ಭಾರದ. ೫೧೨). [ ಚಲ$_2$ + ಪ್ರತಿಮೆ ]

**ಚಲಬಂಡವಾಳ** (ನಾ). ಸ್ಥಿರವಾಗಿರದ ಬಂಡವಾಳ ; ಚಲನೆಯಲ್ಲಿರುವ ಬಂಡವಾಳ : 'ಚಲಬಂಡವಾಳ' ಎಂದರೆ ಶ್ರಮಶಕ್ತಿಯ ಮೇಲೆ ಕೂಲಿ–ಸಂಬಳಗಳ ರೂಪದಲ್ಲಿ ವೆಚ್ಚಮಾಡಿದ ಬಂಡವಾಳ (ಮಾವಾದ. ೦೨೨). 'ಚರಬಂಡವಲ' ಪರಾ. [ ಚಲ$_2$ + ಬಂಡವಾಳ (<ಬಂಡವಲ) ]

**ಚಲಬ್ಬೆ** (ನಾ). ಒಬ್ಬಾಕೆಯ ಹೆಸರು : ಸ್ವಸ್ತಿಶ್ರಿ (ಶ್ರೀ)ಬಿಜ್ಜೇಸ್ವರದ ಸೂಳೆ ಚಲಬ್ಬೆ (ಇಆ. X, ೧೭೦-೦; 7ನೆಯ ಶತ). [ ? + ಅಬ್ಬೆ$_1$ ]

**ಚಲಮಲ** (ನಾ). ೧. ಹೊಳಪು ; ಚಕಚಕ; ಮಿನುಗುಟ್ಟುವಿಕೆ : ಚಕಚಕ ಚಂಚಲ ಮಿಂಚಿನ ಗೊಂಚಲ ಚಕಮಕಿ ಚಲಮಲ (ಗರಿ. ೦೨೩-೦೨). ೨. ಚಂಚಲತೆ ; ಕಂಪನ. 'ಚಲಮಲಿಸು' ಪರಾ. [ ? ]

**ಚಲಮಲಿಸು** (ಕ್ರಿ). ನಡುಗು ; ಚಡಪಡಿಸು : ನಾನು ಹೆದರಿದ ಮೊಲ ಚಲಮಲಿಸುವ ಹಾಗೆ ಮಾಡಿ ಉದ್ಗರಿಸಿದೆನು (ಇಪ್ಪಕ. ೦೮೪). [ ಚಲಮಲ + – ಇಸು$_3$ ]

**ಚಲಮಱಿ** (ಕ್ರಿ). ಚಲವನ್ನು ತಿಳಿ; ದೃಢನಿಶ್ಚಯವನ್ನು ಅರಿತುಕೊಳ್ಳು: ಬಲ್ವಡೆ ಸು(ಶೂ)ದ್ರಕನೆ . . . ಮುತ್ತಿ ಅಣಿಯಂ ಕದಿವೊಂಗಂ ಚಲಮಱಿವೊಂಗಂ ಆಟಿಸ್ಮಿವೊಂಗಂ ಕುಡಲ್ದವೊಂಗಂ ಒಬ್ಬನೋ ಆಚಾರ್ಯ್ಯನ್ (ಎಇ. XXIV, ೯೩-೮ ; 895). [ ಚಲ$_1$ + ಅಱಿ ]

**ಚಲಮೂರ್ತಿ** (ನಾ). = ಚಲಪ್ರತಿಮೆ: ಚಲಮೂರ್ತಿಗಾಗಿ ಅರ್ಧಮಂಡಪವನ್ನು ಸೇರಿಸಲಾಯಿತು (ಹೊಯ್ಸವಾ. ೧೮). [ ಚಲ$_2$ + ಮೂರ್ತಿ ]

**ಚಲಮೆ** 'ಚಲುವೆಂ$_1$' ನೋ.

**ಚಲವಾದಿ$_1$, ಛಲವಾದಿ** (ನಾ). ಚಲವನ್ನು ಹಿಡಿದವನು ; ದೃಢಸಂಕಲ್ಪವುಳ್ಳವನು ; ಛಲಿ : ಕಡುಚಾಗಿ, ಚಲವಾದಿ (ಶಮದ. ೦೬೫ ಪ್ರಯೋ) : ಚಲವಾದಿಯ ಸಂಗಡ ಹಟವಾದಿ ಸೇರಿದ ಹಾಗೆ (ಗಾದ). ಛಲವಾದಿ : ಛಳಿಗಂಡವೊಲು ಪೂರ್ಬಗೈಸಿ ವಧಿಸಿದತಿ ಛಲವಾದಿ ಛಂದವಿಡೆನ್ನ (ಶತಸಾಂ. ೬೯-೪೯). [ ಚಲವಾದ$_0$ + – ಇ$_3$ ]

**ಚಲವಾದಿ$_2$** (ನಾ). ಮಾದಿಗರಲ್ಲಿ ಒಂದು ಪಂಗಡ ಮತ್ತು ಆ ಪಂಗಡಕ್ಕೆ ಸೇರಿದವನು: ಕುಳವಾಡಿ: ಸುಂಕ ತಳವಾಱ ಆನುಪು ಮಗವೆ ಚಲವಾದಿ ಸಂಗೆಡಿ ಪಂತಗಾಜಿರಿಗೂ ಇದೇ ಭಾಷೆ (ಸೌಇ.IX-ii, ೩೩೨-೨೦; 1530); ಜೊತೆಗೆ ನಾಲ್ಕು ಜನ ಚಲವಾದಿಗಳು ಒಬ್ಬರಾದ ಮೇಲೆ ಒಬ್ಬರು ತಮ್ಮ ಕೊಂಬುಗಳನ್ನು ಊದಿದರು (ಚಳರಾ. ೩೪೩). [ದೇ.II ತಮಿ. ಚಲವಾತಿ ; ತೆಲು. ಚಲವಾದಿ ]

**ಚಲವಾದಿಘಂಟೆ** (ನಾ). ಚಲವಾದಿಯು ಹೆಗಲ ಮೇಲೆ ಹೊತ್ತುಕೊಂಡು ಬಾರಿಸುತ್ತಾ ಹೋಗುವ ಗಂಟೆ : ಮಾಯಾಮರಶಾಪು, ಪಂಚನಿಶಾನಿ, ಡವಣೆ, ಅರಲಿವಸ್ತ್ರ, ಚಲವಾದಿಘಂಟೆ (ಗುರುದ. ೧೧). [ಚಲವಾದಿ$_2$+ಘಂಟೆ]

**ಚಲವಿಡಿ** 'ಚಲಂಬಿಡಿ' ನೋ.

**ಚಲವಿತ್ತ** (ನಾ). ೧. ಅಸ್ಥಿರವಾದ ಸಂಪತ್ತು. ೨. ಸಂಪತ್ತು ಸ್ಥಿರವಾಗಿಲ್ಲದವನು : ಚಲವಿ[ಪಾಠಾಂ. ಚಿ]ತ್ತಂ ಬಲಹೀನಜಾನು ಚಪಲಂ . . . ಮೇಷಜಂ (ಜಾತತಿ. ೦೭-೦). [ಚಲ$_2$ + ವಿತ್ತ]

**ಚಲವೀಣೆ** (ನಾ). ಒಂದು ಬಗೆಯ ವೀಣೆ : ಧ್ರುವವೀಣೆ, ಚಲವೀಣೆ . . . ಇವುಗಳನ್ನೆಲ್ಲಾ ವಿವರಿಸಿದ್ದಾನೆ (ಭಾರದ. ೫೩೮). [ಚಲ?+ವೀಣೆ]

**ಚಲವು** 'ಶಲವು' ನೋ.

**ಚಲಾಂಡ** (ನಾ). ಒಂದು ಬಗೆಯ ಪಕ್ಷಿ ; ಟಿಟ್ಟಿಭ : "ಚೀವಂ ಚಲಾಂಡ ಮೆನಿಸಿಕ್ಕು" (ಮಂಗರಾ. ೫೨-೧೧). [ ? ]

**ಚಲಾಕಿ** 'ಚಾಲಾಕಿ' ನೋ.

**ಚಲಾಕು** 'ಚಾಲಾಕು' ನೋ.

**ಚಲಾಯಿಸು, ಚಲಾಯ್ಸು** (ಕ್ರಿ). ೧. ನಡೆಸು; ಬಳಸು; ಉಪಯೋಗಿಸು: ಕಾನೂನು ಮೇರೆಗೆ ತಮಗೆ ಅಧಿಕಾರವಿಲ್ಲದಿದ್ದರೂ ಅಧಿಕಾರವನ್ನು ಚಲಾಯಿಸಿದ್ದಾರೆ (ಗ್ರಾಮಾಕ. ೪೩) ; ಎಂಥ ನಿರಂಕುಶನಾದ ರಾಜನಾದರೂ ಅವನು ತನ್ನ ಗುಣಕ್ಕನುಸಾರವಾಗಿ ತನ್ನ ಸ್ವಾಮಿತ್ವವನ್ನು ಚಲಾಯಿಸುವನು (ರಾಜ್ಯಾಂಗ. ೫೦) ; ಯಾವಯಾವದೋ ಸಿನಿಮಾ ಹಾಡುಗಳನ್ನು ಅವರು ಚಲಾಯಿಸುತ್ತಿದ್ದರು (ಮೂಲಾನ. ೦೨೫). ೨. ಚಲಿಸುವಂತೆ ಮಾಡು; ತಿರುಗಿಸು: ಈಗ ಮೊದಲಿಗಿಂತ ಹೆಚ್ಚಿಗೆ ಚರಖಾ ಚಲಾಯಿಸುತ್ತಲೂ ಇದ್ದೇನೆ (ಕಲಕ. ೭೦). **ಚಲಾಯ್ಸು** : ೧. ವುಡಾನ್ನು ಯಂಬ ಹೆಸರಿನ ವಂಟಿ ಕುದುರೆ ಚಲಾಯ್ಸಿ ಅವರನ್ನ ಹೊಡೆಯುತ್ತಿದ್ದಲ್ಲಿ (ಹೈದರ. ೩೦). [ಚಲಾಯಿ$_0$ (P ←ಹಿಂ. ಚಲಾನಾ) + – ಇಸು$_3$ ]

**ಚಲಾಯ್ಸು** 'ಚಲಾಯಿಸು' ನೋ.

**ಚಲಾವಣೆ** (ನಾ). ೧. ನಡೆಸುವಿಕೆ; ಬಳಕೆ;(ನಾಣ್ಯಗಳಂತೆ)ವಿನಿಮಯದ ವ್ಯವಹಾರದಲ್ಲಿರುವಿಕೆ; ವಹಿವಾಟು : ಚಲಾವಣೆ, ಟಂಕನ ಮತ್ತು ವಿಧಿವಾಸ್ಯ (ಭಾಧಾನ. ೨೮೦); ಈಗ ಚಿನ್ನ ಯಾವ ರೀತಿ ನಿರ್ದಿಷ್ಟ ಚಲಾವಣೆ ಮೌಲ್ಯ ಹೊಂದಿದೆಯೋ ಹಾಗೆ ತಂಬಾಕು ನಾಣ್ಯವಾಗಿದ್ದಿತು (ಕಸಬು. ೫೭) ; ಪದಗಳು ಜನಮನದ ಟಂಕಸಾಲೆಯಲ್ಲಿ . . . ಚಲಾವಣೆಗೆ ಬರುವ ನಾಣ್ಯಗಳಿದ್ದಂತೆ (ಸೌಂದಸ. ೪೨). ೨. ಸಾಗಾಟ ; ಸಾಗಾಣಿಕೆ: ಒಂದೆರಡು ಪರ್ಮಿಟು ಮಾಡಿಸಿ ಪ್ಯಾಲು ಚಲಾವಣೆ ಮಾಡದಿದ್ದರೆ ನಮ್ಮ ರಥ ಸಾಗಲಾರದು (ದೀಕ್ಷಧು. ೬೪). [ ← ಚಲಿಸುವಂತೆ ಮಾಡು, ಹಿಂ. ಚಲಾವನಾ=ಮರಾ. ಚಲನೀ= ಚಲಾವಣೆಯಲ್ಲಿರುವ ]

**ಚಲಿ$_1$** 'ಚಿಲ್ಲ$_1$' ನೋ.

**ಚಲಿ$_2$, ಛಲಿ** (ನಾ). ಛಲವುಳ್ಳವನು; ದೃಢಸಂಕಲ್ಪವುಳ್ಳವನು: ಅಮುಮ ದಂಡಾಧಿಪ ಕಿರೀಟಪದನೊಪ್ಪಿದಂ ಅಮುಮ ಚಲಿ [ಪಾಠಾಂ. ಛವಿ]ನಾಯಕರ ದೇವನಿಂತೊಪ್ಪಿದಂ (ಬಸರ. ೯-೨೦೦). **ಛಲಿ**: ಭಕ್ತಿಯ ಬಲೆಯು ವಿರಕ್ತಿಯ ಛಲಿಯ ಸನ್ಮುಕ್ತಿಯ ನೆಲೆಯರ್ಘಾರ್ಣವಕೆ ಭೈತ್ರ . . . ಗೌರನ ನವ್ಯ ಕಾವ್ಯ (ಮೋಳಿಪು ೫-೨). [ಚಲ$_1$ + – ಇ$_3$ ]

**ಚಲಿ$_3$** (ನಾ). ಒಂದು ಬಗೆಯ ಮರ; ಚೆನ್ನಂಗಿ: "ಚೆನ್ನಂಗಿ ಚಲಿಯಕ್ಕು" (ಮಂಗರಾ. ೩೭-೧೦). [ ? ]

**ಚಲಿಂದಲ** 'ಚಲಿವಿಂದರ' ನೋ.

**ಚಲಿಕಿಸು** (ಕ್ರಿ) .ಕತ್ತರಿಸು; ತುಂಡರಿಸು: ಈಗ ಚಲಿಕಿಸಿ ಶಿರವನು ಕ್ರೂರದಿ ಕೊಂದಾನೆ (ಹಮುಚ. ೦೫೦) ; ಸತಿಶಿರಮಂ ಚಲಿಕಿಸು ಖಡ್ಗದಿಂ ತಡೆಯದೆ (ಹಮುಚ. ೨೦೦). [ ? + – ಇಸು$_3$ ]

**ಚಲಿಕ್ಯ** 'ಚಳುಕ್ಯ' ನೋ.

**ಚಲಿತ, ಚಳಿತ$_2$** (ಗು). ೧.ಹೆಜ್ಜೆಯಿಟ್ಟ ; ಹೊರಟುಹೋದ ; ಮುಂದೆ ಹೋದ. ೨. ಕದಲಿಸಿದ ; ಕದಡಿದ ; ಸಂಚಲಗೊಳಿಸಿದ. ೩. ನಡುಗುವ ; ಕಂಪಿಸುವ. ೪. ಅಲುಗಾಡುವ ; ಚಲಿಸುವ : ಚಲಿತ ಭ್ರೂಚಾಪದಂಡಂ ನಿಶಿತಕರಜಹೇತಿಕ್ಷತಂ (ಲೀಲಾವ. ೧೩-೩೦). (ನಾ). ೫. ಚಂಚಲವಾದುದು ; ಚಪಲವಾದುದು : ಪದ್ಮಪತ್ರದ ಜಲ ಬಿಂದುವಿನಂತೆ ಚಲಿತಮಾದುದು ಚಿತ್ತಂ (ಪಂಲಾಮಾ. ೯-೭೬). **ಚಳಿತ$_2$** : ೧. ಪ್ರಥಮಚಳಿತದಕ್ಷಿಣಚರಣನಾಗಿ ನಿಜನಿವಾಸದಿಂ ಪೊಱಮಟ್ಟು (ಪಂಪಭಾ. ೪-೧೨ ವ). [ ಸಂ. ]

**ಚಲಿಮಿಲಿಸು** (ಕ್ರಿ). ಹಾತೊರೆ ; ಆತುರಪಡು ; ಉತ್ಕಂಠವಾಗು : ಚಲಿಮಿಲಿಸುತಿವೆ ಧಾತು ಪಂಚಭೂತಾಹುತಿಗೆ ಭಲ ಬ್ಯಾಡ ಪುತಕೆ (ಜನಮು. ೪೭-೧೪). 'ಚಲಮಲಿಸು' ಪರಾ. [ ? + – ಇಸು$_3$ ]

**ಚಲಿಯಿಸು** 'ಚಲಿಸು' ನೋ.

**ಚಲಿವಿಂದರ, ಚಲಿಂದಲ**(ನಾ). ಪ್ರಯಾಣಿಕರ ಉಪಯೋಗಕ್ಕಾಗಿ ರಸ್ತೆಗಳ ಪಕ್ಕಗಳಲ್ಲಿ ನಿರ್ಮಿಸಿದ ನೀರಿನ ಆಶ್ರಯ ; ಅರವಟ್ಟಿಗೆ : (+). **ಚಲಿಂದಲ** : (ಎಸಮ್ಮ. XV, ೪೩). [←ತೆಲು. ಚಲಿವಿಂದಲ, ಚಲಿಪಂದಿಲಿ, ಚಲಿವಂದ್ರಿ, ಚಲಿವೆಂದ, ಚಲಿವೇಂದರ, ಚಲಿವೇಂದಲ, ಚಲಿವೇಂದ್ರು ]

**ಚಲಿಸು, ಚಲಿಯಿಸು, ಚಳಯಿಸು, ಚಳಿಯಿಸು, ಚಳಿಸು$_2$** (ಕ್ರಿ). ೧. ನಡೆ ; ನಡೆದಾಡು ; ಓಡಾಡು : ಮಹಾಪ್ರಧಾನರ ನಡುವೆ ಚಲಿಸುವ ಚಾತುರಂಗದ ಸುಳಿಯ ಸಂದಣಿಯ (ಕುವ್ಯಾಕ. ೮-೨೦) ; ತಂಡತಂಡದೆ ಕೃಷ್ಣನಗರಿಯೊಳ್ ಚಲಿಸುವ ಮಂಡಳಿಕರ ಕಾಲ ಕಡಗ ಪೆಂಡೆಯು ತಾಟಾಡಿ ಸಿಡಿದ ರತ್ನಗಳ ಕೈದಂಡೆಯೊಳ್ ಸಿಕ್ಕಿ ಬಾಚುವರು (ಮೋಹತ. ೩-೭೧): ಅಲ್ಲಿನ ವಿದ್ವಾಂಸರು ಚಲಿಸುವ ಪುಸ್ತಕಭಂಡಾರಗಳು (ಬಂಗಾಳ್ಯ. ೪). ೨. ಅಲುಗಾಡು ; ಹೊಯ್ದಾಡು : ಅತ್ತಿತ್ತ ಚಲಿಸದಚಲಂ ನಡೆದು ಬರುತಿರ್ದ (ಬಸರ. ೩-೩೭); ಉದ್ದಂಡ ಪದಹತಿಗಿಳೆ ಚಲಿಸಿ ದಿಗುಮಂಡಲಂ ಕಿವುಡಾಗೆ ಬಹುವಾದ್ಯಧ್ವನಿಗಳಿಂದ (ಬಸಪು. ೫-೧೪) ; ಅರೆಮುಗಿದ ಲೋಚನದ ಸಂಪುಟವರಲಿ ಚಲಿಸುವ ಚಂಚುಪುಟದುಪ್ಪರಿಸಿದಂಘ್ರಿಯ . . . ಸುರಿವ ನೆತ್ತರ ಪತಿಯ ಸುತ್ತಲು ತಿರುಗಿ ಚೀಱುವ ವಿಹಗಸತಿಯನು ಕಂಡನಾ ಮುನಿಪ (ತೊರರಾ. ೦-೨-೧೪). ೩. ಕದಡು ; ಕ್ಷೋಭೆಗೊಳ್ಳು; ದೃಢತೆಯಿಲ್ಲವಾಗು ; ಧವಳಚಾಮರಂ ಕಯ್ಗಳೊಳ್ ಮನಂ ಚಲಿಸೆ ಮಾಸಿ ತಾಱದ ಕುರುಳ್ಗಳುಂ ತನ್ನ ಬಿನ್ನನಿರ್ದ ಮೊಗದಿಂ ತವಿಲ್ದಿರೆ ವಿಲಾಸಮುಂ ಮುಂದೆ ಕಂಡನಲ್ಲಿ ಕಮಳಾಕ್ಷಿಯಂ ವೃಷಭಲಕ್ಷಣಂ ಲಕ್ಷ್ಮಿಯಂ (ಗದಾಯು. ೯-೩). ೪. ಅಪಮಾರ್ಗಕ್ಕೆ ಹೋಗು ; ಹಾದಿತಪ್ಪು: (+). ೫. ಚಲ್ಲಾಟವಾಡು: (+). **ಚಲಿಯಿಸು** : ೨. ಚಲಿಯಿಸಿದಪುದಸಿ ತೋತ್ಪಲದಳವೆಲರಲೆಪಂಗಳಿಂದಿದೆಂಬಿನೆಗಂ ಕಿತ್ತಲೊಡರ್ಚಿದತ್ತು ಬಲಗಣ್ಮಲರ್ (ಕಾದಂಪೂ. ೩೯೦) ; ಬಿಡೆನೀಶಾ ನಿಮ್ಮ ಪಾದಾಬ್ಜಮಂ . . . ಬಲ್ಪಿಂದಿದಂ ಮತ್ತಮತ್ತಮಿತ್ತಂ ಚಲಿಯಿಸದೆ (ರಕ್ಷಾಶ. ೯೪). ೬. ಕದಲಿಸು ; ಉದ್ರೇಕಿಸು ; ಕ್ಷೋಭೆಗೊಳಿಸು : ಮುನಿಗೆ ಪಲವುಪಸರ್ಗಮಂ ಮಾಡುತ್ತಮೆಂತುಂ ಚಲಿಯಿಸಲಾಱದೆ ನಾಣ್ಚಿ ಮಯ್ಗರೆದು

ಪೋದಂ (ಶಾಪುಂಪು. ೪೪): ಹರನ ಚಿತ್ತಮಂ ಚಲಿಯಿಸಿ ಕಡುತಪಮಂ ಕಿಡಿಸೆಂದು ಪೇಳೆ (ಗಿರಿಕ. ೨ ಕಥಾಗರ್ಭ). **ಚಳಯಿಸು:** ೭. ಸಡಿಲಿಸು; ಅಳ್ಳಕಮಾಡು: ಕಳಿದುದು ಪತ್ರಭಂಗದ ಬೆಡಂಗುಗಳಂ ಕುಟಿಲಾಲಕಂಗಳಂ ಬಳಿಯಿಸಿದತ್ತು ಕಣ್ಣೆಸೆವ ರಾಗಮನೆಯ್ದಿಸಿ ಕೇಶಹಸ್ತಮಂ ಚಳಯಿಸಿದತ್ತು ಮಯ್ಗೆ ಪುಳಕೋದಯಮಂ ಪಡೆದತ್ತು ತಲ್ಲತಾಲಳಿತೆಯರ್ಗಿತ್ತುದಿಂತು ಜಲಕೇಳಿ ಮನೋಭವಕೇಳಿ ಲೀಲೆಯಂ (ಆದಿಪು. ೧೧-೧೪೯). **ಚಳಿಯಿಸು:** ೧. ಮಿಳಿ ಪೆಗಲೊಳ್ ಕೈಯೊಳ್ ಸಂಬಳಿಗೋಲ್ . . . ಜರ್ಜರರವದಿಂ ಪೊಟಲ ಜನಂಗಳ ಕಿವಿಯೊಳ್ ಚಳಿಯಿಸುತಂ ಬಂದು ನೋಟ್ಟ ಬಹಳಾಗ್ರಮಂ (ಮಹಾನೀ. ೮-೨೩). ೨. ಅನಿಲಾಹತಿಯಿಂ ಚಳಿಯಿಕುಮನೋಕಹಾನೀಕಮದ್ರಿ ಚಳಿಯಿಕುಮೆ (ಅಜಿಪು. ೧೦-೪೮); ಅಳಲೆಲೆಗಳಲುಗೆ ಮಾಂಗಾಯ್ ಚಳಿಯಿಸೆ (ಪುಷ್ಪಪು. ೧೨-೬೬). ೩. ಕಾಮಮಂ . . . ಸಂಚಳಿಸವ ಶಂಕರನ ಮನಂ ಚಳಿಯಿಪುದಂ ಸಾರ್ದು ಪಾರ್ದು ತೆಗೆನೆಚಿದಿರ್ದಂ (ಗಿರಿಕ. ೮-೪೪). ೪. ಕೆಲಬರ್ಮನುಜರ್ ಚಳಿಯಿಸುತ್ತಿರೆ ಮಗುಟ್ಟುವರಂ ಧರ್ಮದೊಳೆ ನಿಚಿಪುದುಂ (ಶಾಸ್ತ್ರಟೀ. ೯೪-೧). ೭. ಆಚಳಿತಧೈರ್ಯನ ಮನಮಂ ಚಳಿಯಿಸಲಾಜಿದಚ್ಚರಸೆಯರಚ್ಚಿಗಂಗೊಂಡಂತಾಗೆಯುಂ (ಪಂಪಭಾ. ೭-೯೪ ವ). ೮. ಸೋಲಿಸು; ಹಿಮ್ಮೆಟ್ಟಿಸು: ಈತನ ಶೌರ್ಯಮುಮಿಾ ಮಹೋಗ್ರಸಂಗ್ರಾಮದೊಳೆನ್ನುಮಂ ಚಳಿಯಿಸಲ್ ಬಗೆದಪ್ಪುದು (ಪಂಪಭಾ. ೧೨-೪೫): ಸುಚತುರಕವಿರವಿಗಳವಿಳಿಚೇತೋಗಗನಪ್ರಚುರತಮಸ್ತಿಮಿರಮನಳಚಿ ಚಳಿಯಿಸಲ್ ನೆರೆಗುಮುಟಿದವರ್ ನೆರೆದಪರೇ (ವರ್ಧಪು. ೦-೧೯). ೯. ಅಲುಗುವಂತೆ ಮಾಡು; ಕಂಪಿಸುವಂತೆ ಮಾಡು; ಚಂಚಲವಾಗುವಂತೆ ಮಾಡು: ಏಚಿಸಿದ ಬಿಲ್ಲಂತೆ ಶರೀರಮಂ ಚಳಿಯಿಸದೆ ಪಾರ್ಶ್ವದೊಳ್ ಪಟ್ಟಿರ್ಪುದುಂ (ಧರ್ಮಾಮೃ. ೧೨-೧೮). **ಚಳಿಸು$_2$:** ೨. ಚಳಿಸಿದ ರಸದಿಂಬುಣ್ಣಳ ನಿಲಿಸದಿರದು (ಲೋಕೋಪ. ೯-೧೬೯): ಫಳರಸವೆ ಮದಧಾರೆ ಚಳಿಪ ತಳಿರ್ಗೊಂಚಲುಜ್ವಳ ಕರ್ಣಂ (ಪದ್ಮರಾ. ೮.೩೦).

**ಚಲಚಲಿಸು** (ದ್ವಿರುಕ್ತಿ): ಮಹಾವಾದ್ಯರವ ಚಲಚಲಿಸುತಿಹುದೆತ್ತತ್ತಲು (ಜನಭಾ. ೩೦-೯). **ಚಲಿಸದ ತನ** = ನಿಶ್ಚಲತೆ; ದೃಢತೆ: ಅನುದಿನವಲಸದೆ ಚಲಿಸದತನದಿಂದ ಜೀವಂಗೆ ಕರಣೀಯ (ಪರಬೋ. ೩-೧೭-೬) [ಚಲನ + – ಇಸು$_3$]

**ಚಲುಂಕು** 'ಚಲಂಕು' ನೋ.

**ಚಲುಕಾಡು**(ಕ್ರಿ). ಚೆಲ್ಲಾಡು: ಎರಚಾಡು: ಪಾಡುತದಟಿೂಳು ಕೃಷ್ಣನನು ಚಲು[ಪಾಠಾಂ. ತುಳು]ಕಾಡುತುದಕವನೊಬ್ಬರೊಬ್ಬರ ನೋಡಿ ನಗುತಬಲೆಯರು ವಿಹರಿಸುತಿರೆ (ನಿಘಾಗ. ೧೦-೧೯-೪೫).

[ಚಲುಕು (<ಚಲಂಕು) + ಆಡು$_1$]

**ಚಲುಕು** 'ಚಲುಂಕು' ನೋ.

**ಚಲುಮೆ** 'ಚಿಲುಮೆ$_1$' ನೋ.

**ಚಲುವ** 'ಚೆಲ್ವ' ನೋ.

**ಚಲುವತನ** 'ಚೆಲ್ವತನ' ನೋ.

**ಚಲುವತಿ** (ನಾ). ೧. ಚೆಲುವೆ; ಸುಂದರಿ: (ಕ). ೨. ರತಿದೇವಿ: (ಚತುನಿ. ಕ. I, ೯೦). [ಚಲುವ (<ಚೆಲ್ವ) + – ತಿ$_1$ (<– ಇತ್ತಿ)]

**ಚಲುವನೆ** 'ಚೆಲ್ವನೆ' ನೋ.

**ಚಲುವರಾಯ** 'ಚೆಲ್ವರಾಯ' ನೋ.

**ಚಲುವಳಿ** 'ಚೆಲುವಳಿ' ನೋ.

**ಚಲುವಾನ್** 'ಚೆಲುವಾನ್' ನೋ.

**ಚಲುವಿಕೆ** 'ಚೆಲ್ವಿಕೆ' ನೋ.

**ಚಲುವು** 'ಚೆಲ್ವು$_1$' ನೋ.

**ಚಲುವೆ$_1$** 'ಚೆಲ್ವೆ' ನೋ.

**ಚಲುವೆ$_2$** (ನಾ). ಒಂದು ಬಗೆಯ ಹಕ್ಕಿ: ಹರಡೆ ಚಲುವಿವಿಲಿಗನು ಚ[ಪಾಠಾಂ. ಚಿ]ಲುವೆ ಗಿಜುಗಿರಳೆ ಕಮ್ಮರನಸಗ ಕೊಟ್ಟುಳೆ ಹೊಲಿಸು ಹೊಡೆಗಳೆಂಬ ಪಕ್ಕಿಗಳವಟಿೂಳೊಪ್ಪಿದವು (ಸಾಳ್ವಭಾ. ೫-೨೦). [?]

**ಚಲುವೆ$_3$, ಚಿಲವೆ, ಚೆಲುವೆ$_2$** (ನಾ). ಬಟ್ಟೆಗಳನ್ನು ಮಡಿ ಮಾಡುವಿಕೆ, –ತೊಳೆದು ಹಸನುಗೊಳಿಸುವಿಕೆ, –ಶಂಚಿಮಾಡುವಿಕೆ: ಗಡುಸಾದ ನೀರು (Hard water) ಚಲುವೆಗೆ ಯೋಗ್ಯವಲ್ಲ (ಗೃಹವಿ. ೮೬). **ಚಿಲವೆ:** ಚಿಲವೆ (ಮಡಿ) ಮಾಡಿರದ ಮೃದುವಾದ ಒಂದು ಚೀನಾ ರೇಷ್ಮೆ (ಬಟ್ಟೆ) (Pongee. ಇಂಕನಿ). **ಚೆಲುವೆ$_2$:** ಓದುತ್ತ ಓದುತ್ತ ಅವರ ಮುಖ ಚೆಲುವೆಯ ಅರಿವೆಯಂತಾಯ್ತು (ಮರಳಿ. ೦೬೧); ತೊಟ್ಟುಕೊಂಡ ಮೇಲೆ ಬಹಳ ಬೆಳ್ಳಗೆ ಚೆಲುವೆಮಾಡಿ ಗಂಜಿಹಾಕಿ ಮಾರುತ್ತಾರೆ (ಪ್ರವಾಇ. II, ೨೭೪). [ದೇ.॥ ತಮಿ. ಚಲವೈ; ತುಳು. ಚಲುವೆ]

**ಚಲುವೆಋ** 'ಚೆಲ್ವುವೆಋ' ನೋ.

**ಚಲೆ** (ನಾ). ೧. ನಿಂತಲ್ಲಿ ನಿಲ್ಲದವಳು; ಚಂಚಲಸ್ವಭಾವದವಳು; ಅಸ್ಥಿರೆ. ೨. ಹಾದರಗಿತ್ತಿ; ವ್ಯಭಿಚಾರಿಣಿ: "ಸ್ವೈರಿಣಿ ಏರ್ಷಿಣಿಯನೀತೆ ಚಲೆ ಕುಲಟೆಯಭಿಸಾರಿ ಪಾಂಸುಲೆ ಬಂಧಕಿಯೆನಲ್ಕೆ ಹಾದರದ ನಾರಿಯೆನಿಸಿಕ್ಕು" (ಮಂಗರಾ. ೯೦-೪) [ಸಂ. ಚಲಾ]

**ಚೆಲ್ಲ$_1$, ಚಲ್ಲು$_3$, ಚಲ್ಲೆ$_3$, ಚೆಲ್ಲ$_1$, ಚೆಲ್ಲು$_2$** (ನಾ). ೧. ಸರಸ; ವಿನೋದ; ವಿಲಾಸ; ಒಯ್ಯಾರ: ಪುಲ್ಲಶರನುಮಂ ಚಲ್ಲದೊಳ್ ಪದವಡಿಸಲುಂ (ಶಾಂತಿಪು. ೮-೭೩ ವ); ಚಲ್ಲಂ ಚಳೆಯಂಗುಡುತ್ತುಮಿರೆ (ಅರ್ಧನೇ. ೨-೯೩); ಪೆಣ್ಣಾನೆಯೊಂದು ಚಲ್ಲದೊಳು ತೆಗೆದೊಡೆರಳ್ಹೆಣ್ಣಾನೆ ಬರ್ಪ ತೆಜದೊಳು (ಭರಜ. ೪೦-೮೫); ಪಲ್ಲಮಜಿಯ ಚಲ್ಲದ ಸೊರ್ಕನಿಟಿಕೆಯ್ದು ಬೀರದ ಜೋದರ ದಟಪುಬದಿಂ (ರಾಮಾಶ್ವ. ೯೪-೧೮). ೨. ನಗು: "ಚಲ್ಲ [ಪಾಠಾಂ. ಲ್ಲೆ] ನಗೆ" (ಶಬ್ದಮಂ. ೬೬). **ಚಲ್ಲು$_3$:** ೧. 'ಚಲ್ಲಂಬಡಿ' ಪರಾ. (ಗು). ೩. ಗಾಂಭೀರ್ಯವಿಲ್ಲದಿರುವ; ಹಗುರಸ್ವಭಾವದ; ಕುಚೇಷ್ಟೆಯ ಸ್ವಭಾವದ: ಸ್ವಲ್ಪ ಚಲ್ಲುಸ್ವಭಾವದ ಮನುಷ್ಯ (ಚತ್ರಕೂ. ೦೦೪). **ಚಲ್ಲೆ$_3$:** ೧. 'ಚಲ್ಲೆನೋಟ' ಪರಾ. **ಚೆಲ್ಲ$_1$:** ೧. "ಚೆಲ್ಲಮೆನೆ ಸರಸಮಕ್ಕುಂ" (ಚತುನಿ. ೧೪೫); ಚೆಲ್ಲಂ ಬೇಂಟದ ತೋಟಿಯೊಳ್ ತೊಡರೆ (ಕಾವ್ಯಸಾ. ೫೫೦ ಶೂದ್ರಕ); ಅಟಿಪಿನ ಲಲ್ಲೆಯ ಚೆಲ್ಲದ ಪುರುಡಿನ ಮುಳಿಸಿನ ನೆವದ ಪಡೆಮಾತುಗಳಂ ನುಡಿದುಂ (ಪಂಪಭಾ. ೭-೯೪ ವ); ಅಲ್ಲದ ಚೇಳಿನ ಚೆಲ್ಲಕ್ಕೆ ಹೋಗಿ ಇವರೆಲ್ಲರೂ ನಾಣುಗೆಟ್ಟರಲ್ಲಾ (ಸರ್ವವ. ೯೨-೫೦೬); ಅಲರ್ಗಣ್ ಚೆಲ್ಲಮುಂ ಸೂಸೆ (ಜಗವಿ. ೧೪-೦೦೪). ೨. "ಹಸನಂ ಚೆಲ್ಲಂ" (ಚತುನಿ. ೬೬). **ಚೆಲ್ಲು$_2$:** ೧. ಕಂತು ಪಡೆದಗ್ಗದ ಮೋಹನಶಕ್ತಿಸಂಕುಳಂ ಗಡಮನೆ ಚೆಲ್ಲಿ ನೇಟಿಗ್ಗಿನಡೆ ನೋಟ್ಟರ ಕಣ್ಗಳನೆಯ್ದೆ ಮಂಚಲಂಬಿಡಿವ ವಿಳಾಸಿನೀನಿವಹಂ (ಶಾಂತೀಶ. ೦೦-೬೭). ೩. ಆ ಎದುರು ಮನೆ ಚೆಲ್ಲು ಹುಡಿಗಿ ರಾಜ ಇದಾಳಲ್ಲ (ನಡದಾ. I, ೫೦೬). ೪. ಕುಚೇಷ್ಟೆಯ ಸ್ವಭಾವದ ವ್ಯಕ್ತಿ: ಮನಸ್ಸಿಗೆ ತೋರಿದುದನ್ನು ಬಾಯಲ್ಲಿ ಆಡಿ ತೋರಿಸಿ ಎಲ್ಲರಿಂದಲೂ 'ಚೆಲ್ಲು' ಎನಿಸಿಕೊಳ್ಳುತ್ತಾಳೆ (ಕಂಕಣ ೩೪). [?./ತೆಲು. ಚರಲು, ಚಿರಲು = ಉತ್ಸಾಹಗೊಳ್ಳು./ ಸಂ. ಚಲ್ = ವಿನೋದಮಾಡು.]

**ಚಲ್ಲ$_2$** 'ಸೆಳ್ಳ' ನೋ.

**ಚಲ್ಲಂಬೆರಸು, ಚೆಲ್ಲಂಬೆರಸಂ** (ಅ). ಸರಸದಿಂದ ಕೂಡಿ; "ಚಲ್ಲಾಟದೊಡನೆ" (ಪಂಪದೀ. ೧೭೭): ಕಡೆಗಣ್ಣ ಚ[ಪಾಠಾಂ. ಚೆ]ಲ್ಲಂಬೆರಸು ಸೂಸುವ ವಾಸವಸ್ತ್ರೀಯರ ಮುಖಾಬ್ಜಾಸವ ಸಂಬಂಧಿಗಳಪ್ಪ ಶೇಷಾಕ್ಷತಂಗಳಂ . . . ಸೇಸೆಗೊಳುತ್ತುಂ (ಪಂಪಭಾ. ೮-೨೭ ವ): "ಪ್ರಸಾರದಿಂದ ಕೂಡಿ" (ಪಂಪನಿ). **ಚೆಲ್ಲಂಬೆರಸು:** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಚಲ್ಲ$_1$ + ಬೆರಸು$_3$]

**ಚಲ್ಲಂಬೇಱು** (ಕ್ರಿ). ವಿಲಾಸವನ್ನು ಹೆಚ್ಚಿಸು: ಚಲ್ಲಂಬೇಱಿದ ನೋಟದೊಳ್ಪು ನಯದಿಂ ನಾಣ್ಡಾಣದೊಪ್ಪಂಗಳಂ ಬಲ್ಲಂದಂದದ ತೋಱುವೋಜೆ . . . ಒರ್ವಳಂಗಜರಸಂ ಕೈಗಣ್ಮೆ ಬಂದಿರ್ದಳಂ ನೋಡದಂತೆ ನೋಡಿ (ಬಂಹರಿ. ೩-೫೦). [ಚಲ್ಲ$_1$ + ಪೇಱು$_1$]

**ಚಲ್ಲಕಾತಿ** 'ಚಲ್ಲಗಾರ್ತಿ' ನೋ.

**ಚಲ್ಲಕಾರ್ತಿ** 'ಚಲ್ಲಗಾರ್ತಿ' ನೋ.

**ಚಲ್ಲಗಣ್, ಚೆಲ್ಲಗಣ್** (ನಾ). ಸರಸವನ್ನು ಬೀರುವ ಕಣ್ಣು; ಚೆಲುವಾದ ಕಣ್ಣು: ಸೊಗಯಿಪ ಚಲ್ಲಗಣ್ (ಎಕ. VI, ತರೀಕೆ. ೪೫-೩೪; 1196); ಚಲ್ಲಗಣ್ಗಡೆಯ ಕುಡಿವೆಳಗಿಂ ಬುರುಳ್ಗಣ್ಣಿಯಲ್ಲಿ ಪಥಿಕವಮನೋಮೃಗವನೆಯ್ದೆ ಬೀಱಿ ತಂದಿಲ್ಲಿ ತಡೆವರ್ (ಪದ್ಮರಾ. ೮-೯); ಚಲ್ಲ[ಪಾಠಾಂ. ಚೆಲ್ಲ]ಗಂಗಳ ಚದುರೆ (ಸಾಳ್ವಭಾ. ೨೯-೭). **ಚೆಲ್ಲಗಣ್:** ನಗೆಗಣ್ ಮಱುವುಲ್ಲೆಯ ಚೆಲ್ಲಗಣ್ಗಳಿಂ ನೂರ್ಮಡಿ ಚೆಲ್ವನಾನೆ (ಕಬ್ಬಿಕಾ. ೩೩೮): ನಗೆಗಣ್ಣ ಮುಗುಳ್ನಗೆ ಚೆಲ್ಲಗಣ್ಣ ಚಾಪಳಂ (ಪುಷ್ಪಪು. ೫-೨೪); ಮಣಿಹಾರಂ ವಿಟನೇತ್ರವಾಗುರಮೆನಲ್ ಸಾರ್ದಿರ್ಪಿನಂ ಚೆಲ್ಲಗಣ್ ಗಣಿಕಾವಲ್ಲಭ ಸಂಕುಲಕ್ಕೆ ಮಥಿಸಲ್ ಸಾಕೆಂಬಿನಂ (ದಶಕು. ೧೧-೫೮).

[ಚಲ್ಲ$_1$ + ಕಣ್]

**ಚಲ್ಲಗಾಯ್** 'ಚೆಳ್ಳೆಗಾಯ್' ನೋ.

**ಚಲ್ಲಗಾರ್ತಿ, ಚಲ್ಲಕಾತಿ, ಚಲ್ಲಕಾರ್ತಿ, ಚಲ್ಲೆಗಾರ್ತಿ, ಚೆಲ್ಲಕಾತಿ, ಚೆಲ್ಲಗಾತಿ, ಚೆಲ್ಲಗಾರ್ತಿ, ಚೆಲ್ಲೆಗಾತಿ** (ನಾ). ವಿಲಾಸವತಿ; ಸರಸವತಿ; ರಸಿಕಳಾದ ಸ್ತ್ರೀ: "ಸರಸವತಿ ಚಲ್ಲಗಾರ್ತಿ" (ಕವಿಕಂ. ೧೭೪); ಎಡೆಯಾಡುವ ಚಲ್ಲಗಾರ್ತಿಯರ ಹುಲ್ಲೆಗಣ್ಗಳ ಕಾಂತಿಕೌಮುದಿಗಳಿಂ (ಅನಂಪು. ೧-೧೦೫ ವ); ಒರ್ವಳ್ಚಲ್ಲ [ಪಾಠಾಂ. ಲಲ್ಲೆ]ಗಾರ್ತಿ ದೂದವಿಯೊಡನೆ ನಗೆ ವಿನುಗೆ ಮೊಗವಮಂ ನೋಡಿ (ರಾಜಶೇ. ೧೧-೧೪೮ ವ). **ಚಲ್ಲಕಾತಿ:** ಮುಂಗುರುಳುಗಳ ತಿರ್ದುತ ಮೆಲ್ಲನಡಿಯಿಟ್ಟಳು ಚಲ್ಲಕಾತಿ (ಡಂಪ್ರಸಾಂ. ೯-೧೫೮). **ಚಲ್ಲಕಾರ್ತಿ:** ಚಲ್ಲಕಾರ್ತಿಯರ್ ಚಲ್ಲದಿಂ ನಿವಾಳಿಸಿ ನಾಣಂ ಬಱಿದೀಡಾಡಿಯುಂ (ಅರ್ಧನೇ. ೫-೨ ವ). **ಚಲ್ಲೆಗಾರ್ತಿ:** "ಚಲ್ಲೆಗಾರ್ತಿಯೆನೆ ಸರಸವತಿ" (ಕಶರ. ೩೫). **ಚೆಲ್ಲಕಾತಿ:** ತನ್ನ ಸೇವೆಯ ಚೆಲ್ಲಕಾತಿಯರ ಮೇಳದೊಳು (ಭರತ. ೫೫-೭೯). **ಚೆಲ್ಲಗಾತಿ:** ಚದುರೆಯ ಚೆಲ್ಲಗಾತಿಯೆ (ಗೀತಗೋ. ೫೫-೧೦). **ಚೆಲ್ಲಗಾರ್ತಿ:** "ಚೆಲ್ಲಗಾರ್ತಿಯೆಂದು ಸರಸವತಿ" (ಕಶಸಾ. ೧೯-೩೭೭). ಕಣ್ಚೆಲ್ಲದೊಳೆ ಗೆಲ್ವಳನ್ನಿವಳಲ್ಲದೆ ಜಗದೊಳಗೆ ಚೆಲ್ಲಗಾರ್ತಿಯರೊಳರೇ (ಲೀಲಾವ. ೨-೮೭); ಅವರೊಳೊರ್ವಳ್ ಜಕ್ಕಜವ್ವನದ ಚೆಲ್ಲಗಾರ್ತಿ (ರಾಮಾಶ್ವ. ೫೦-೧೫). **ಚೆಲ್ಲೆಗಾತಿ:** ಮಲ್ಲೆದೆಯವರಿಗೆ ಬಾಹುಬಲಿಯ ಕೃತಿ ಚೆಲ್ಲೆಗಾತಿಯ ಲಲ್ಲೆವಾತು (ನಾಗಕು. ೧-೭೭).

[ಚಲ್ಲ$_1$ + -ಕಾಱಿ + -ತಿ$_1$ (<-ಇತ್ತಿ)]

**ಚಲ್ಲಣ, ಚಣ್ಣ, ಚಲ್ಲಾಣ, ಚೆಲ್ಲಣ, ಚೊಣ್ಣ, ಚೊಲ್ಲಣ** (ನಾ). ೧. ಮೊಣಕಾಲವರೆಗೆ ಬರುವ ಉಡುಪು,-ಚಡ್ಡಿ; ಅರ್ಧೋರುಕ: "ಚಂಡಾತಕವೆಂಬುದು ಚಲ್ಲಣಂ" (ಹಲಾಯು. ೯೦-೪೯೩); "ಚಣಕಂ—ಚಲ್ಲಣಂ (ಅರ್ಧೋರುಕಂ)" (ಶಮದ. ಪರಿ. ೨); ಆಗಳಂಗರಾಜ . . . ಇಂಬಾಗಿ ಚಲ್ಲಣಮನುಟ್ಟು (ಪಂಪಭಾ. ೧೨-೧೦೮ ವ); ಉಟ್ಟ ಚಲ್ಲಣ ಕೈಯ ಪಟ್ಟೆಯವಿಡಿದು ಗರುಡಿಯ ಕಟ್ಟೆ ಶ್ರುವವ ಮಾಡುವಂತೆ ತನ್ನ ತಪ್ಪಿಸಿಕೊಂಡರೆ ಶಿವ ಮೆಚ್ಚುವನೆ (ಬಸವ. ೬೭೪); ಮುಂಜೆಱುಗುಗಳ ಚಂದ್ರಿಕೆ ಪಟದ ಚಲ್ಲಣದ . . . ವನಿತೆಯರು ಬಳಸಿದರು (ತೊರರಾ. ೦-೦೭-೫೨); ಪಟ್ಟಾವಳಿ ಚಲ್ಲಣವ ತೊಟ್ಟು ಪೆರ್ದೊಡೆಗೆ (ಮೋಹತ. ೧೨-೪೫). ೨. ಷರಾಯಿ; ಇಜಾರ: ಚೆಲೆಬಾಳುವ ಪರಟು ಹಾಕಿ ಉಲನ್ ಚಲ್ಲಣವನ್ನು ಧರಿಸಿದ್ದ (ವಂಶವೃ. ೩೩೭). **ಚಣ್ಣ:** ೨. ಅವರ ಅಂಗಿ . . . ಬಣ್ಣಬಣ್ಣದ ಚಣ್ಣ ನೋಡಿದರೇ ಹೇಳಿಬಿಡಬಹುದು (ತುಂಗಭ. ೩): ಖಾಕಿ ಚಣ್ಣ ಹಾಕಿಕೊಂಡು ಕಚೇರಿಗೆ ಹಾಜರಾಗಿ ಸಿಪಾಯರಿಂದ ನಗಿಸಿಕೊಳ್ಳುವದು ತಪ್ಪುತ್ತಿತ್ತಲ್ಲ (ಗಂಮಾಯಿ. ೧೨೦); ಚಣ್ಣ ಪೈರಣು ಹಾಕಿದ್ದರೆ ಬರುತ್ತಿತ್ತು (ಕುರಿಹಿಂ. ೦೨೯); ಪಿಸ್ತೂಲು ತೆಗೆದುಕೊಂಡು ಚಣ್ಣದ ಕಿಸೆಯಲ್ಲಿಟ್ಟಿ (ಮೇದಿಮ.೭೯). **ಚಲ್ಲಾಣ:** ೧. ಉಲಿವ ಪೊಕ್ಕುಳ ಘಂಟೆ ಚಲ್ಲಾಣದುರೆ ಗೆಜ್ಜೆ (ನವಮೋ. ೧೨-೭೮). **ಚೆಲ್ಲಣ:** ೧. ಸಲ್ಲಲಿತವಾದ ಚೆಲ್ಲಣದ ಚಿತ್ರಿಸಿದ ಪತಾಕಾಂಚಲದಂತೆ ಪಲ್ಲವದ ಶೋಭೆಯಂ ಪಳಚ್ಚನೆ ಮೆಱೆವ ಬಾಲಗಜ್ಜೆಯ (ಶಾಂತೀಶ್ವ. ೭-೯೩ ವ): ಉಲಿವ ಗೆಜ್ಜೆಯ ಚೆಲ್ಲಣದ ಹೊಂಬಳಿದ ಹರಿಗೆಯ ಹೊಳೆವ ಕಡಿತಲೆಗಳ ವಿಲಾಸದೊಳೆಂದು ಹೊಕ್ಕುದು ತುಳುವಪಡೆ (ಕುವ್ಯಾಭೀ. ೪-೩೩): ಚೆಲ್ಲಣ ಕಾಸೆ ಕುಪ್ಪಸ ಮೊಲೆಕಟ್ಟುಗಳ್ (ಮೋಹತ. ೨೪-೪). **ಚೊಣ್ಣ:** ೨. ನನ್ನ ಬಿಳಿಚೊಣ್ಣದ ಸಂಗಡಿಗರೊಡನೆ . . . ಆಡುತ್ತಿದ್ದೆ (ಗಾಳಿಪ. ೨); ಚೊಣ್ಣದ ಕಿಸೆಯಲ್ಲಿ ಹುರಿಗಡಲೆ ಇದ್ದುವು (ಜಯಂತ. ೨೦). **ಚೊಲ್ಲಣ:** (೧).

[ದೇ.॥ ತಮಿ. ಮಲ. ಚಲ್ಲಡ; ತುಳು. ಚಲ್ಲಣೊ; ತೆಲು. ಚಲ್ಲಡ, ಚಲ್ಲಾಡ. / ಸಂ. ಚಲನಕ, ಚಂಡಾತಕ]

**ಚಲ್ಲಣಂದೆಗೆ** (ಕ್ರಿ). ೧. ಚಡ್ಡಿಯನ್ನು ಕಳಚಿಸು. ೨. (ಆಲಂ)ಅವಮಾನ ಮಾಡು; ಭಂಗಿಸು: ನಿಚ್ಚಟದ ರಾವುತರಂ ಚಲ್ಲಣಂದೆಗೆದುಂ ಮುಂಗುಡಿಯ ರಾವುತರಂ ಭಂಗಿಸಿ ತಿವಿದು (ಮಳರಹ. ೨೨೭-೦೫). [ಚಲ್ಲಣ + ತೆಗೆ$_1$]

**ಚಲ್ಲಣಗಟ್ಟು** (ಕ್ರಿ). ಚಡ್ಡಿಯನ್ನು ಧರಿಸು; ಚಣ್ಣವನ್ನು ತೊಟ್ಟುಕೊಳ್ಳು: ಸಾಸಿರದೆಂಟನೆಯ ದಳದಲ್ಲಿ ಪೇಚರಿ ಚಲ್ಲಣಗಟ್ಟಿ ವಾಸುಗಿಯ ಫಣಾಮಣಿಯು ಪ್ರಜ್ವಲಿಸುವುದ ಕಂಡೆ (ಅವಚಂ. ೭೦-೨೭೦). [ಚಲ್ಲಣ + ಕಟ್ಟು$_1$]

**ಚಲ್ಲಧ್ವಜ** (ನಾ). ಯಾವಾಗಲೂ ಸೋಲದ ವ್ಯಕ್ತಿ; ಒಂದು ಬಿರುದು (?): ಮಾಸಾಮಾನ್ತ ಚಲ್ಲಧ್ವಜ ರಣಮುತ್ತರಂಗನೆನ್ಪವೊಳ್ಳಿದಂ (ಎಕ. VIII, ಸೊರಬ. ೮೮-೨; 912). [Pಇದು 'ಚಲಧ್ವಜ' ಎಂಬುದರ ಅಪಲಿಖಿತವಿರಬಹುದು]

**ಚಲ್ಲಪಿಲ್ಲಿ** 'ಚಲ್ಲಾಪಿಲ್ಲಿ' ನೋ.

**ಚಲ್ಲವಂತ** 'ಚಲ್ಲವತ್ತ' ನೋ.

**ಚಲ್ಲವತ್ತ, ಚಲ್ಲವಂತ, ಚಲ್ಲವರ್ತ, ಚಲ್ಲವೊತ್ತ, ಚೆಲ್ಲವತ್ತ, ಚೆಲ್ಲವೊತ್ತ** (ನಾ). ಸವಿಮಾತುಗಳಿಂದ ಮರುಳುಮಾಡಿ ದ್ರೋಹ ಬಗೆಯುವವನು; ಠಕ್ಕ; ವಂಚಕ: "ನಂಬಿಸಿ ತಿಂಬುವವನಂ ಬುಧರೆಂಬರ್ ಬೊಂದುಕನು ಚಲ್ಲವತ್ತನುಮೆಂದುಂ" (ಕವಿಕಂ. ೧೫೫); ಕೆಮ್ಮಗೆ ನಾಡ ಚಲ್ಲವ[ಪಾಠಾಂ. ವು]ತ್ತರ ನುಡಿಗೊಳ್ಳದಿರ್ (ಪಂಪಭಾ. ೯-೫೨); ನಂಬುಗೆ ಚಲ್ಲವತ್ತರೊಳ್ . . . ಉಂಟುಮಾಡವೆ ಕೇಡಂ (ನೀತಿಮಂ. I, ೦೦೫). **ಚಲ್ಲವಂತ:** "ಚಲ್ಲವಂತ[ಪಾಠಾಂ. ವತ್ತ]ನುಮೆನಲ್ ನಂಬಿಸಿಯೆ ತಿಂಬಾತನಕ್ಕು" (ಶಬ್ದಮಂ. ೪೭). **ಚಲ್ಲವರ್ತ:** "ಬೊಂದುಕಂ ಚಲ್ಲವರ್ತ[ಪಾಠಾಂ. ವತ್ತ, ವೊತ್ತ]ನೆನೆ ನಂಬಿಸಿಯೆ ತಿಂಬವನ ಪೆಸರಕ್ಕು" (ಕಬ್ಬಿಕೈ. ೩೫). **ಚಲ್ಲವೊತ್ತ:** "ಚಲ್ಲವೊತ್ತರ್ = ನಂಬಿಸಿ ತಿಂಬವರ್" (ಶಮದ. ಪರಿ. ೨); ಎಲ್ಲಿಯಾನುಂ ಬಂದ ಚಲ್ಲವೊತ್ತನ ಬೆಲ್ಲವಾತುಗಳಂ ಕೈಕೊಂಡು ರಾಜ್ಯಮಂ ಕಿಡಿಸಲ್ಬಗೆದೆಯಪ್ಪೊಡದನುಪೇಕ್ಷಿಸಲ್ವಾರದು (ಪಂಚತಂ. ೦೦೫-೯). **ಚೆಲ್ಲವತ್ತ:** "ಬೊಂದುಕನೆಂದುಂ, ಚೆಲ್ಲವತ್ತನೆಂದುಂ ನಂಬಿಸಿ ತಿಂಬವಂ" (ಕಶಸಾ. ೦೭-೩೩೮); ಬೇಳ್ಪ ತಿರಿಕುಳಿಯಲ್ಲದರ ಚೆಲ್ಲವತ್ತನೆಂ (ಸಂಸಪ. ೨೪-೧೧). **ಚೆಲ್ಲವೊತ್ತ:** ಮೇಲಿನ 'ಕಬ್ಬಿಕೈ' ಪ್ರಯೋಗದ ಪಾಠಾಂತರವನ್ನು ನೋಡಿ. [?]

**ಚಲ್ಲವರ್ತ** 'ಚಲ್ಲವತ್ತ' ನೋ.

**ಚಲ್ಲವಾಡು, ಚಲ್ಲಾಡು$_2$, ಚೆಲ್ಲವಾಡು, ಚೆಲ್ಲಾಡು$_2$** (ಕ್ರಿ). ವಿನೋದ ಮಾಡು; ಸರಸವಾಡು: ಚಲ್ಲವಾಡಿ ಪೂವೆತ್ತುವ ಮಾಲೆಗಾರ್ತಿಯರ ನಂದರಿಕೇಸರಿ ನಿಂದು ನೋಡಿದಂ (ಪಂಪಭಾ. ೪-೮೦); ಬೆಣ್ಣೆಯ ಬೆಣಕಂಗೆ

ಕೆಂಡದುಂಡಲಿಗೆಯು ಮಾಡಿ ಚಲ್ಲವಾಡಿದರೆ ಹಲ್ಲು ಹೋಹುದು (ಬಸವ. ೬೭೦ ಆ); ಹೋಹ ಮಾರಿಯ ಚಲ್ಲವಾಡುವರು (ಎಕ. VIII, ಸೊರಬ. ೨೬೯-೫೫ : ಸು. 1215). **ಚಲ್ಲಾಡು$_2$ :** ನಲ್ಲನೆರ್ದೆಯುಂ ಸಾರ್ದಲ್ಲಿ ಚಲ್ಲಾಡಿ (ಚಕವಿ. ೧-೫). **ಚೆಲ್ಲವಾಡು :** ನೇವುರದ ನುಣ್ಚರಕ್ಕೆ ಮರಳ್ದ ಮರಾಳಬಾಳಕಂಗಳ ಮೊಗದೊಳ್ ಮುಗುಳ್ನಗೆವಾಲಂ ಚೆಲ್ಲಿ ಚೆಲ್ಲವಾಡುತ್ತುಂ (ಅರ್ಥನೇ. ೧-೯೩ ವ) ; ಬುಲ್ಲವಿಸಿದನು ಕೋಪಶಿಖಿಯಲಿ ಚೆಲ್ಲವಾಡುತ ಕೊರಳು ಕೈಗಳ ಬಿಗಿದ ಬಾಲದಲಿ (ಕೌಶಿರಾ. ೨೧-೪೮) ; ಒಲ್ಲದವಳೊಡನಾಡಿ ಚೆಲ್ಲವಾಡುವನೆಗ್ಗ (ಸರ್ವಜ್ಞ. ೧೬೦೭). **ಚೆಲ್ಲಾಡು$_2$ :** ಮಳೆ ಸುಗ್ಗಿಗಳ ತಡೆದು ಮೆಲ್ಲೆಲ್ಲ ಕುಳಿರ ತೆರೆ ಚೆಲ್ಲಾಡುತಿರಲು (ಕಾಲೂರ. ೭೦-೨೨೮). [ಚಲ್ಲ$_1$ + ಆಡು$_1$]

**ಚಲ್ಲವೊತ್ತ** 'ಚಲ್ಲವತ್ತ' ನೋ.

**ಚಲ್ಲಾಟ$_1$, ಚೆಲ್ಲಾಟ$_1$** (ನಾ). ಚೆಲ್ಲಾಪಿಲ್ಲಿಯಾಗಿ ಚಲ್ಲುವುದು,-ಎಸೆಯುವುದು ; ತೂರಾಡುವುದು : (+). **ಚೆಲ್ಲಾಟ$_1$ :** (+). [ಚಲ್ಲು$_1$ + ಆಟ]

**ಚಲ್ಲಾಟ$_2$, ಚೆಲ್ಲಾಟ$_2$** (ನಾ). ೧. ವಿನೋದ ; ಸರಸ ; ಲೀಲೆ ; ವಿಲಾಸ : ಭಾವದಲ್ಲಿ ನನ್ನ ಕೂಡಣ ಚಲ್ಲಾಟದಿಂದ ಸಂಚರಿಸುತ್ತ ತಾನೇ ಜಂಗಮವಾದನಯ್ಯಾ (ವಚಶಾ. II, ೦೫೨); ಅತಿವಿಳಾಸಮನೆಸಗುತ್ತೆಸೆದಿರ್ಪೆಳವೆಣ್ಗಳ ಚಲ್ಲಾಟಮಂ ನೋಡುತ್ತ (ಉದ್ಭಟ. ೩-೩೨ ವ). ೨. ಗಾಂಭೀರ್ಯವಿಲ್ಲದಿರುವಿಕೆ : ಅವಳ ಚಲ್ಲಾಟದ ನಡವಳಿಕೆ ಗೌರವಕ್ಕೆ ಧಕ್ಕೆ ತರುತ್ತದೆ (ರೂಢಿ). **ಚೆಲ್ಲಾಟ$_2$ :** ೧. ಚೆಲ್ಲಾಟಂ ಕಲಹಂ ರತಿ ಸಲ್ಲೀಲೆ (ಮನ್ಮವಿ. ೫-೩೫) ; ಅಳಿಗಳಪ್ಪುಗೆ ಸಿಂಗವಱಿಗಳ ಚೆಲ್ಲಾಟ (ಕಂಕವಿ. ೧೦-೪೪) ; ಬೆಕ್ಕಿಗೆ ಚೆಲ್ಲಾಟ, ಇಲಿಗೆ ಪ್ರಾಣಸಂಕಟ (ಗಾದೆ). ೨. ನಲ್ಲ ಕಂಡರೆ ಚೆಲ್ಲಾಟವಾಡುವ ಚೆಲುವೆಯು ಗತಿಯೇನು? (ಮೋಳಿಮಾ. ೦೫೦ ಪ್ರಸ್ತಾವನೆ). [ಚಲ್ಲ$_1$ + ಆಟ. / ತೆಲು. ಚೆಲ್ಲಾಟ]

**ಚಲ್ಲಾಟಂಬೆಱು** (ಕ್ರಿ). ಸರಸವಾಡು; ಸಂತೋಷಿಸು; ವಿನೋದಪಡು: ಚಲ್ಲಾಟಂಬೆತ್ತು ಕಾಂತಾಮಣಿಯುಗುರಿಸಿದಳ್ ತೈಲಮಂ ಬಾಲೆಗಾಗಳ್ (ಉದ್ಭಟ. ೮-೦೫). [ಚಲ್ಲಾಟ$_2$ + ಪೆಱು$_1$]

**ಚಲ್ಲಾಡು$_1$, ಚೆಲ್ಲಾಡು$_1$** (ಕ್ರಿ). ೧. ತೂರಾಡು ; ಈಡಾಡು ; ಒಗೆದಾಡು : ಫುಲ್ಲನಾಭನ ಪ್ರಾಣವಲ್ಲಭೆಯ ನೆಱೆ ಸಿರಿಯು ಚ[ಪಾಠಾಂ. ಚೆ]ಲ್ಲಾಡುತುಱೆ ಮೆಱೆದ ಕಲ್ಯಾಣಪುರದ ಸುತ್ತೆಲ್ಲ (ಗುಭಚ. ೧-೨೦). **ಚೆಲ್ಲಾಡು$_1$:** ೧. ಬಿರಿದಚ್ಚಲರ ಧೂಳಿಗಳ ಚೆಲ್ಲಾಡಿ (ಜೈಮಿಭಾ. ೩-೨೪) ; ಹಿಗ್ಗಿರ್ಪ ಕಂಗಳಿಗೆ ಚೆಲ್ವಿಕೆಯ ಚೆಲ್ಲಾಡಿ (ಕಾಲೂರ. ೧೧೮-೨೪೭). ೨. ಅತಿಶಯವಾಗಿ ಬಿದ್ದಿರು ; ಯಥೇಷ್ಟವಾಗಿ ಇರು ; ಇಟ್ಟಾಡು : ಹೊರಗಡೆ ತ್ರಯೋದಶಿ ಚಂದ್ರನ ಬೆಳಕು ಚೆಲ್ಲಾಡುತ್ತಿತ್ತು (ಚೆಂಗಾಳ್ಳ. ೫೦೫); ಎರಡಾಣೆ ನಾಕಾಣೆಗೆ ಸೇರಕ್ಕಿ ಬಿದ್ದು ಚೆಲ್ಲಾಡೋದು (ನನ್ನೂರು. ೩೦೭). [ಚಲ್ಲು$_1$ + ಆಡು$_1$]

**ಚಲ್ಲಾಡು$_2$** 'ಚಲ್ಲವಾಡು' ನೋ.

**ಚಲ್ಲಾಣ** 'ಚಲ್ಲಣ' ನೋ.

**ಚಲ್ಲಾನೆ** (ನಾ). ಒಂದು ಬಗೆಯ ಮರ: ವಲೀವರ, ಚಲ್ಲಾನೆ . . . ಗೂಗ (ಮೃಜಿಗಿ. ೩೦-೭೦೭). [ ? ]

**ಚಲ್ಲಾಪಿಲ್ಲಿ, ಚಲ್ಲಪಿಲ್ಲಿ, ಚಲ್ಲಿಪಿಲ್ಲಿ, ಚೆಲ್ಲಪಿಲ್ಲಿ, ಚೆಲ್ಲಾಪಿಲ್ಲಿ, ಚೆಲ್ಲಿಪಿಲ್ಲಿ**(ನಾ). ಅತ್ತಿತ್ತ ಚೆದರಿದ ಸ್ಥಿತಿ; ಅವ್ಯವಸ್ಥೆಯ ರೀತಿ; ಅಸ್ತವ್ಯಸ್ತತೆ : ಅವರ ಫೌಜಿಗೆ ಬಹಳ ಪೆಟ್ಟಾಗಿ . . . ಕಡೆಗೆ ಇದಿರಿಗೆ ನಿಲ್ಲಲಾರದೆ ಚಲ್ಲಾಪಿಲ್ಲಿ ಆದ್ದರಿಂದ (ರಾಜೇಂದ್ರ. ೪೩) ; ಉದ್ದಿನ ಮೂಟೆಯು ಉರಳಿ ಹೋದರೆ ಅದರೊಳಗಿರುವ ಕಾಳುಗಳು ಚಲ್ಲಿ ಚಲ್ಲಾಪಿಲ್ಲಿಯಾಗಿ ಹೋಗುವಂತೆ (ಹುಟ್ಟಿಹ. ೧೨೮) ; ಮನಸು ಚದರಿ ಚಲ್ಲಾಪಿಲ್ಲಿಯಾಯಿತು (ಹೊಬಿಸಿ. ೧೨). **ಚಲ್ಲಪಿಲ್ಲಿ:** ಗಲ್ಲೆಯೊಡೆಯೆ ತಿವಿದನು ಗಡೆಯವರನು ಚಲ್ಲಪಿಲ್ಲಿಯ ಮಾಡಿದನು (ಕುರಾಸಾಂ. ೧೩-೨೦). **ಚಲ್ಲಿಪಿಲ್ಲಿ:** ಬಲದಲ್ಲಿ ಕೆಲಫೌಜು ನಿತ್ತರಿಸಲಾರದೆ ಚ[ಪಾಠಾಂ. ಚೆ]ಲ್ಲಿಪಿಲ್ಲಿಯಾದುದು (ಸಮ್ಮಕೌ. ೮-೫೦). **ಚೆಲ್ಲಪಿಲ್ಲಿ:** ಠಾಣ್ಯವನೆಲ್ಲವ ಹೊಕ್ಕೆಱದಿಱದು ಚೆಲ್ಲ[ಪಾಠಾಂ. ಚಲ್ಲ]ಪಿಲ್ಲಿಯ ಮಾಡಿ (ಕುರಾಸಾಂ. ೫-೪೫). **ಚೆಲ್ಲಾಪಿಲ್ಲಿ :** ಸಾಮಾನುಗಳೆಲ್ಲ ಅತ್ತಿತ್ತ ಚೆಲ್ಲಾಪಿಲ್ಲಿಯಾಗಿದ್ದವು (ಕೊತಕಾ. ೭೦) ; ಪಾಂಡ್ಯ ಸೈನ್ಯಗಳು ಚೆಲ್ಲಾಪಿಲ್ಲಿಯಾಗಿ ಓಡುತ್ತಿದ್ದವು (ಶ್ರೀರಾಯ. ೩೧೯) ; ಕೈಯಲ್ಲಿದ್ದ ಬಟ್ಟಲು ಕೆಳ ಉರುಳಿ ಇದ್ದ ದೋಸೆ ಎಲ್ಲಾ ಚೆಲ್ಲಾಪಿಲ್ಲಿಯಾಗಿ ಕೆಳಬಿತ್ತು (ಪದ್ಮಸ. ೫೫). **ಚೆಲ್ಲಿಪಿಲ್ಲಿ :** ದೇವತೆಗಳು . . . ಕಲ್ಲಾತಾಗಿದ ನೆಲ್ಲಿಯಂತೆ ಚೆಲ್ಲಿಪಿಲ್ಲಿಯಾಗುವಂ ತೋಱಿದುವಲ್ಲಿ ನಿಲ್ಲದೆ (ನೇಮಿಸಂ. ೨೫-೫೫). [<ಚಲ್ಲು$_1$. / ತುಳು. ಚಲ್ಲಾಪಿಲ್ಲಿ]

**ಚಲ್ಲಿ$_1$, ಜಲ್ಲಿ$_1$** (ನಾ). ೧. ಚೂರು ; ತುಣುಕು ; ತುಂಡು ; ಹೋಳು : ಒಗುವಿಗೆ ಬೇಳೆಗೆಯ್ದು ಮೆಟಿಸಂ ತಳಿದಲ್ಲದ ಚಲ್ಲಿಯುಂ ಪವಣ್ಣಾಗೆ ಕಲಸಿರ್ದ ತಣ್ಣಲಸುಗೂಟನಿಳಾಪತಿಗಿತ್ತನಟ್ಟಿಯಿಂ (ಲೀಲಾವ. ೫-೭೦) ; ಚಳಿಯದಂಗೋಪಾಂಗವಂ ಚಲ್ಲಿ ಮಾಡಿದೊಡಂ ತಳ್ವೊಳಗಿರ್ದೊಡಂ ಕಡೆಗದೆಂದುಂ . . . ದೇಹದಿನಾತ್ಮಂ ಪೆಱನೆಂಬ ಬುದ್ಧಿ ನಿನಗೀಗಳ್ ಸಾರ್ದುದು (ಧರ್ಮನಾ. ೫-೧೧೯) ; ಕಾಡೆ ಕವಟೆಕಾಯ ತಂದು ಚಲ್ಲಿಯ ಮಾಡಿ ಕೂಡೆ ವರಳೊಳಗಿಡುವುದು (ಸಾಳ್ವಸಾಂ.೯). **ಜಲ್ಲಿ$_1$:** ೨. ರಸ್ತೆಯನ್ನು ಭದ್ರಪಡಿಸಲು ಹಾಗು ಸಿಮೆಂಟ್ ಕಾಂಕ್ರೀಟ್ ತಯಾರಿಸಲು ಹಾಕುವ ಕಲ್ಲಿನ ಚೂರು,-ತುಂಡು: ಬದುಕಿನ ನಡುಕಟ್ಟನಲ್ಲಿ ಕಟ್ಟ ಮೈಯ್ದು ಕಲ್ಲ ಜಲ್ಲಿ(ಗರಿ. ೯೪-೫) ; ರಸ್ತೆಗೆ ಜಲ್ಲಿ ಎಂದರೆ ಏನೆಂಬುದು ತಿಳಿದೇ ಇರಲಿಲ್ಲ (ರಂಗಳ. ೨೩). ೩. (ಆಲಂ) ಸುಳ್ಳು ; ಸತ್ವವಿಲ್ಲದ ವಿಚಾರ : ದುರಗಿ ಆಡಿದ ನುಡಿಯ ಬೇಡೆನ್ನರಲ್ಲಿ; ಕಾಳಿ ಹೇಳುವ ಮಾತಿನಲಿ ಇಲ್ಲ ಜಲ್ಲಿ (ನವರಾ. IV, ೨೭-೦೨). [ದೇ.॥ ತಮಿ. ಮಲ. ಚಲ್ಲಿ ; ತುಳು. ಚಲ್ಲಿ, ಜಲ್ಲಿ ; ತೆಲು. ಜಲ್ಲಿ]

**ಚಲ್ಲಿ$_2$, ಥಲ್ಲಿ$_1$** (ನಾ). ೧. [ನಾಟ್ಯ] ನೃತ್ಯದ ಒಂದು ಗತಿ,- ಪಾದವಿನ್ಯಾಸ : ರಸಭಾವಾಭಿನಯಂಗಳ್ ಪೊಸವೆ ಪುಗಿಲ್ ಪೊಸವೆ ಚಲ್ಲಿಗಳ್ ಪೊಸವೆ ನಯಂ ಪೊಸವೆ ಕರಣಂಗಳುಂ ನಿಪ್ಪೊಸವೆನೆ ಪೊಸಯಿಸಿದಳಾಕೆ ನಾಟ್ಯಾಗಮಮಂ (ಆದಿಪು. ೯-೨೫); ಚರಣದ ಚಾರಿಯು ಚಲ್ಲಿಯ ಪರಿಕ್ರಮ ಕ್ರಮದ ಭಂಗಿಗಳ್ ನೆಗಟ್ಟಿಡೆಯೊಳ್ (ಆದಿಪು. ೯-೩೯). **ಥಲ್ಲಿ$_1$:** ೨. [ಸಂಗೀತ] ಮೃದಂಗ ಬಾರಿಸುವ ಒಂದು ಮಟ್ಟು,-ಗತ್ತು : ವಾದ್ಯವಿದ್ಯಾಧರನಪ್ಪ ವಿದ್ಯಾಧರಮಾರ್ದಂಗಿಕಂ ಮೃದಂಗಸಂಗತೋತ್ಸಂಗವಾಗಿ . . . ಬೊಲ್ಡಾವಣೆ ಬೊಲ್ಡಾವಣೆ ಥಲ್ಲಿ ಪಾಡು ಪದಂ . . . ಜೋಕೆಯೆಂಬ ದೇಸೆಯ ಶಬ್ದಂಗಳೆಸೆಯೆ ಬಾಜಿಸುತ್ತಿರೆಯುಂ (ಶಾಂತೀಶ್ವ. ೦೬-೬೭ ವ) .

ಥಲ್ಲಿಮಾಡು=ನರ್ತನಮಾಡು ; ನಾಟ್ಯವಾಡು : ವರ್ಗ ದ್ವಿತೀಯಾಕ್ಷರಂಗಳ್ಗೆ-ವಪ್ಪಾಣಂ . . . ಥಲ್ಲಿಮಾಡಿದಂ (ಥಲ್ಲಂ ಮಾಡಿದಂ) (ಶಮದ. ೦೫ ಪ್ರಯೋ). [<ಪ್ರಾ. ಚಲ್ಲಿ=ನೃತ್ಯದಲ್ಲಿಯ ಗೀತೆ. / ತಮಿ. ಚಲ್ಲಿ= ಒಂದು ಬಗೆಯ ವಾದ್ಯ]

**ಚಲ್ಲಿ$_3$, ಚಲ್ಲೆ$_2$, ಚೆಲ್ಲಿ** (ನಾ). ಕನ್ನಡಿ : ದರ್ಪಣ : "ಕನ್ನಡಿಗೆ ಕೈಪಿಡಿ ಚಲ್ಲಿ[ಪಾಠಾಂ. ಲ್ಲೆ]ಯೆಂದು" (ಶಬ್ದಮಂ. ೬೫) ; ಬಲ್ಲವನೆಲ್ಲರಿಗೆ ಲಲ್ಲೆಯ ನುಡಿವನೆ ಬಲ್ಲವನಿರವು ಚಲ್ಲಿಯ ರೂಹಿನಂತೆ ಯಿದ ಬಲ್ಲವರಾರೊ(ಪದಗೋ. ೪೮-೧೧೫). **ಚಲ್ಲೆ$_2$:** "ಚಲ್ಲೆಯೆನೆ ದರ್ಪಣಂ ನೇರಾದುದು" (ಕಶರ. ೩೪). **ಚೆಲ್ಲಿ:** ಒಲವಿಂದೀವೊಡೆ ಗೋವಂಗಲಗೆ ಕೊಬಲ್ ಕೋಡ ಕಾಳೆ ಕೋಲುಡೆ ದೋಲ್ ಕಂಬಲ ಕಲ್ಲಿ ಚೆಲ್ಲಿ ಪೀಲಿಯ ತಲೆಸುತ್ತಲ್ಲದೆ ಮಹಾಗ್ರಪೂಜೆ ವಿರುದ್ಧಂ (ಜಗವಿ. ೦೭-೨೨). [ ? ]

**ಚಲ್ಲಿಪಿಲ್ಲಿ** 'ಚಲ್ಲಾಪಿಲ್ಲಿ' ನೋ.

**ಚಲ್ಲಿಸು₁, ಚೆಲ್ಲಿಸು₁ (ಕ್ರಿ).** ೧. ಎರಚುವಂತೆ ಮಾಡು : ಚೆಲ್ಲುವಂತೆ ಮಾಡು : ಪಾವುಗಳಂ ಕರ್ಚಿಸುತ್ತಂ ಪಲ್ಲಿಯಿಂದಂ ಬೆದಱಿಸುತ್ತಂ ಕಿಚ್ಚಂ ಚಲ್ಲಿಸುತಂ (ಧರ್ಮಪ. ೧-೭೬ ವ) ; ಅಲ್ಲಿ ಉಳಿದಿದ್ದ ಒಂದು ಕೆಂಡವನ್ನು ತರಿಸಿ ಅದಕ್ಕೆ ಅಮೃತದ ನೀರನ್ನು ಚೆಲ್ಲಿಸಿದನು (ಪಂಚಾಮೃ. ೮೧). ೨. ಸುರಿಯುವಂತೆ ಮಾಡು ; ಸುರಿಸು : (ಕ). ಚೆಲ್ಲಿಸು₁ : ೧. ಮಲ್ಲಿಗೆಯರಳಂತೆ ಬೆಳ್ಳಗಳು ಬಹುವರ್ಣದಲ್ಲಿ ರಂಜಿಪ ಬಣ್ಣಗೂಳು . . . ಚೆಲ್ಲಿಸಿದಳು ದೆಸೆದೆಸೆಗೆ (ಮೋಹತ. ೩೧-೩೬) ; ಒಂದು ಖಿಂಡಿಗ ರಾಗಿಯನ್ನು ಚೆಲ್ಲಿಸಿದೆ (ಡಂಗಾಳ್ಕ. ೪೨೧). ೨. ಆಲಿನೀರ್ಗಳಂ ಚೆಲ್ಲಿಸಿಕೊಳುತ್ತೆ (ನಂಬಿರ. ೧೨-೧೧೬). [ಚಲ್ಲು₁ + – ಇಸು₃]

**ಚಲ್ಲಿಸು₂, ಚಳ್ಳಿಸು, ಚೆಲ್ಲಿಸು₂ (ಕ್ರಿ).** ಚೊರುವಮಾಡು ; ತುಂಡುಮಾಡು ; ಕತ್ತರಿಸು : ತಾಳಿಸಿದ ಬದನೆಯ ಕಾಯ ಚ[ಪಾಠಾಂ. ಚೆ]ಲ್ಲಿಸಿದ ನೀರುಳ್ಳಿ ಶುಂಠಿ ಸಹಿತಿಕ್ಕುವುದು (ಸೂಪಶಾ. ೪-೨೯). ಚಳ್ಳಿಸು: ನೀರುಳ್ಳಿಯ ಗಡ್ಡೆಯಂ . . . ಚಳ್ಳಿಸಿ ಜಾಜಿಯಂ ಕಲಸಿ ಮೆಲ್ಲದ ಮಾನವನೇನ ಬಲ್ಲನೋ (ನೀತಿಸಾ. ೬೪೬). ಚೆಲ್ಲಿಸು₂ : ಚೆಲ್ಲಿಸಿದ ನೀರುಳ್ಳಿ, ನಿಂಬೆಹುಳಿ ಮೆಣಸು ಹಸಿಯಲ್ಲ ಸಕ್ಕರೆ ಹುಳಿಯು ಬೆರಸಿ ಪಾಕಂ ಮಾಡಿ (ಸೂಪಶಾ. ೬-೧೬).

[ ಚಲ್ಲ₁ + – ಇಸು₃ ]

**ಚಲ್ಲು₁, ಚಲ್₂, ಚೆಲ್ಲು₁ (ಕ್ರಿ).** ೧. ಹರಡು; ಪಸರಿಸು : ಕ್ರೂರಾಕಾರ ಮನೆಯ್ದೆ ತಾಳ್ದಿ ತಮಮಂ ಚ[ಪಾಠಾಂ. ಚೆ]ಲ್ಲುತ್ತುಮಿರ್ದಲ್ಲಿಯುಂ . . . ರಾಹು ಬಂದು (ಚಾಧಪು. ೫-೧೩) ; ಬೆಳುದಿಂಗಳು ಹಾಲು ಚೆಲ್ಲಿದ ಹಾಗಿದೆ (ರೂಢಿ). ೨. ಚದರಿಹೋಗು; ದಿಕ್ಕಾಪಾಲಾಗು: ಸಮುಸ್ತಜನಮನಕ್ಕನು ರಾಗಮಾಗಲಲ್ಲಿಗೆ ಚೆಲ್ಲಿದೆಲ್ಲಾ ಬ್ರಾಹ್ಮಣೋತ್ತಮರು ಬಂದು ಕೂಡಲ್ (ಉದ್ಯಟ. ೪-೧೧೨ ವ) ; ಮುಂದೆ ಹೆಣದಿನಿಹಿಗಳು ಖಗವ್ಯಾಗ ವ್ಯಂದ ಚ[ಪಾಠಾಂ. ಚೆ]ಲ್ಲಿತು ಭೂತಪೂತನಿವ್ಯಂದ ಕೆದಱಿತು (ಕುವ್ಯಾಗ. ೧೨-೪): ಚ[ಪಾಠಾಂ. ಚೆ]ಲ್ಲಿತಾಕ್ಷಣ ನೆರೆದ ಸೇನಾವಲ್ಲಭರು (ತೊರರಾ. ೪-೪-೩೧). ೩. ಸಿಂಪಿಸು ; ಚಿಮುಂಕಿಸು ; ತಳಿ : ಬದ್ಧಜಲವಂ ಚಲ್ಲಿ ಚಲ್ಲಿ ತದುದ್ಧರಾಗ್ನಿಯನಂತು ಕೆಡಿಸಿ (ಬಸಪು. ೩-೫) . ೪. ಬಿಸುಡು ; ಎಸೆ : ಒಡೆದ ಹುಳಿಮಜ್ಜಿಗೆಯ ತಿಳಿಯುಮಂ ಚ[ಪಾಠಾಂ. ಚೆ]ಲ್ಲಿ ಪಾವಡೆಯಲ್ಲಿ ಹಿಂಡಿ (ಸೂಪಶಾ. ೨-೧೬) ; ಆ ವಿಳಾಸದ ಕಾರ್ಡನ್ನು ಅಲ್ಲಿಯೇ ಚಲ್ಲಿ . . . ಓಡಹತ್ತಿದನು (ಜೀವಪ್ರ. ೨೩). ೫. ಧಾರಾಳವಾಗಿ ಖರ್ಚುಮಾಡು, –ವ್ಯಯಮಾಡು : ಗಳಿಸಿ ತಂದೆಮಗರ್ಥವೀವುದನುಳಿದು ಭಂಡಾರವನೆ ಮಿಂಡಗರ್ಗಳಿಸಿ ಚ[ಪಾಠಾಂ. ಚೆ]ಲ್ಲುವುದುಚಿತವೇ ಯೆಂದಾಗ್ರಹಿಸಿ ನುಡಿದು (ಬಸಪು. ೧೧-೬). ೬. ಕೆಡಹು ; ಬೀಳಿಸು : ಆರು ಕೊಂಡರು ಹೇಳು ನಡೆವುತ ದಾರಿಯಲಿ ಕೆಡಹಿದೆಯೊ ವ್ಯೊಮಱಿದೆಲ್ಲಿ ಚ[ಪಾಠಾಂ. ಚೆ]ಲ್ಲಿದೆಯೊ (ಬಸಪು. ೧೪-೨೬) ; ಭಾವನಂಟ ಬಂದಾಗ್ಲೂ ಹಾಲು ಚೆಲ್ಲೋದು ಬಿಡಲಿಲ್ಲ (ಗಾದೆ). ೭. ಇಡು ; ಹಾಕು ; ಇರಿಸು : ಕುಡಿಯುವ ನೀರೊಳಗೆ ಮೊದಲೇ ಒಂದು ಶೀತೋಷ್ಣಮಾಪಕ ಯಂತ್ರವನ್ನು ಚೆಲ್ಲಿಟ್ಟಿರಬೇಕು (ಮುಂಬಯಿ. ೫-೧೨೨). ೮. ಎರಚು ; ತೂರು : ಕಾಲಮೃತ್ಯುವಿನ ಎರಡು ಕಣ್ಣಾಲಿ ಚೆಲ್ಲಿ ಮಣ್ಣಂ (ಬಸಪು. ೪೭-೧); ಗದ್ದೆಗಳಿಗೆ ಬೀಜವನ್ನು ಚೆಲ್ಲಿದ ಮೇಲೆ ಮರುದಿವಸದವರೆಗೂ ನೀರನ್ನು ಬಂದು ಮಾಡಬೇಕು (ಕೃಷಿಪ್ರ. ೫೭). **ಚಲ್₂ :** ೬. ನೀರ್ಗುಡಿವ ಸೌಹೃದಯರ್ಕಳಕ್ಷಿಗುರೆ ಕೋಪಮಲೆಯರಕ್ಷಿಗಳ್ ಚದುರಿನಿಂದಂಜುಳಿಗಳಲ್ಲೆಸೆಯೆ ಚಲ್ವ ಪರ್ಮೀನ್ಗಳೆಂದುಚ್ಚರಿಸುತೆ (ಪರಶು. ೪-೨೦). **ಚೆಲ್ಲು₁ :** ೧. ಚೆಲ್ಲುತುಮಾಸ್ಯದಿಂ ವಿಗೆ ಮುಗುಳ್ನಗೆಯಂ (ಕುಸುಮಾ. ೫-೧೩೮) ; ಕಾಂತೆಯರ್ ಬರೆ ಕಟಾಕ್ಷಮಂ ಚೆಲ್ಲುತುಂ (ನಂಬಿರ. ೧೧-೪); ಬಿಲ್ಲನೊದಱಿಸಿ ವೈರಿಭಟರಿಗೆ ಚೆಲ್ಲಿದನು ಭೀತಿಯನು (ಕುವ್ಯಾದ್ರೋ. ೧೮-೩) ; ಮಲ್ಲಿಗೆಯರಳ್ಗೂಡಿ ಪಾಲ್ದಳಿದುಂದದಿ ಚೆಲ್ಲಿತು ಬೆಳುದಿಂಗಳಿಳಿಗೆ (ಮೋಹತ. ೧೮-೧೧೨) ; ಆ ದಿನ ಮಳೆಯಿಲ್ಲದ ಸ್ವಚ್ಛ ಬಿಸಿಲು ಚೆಲ್ಲಿದ ದಿನ (೧೧ಶಾ. ೦). ೨. ಘುಳುಘುಳಿಸಿ ಬರ್ಪ ಮತ್ತಗಜಮಂ ಭೋಂಕನೆ ಕಂಡು . . . ಮಕ್ಕಳೆಲ್ಲಂ ಚೆ[ಪಾಠಾಂ. ಚೆ]ಲ್ಲಿ ಪೋಗೆ (ನಂಬಿರ. ೨-೨೬) ; ಅಂಬರದ ಸುರರ ವಿಮಾನತತಿ ಚೆಲ್ಲಿದವು ದೆಸೆದೆಸೆಗೆ (ತೊರರಾ. ೪-೪-೧೬) ; ವಿಸ್ಮಯುಂಬಡೆದು ಚೆಲ್ಲಿದ ಕರಣಂಗಳಂ ಮೆಲ್ಲನೆ ಸಂತೈಸಿಕೊಂಡು (ರಾಜಶೇ. ೬-೭೧ ವ). ೩. ಮರಾಳಬಾಳಕಂಗಳ ಮೊಗದೊಳ್ ಮುಗುಳ್ನಗೆವಾಲಂ ಚೆಲ್ಲಿ ಚೆಲ್ಲಿ ವಾಡುತ್ತುಂ (ಅರ್ಧನೇ. ೧-೯೨ ವ) ; ಮರುಗದ ಮಡಿಯೊಳ್ ಕತ್ತುರಿಯುಂ ಚೆಲ್ಲು (ನಂಬಿರ. ೧೪-೩೮). ೪. ನಿನ್ನ ಕೈಯೊಳಗಿನ ಕೋಲು ಇತ್ತ ಕಡೆಗೆ ಚೆಲ್ಲು (ಮುಂಬಯಿ. ೩-೧೧೯). ೫. ಸಕಲಭಂಡಾರವನು ಭೂಸುರನಿಕರದಲಿ ಚೆಲ್ಲಿದನು (ಕುವ್ಯಾಆ. ೪-೨೨). ೬. ತೆಗೆದೀಂಟಿ ಜಲಮಂ ಬಿಡೆ ತವೆ್ವೊಳ್ ತೀವಿಕೊಂಡು ಚೆಲ್ಲುವ ಪದದೊಳ್ (೧೧ಶ. ೧-೧೨೦) ; ಮಸಗೆ ಮೊಗೆದನು ಹೊಗುವ ಸೇನಾಪ್ರಸರವನು ಕುಡಿತೆಯಲಿ ಚೆಲ್ಲಿದನಸಮಬಲನಡಹಾಯ್ಸಿ ಕೊಂಡನು ನೆಲನನಳವಿಯಲಿ (ಕುವ್ಯಾಕ. ೧೨-೨೩). ೮. ಚೆಲ್ಲಿದರು ಒಬ್ಬರೊಬ್ಬರಿಗೆ ಜೀರಿಗೆವೆರಸು ಚೆಲ್ಲವಂ (ಸಿದ್ಧರಾ. ೮-೮೮) : ಮಲ್ಲಿಗೆ ದಾಸಣ ಹೂವ ಸಂಪಗೆಯಂತೆ ಚೆಲ್ಲಿತು ಬಣ್ಣಗೂಳುಗಳ (ಮೋಹತ. ೦೫-೩೬) ; ಮಂಕುಬೂದಿಯನ್ನು ಚೆಲ್ಲಿದಳು (ಹಾಹುತ್ತ. ೯೫). ೯. ವರ್ಷಿಸು ; ಸುರಿ ಕುಳ್ಳಿರ್ದರ ಮುಖದೊಳಂ ಕಣ್ಣೊಳಂ ಮಯ್ಯೊಳಂ ತುಷ್ಪಂ ಚೆಲ್ಲೆ (ನಂಬಿರ. ೬-೪೨) ; ಚೆಲ್ಲಿದವು ಸಹದೇವ ಶಿರದಲಿ ಮಲ್ಲಿಗೆಯ ಮೊಗ್ಗೆಗಳ ಮಳೆ (ಕುವ್ಯಾಸ. ೯-೬೫). ೧೦. (ಬಾಣ ಮೊದಲಾದುವನ್ನು) ಪ್ರಯೋಗಿಸು,– ಬಿಡು : ಚೆಲ್ಲಿದರು ಕೂರಂಬುಗಳನೆಡದಲ್ಲಿ ಬಲದಲಿ ಹಿಂದೆ ಮುಂದೆಸೆ ಝಲ್ಲರಿಯ ಶರಜಾಳ ರೆಞೊಂಪಿಸಿತಬುಜಸಖಿಸುತನ (ಕುವ್ಯಾಕ. ೧೧-೩೫). ೧೧. ಬೀಸು; ಆಡಿಸು : ಚಾಮರ ಛತ್ರ ಕುಂಚ ಸಿತ ಚೌರಿಯ ಚಮತ್ಕಾರದಿಂ ಚೆಲ್ಲುವಾ ಮಡದಿಯರು ಯಿಕ್ಕೆಲದಿ ನಿಂದು (ನವಮೋ. ೧೧-೧೬). ೧೨. ಚಾಚು ; ನೀಡು : ಅವಯವಂಗಳನಲ್ಲಿ ಚೆಲ್ಲಿದಳು ಛಲದಿಂದೆ (ಕಾರಿರ. ಹ. ೫೭-೩೧) ; ಆಕಾಶದ ಸುತ್ತೆಲ್ಲ ನೋಡಿ ಕೈಮುಗಿದು, ಚೆಲ್ಲಿದ ಗೋಣಿನಿಂದ ದಿಕ್ಕುಗಳನ್ನೆಲ್ಲ ಕೇಳುವಂತೆ ಮಾಡಿದನು (ಪಾವಳ. ೩) ; ಬೆಂಚಿನ ಕೆಳಗೆ ಕೈಕಾಲು ಚೆಲ್ಲಿದ (ಕುರಿಹಿಂ. ೧೨೨). ೧೩. ಕಳೆ ; ನೀಗು : ಕೆಲ್ಲೆಗೆಡೆದವು ಕರಿಗಳಸುಗಳ ಚೆಲ್ಲಿದವು ತೇಜಿಗಳು (ಕುವ್ಯಾಭೀ. ೬-೨).

**ಚಲ್ಲಬಡಿ, ಚಲ್ಲವಡಿ, ಚೆಲ್ಲಬಡಿ** = ಚದರಿಹೋಗುವಂತೆ ಹೊಡೆ ; ಚೆಲ್ಲಾಪಿಲ್ಲಿಯಾಗುವಂತೆ ಬಡಿ : ಅಲ್ಲಿ ಬಂದ ಮೃಗವಂ ಚ[ಪಾಠಾಂ. ಚೆ]ಲ್ಲಬಡಿವುತಂ (ಕಣ್ಣರ. ಹ. ೩೫-೨೦) ; ಅಲ್ಲಿ ನೆರೆದಾ ಕ್ಷತ್ರವರ್ಗವ ಚಲ್ಲಬಡಿದು (ಕುವ್ಯಾಆ. ೨-೩೩) ; ಚೆಲ್ಲಬಡಿವೆ ತನ್ನ ಸೇನೆಯ ಕರೆಯೊ ನಮ್ಮಲ್ಲ ವ್ಯಂತರಿಗರನು (ಭರತ. ೨೪-೪೬) ; ಕಾಪಿನವರನು ಚಲ್ಲಬಡಿದು (ರಾಮಾಸಂ. ೬-೬-೪೧) ; ಮಾವು ಬನದೊಳಗೆ ಮೈಗರೆದವಾ ತುಂಬಿಗಳು ಚಲ್ಲವಡಿದುತೆ ದೆಸೆದೆಸೆಗೆ ಪಾಱಿ . . . ಬರುತಿರ್ದಳಂತಾ ಭವಾನಿ (ವೀಶೈಪು. ೨-೪-೨೦) : ಸುರಬಲಂಗಳಂ ಚಲ್ಲವಡಿದಣ್ಣನಂ ತೋಱಿತೋಱಿನುತ್ತೆ (ಚಬಪು. ೩೧-೪೬) ; ಸುಶರ್ಮನವದಿರ ಚೆಲ್ಲಬಡಿದನು ದಳದ ನಾಯಕರೆಲ್ಲರಿಗೆ ಸವಿದೋಱಿದನು ಬಲುಗದೆಯ ಹೊಯ್ಲುಗಳ (ಕುವ್ಯಾಕ. ೦೫-೩೪); ಮುಱಿಮೂಳೆಯವನೆಲುಗಳ ಚ[ಪಾಠಾಂ. ಚೆ]ಲ್ಲಬಡಿ ಮೋದೆನುತ ಕಂಗಳು ವಳ್ಳುರಿಯನುಗುಳಲ್ಕೆ (ನಿಭಾಗ. ೫-೧೧-೭) ; ಉಱುಬುವ ರಥಾರೂಢರು ದೆಸೆದೆಸೆಗೆ ಚೆಲ್ಲಬಡಿದು . . . ಮತ್ತವನ ಚಾಪವಂ ಕೋಪದಿಂ ಖಂಡಿಸಿದನು (ಚಬಪು. ೩೯-೨೦) ; ವೈರಿಗಳನು ಚೆಲ್ಲಬಡಿದು ದೆಸೆಗಟ್ಟಿ ನಿಲ್ಲದೈತಂದು ಸತ್ಯಾಗಾಲದ ಪಾಳ್ಯವೆಲ್ಲವ ಸೂಱಿಯಾಡಿದನು (ಕಂನವಿ. ೩-೫೬). **ಚಲ್ಲವರಿ, ಚಲ್ಲುವರಿ, ಚಲ್ಲೆವರಿ, ಚೆಲ್ಲವರಿ, ಚೆಲ್ಲುವರಿ** = ಹರಡು ; ಚೆದರು ; ವಿಸ್ತಾರವಾಗಿ ವ್ಯಾಪಿಸು ; ಚೆಲ್ಲಾಪಿಲ್ಲಿಯಾಗು : ನೆಲ್ಲಿಯಕಾಯ್ಗಳ ಹೆಗ್ಗುದಿಗೆ

ಯೊಳಿಡೆ ಚಲ್ಲವರಿದು ಬೀಳುವಂತೆ ಬಲ್ಲಿದ ಖಾಸರು ಚಿಗಿದು ಬಿಟ್ಟಾಕ್ಷಣ ಹಲ್ಲ ಕಿರಿದರಗಳೊಳಗೆ (ಕಂಸವಿ. ೧೯-೭೯) ; ನೆಗೆವ ಮೃಗೇಂದ್ರಗಳಿಂ ಚಲ್ಲವರಿದ ಪುಲ್ಲೆಗಳಿಂ ಸಮ್ಮರ್ದಂಬಡೆವ ಪೊಮ್ಮಟಿಗೆಳಿಂ (ರಾಜಶೇ. ೧-೧೩೫ ವ); ಪುಲಿ ಬರವ ಕಾಣುತೆ ಹರಿಣೆಚಯ ಚಲ್ಲವರಿದಂತೆ ತರುಣಿಯರು ಯಿರದೆ ಮುರಿದೋಡುತ್ತೆ . . . ಇರಲು (ನವಮೋ. ೧೦-೬೩) ; ನಾಡೆಲ್ಲ ಹಸಿರು ಬೆಳೆಗಳಿಂದ ತುಂಬಿ ಎಲ್ಲೆಲ್ಲಿಯೂ ಚೆಲುವು ಚಲ್ಲವರಿದಿತ್ತು (ಜೀವರಂ. ೫೦) ; ಚಲ್ಲುವರಿದ ಹೆಳಲಿನ ತುದಿ ಎಷ್ಟು ಮನೋಹರ (ಚಿಂದುಟಿ. ೭೦) ; ಅಲ್ಲಿ ಸಿಡಿಲುಗಳೆಜಿಗಿದಂದದಿ ಬಲ್ಲಿದರ ಹರಿಗೆಗಳು ಪೊಳೆಗಲು ಚ[ಪಾಠಾಂ. ಚೆ] ಲ್ಲವರಿದಿಜಿದಾಡಿದುದು ಯಾದವರ ಪರಿವಾರ (ಸಾಳ್ವಭಾ. ೧೯-೧೩) ; ತಳ್ತಿಗರ್ ಬಿಲ್ಲಿಂ ಕಂಡ ಕಾಗೆಯಂತೆ ಚೆಲ್ಲವರಿಯೆ (ಧರ್ಮಾಮೃ. ೨-೭೯) ; ಪುಲ್ಲಶರನ ಮಾರ್ಬಲ ಬನದೊಳು ಪೊಕ್ಕು ಚೆಲ್ಲವರಿದು ಪೀಡಿಸಲು ಪಲ್ಲವಿಸಲು ಸದನದೊಳಿರ್ದ ರಿಸಿಗಳು ಗಲ್ಲಕೆ ಕರವ ಸಾರ್ಚಿದರು (ಮೋಹತ. ೭-೧೧) ; ದಿಕ್ಕುದಿಕ್ಕಿಗೆ ಚೆಲ್ಲವರಿದುದು ಪಾಯ್ದಳ (ನಾಗಕು. ೧೪-೭೭) ; ನೆಟಿ ಚೆಲ್ಲುವರಿದು ಸೂಸುವ ಕಣ್ಮವಣೆಯೆನಿಸಿ ಮೆಟಿದರಲ್ಲಿಯ ವಾರ ನಾರಿಯರು (ಭಿಕ್ಷಾಟ. ೨-೮) ; ಕೈಗೆ ಸಿಕ್ಕಿದ ಗ್ರಂಥಗಳನ್ನು ತೆಗೆದುಕೊಂಡು ದಿಕ್ಕುದಿಕ್ಕಿಗೆ ಮತಾನುಯಾಯಿಗಳು ಚೆಲ್ಲುವರಿದಾಗ ಎಷ್ಟೋ ನಾಶ ವಾದುವು (ಶೂನ್ಯಕು. ೧೭, ಹಿನ್ನಲಿ). ಚಲ್ಲೆವೊಯ್ = ಚದರುವಂತೆ ಹೊಡೆ: ಪೊದಜುಗಟ್ಟುವ ಕದಲೆಗದಿರನುರದಿನುರವಣಿಸಿ ನೆತ್ತಿಯಿಂ ಪೊತ್ತು ನೆಗೆದು ಚಂಚುವಿಂ ಚಲ್ಲೆವೊಯ್ದು ನಖದಿಂ ನಲಿಗೆದಟಿ (ಅನಂಪು. ೭-೮೦ ವ). ಚೆಲ್ಲಿಕೊಡು = ಬಿಟ್ಟುಬಿಡಿಂ ; ಬಿಸುಡಿಂ : ಮನವೇಲ ಹುಡುಗೆಯನ್ನು ತನ್ನ ಅಪ್ಪುಗೆಯಿಂದ ಚೆಲ್ಲಿಕೊಟ್ಟು . . . ಅಲ್ಲಿಂದ ಜಾರಿಕೊಂಡ (ಅದೋಲೀ. ೧೯) ; ಆವೇಶ ಬಂದವಳಂತೆ ಹೊದಿಕೆಯನ್ನು ಚೆಲ್ಲಿಕೊಟ್ಟು ಹಾಸಿಗೆಯಲ್ಲಿ ಎದ್ದು ಕುಳಿತಳು (ಮೂರುದಾ. ೨೭೭). ಚೆಲ್ಲಿಕೊಳ್ = ಎರಚಿಕೊಳ್ಳು ; ಸಂರಿದುಕೊಳ್ಳು : ತುಱುಗಿದ ಕಾಯಿಪಣ್ಗಳ ಸಾಲವೃಕ್ಷವ ಮುಱಿದು ದೂಳಿಯ ಚೆಲ್ಲಿಕೊಳುತ . . . ಬಂದುದು ಬಿಱುಗಾಳಿ ಮದಗಜದಂತೆ (ಮೋಹತ. ೪-೩೭) ; ಕೇತಕಿಯರಳ ಧೂಳ್ಗಳ ಚೆಲ್ಲಿಕೊಳುತಳಿವ್ರಾತಕಲರ ಮಧುಮದವ ಪ್ರೀತಿಯಿಂದೀಯುತನಿಲದಂತಿ ವನದೊಳಗಾತುರದಲಿ ಚರಿಸಿದುದು (ಕಂಸವಿ. ೯-೯).

[ ದೇ.॥ ತಮಿ. ತುಳು. ಚಲ್ಲು ; ಕೊಡ. ಚೆಲ್ಲ್ ; ತೆಲು. ಚಲ್ಲು ]

ಚಲ್ಲು₃ ‘ಸೆಳ್ಳು₁’ ನೋ.

ಚಲ್ಲು₃ ‘ಚಲ್ಲ₁’ ನೋ.

ಚಲ್ಲುಚಾಲು (ನಾ). ಗಾಂಭೀರ್ಯವಿಲ್ಲದ ನಡವಳಿಕೆ; ಕೆಟ್ಟಚಾಳಿ ; ಹೀನವಾದ ನಡತೆ: ಸತ್ತ ಹೆಣದ ಹೆಬ್ಬೆಟ್ಟಿನ ಗುರ್ತನ್ನು ಹಾಕಿ ಮಗನಿಗೆ ಆಸ್ತಿಯನ್ನು ತಪ್ಪಿಸಿ ಚಲ್ಲುಚಾಲಿನ ಬಜಾರಿಗೆ ಸ್ವತ್ತು ಸೇರು ವಂತೆ ಮಾಡಬಾರದು (ಹುಟ್ಟಿಹ. ೧೫೭).

[ ಚಲ್ಲು₃ (<ಚಲ್ಲ₁) + ಚಾಲು ]

ಚಲ್ಲುತನ, ಚೆಲ್ಲುತನ (ನಾ). ಗಾಂಭೀರ್ಯವಿಲ್ಲದಿರುವಿಕೆ ; ಲಲ್ಲೆ ಗಾರಿಕೆ ; ಲಘುಮನೋಭಾವ: (ಸ). ಚೆಲ್ಲುತನ: ಇವೆಲ್ಲಾ ದೇವಸ್ಥಾನದ ಆವರಣದಲ್ಲಿವೆ ಅಂತ ಮೊದಲೇ ಒಂದು ಪೂಜ್ಯಭಾವನೆಯ ಪಕ್ಷಪಾತ ಮನಸ್ಸಿನಲ್ಲಿ ಚೆನ್ನಾಗಿ ಬೇರೂರಿರುವದರಿಂದ, ನೋಡುವ ಕಣ್ಣಿಗೆ ಅದರಲ್ಲೇನೂ ಚೆಲ್ಲುತನ ಕಂಡುಬರುವುದಿಲ್ಲ (ಕಲ್ಲಕಾ. ೬): ಹಿಂದಿನ ಚೆಲ್ಲುತನವೆಲ್ಲ ಈಗ ಅಡಗಿದೆ (ಹುಲಿಹಾ. ೨೬೭).

[ ಚಲ್ಲು₃ (<ಚಲ್ಲ₁) + – ತನ ]

ಚಲ್ಲುಬಡಿ (ಕ್ರಿ). ಲಲ್ಲೆಯಾಡಂ; ವಿಲಾಸಮಾಡಂ: ಆ ಉಡುಗಿ ಕಂಡಕಂಡ ಗಂಡಸರ ತಾವ ಚಲ್ಲುಬಡೀತ್ಯೆತೆ. ಇದೇನು ಚಂದವಾ ? (ಕಂಕಣ. ೭೦).

[ ಚಲ್ಲು₃ (<ಚಲ್ಲ₁) + ಬಡಿ₁ ]

ಚಲ್ಲುವಡು (ಕ್ರಿ). ವ್ಯಾಪಿಸು ; ಆಕ್ರಮಿಸು: ಎಲ್ಲ ನಾಡುಗಳ . . . ಚಲ್ಲುವಡುತ ಗಡಿಸೆಟಿಗಿಗೆ ಪರಿದು (ಚೆಕಸ. ೧೯). [ <ಚಲ್ಲು₁ ? ]

ಚಲ್ಲೆ₁ ‘ಚೆಲ್ಲೆ’ ನೋ.

ಚಲ್ಲೆ₂ ‘ಚಲ್ಲ₃’ ನೋ.

ಚಲ್ಲೆ₃ ‘ಚಲ್ಲ₁’ ನೋ.

ಚಲ್ಲೆಗಣ್ ‘ಚೆಲ್ಲೆಗಣ್’ ನೋ.

ಚಲ್ಲೆಗಾರ್ತಿ ‘ಚಲ್ಲಗಾರ್ತಿ’ ನೋ.

ಚಲ್ಲೆನೋಟ, ಚೆಲ್ಲೆನೋಟ (ನಾ). ಸರಸವಾದ ನೋಟ ; ಸೊಬಗಿನ ನೋಟ ; ವಿಲಾಸದ ದೃಷ್ಟಿ : ಚಲ್ಲೆನೋಟದಿ ರಂಗಕೇಳಿಯನೆಸಗಂಬ ವಲ್ಲಭೆಯೆಂದು ವಂದಪಳೊ (ಶತಸಾಂ. ೨೩-೧೨). ಚೆಲ್ಲೆನೋಟ: ಮೆಲ್ಲಾತುದೋಱುತೊಯ್ಯನೆ ಚೆಲ್ವಿನೊಳಂ ಚೆಲ್ಲೆನೋಟವುಂ ಚೆಲ್ಲುವೆನೋ (ಚಿಕವಿ. ೬-೨೦೩). [ ಚಲ್ಲೆ₃ (<ಚಲ್ಲ₁) + ನೋಟ ]

ಚಲ್ಲೆಹ ‘ಸಲ್ಲೆಹ’ ನೋ.

ಚಲ್ವ ‘ಚೆಲ್ವ’ ನೋ.

ಚಲ್ವಿಕೆ ‘ಚೆಲ್ವಿಕೆ’ ನೋ.

ಚಲ್ವು ‘ಚೆಲ್ವು₁’ ನೋ.

ಚಲ್ವೆ ‘ಚೆಲ್ವೆ’ ನೋ.

ಚವ₁ ‘ಚೆವು’ ನೋ.

ಚವ₂, ಚವ್ವ₃, ಚೌ₂ (ನಾ). (ಉಕ) ೧. ರುಚಿ ; ಸೊಗಸು : ಸಾಲಗೆಗೆ ಚವ ಇಲ್ಲ, ಏನೂ ಬೇಡ (ರೂಢಿ). ಚವ್ವ₃: ‘ಚವ್ವಗೆಡು’ ಪರಾ. ಚೌ₂: ೨. ಚೆನ್ನಾಗಿರುವುದಂ; ಉತ್ತಮಸ್ಥಿತಿ; ಸುಖ; ಚೈನಿ (ಉಕ): ಎಲ್ಲರಿಗಿಂತ ಚೌ ಇರೋದು ನಂದು. ಆಳಿದ್ದಾವ ರಾಜಾ ಆಗೇನಿ (ಪ್ರೇಮಾಶ್ರ. ೨೭೭). ೩. (ಆಲಂ) ಮಾತಿನಲ್ಲಿ ಗೌರವ,-ಘನತೆ (?): ಏ ಚೌ ಅದ ಏನ ಬಾಯಾಗ ? ಒಳಗ ಹೊರಗ ಯಾರ್ಯಾರ ಕೇಳ್ಯಾರಂಬೂ ಅಂಜಿಕೀ ಆಳಕಾ ಏನೂ ಇಲ್ಲೇನು ನಿನಗ? (ದೀಪನಿ. ೫೦).

[ ←ಮರಾ. ಚವ್ ]

ಚವಂಗ (ನಾ). ಒಂದು ಬಗೆಯ ಆಟ ; ಚೌಕಾಬಾರದ ಆಟ; ಚಕ್ಕದ ಆಟ (ಉಕ): ಹಗಲೆಲ್ಲ ಬೀದಿಯ ಮುದುಕಿಯರೊಡನೆ ಚವಂಗ, ಗೊಟಗುಣಿ ಆಡುವುದೇ ಅಜ್ಜಿಯ ಕೆಲಸ (ನದೀಪ. ೭೯). [ ? ]

ಚವಕ ‘ಚೌಕ₂’ ನೋ.

ಚವಕಿ ‘ಚೌಕಿ’ ನೋ.

ಚವಚವನೆ (ಅ). ಮೆಲ್ಲಮೆಲ್ಲನೆ (?) : ಶಿವಸಿದ್ಧಿಯನು ನೀವು ನಿಮ್ಮೊಳಿ ಕಂಡನುಭವಿಸಿದೊಡಹುದೆ ದೇವಿಯರೆ ನವಗಿಷ್ಟು ಬುದ್ಧಿಗಲಿಸಿಯೆಂದು ಗಲ್ಲವ ಚವಚವನಲುಗಿ ಕೇಳುವವನು (ಭರತ. ೪೩-೫೯).

[ ಚವಚವ₀ + – ಅನೆ₁ ]

ಚವಟ ‘ಚೌಟ’ ನೋ.

ಚವಡಿ ‘ಚಾವುಂಡಿ’ ನೋ.

ಚವಡಿಕಿ (ನಾ). ಒಂದು ಕ್ಷುದ್ರದೇವತೆಯ ಹೆಸರು: ಎಲ್ಲಾಯಿ ಯಕನಾತಿ ಬನದ ಶಂಕರಿ . . . ಕಲ್ಲದ ಚವಡಿಕಿ ಮಾರಿಮಸಣಿ (ವಿಸಾಸು. ೫೮-೨). [ <ಸಂ. ಚಾಮುಂಡಿಕಾ ]

ಚವಡಿಕೆ, ಚೌಟಗಿ, ಚೌಡಕಿ, ಚೌಡಿಕೆ (ನಾ). ಒಂದು ಬಗೆಯ ಚರ್ಮ ವಾದ್ಯ ; ಒಂದು ಕಡೆಗೆ ಚರ್ಮದ ಆವರಣವಿದ್ದು, ಉದ್ದವಾದ ಹಿಡಿಕೆಯೂ, ಚರ್ಮದ ನಡುವಿನಿಂದ ಒಂದು ತೆಳ್ಳಗಿನ ಹುರಿಯೂ ಜೋಡಿಸಲ್ಪಟ್ಟಿರುವ ವಾದ್ಯ : (ಸ). ಚೌಟಗಿ: ಗೊಂದಲದವರು ಬಂದು ಚೌಟಗಿ ಬಾರಿಸಿಕೊಂಡು ‘ಜೇಜೇ’ ಅಂತ ಹೇಳ್ತಾರಲ್ಲ, ಕೇಳಿದೀ ಯೇನು ? (ಬೆಳುಮ. ೮೩). ಚೌಡಕಿ: ಗೊಂದಲಿಗರು . . . ಇಬ್ಬರು

ಮೂವರು ಕೂಡಿ, ಸಂಬಾಳ, ಚೌಡಕಿಗಳನ್ನು ಬಾರಿಸುತ್ತಾ ಭವಾನಿಯ ಹಾಡುಗಳನ್ನು ಹಾಡುತ್ತಾ ಭಿಕ್ಷೆ ಬೇಡುವರು (ಕಥಾಗ. ೨೧೦) ; ಚೌಡಕಿಯ ನಾದ, ಸುತಿಯ ಸೂರು, ತಾಳ ಹೆಜ್ಜೆಗಳ ಗತ್ತಿನ ಕಡಿತ (ಪೆಟ್ಟು) . . . ಇಂಪಾಗಿ ಇನ್ನಷ್ಟು ಕೇಳಬೇಕೆಂದೆನಿಸುವುದು (ಕನ್ನಜಾ. ೧೩). ಚೌಡಿಕೆ: "ಚವಡಿಕೆ (ಚೌಡಿಕೆ)—ಸುತಿ" (ಜಾನಕೋ. ೫೫).

[ ←ಮರಾ. ಚವಂಡಕೀ, ಚೌಂಡಕೀ, ಚೌಂಡಕೇ ]

**ಚವತಿ** 'ಚೌತಿ' ನೋ.

**ಚವತಿಚಂದ್ರ** 'ಚೌತಿಚಂದ್ರ' ನೋ.

**ಚವರ, ಚಉರ, ಚವಲ್$_1$, ಚವುರ್$_1$, ಚವುಲ, ಚೌರ್$_2$** (ನಾ). ೧. ಚಮರ; ಚಾಮರ: "ಚವರಂ ಚಾಮರಮಂತದು" (ಚತುನಿ. ೯೬) ; ಮಂಗಳಾರತಿಯಿತ್ತು ಚವರ ಸೀಗುರಿಯಿಕ್ಕಿ (ಬಸರ. ೩-೮೧) ; ನೆರೆದಲರ ಚವರಮಂ ಬಿತ್ತರದಿಂ ಬೀಸುತ್ತುಮಿರ್ದರ್ (ಕಬ್ಬಿಕಾ. ೧೩೮) ; ಪಿಡಿದೆರಳ್ ಸತ್ತಿಗೆಗಳೆರಡೆರಳ್ ಚವರಗಳ (ಚಿಬಪು. ೪೭-೩೭) ; ಚವರದ ಕುಂಚದಾರತಿಯ . . . ಬೋನಮಂ ಸವಿವಡಿಯೂಡುವಾಳಿಯರುಮಂ ಪದೆದಿತ್ತಳವಳ್ ವಿಳಾಸದಿಂ (ರಾಜಶೇ. ೯-೩೯). **ಚಉರ:** ೧. ಧಾರೆಯಱಿದು ಕೊಟ ಹಳಿ ಚಂನ ಮಾಡಲಾಗಿ ಚಉರ ಮರಿಯಾದಿಯಲು (ಎಕ. X(s), ಕೋಲಾರ. ೧೪೮-೧೭ ; 1532). **ಚವಲ್$_1$:** ೧. ಜನಿತ ವಿದ್ಯಾದೇವತೆಯರಾ ವನಿತೆಗಾಳಿಯರಾಗಿ ಬೆಳ್ಳಿಲೆಯನು ಗಳಿಸಿ ಕೊಡೆವಿಡಿದು ಢಾಳಿಸಿದರು ಚವಲಗಳನು (ಸಾಳ್ವಭಾ. ೩೦-೨೭) ; ಕರಿಯವ್ವಾಗೆ ಧೊರೆಗಾಳು ಬೀಸ್ಯಾರು ಚವಲಾವ (ಹುಟ್ಟಿಹ. ೪೫). ೨. ಚಾಮರ ಬೀಸುವ ಊಳಿಗ: ಅಕ್ಕಸಾಲೆಯ ಕಾಳಯ್ಯ ಕಾಲಾಳು ಚವಲದ ಚಿಕ್ಕ (ನಾಗಕು. ೧೬-೨೬). **ಚವುರ್$_1$:** ೧. ನನ ತಮ್ಮ ಎತ್ತರಿಸಿ ಬೀಸೋ ಚವುರವ (ಗರತಿ. ೪೧). **ಚವುಲ:** ೧. ಹಾಸವ್ಹೊಜ್ಜುರದ ಹಲಗೆಯ ತುಳಸಮ್ಮ ಬೀಸಮ್ಮ ಬೆಳ್ಳಿ ಚವುಲವ (ನಾಪದ. ೧೪). **ಚೌರ್$_2$:** ೧. "ಚೌರಮೆನೆ ತಾಂ ಬರ್ಕುಚಾಮರಕೆ" (ಕಶರ. ೩೭) ; ಚೌರ ಬೀಸುತ್ತಿದ್ದವು ಚೌರ (ಅಮನಿ. ೫).

ಚವರ ಬೀಸು=೧. ಚಾಮರದಿಂದ ಗಾಳಿ ಹಾಕಂ. ೨. (ಆಲಂ) ಪೊರಕೆಯಿಂದ ಹೊಡೆ: ಇನ್ನೂ ನಿಮಗೆಷ್ಟು ಚವರಾ ಬೀಸಲೀ ಎಂದು ಕಸ ಊಡುಗುತ್ತ ಕಸಬರಿಗೆ ಸುಮ್ಮನೆ ಮೇಲೆ ಮಾಡಿದೆ (ಹುಚ್ಚಾಟ. ೫).

[ <ಸಂ. ಚಾಮರ ]

**ಚವರಂಗ** 'ಚೌರಂಗ' ನೋ.

**ಚವರಬೊಂಬಾಳ, ಚವಲಬೊಂಬಾಳ, ಚೌರಬೊಂಬಾಳ** (ನಾ). ರಾಜಯೋಗ್ಯವಾದ ಚಾಮರದ ಅಲಂಕಾರವುಳ್ಳ ಒಂದು ವಿಶೇಷ ರೀತಿಯ ಅಂದಣ,—ಪಾಲಕಿ: ಚವರಬೊಂಬಾಳ ಪಟ್ಟದ ರಾಜಗಲ್ಲದೆ ಯುವರಾಜ ಗುಂಟೆ ಲೋಕದೊಳು (ಭರಚ. ೮೦-೨೬). **ಚವಲಬೊಂಬಾಳ:** ಭವರೋಗಹರ . . . ಲಲಿತ ಚವಲಬೊಂಬಾಳವನೇಱ ಮೆಲ್ಲಡಿಯಿಟ್ಟ ವಿವರವನೇನ ಬಣ್ಣಿಪೆನು (ಮೋಹತ. ೪೨-೨೨) ; ಚವಲಬೊಂಬಾಳವನಿಳಿದ ಮಾಧವನು (ಮೋಹತ. ೪೨-೩೭). **ಚೌರಬೊಂಬಾಳ:** ಒಪ್ಪುವ ಚೌರಬೊಂಬಾಳವಡರ್ದು ದಿಗ್ವಿಜಯಕ್ಕೆ ಪೊಱಮಟ್ಟ (ರಾಘಚ. ೧೯-೫೭).

[ ಚವರ + ಬೊಂಬಾಳ ]

**ಚವರಿ, ಚವಲಿ$_1$, ಚವುರಿ, ಚವುಲಿ, ಚೌರಿ$_1$, ಚೌಲಿ$_1$** (ನಾ). ೧. ಚಮರೀಮೃಗದ ಕೂದಲು: ತನ್ನ ಬೆನ್ನೊಳ್ ಪರೆದೊಪ್ಪುಲ್ ಕೇಶಪಾಶಂ ಕಱಿಯ ಚವರಿಯಂ ಕಟ್ಟಿದಂತೆ (ಜಗವಿ. ೧೬-೧೩೩) ; ಬಾಲದ ಮೇಲಿನ ಕೂದಲು ಚವರಿಯಂತೆ ಒಪ್ಪುವವು (ಮುಂಬಯಿ. ೩-೫೫). ೨.= ಚವರ ೧: ಬಿರುದಿನ ಬಳಿಯ ಚವರಿಯ ಬೀಸಿ ಮಲೆತರ ತಲೆಯ ಶೂಲದೊಳೊತ್ತಿ (ಕುವ್ಯಾವಿ. ಓರಿಇ. ೬-೩೧) ; ಚವರಿ ಸೀಗುರಿ ಮುಂದೆ ಯುವತಿಯರ್ ಕುವರರು (ಭೈರವೇ. ೨-೬೧) ; ಮಹಾರಾಜರವರು ತಮ್ಮ ಭುಜಬಲದಿಂದ ಸಂಪಾದಿಸಿದ . . . ಸೂರೇಪಾನ, ಚವರಿ, ವಟಪಾವಡೆ ಮುಂತಾದ ಬಿರುದುಗಳನ್ನು ಹಿಡಿದಿದ್ದರು (ಚಾಮವಂ. ೩೬); ತಂಗಾಳೀಯಾ ಕೈಯೊಳಗಿರಿಸೀ ಎಸಳೀನಾ ಚವರಿ (ಗರಿ. ೨-೪). ೩. ಹೆಂಗಸರು ಕೇಶ ಶೃಂಗಾರಕ್ಕೆಂದು ಜೋಡಿಸಿಕೊಳ್ಳುವ ಕೂದಲ ಕಂಚ್ಚು : ಗಂಗಾವನ (ಉಕ) : ಅವಳ ಜಡೆ ಚಿಕ್ಕದಾದುದರಿಂದ ಚವರಿ ಸೇರಿಸಿಕೊಂಡು ಜಡೆ, ಹೆಣೆದುಕೊಳ್ಳುತ್ತಾಳೆ (ರೂಢಿ). **ಚವಲಿ$_1$:** ೨. ಕಂದಾಟರದ ಕಾಗಕೆ ಕಳಿಪಿದಲಿ ಪರಬಳಸಿಂಗದ ಮೇಲೆ ಬಿಳಿಯ ಚವಲಿಯ ಕಟ್ಟಿ (ಎಕ. VIII, ಸಾಗರ. ೧೦೪-೬ ; 1329 ?). ೩. ವನಿತಾ ಚೊಲ್ಲೆಹಕಂ ಚವಲಿಯಹುದೆ ಚೂಡಾರತ್ನಾ (ನೀತಿಸಾ. ೪೮೯). ೪. ತಲೆಯಲ್ಲಿ ಧರಿಸುವ ಒಂದು ಆಭರಣ : ಅಲರು ಚವಲಿ ಬೈತಲೆವಣಿ ಮುತ್ತಿನ ಬಲೆಯಿಲ್ಲ ಬಂದರೊಪ್ಪದೊಳು (ಭರಚ. ೧೬-೨೫) ; ಬೆನಕ ನಿಮ್ಮವ್ವಾಗೆ ಬೆಳ್ಳೀಯ ಶಿವದಾರ ಕುಣಕಾಲು ಚವಲೀ ಕೊನೆ ಮುಡಿಯೋ (ಹುಟ್ಟಿಹ. ೩೧); ಹಬ್ಬಿಗೆಲ್ಲಿ ಮರೆತೆ ಹವಳಾವ ಜಾಣಾನ ಮಗ್ಗುಲಲ್ಲಿ ಮರೆತೆ ಚವಲಿಯ (ಜೈಸರ್ವ. ೧೩೧). **ಚವುರಿ:** ೧. ಸುಮನಃ-ಹುವ್ವು, ವಾಲ-ಚವುರಿಯ (ಬಾಹಟೀ. ೨-೬-೩೫ ವ). ೨. ತೋಳುಗಳ ನೀಡಿ ಚವುರಿಗಳ ಬೀಸುವ ಹೆಣ್ಣುಗಳ ನಡುವೆ (ವಚಕಾ. ೫೧) ; ಸತ್ತಿಗೆ ಸೀಗುರಿ ಸೂರೆಪಾನ ಕುಂಚ ಚವುರಿ ಬೀಸಣಿಗೆ . . . ಕಣ್ಮೀರವಾದಿ ಬಿರುದುಗಳು ಮುಂತಾದುವನ್ನು ಹಿಡಿದು ಊಳಿಗಗುಡುತ್ತ (ಚಿಟ್ಟಿಅ. ೩೦-೮). ೩. ಎಡಗಯ್ಯೊಳ್ ಕೊಟ್ಟರ್ಥದಂತೆ ತಳಿಗೆಯ ಕೂಟನಂತೆ ಮುಡಿದ ಚವುರಿಯಂತೆ ನೆಲಹಿನ ಮೊಸರಂತೆ (ಧರ್ಮಾಮೃ. ೮-೧೪೨ ಅಡಿಟಿ). ೫. ಚಿತ್ರದುರ್ಗದ ಪಾಳೆಯಗಾರರ ಕಾಲದಲ್ಲಿ ಬಳಕೆಯಲ್ಲಿದ್ದ ಒಂದು ನಾಣ್ಯ: ದುರ್ಗವು ಕೈವಶವಾದ ಮೇಲೆ . . . ಸಿಕ್ಕಿದ ನಾಣ್ಯಗಳ ವಿವರ: ೬,೪೦೦,೦೦೦ —ಬೆಳ್ಳೀನಾಣ್ಯ . . . ೧,೦೦೦,೦೦೦ — ಚವುರಿ (ಚಿತ್ರಪಾ. ೧೦೩). **ಚವುಲಿ:** ೪. ಆಕೆ ಚವುಲಿ, ಬೈತಲೆಮಣಿ ಮುಂತಾದ ಆಭರಣಗಳನ್ನು ಧರಿಸಿದ್ದಾಳೆ (ರೂಢಿ). **ಚೌರಿ$_1$:** ೨. ಅಳವಡಿಸಿಕ್ಕಿದಾ ಬಿಳಿಯ ಚೌರಿಗಳುಜ್ವಲಕಾಂತಿ ನೀಳ್ದುಗೊಂದಳಿಸಿರೆ (ಕುಸುಮಾ. ೮-೬೫) ; ನೆಗಹಿ ಬೀಸುವ ಚೌರಿಗಳ ಸನ್ನೆಗೆ ಚತುರ್ಬಲವೆಲ್ಲ ದ್ರೋಣನ ದೃಗುಪಥಕೆ ತೋಱದರು (ಕುವ್ಯಾದ್ರೋ. ೯-೧೭). ೩. ಬಾಲೆ ಮಾಣಿಕವನುಡು ಸಾದ ಕಿವಿಯಲಿ ಕೂಡು ಕಾಲ ಪೆಂಡೆಯವ ಮುಡಿ ಚೌರಿಯಂ ಕಾಲ್ಗಟ್ಟು (ಹಚಕಾ. ೪-೪೯) ; ಅಂಗನೆ ಚೌರಿ ಕಾಲಿಗೆ ಕಟ್ಟಿ ಮುಂಗೈಗೆ ತಾಳಿಯ ಬಿಗಿದು . . . ರಂಗನ ಸ್ಮರಿಸುತ ಹೊಱಗೆ ಹೊಱಟಳು (ಪುರಂದ. ೧-೧೧೧-೫). ೪. ಹೆರಳಿಂಗೆ ರನ್ನ ಕೆತ್ತಿಸಿದ ರಾಗಟಿ ಚೌರಿ ಗೊಂಡೆ ಮುತ್ತಿನ ಕುಚ್ಚುಗಳು (ಶ್ರೀಕೃಪಾ. ೧೧). ೬. (ಮಂಟಪ ಮುಂತಾದುವುಗಳ) ಅಲಂಕಾರಕ್ಕಾಗಿ ಕಟ್ಟುವ ಕುಚ್ಚು: ಕಟ್ಟಿದ ಚೌರಿಗಳ್ ಗಗನಮುಮಿಗೆ ಚುಂಬಿಪ ಕೂವಕಂಭಂ (ದಶಕು. ೧೨-೫೪) ; ಆಯಿದನು . . . ಕುಣಿವ ಗಂಟೆಯ ಹೊಳೆವ ಹೊಂಗಱಿಯ ಬಾಯಿಧಾರೆಯ ತೈಲಲೇಪನದಾಯತದ ಚೌರಿಗಳ ರಿಪುಭಟನಾಯುಷದ ಕಡೆವಗಲಭುಕ್ತಿಯ ಶಕ್ತಿಯನು ನೃಪತಿ (ಕುವ್ಯಾಶ. ೩-೬೫) ; ಬಿಳಿಯ ಚೌರಿಯ ಮೇಲುಗಟ್ಟಿನ ಹೊಳಹು ಮಿಗೆ ರಚಿಸಿದರು ಸತಿಯ ವಿವಾಹಮಂಟಪವ (ನಳಚ. ೩-೬). **ಚೌಲಿ$_1$:** ೩. ಚೌಲಿ, ಟೇಪು, ಪಿನ್ನು ಮೊದಲಾದುವು ಹೆಂಗಸರ ಕೇಶಾಲಂಕಾರ ಸಾಮಗ್ರಿಗಳು (ರೂಢಿ). [ <ಸಂ. ಚಮರೀ ]

**ಚವರಿಕೊಟ್ಟು, ಚೌರಿಕೊಟ್ಟು** (ನಾ). ಒಂದು ಬಗೆಯ ಚವರಿ ಸೇರಿರುವ ತಲೆಯ ಆಭರಣ; ಚಿನ್ನದ ಕೊಪ್ಪಿನಲ್ಲಿ ಸೇರಿಸಿ ಕಟ್ಟಿರುವ ಚಮರೀಮೃಗದ ಕೂದಲಿಂದ ಮಾಡಿದ ಗೊಂಡೆ ; ಚವಲಿತುಂಬು : (ಕ). **ಚೌರಿಕೊಟ್ಟು:** ರೇಗಟಿ, ಕೇದಿಗೆ, ಚೌರಿಕೊಟ್ಟು, ಜಡೆಬಂಗಾರ, ಗೊಂಡ್ಯ . . . ಡಾಬು ಮೊದಲಾದ ಆಭರಣಗಳನ್ನು ಧರಿಸಿಕೊಂಡು (ಮಲಮಂ. ೩೮). [ ಚವರಿ + ಕೊಟ್ಟು$_2$ ]

**ಚವರಿಕೊಪ್ಪು** (ನಾ). = ಚವರಿಕೊಟ್ಟು : (*). [ ಚವರಿ + ಕೊಪ್ಪು$_{3}$ ]

**ಚವರಿಗೆ** 'ಚರಿಗೆ$_{1}$' ನೋ.

**ಚವರಿಬಿಜ್ಜಣ** (ನಾ). ಚವರಿಯಿಂದ ಮಾಡಿದ ಬೀಸಣಿಗೆ : ಚವರಿ ಬಿಜ್ಜಣವಿಡಿದು ಬಾಗಿರ್ದ ಮಯಕುವರಿ. ಹೆದರುತಂಜುತೆ ಮೆಲ್ಲನೆಯೆ ಮಾತು ತೆಗೆದಳು (ಶ್ರೀರಾಮಾ. ೬೫೧-೨೫೩). [ ಚವರಿ + ಬಿಜ್ಜಣ ]

**ಚವರಿಮಿಗ** (ನಾ).=ಚಮರೀಮೃಗ: ಮಱಿಯಾನೆಗಳ್ ಕಲಂಕಿದ ದಡೆಯಂ ತುದಿವಾಲದಿಂ ಬಟಿವ ಚವರಿಮಿಗಂಗಳಿಂ (ರಾಮಾಶ್ವ. ४३-२५). [ ಚವರಿ + ಮಿಗ ]

**ಚವರೀಮೃಗ** (ನಾ).=ಚಮರೀಮೃಗ : "ಸೃಮರಃ–ದೊಡ್ಡ ಚವ[ಪಾಠಾಂ. ಮ]ರೀಮೃಗ" (ಸಿದ್ಧಾಂತಿ. ೧೩೬). [ <ಸಂ. ಚಮರೀಮೃಗ ]

**ಚವರೆ** (ನಾ). (?) : ದೇವಿಯರ ಚವರೆಯಲು × × × ಕಲುಕುಳ (ಸಾಇಎ. ೧೯೩೨. ಉಡುಪಿ. ೩४೨-३೧ ; ?). [ ? ]

**ಚವರ್ಗ** (ನಾ).[ವ್ಯಾಕ] ಚ, ಛ, ಜ, ಝ, ಞ ಎಂಬ ಐದು ಅಕ್ಷರಗಳ ಗುಂಪು : ಚಟವರ್ಗಂ=ಚವರ್ಗ ಟವರ್ಗಂಗಳ್ (ಶಮದ. ೬೫ ಟೀಕೆ) ; ವರ್ಗಗಳಿಗೆ ಕ್ರಮವಾಗಿ ಕವರ್ಗ, ಚವರ್ಗ, ಟವರ್ಗ, ತವರ್ಗ, ಪವರ್ಗ ಎಂದು ಆಯಾ ವರ್ಗದ ಮೊದಲನೆಯ ವ್ಯಂಜನದ ಹೆಸರನ್ನು ಇಟ್ಟಿದ್ದಾರೆ (ಮಧ್ಯಕು. ೧೩). [ ಚ + ವರ್ಗ ]

**ಚವಲ$_{1}$** 'ಚವರ' ನೋ.

**ಚವಲ$_{2}$** (ನಾ). ಹುಟ್ಟುಕೂದಲನ್ನು ತೆಗೆಸುವುದು ; ಮುಡಿ ತೆಗೆಸುವುದು; ಚೌಲಕರ್ಮ; ಜಾವಳ ಇಳಿಸುವಿಕೆ (ಉಕ): ಹುಟ್ಟಿದಾಗ ಹಾಡುವ ಹಾಡುಗಳಿವೆ; ಚವಲದ ಹಾಡುಗಳಿವೆ (ಜಾನಗೀ. ೧೭); ಮದುವೆ, ಮುಂಜಿ, ಚವಲ . . . ಮತೀಯ ಪ್ರೇರಣೆಗಳನ್ನು ಬಿಂಬಿಸುವ ಸಾವಿರಾರು ಹಾಡುಗಳಿವೆ (ಸುವರ್ಣ. ೧೨೫). [ <ಸಂ. ಚೌಲ ]

**ಚವಲ$_{3}$, ಚವಲಿ$_{2}$, ಚೌಲ$_{2}$, ಚೌಲಿ$_{2}$** (ನಾ). ಎರಡಾಣೆ ಬೆಲೆಯ ಬೆಳ್ಳಿಯ ಒಂದು ಚಿಕ್ಕ ನಾಣ್ಯ : ಒಂದು ಚವಲ ದಕ್ಷಿಣೆ ಕೊಡಬೇಕು (ಕರುಳ. ४೭) ; ಅವರದು–ಚವಲದಲ್ಲಿಯ ಡೌಲು ! (ಸುತ್ತುಮು. ೧೫) ; ಒಂದು ಚವಲ 'ಇನಾಂ' ಎಂದು ತಮ್ಮ ಒಕ್ಕಲುಗಳಿಗೆ ಕೊಡುತ್ತಿದ್ದರು (ಪರಾವ. ೧೬೦). **ಚವಲಿ$_{2}$** : ಗೌಡ ಬೇಡಬೇಡವೆಂದರೂ ಎರಡಾಣೆಯ ಚವಲಿ ಯೊಂದನ್ನು ಅವನ ಕೈಯಲ್ಲಿ ತುರುಕಿದರು (ಮೂರುದಾ. ४) ; 'ಚವಲಿ ಯಲ್ಲಿಯೆ ಡವಲು' ಎಂಬಂತೆ ವಿಶೇಷ ಆಭರಣಗಳಿಲ್ಲದಿದ್ದರೂ (ಮುಂಗಾಪು. ೨೯). **ಚೌಲ$_{2}$** : ನೀರು ತುಂಬಿದ ಪಂಚಪಾತ್ರೆಯೊಳಗೆ ಒಂದು ಚೌಲವನ್ನು ಚೆಲ್ಲಿ . . . ವಕ್ರರೇಖೆಯಿಂದ ನೋಡಿರಿ : ಅದು ಪಾವಲಿಯಷ್ಟು ದೊಡ್ಡ ದಾಗಿ ಕಾಣಿಸುತ್ತದೆ (ಮುಂಬಯಿ. ೬-೯೩). **ಚೌಲಿ$_{2}$** : ಗಡಿಯಾಳಗಳು ತೀರ ಸಣ್ಣವೆಂದರೆ ಚೌಲಿಯಷ್ಟು ಇರುತ್ತವೆ (ಮುಂಬಯಿ. ३-೮೬). [ ←ಮರಾ. ಚವಲ್, ಚವಲೀ. / ತಮಿ. ಚವಲ : ತುಳು. ಚವಲೊ ; ತೆಲು. ಚವಲ ]

**ಚವಲಂಬ** (ನಾ). ಕಣ್ಣೆವೆ : ರೆಪ್ಪೆ: "ಚವಲಂಬಮೆಂದು ಕಣ್ಣೆವೆ" (ಕವಿಕಂ. ೧೮೫); ಪೊಂಗಱಿಯ ಕವಲಂಬಂ ಚವಲಂಬಮಾಡದ ಮುನ್ನಮೋಡುವಿನಂ ಪೋಗೆಚ್ಚಂ (ರಾಮಾಶ್ವ. ೧४५-೨) ; ಚವಲಂಬವನವಲಂಬಿಸಿ ನಗೆಯು ಕಣ್ಣ ಗೊನೆಗಿದೆ (ಅರಳು. ४೯೫-೧). [ ? ]

**ಚವಲಬೊಂಬಾಳ** 'ಚವರಬೊಂಬಾಳ' ನೋ.

**ಚವಲಿ$_{1}$** 'ಚವರಿ' ನೋ.

**ಚವಲಿ$_{2}$** ಚವಲ$_{3}$' ನೋ.

**ಚವಲಿತುಂಬು** (ನಾ). ತಲೆಯಲ್ಲಿ ಧರಿಸುವ ಒಂದು ಆಭರಣ : ಆಕೆ ಚವಲಿತುಂಬು ಹಾಕಿಕೊಂಡಿದ್ದಾಳೆ (ರೂಢಿ). [ ಚವಲಿ1(<ಚವರಿ) + ತುಂಬು$_{2}$ ]

**ಚವಳಿ, ಚವಳೆ, ಜವಳಿ$_{4}$** (ನಾ). ಒಂದು ಬಗೆಯ ತರಕಾರಿ ; ಗೋರಿ ಕಾಯಿ: ಹೀರೆ ಸೌತೆ ಕೂಷ್ಮಾಂಡೆಳೆಗಂಗುರಿ ಕಾರಸೆಗದಳಿ ಚವಳಿ ಬಿಂಬಂ ಬಿಱುಸೇಱಿದ ಮಡಿವಾಗಲ ಹಾಗಲ . . . ಶಾಖಾಳಿಗಳಂ ಸಲೆ ಸಂಭಾರಂ ಬೊರೆದುಪ್ಪಿನಕಾಯಿಗಳನೆಡೆಮಾಡಿದಳೆಡೆವಿಡದೆ (ಮುದೇಪು. ३೭-೭); ಚವಳಿ. ಬದನೆ, ಅವರೆ, ಸವತಿ, ಕೋತಂಬರಿ, ಸಾಸಿವೆ, ಮುಂತಾದ ತೋಟಗಳಲ್ಲಿ ಬೆಳೆಯುವ ಪಲ್ಲೆಕಾಯಿಗಳು (ಕಛಾಗಿ. ४೫೭) ; ಗೋವಿನ ಜೋಳದೊಡನೆ ಚವಳಿಯನ್ನು ತುಸು ಕೂಡಿಸಿದರೆ. ಬಾಳಕ ಬಹಳ ಒಳ್ಳೆಯದಾಗುವದು (ಗೋಗ್ರಾಸ. ೭೧). **ಚವಳೆ** : ಚವಳೆ ಹೀರಿ ಹಾಗಲು . . . ಎಂಬ ಕಾಯಿ ಎಲೆ ಪಲ್ಲೆಗಳು (ಮುಂಬಯಿ. ೫-೧೯೫). **ಜವಳಿ$_{4}$**. 'ಜವಳಿಕಾಯಿ' ಪರಾ. [ ← ಮರಾ. ಚವಳೀ, ಚಂವಳೀ ]

**ಚವಳಿಕಾಯಿ, ಜವಳಿಕಾಯಿ** (ನಾ). ಗೋರಿಕಾಯಿ: ಅಪ್ಪ ಝರಡಿಯೊಳಗೆ ಹಾಕಿಟ್ಟ ಚವಳಿಕಾಯಿ ಆರಿಸುತ್ತ . . . ಕೂತಿದ್ದಳು (ವ್ಯನಿ. ३೭೦). **ಜವಳಿಕಾಯಿ** : ಕಡೂರಿನಿಂದ ಉತ್ತರಕ್ಕೆ ಗೋರಿಕಾಯಿಯನ್ನು 'ಜವಳೀ ಕಾಯಿ' ಎನ್ನುತ್ತಾರೆ (ಸುವರ್ಣ. ३೬೧). [ ಚವಳಿ + ಕಾಯಿ4(<ಕಾಯ್4) ]

**ಚವಳೆ** 'ಚವಳಿ' ನೋ.

**ಚವಿ** (ನಾ). ಹೊಳಪು ; ಕಾಂತಿ : "ಕಳೆಗದಿರು ಮಿನುಗು . . . ಬೆಳಗುಂ ಚವಿಯು ತಿಳಿವೆಸರ್ ಕಾಂತಿಗೆ" (ಶಬ್ದಮಂ. ೧೬) ; ನುಡಿಯೆ ಪಲ್ಗಳ ಚ[ಪಾಠಾಂ. ಛ]ವಿಯುಂ ತುಟಿದಳಿರ ಕೆಂಪುಮೇಂ ಕೆದಱಿದುದೋ (ಅರ್ಧನೇ. ೧-೯೩) ; ಮಿಸುನಿ ರತುನದ ಚವಿ[ಪಾಠಾಂ. ರತ್ನಪ್ರಭೆ]ಗಳಲ್ಲಿ ರಂಜಿಸುವ ಮಂಟಪದೊಳಗೆ . . . ಅವನೀಶನಿದ್ದನು ಸಿಂಹಪೀಠದಲಿ (ನಳಚ. ४-३५). [ <ಸಂ. ಛವಿ ]

**ಚವಿಕೆ** (ನಾ). ಮೆಣಸಿನ ಜಾತಿಗೆ ಸೇರಿದ ಒಂದು ಔಷಧಿ ಸಸ್ಯ : (*). [ ←ಮರಾ. ಚವಕ್ ]

**ಚವಿಸು** (ಕ್ರಿ). ತಳತಳಿಸು; ಮಿರುಗು; ಪ್ರಕಾಶಿಸು; ಹೊಳೆ. **ಚವಿಚವಿಸು, ಚವಚವಿಸು** (ದ್ವಿರುಕ್ತಿ) : ಹರಳೋಲೆ ಮಕರಿಕಾಪತ್ರ ಮೂಕುತಿ ಸಣ್ಣಗೆಱೆಯ ತಿಲಕ ಚವಿಚವಿಸೆ (ಭರಚ. ४೧-೫३) ; ನೀನೀಗ ಧವಳಪಟ್ಟೆಯ ನೂಂಕಿ ಮೊಗದೋಱೆ ಮೋಹನ ಚವಚವಿಸಿದು ದೆಂದರವರು (ಭರಚ. ೧४-೧३೬). [ ಚವಿ + –ಇಸು$_{3}$ ]

**ಚವು$_{1}$** 'ಚೌ$_{1}$' ನೋ.

**ಚವು$_{2}$** 'ಚೆವು' ನೋ.

**ಚವುಂಡನಾಯಕ** (ನಾ). ಒಬ್ಬಾತನ ಹೆಸರು : ಲೋಕವಿದ್ಯಾಧರನ ವಾಳೆಯಱಿಪ್ಪ ಚವುಣ್ಡನಾಯಕ ಅವಂಗೆ ಕೊಟ್ಟ ಮಣ್ಣ ಬಸದಿಗೆ (ಎಕ. VI, ಕಡೂರು. ೮-೧೦ ; ಸು. ११०). [ <ಚಾವುಂಡ + ನಾಯಕ ]

**ಚವುಕ** 'ಚೌಕ$_{2}$' ನೋ.

**ಚವುಕಛತ್ರಿ** (ನಾ). ಚಚ್ಚೌಕವಾದ ಕೊಡೆ,–ಛತ್ರಿ: ಮುತ್ತಿನ ಚವುಕಛತ್ರಿ ವಲ್ಲವದ ಜಲ್ಲರಿಗಳೆತ್ತಿದವು (ಸಿಂಗಿರಾ. ೭-४३). 'ಚವುಕಸತ್ತಿಗೆ' ಪರಾ. [ ಚವುಕ (<ಚೌಕ$_{2}$) + ಛತ್ರಿ$_{2}$ ]

**ಚವುಕವಳಿ** (ನಾ). ಒಂದು ಬಗೆಯ ಸೀರೆ : ಭುವನಕೋಶದ ಸೀರೆ ಶುಭ್ರ ಪಟ್ಟಾವಳಿ ನವರಂಗವು ಕರ್ಕವಾಡ ಚವುಕವಳಿಯು ಸಿಂಹಳಾಂತಕ ಕಂಠಿಯು ಅವುಗಿದೇವನ ಮನೆಯೊಳಗೆ (ಅಮುಸಾಂ. ४-३३). [ ಚವುಕ (<ಚೌಕ$_{2}$) + ಪಳಿ$_{5}$ (<ಪಟ್$_{7}$) ]

**ಚವುಕಸತ್ತಿಗೆ** 'ಚೌಕಸತ್ತಿಗೆ' ನೋ.

**ಚವುಕಳಿ** 'ಚೌಕಳಿ' ನೋ.

**ಚವುಕಿ** 'ಚೌಕಿ' ನೋ.

**ಚವುಕಿಗೆ** 'ಚೌಕಿಗೆ' ನೋ.

ಚವುಕು 'ಚೌಕ್ಕ' ನೋ.

ಚವುಕುಳಿ 'ಚೌಕಳಿ' ನೋ.

ಚವುಗಾವೆ 'ಚೌಗಾವೆ' ನೋ.

ಚವುಟು (ನಾ). (?) : ಪಟ್ಟನೇಗಾಣ (ವಾಣಿ) × × × ಮಾನಿ ಚವುಟುಂ ಪ್ರತಿಗೃಹೇ ಮಾಲಾಕಾರಿಷು ಪುಃಪಸೂತ್ರತ್ರಯುಂ ಚ ದತ್ತವಾನ್ (ಕಇಅ. ೬೦-೪೫-೩೨ ; 1104). [ ? ]

ಚವುಡಂಗಿ, ಚೌಡಂಗಿ, ತವುಡಂಗಿ, ತೌಡಂಗಿ (ನಾ). ಒಂದು ಬಗೆಯ ಸಸ್ಯ : ಮೂತ್ರರಕ್ತಕ್ಕೆ:—ಚತುರ್ಭಾಗ ಚವುಡಂಗಿರಸ ಆವಿನ ನೊರೆಪಾಲು ಕುಡಿಸುವುದು (ವಿವ್ಯವಿ. ೧೨೪). ಚೌಡಂಗಿ : ಚೌಡಂಗಿ ಸೊಪ್ಪಿನ ರಸ, ನೆಲ ಗುಳ್ಳದ ರಸ ಹೆಗ್ಗುಳ್ಳದ ರಸ (ಸಳವ್ಯ. ಪರಿ. ೪೪೪). ತವುಡಂಗಿ: "ತವು [ಪಾಠಾಂ. ತೌ]ಡಂಗಿ ಅಜಗಂಧಿಯುಕ್ಕು" (ಮಂಗರಾ. ೪೦-೩೨). ತೌಡಂಗಿ : ಮೇಲಿನ 'ಮಂಗರಾ' ಪ್ರಯೋಗದ ಪಾಠಾಂತರವನ್ನು ನೋಡಿ. [ ? ]

ಚವುಡಿ 'ಚಾವುಂಡಿ' ನೋ.

ಚವುತಿ 'ಚೌತಿ' ನೋ.

ಚವುಥಾಯ 'ಚೌಥಾಯಿ' ನೋ.

ಚವುದಂತ 'ಚೌದಂತ' ನೋ.

ಚವುದರಿ 'ಚೌಧುರಿ' ನೋ.

ಚವುದಳ 'ಚೌದಳ' ನೋ.

ಚವುಪಟಮಲ್ಲ 'ಚೌವಟಮಲ್ಲ' ನೋ.

ಚವುಪದಿ 'ಚೌಪದಿ' ನೋ.

ಚವುಪರ್ಣ (ನಾ). ಗರುಡ : [ಸಿ]ಲೆಯೊಳು ಕಾಳ್ಗಾನಂ ಜಲದೊಳಂಬುಜ ದಾಶರಥಂಗೆ ರಾಘವಂ ಕಲಿ ಚವುಪರ್ಣನಾ ವಿನತೆಗಂತನುರಾಗದೆ ಪುಟ್ಟಿ ಕೀರ್ತ್ತಿಯಂ ನಿಲಿಸುವ ಪಾಂಗಿನಿಂ (ಕಇ. IV, ೨೨-೧೬ ; 1024). [ <ಸಂ. ಸುಪರ್ಣ ]

ಚವುಬಾರ 'ಚೌಬಾರ' ನೋ.

ಚವುರ$_1$ 'ಚವರ' ನೋ.

ಚವುರ$_2$ 'ಚೌರ$_1$' ನೋ.

ಚವುರಸ 'ಚೌರಸ' ನೋ.

ಚವುರಾಶಿ 'ಚೌರಾಸಿ' ನೋ.

ಚವುರಿ 'ಚವರಿ' ನೋ.

ಚವುರಿಸು (ಕ್ರಿ). ಚಾಮರ ಬೀಸು; ಚಾಮರಸೇವೆ ಮಾಡು: ಎಸಳೆಸಳಿನ ಸಿರಸಲ ಚವುರಿಸುವದು ವ್ಯೆಯನ್ನೆ ಬೀಸಲು ವ್ಯೆನವಿರೇರಿದ ನೇರಿಳೆ ನವಕನ್ನೆ (ಮುಕ್ತಕಂ. ೪೪-೭). [ ಚವುರ (<ಚವರ) + – ಇಸು$_3$ ]

ಚವುರಿಹುಲ್ಲು (ನಾ). ಒಂದು ಬಗೆಯ ಹುಲ್ಲು : (ವ್ಯಜಿಗಿ. ೧೪-೨೭೪). [ ಚವುರಿ$_0$ + ಹುಲ್ಲು (<ಪುಲ್) ]

ಚವುಲ 'ಚವರ' ನೋ.

ಚವುಲಿ 'ಚವರಿ' ನೋ.

ಚವುವಟ್ಟೆ, ಚವ್ವಟ್ಟೆ (ನಾ). ೧. ನಾಲ್ಕು ಹಾದಿಗಳ . ೨. ನಾಲ್ಕು ಹಾದಿ ಕೂಡುವ ಸ್ಥಳ ; ಚೌವಟ ; ಚೌಕ : ಜೂದಿನ ಕಟ್ಟೆ ವ್ಯೆಲಿಗೆ ಸಂತೆಯಂಗಡಿ ಬೀದಿ ಚವುವಟ್ಟೆ [ಪಾಠಾಂ. ಚವ್ವಟ್ಟೆ, ಚಾವ್ವಟ್ಟೆ]ಗಳೊಳಗೆ ಬಾದುರನವರ ಕಾಣದೆ (ಕುರಾಸಾಂ. ೦೮-೧೨೮). ಚವ್ವಟ್ಟೆ: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಚವು$_1$ (<ಚೌ$_1$) + ಬಟ್ಟೆ$_3$ ]

ಚವುಷಷ್ಟಿ 'ಚೌಷಷ್ಟಿ' ನೋ.

ಚವುಸರ 'ಚೌಸರ' ನೋ.

ಚವುಳಪ್ರಪ್ತ (ನಾ). ಸವುಳಂಭೂಮಿ ; ಚೌಳುನೆಲ (?) ಗೋಪಣ್ಣ ದೇವಣ್ಣಂಗಳ ಕಯುಲು ಕೊಂಡ ಚವುಳಪ್ರಪ್ತದ ಕಂಬ ೩ ಕಂ ಸಿಧಾಯ ಬೆ ೩ (ಎಕ. XI, ಹೊಳಲ್ಕೆ. ೧೩೬-೬೩ ; 1307). [ ಚವುಳು (<ಸವುಳು$_1$) + ಪ್ರಪ್ತ ? ]

ಚವುಳಿ 'ಚೌಳಿ$_1$' ನೋ.

ಚವುಳು 'ಸವುಳು$_1$' ನೋ.

ಚವುಳುಪ್ಪು 'ಸವುಳುಪ್ಪು' ನೋ.

ಚವುಳುಭೂಮಿ 'ಸವುಳುಭೂಮಿ' ನೋ.

ಚವುಳುಮಣ್ಣು 'ಸವುಳುಮಣ್ಣು' ನೋ.

ಚವೆ 'ಚವ್ವೆ' ನೋ.

ಚವ್ಯ (ನಾ). = ಚವ್ವೆ : "ಕೃಕವಾಕು ಮಸ್ತಕಂ ನೇತ್ರಿಯೆನೆ ಚವ್ಯವಕ್ಕು [ಪಾಠಾಂ. ಚವ್ವಮುಕ್ಕು, ಚವ್ವೆಯುಕ್ಕು] " (ಮಂಗರಾ. ೪೨-೩೮) ; " ಚಕ್ರಿಕಾ – ಚವ್ಯ " (ಓಷಧಿ. ೫೩) ; ತ್ರಿಕಟುಕಮುಂ . . . ಜೀರಕ ಚವ್ಯ ಲವಣ ಸಂವರ್ಚಕಮುಮ್ಮೃತಂ ಶ್ಲೇಷ್ಮವಾತಶೂಲಾಪಹರಂ (ಅಶ್ವಶಾ. ೧೧-೧೧). [ ಸಂ. ]

ಚವ್ವ$_1$ 'ಚವ್ವೆ' ನೋ.

ಚವ್ವ$_2$ 'ಚೌ$_1$' ನೋ.

ಚವ್ವ$_3$ 'ಚವ$_2$' ನೋ.

ಚವ್ವಂಗುಲ 'ಚೌವಂಗುಲ' ನೋ.

ಚವ್ವಗೆಡು (ಕ್ರಿ). ಹದಗೆಡು ; ರೀತಿಗೆಡು : ಕಾಲು ಬಿದ್ದರು ಇವಗ ಕರುಣ ಹುಟ್ಟುವದಿಲ್ಲ ನೀತಿ ನಡಾವಳಿಯಿಂದ ಚವ್ವಗೆಟ್ಟಿನೆ, ಮತಿಗೆಟ್ಟಿನೆ (ಮಣ್ಣುಹ. ೮೩). [ ಚವ್ವ$_3$ ( <ಚವ$_2$ ) + ಕೆಡು$_1$ ]

ಚವ್ವಟ 'ಚೌವಟ್ಟ' ನೋ.

ಚವ್ವಟ್ಟೆ 'ಚವುವಟ್ಟೆ' ನೋ.

ಚವ್ವಲಿಸು 'ಜವ್ವರಿಸು' ನೋ.

ಚವ್ವಾಳಿ (ನಾ). (ಉಕ) ಉದ್ದವಾದ ನಾಲ್ಕು ಸೀಳುಗಳನ್ನು ಜೋಡಿಸಿ ಹೊಲಿದ ಚೌಕಾಕಾರದ ಬಟ್ಟೆ ; ಹಾಸುವ ಜಮಖಾನದಂತಹ ಬಟ್ಟೆ : ಆ ಹೊರಸಿನ ಮೇಲೆ ಏನೋ ಒಂದು ಚವ್ವಾಳಿಯು ಹಾಗೆ ಒಗೆದದ್ದು (ಕನ್ನಡಿ. ೧೧೨) ; ಒಬ್ಬಳು ಚವ್ವಾಳಿಯ ಒಂದು ಚುಂಗು ಕೈಯಲ್ಲಿ ಹಿಡಿದುಕೊಂಡು . . . ಧೂಳೆಬ್ಬಿಸಿದ್ದರೆ (ಸ್ಮೃತಿಚಿ. ೨೩೪). [ ← ಮರಾ. ಚವಾಳ, ಚವಾಳೀ ]

ಚವ್ವಿ (ನಾ). ಒಂದು ಅನುಕರಣ ಶಬ್ದ ; ಮಕ್ಕಳನ್ನು ಮಲಗಿಸುವಾಗ ಮೆಲ್ಲಗೆ ತಟ್ಟುವುದಕ್ಕೆ ಹೇಳುವ ಮಾತು : ಆ ಚಳಿಗಾಳಿಗೆ ಶಿವು . . . ಕುಸಗುಡಹತ್ತಿದ. ಪಾರ್ವತಿ ಅವನ ಮಗ್ಗುಲಲ್ಲಿಯೇ ಮಲಗಿ ಚವ್ವಿಬಡಿಯ ಹತ್ತಿದಳು (ನಡುಗೋ. ೩೮).

ಚವ್ವೀಶ 'ಚೌವೀಸ' ನೋ.

ಚವ್ವೆ, ಚವೆ, ಚವ್ವ$_1$ (ನಾ). ಒಂದು ಬಗೆಯ ಸಸ್ಯ : "ಕೃಕವಾಕು ಮಸ್ತಕಂ ನೇತ್ರಿಯೆನೆ ಚವ್ವೆಯುಕ್ಕು [ಪಾಠಾಂ. ಚವ್ಯವಕ್ಕು, ಚವ್ವಮುಕ್ಕು]" (ಮಂಗರಾ. ೪೨-೩೮). ಚವೆ : ತಾಳೀಸಪತ್ರ ದು ಸ್ಸು ೩ ತೂಕ, ಮೆಣಸು ದುಡ್ಡು ೩ ತೂಕ, ಚವೆ ದು ೩ ತೂಕ . . . ಇಷ್ಟನ್ನೂ ಇಡಿದು ಚೂರ್ಣವಂ ಮಾಡಿ (ವಿವ್ಯವಿ. ೩೨). ಚವ್ವ$_1$ : ಮೇಲಿನ 'ಮಂಗರಾ' ಪ್ರಯೋಗದ ಪಾಠಾಂತರವನ್ನು ನೋಡಿ. [ <ಸಂ. ಚವ್ಯಾ ]

ಚಷಕ (ನಾ). ಮದ್ಯವನ್ನು ಕುಡಿಯುವ ಬಟ್ಟಲು ; ಪಾನಪಾತ್ರೆ : "ಮಧುಪಾತ್ರಂ ಚಷಕಂ" (ವಸ್ತುಕೋ. ೪೮-೨೬); " ಗರ್ಹಕಃ, ಅನುತರ್ಷಃ, ಚಷಕಃ, ಸರಕಃ—ಈ ೪ ತಿಳಿವಟ್ಟಲ್ " (ಹಲಾಯು. ೫೪-೧೬೨) ; ಇರೆ ನವ ಪದ್ಮರಾಗ ಚಷಕಂ ನಿಜಹಸ್ತತಳಾಗ್ರದೊಳ್ (ಜಗವಿ. ೧೬-೧೧೫). [ ಸಂ. ]

**ಚಷಕಭಾಂಡ** (ನಾ). ಮದ್ಯದ ಪಾತ್ರೆ : ಕಡುಮುಳಿದವನೊರ್ವಂಕೆ ಚಷಕ ಭಾಂಡದ ಮೇಲೆ ಪೊಡೆಗೆಡೆಯುತೆ (ಆರಾಚ. ೬-೧೩). [ ಚಷಕ + ಭಾಂಡ ]

**ಚಷಾಲ** (ನಾ). ಯಜ್ಞಶಾಲೆಯಲ್ಲಿ ಯೂಪಸ್ತಂಭದ ತುದಿಗೆ ಸೇರಿಸಿದ ಮರದ ಬಳೆ: ಯೂಪವಮಂತೇಕವಿಂಶತಿಗಳುತ್ಕೃಷ್ಟ ತ್ರಿವೃತ್ಸೂತ್ರಭೂಷಿತ ಚಷಾಲದಿಂ ಮೆಱೆದುವಾ ಮಂಟಪದೊಳು (ಜೈಮಿಭಾ. ೩೩-೩೭).
[ ಸಂ. ]

**ಚಷ್ಕ**(ನಾ). ಅಪಹರಿಸುವುದು ; ಲಪಟಾಯಿಸುವುದಂ : ಹೊರಡುವವರು . . . ಹೆಣ್ಣಿನವರಲ್ಲಿ ಯಥೇಷ್ಟವಾಗಿ ಪಾತ್ರೆ-ಪಳಗಗಳನ್ನು 'ಚಷ್ಕ' ಹೊಡೆದಿದ್ದರು (ಮನೆಬೆ. ೨೫) ; ಹಗಲು ಹೂ ಮಾಡುವುದು, ರಾತ್ರಿ ಹೂವಿನ ಕಾಲು ತಲೆ ಕಡಿದು 'ಚಷ್ಕ' ಮಾಡುವುದು (ದೀಪಹ. I, ೭) ; ಅಪ್ಪನ ಪಾಕೀಟಿನೊಳಗಿಂದ ಐದುರೂಪಾಯಿಯ ನೋಟನ್ನು ಚಷ್ಕಮಾಡಿ . . . ಒಂದು ಮಟ್ಟವನ್ನು ಮುಟ್ಟಿದ್ದನು (ಗಂಪಣಾಯಿ. ೫೪).
[ ←ಹಿಂ. ಚಸನಾ ; ಮರಾ. ಚಸಣೇ=ಮೋಸ]

**ಚಷ್ಮ** (ನಾ). ಕನ್ನಡಕ ; ಉಪನೇತ್ರ ; ಚಾಳೀಸು (ಉಕ) : ದಶದಿಶೆ ನಿಶೆಯು. ಜಗವೆಲ್ಲಾ ನಿಶೆಯು ನಿಶನಿರಂತರ ಚಷ್ಮ (ಚಿಂತನ. ೭೫-೯).
[ ←ಪಾರ. ಚಷ್ಮಾ; ಹಿಂ. ಚಶ್ಮಾ; ಮರಾ. ಚಷ್ಮಾ, ಚಶ್ಮಾ, ಚಸ್ಮಾ ]

**ಚಸಕ** (ನಾ).=ಚಷಕ: "ಚಸಕ-ಶಾಕಗಳ ಪಾತ್ರೆ" (ಅಕಾನಿ. ೧೦-೧೭).
[ <ಸಂ. ಚಷಕ ]

**ಚಹ, ಚಹಾ, ಚಾ₂** (ನಾ). ಟೀಸೊಪ್ಪು ಮತ್ತು ಅದರಿಂದ ಮಾಡಿದ ಪಾನೀಯಂ : ಚಹದ ಗಿಡದ ಮೂಲಸ್ಥಾನವು ಚೀನ (ಸಸ್ಯಶಾ. ೧೩೪) ; ಚಹಕ್ಕೆ ರೊಕ್ಕ ನೀನು ಕೊಟ್ಟುಬಿಡು (ಚಿಂದುಟಿ. ೫೭) ; ಎರಡು ಕಪ್ಪು ಚಹ ಮಾಡಲಿಕ್ಕೆ ಹೇಳು (ಅಬೋಲೀ. ೧೪೯). **ಚಹಾ :** ಚಹಾತೊಪ್ಪಲದ ಬೀಜವು ಸಣ್ಣದಾಗಿ ಕಸಕಸಿಯಂತೆ ಇರುತ್ತದೆ (ಕೃಷಿಪ್ರ. ೨೦೦) ; ಚಹಾ ಆಗಲಿ, ಬಿಸಿ ಇರುವಾಗಲೆ . . . ತೆಗೆದುಕೊಳ್ಳಿ (ಒಂಟಿದ. ೧೭೧); ಗೋಪಾಲ ಎರಡು ಚಹಾ ತಗೊಂಡು ಬಾ (ಬೆನ್ನುಹಿಂ. ೧೦). **ಚಾ₂ :** ಒಂದೊಂದು ಕಪ್ಪು 'ಚಾ'ನಾದರೂ ಕುಡಿಯೋಣ (ಚಿಂದುಟಿ. ೫೬) ; ಇಬ್ಬರು ಚಾ ಕುಡೀಲಿಕ್ಕೆ ಹೋಗಿದ್ದರು (ರಕ್ತಧ್ವ. ೨೧).
[ ←ಚೀನಿ. ಚಾ. / ಪೋರ್ಚು.ಚಾ. / ಹಿಂ. ಚಾ, ಚಾಯ್ :
ಮರಾ. ಚಹಾ ]

'**ಚಹಡ, ಚಹಡಿ, ಚಹಡೆ, ಚಾಡ₁, ಚಾಡಿ, ಚಾಹಡ, ಛಾಡ, ಛಾಡಿ** (ನಾ). ೧. ಇನ್ನೊಬ್ಬರನ್ನು ಕುರಿತು ದೋಷಾರೋಪಣೆ ಮಾಡಿ ಹೇಳುವುದು ; ಕೊಂಡೆಯ ; ಪಿಸುಣು : ಪೈಶೂನ್ಯವೆಂಬುದು ಪರರ ಕೆಡಿಪೆನೆಂಬಾಸುರ ಚಹಡ ಕೊಂಡೆಯವು (ದ್ವಾದಶಾ. ೨೯-೬೬೦). ೨. ಚಾಡಿ ಹೇಳುವವನು ; ಚಾಡಿಕೋರ; ಹಿಸುಣ: "ದುಸ್ಥಿತಿಪ್ರೇರಕಂ ಚಹಡಂ" (ಮಂಗರಾ. ೭೨-೨೩); ವೀರೇಶ ನೀಂ ಸೌಂದರ್ಯದೂವಾಟಮಂ ತೊಳೆದು ಪೊದಿಸು ನಾರದ ಸ್ನೇಹ ಚಹಡನಾಗು (ಪ್ರಭುಪು. ೬-೬೦). 'ಚಹಡತನ' ಪರಾ. **ಚಹಡಿ:** ೧. ನಾರದನು ಚಹಡಿಯ ಹೇಳಿ ಹಲವಂಗದಲಿ ಬಳಿಕಾ ಘಾಳಿಯನು ಕಳುಹಿದನು ಕೋಪಾಗ್ನಿಯನು ಹೊತ್ತಿಕ್ಕಿ (ತಿಮ್ಮಶಾಂ. ೫-೦೦೭) ; ಖೂಳ ನಾರದ ಬಂದು ಬಾಣನೊಳ್ ಚಹಡಿಯ ಹೇಳಲುಜ್ಜುಗ ವೆತ್ತನಂತೆ (ಮೋಹತ. ೩೩-೪೦) ; ಮಂಚಣ್ಣ ಚಹಡಿಯಂ ವಿಸ್ತಾರದಿಂ ಪೇಳೆ (ಚಬಪು. ೭ ಸೂಚನೆ). **ಚಹಡೆ:** ೧. ದುರ್ಜನರ ಚಹಡೆಯ ಮಾತುಗಳ ಕೇಳ್ದು (ಚಬಪು. ೮-೯). **ಚಾಡ₁ :** ೧. ನಾರದಂ . . . ಚಾಡವ ಪೇಳೆ (ಗುರುಬಾ. ೮-೭೨) ; ಆಡದಿರು ಪುಸಿ ನಿಂದ್ಯ ನಿಷ್ಠುರ ಚಾಡವಂ (ಶಂಕರಾ. ೧೬-೪೮). **ಚಾಡಿ :** ೧. "ಪಿಸುಣ ಕೊಂಡೆಯ ಚಾಡಿಯೆನೆ ಕುತ್ಸಿತಕ್ಕೆ ಪೆಸರೆಸೆಗು" (ಶಬ್ದಮಂ. ೬೬) ; ಚಾಡಿಗಳ್ ಹೇಳುವುದಿಲ್ಲಿ ನುಡಿದಾಡುವ ನಾಲಿಗೆ ಕೀಳುವರಲ್ಲಿ (ಪುರಂದ. ೨-೩೯-೩) ; ಅರಮರೆಮಾಡಿ ಚಾಡಿಯ ಹೇಳಿದರು (ಎಕ. XI, ಮೊಳಕಾ. ೯-೬. 1551) ; ಅವರು ಪ್ರೀತಿಯಿಂದ, ಬಿಡದೆ ಹೋದರೆ ದೋಷವನ್ನು ಕಲ್ಪಿಸಿ. ಚಾಡಿಯನ್ನು ಹೇಳಬೇಕು (ಕೃವಾಅ.೩೬೦). ೩. ಸೂಚನೆ. 'ಚಾಡಿಯೋಲೆ' ಪರಾ. **ಚಾಹಡ:** ೧. ಮಹ ರಸಿಕತನದೊಳು ಚಾಹಡವ ಪೇಳೆ ದೇವದಾನವರು ಕನಲ್ದಾರುಳುತಿಹರು (ಪ್ರಭುಪು.೭-೩೭). **ಛಾಡ:** ೧. ಛಾಡವ ಪೇಳಿ ಉತ್ತಮರನ್ನ ಬಳಲಿಸಿ ನಾಡೊಳು ಸ್ವಾಮಿದ್ರೈವ ದ್ರೋಹತನದಲ್ಲಿ ಆಡಬಾರದ ಮಾತುಗಳೆಲ್ಲ ಸರ್ವದಾ ಜೋಡಿಸಿನುಡಿವುತ್ತ (ವಿಸಾಸು. ೮೪-೬). **ಛಾಡಿ:** ೧. ಛಾ[ಪಾಠಾಂ. ಚಾ]ಡಿ ಹೇಳಲುಬೇಡ ನಾಲಿಗೆ ನಿನ್ನ ಬೇಡಿಕೊಂಬುವೆನು ನಾಲಿಗೆ (ಪುರಂದ. ೦-೧೮೩-೨) : ಬೇಡಿರಿ ಬೇಡಿರಿ ಹೀಗೆ ಛಾಡಿ ಹೇಳುವುದನ್ನು ಯಾರು ಕಲಿಸಿದರು (ಜನನಾ.೧೦೫). [ ?. / ತಮಿ. ತುಳು. ತೆಲು. ಚಾಡಿ./ಮರಾ. ಚಹಾಡ್, ಚಹಾಡೀ, ಚಾಡೀ ]

**ಚಹಡತನ, ಚಾಡತನ**(ನಾ). ಚಾಡಿಹೇಳುವ ಸ್ವಭಾವ; ಚಾಡಿಕೋರತನ: ಚಹಡತನಗಳನಱಿಯೆ ಏಗುವೆ ನೀನು ಹಸುಳೆಯಲಾ (ಕಾಶಿರಾ. ೧೮ ೩೮). **ಚಾಡತನ:** (+). [ ಚಹಡ + - ತನ ]

**ಚಹಡಿ** 'ಚಹಡ' ನೋ.

**ಚಹಡೆ** 'ಚಹಡ' ನೋ.

**ಚಹರೆ, ಚೇರೆ, ಚೇಹರಾ** (ನಾ). ಕೃತಿ ; ಆಮುದ್ರೆ ; ಲಕ್ಷಣ : ಅವನಿಗೆ ಸಾಮಾನ್ಯ ನಡವಳಿಕೆಯಲ್ಲೂ ನಾಟಕದ ಚಹರೆ ರೀತಿ ಬಂದುಬಿಟ್ಟಿತ್ತು (ಆಲಹೂ. ೧೭) ; ಈ ಬಂದೂಕಿನ ಚಹರೆಯೂ . . . ನಿನ್ನ ಬಂದೂಕಿನ ಚಹರೆಯೂ ಒಂದೇ ಆಗಿದೆ (ಪಂಜಪಂ. ೨೨೧). 'ಮುಖಚಹರೆ' ಪರಾ. **ಚೇರೆ :** ಆರು ತಿಂಗಳ ಕೂಸು, ಚೇರೆ ಬದಲಾಯಿಸಿತು (ಕನ್ನಜಾ. ೧೮೯). **ಚೇಹರಾ :** ನಮಗೆ ಮೊದಲು ಚೇಹರಾ ಮಾತ್ರ ತೋರಿಸಬೇಕು (ರಕ್ತಧ್ವ. ೩೦೮). [ ←ಪಾರ. ಚಿಹ್ರಾ; ಹಿಂ. ಚೆಹರಾ; ಮರಾ. ಚಹರಾ. ಚೇಹರಾ, ಚೇಹೇರಾ ]

**ಚಹರೆಪಟ್ಟಿ** (ನಾ). ಆಕಾರ, ಲಕ್ಷಣ, ಮುಖಮುದ್ರೆ ಮೊದಲಾದುವುಗಳ ವಿವರ,-ತಪಶೀಲು : ಸಾಹಿತಿಯ ಚಹರೆಪಟ್ಟಿಯನ್ನು ಬರೆಯ ಹೊರಟವನು ಅವನ ಬಡತನವನ್ನು ಮೊದಲು ಕಾಣಿಸದೆ ವಿಧಿಯಿಲ್ಲ (ಆಲಿಮು. ೧೧೪). [ ಚಹರೆ + ಪಟ್ಟಿ₂ ]

**ಚಹಾ** 'ಚಹ' ನೋ.

**ಚಹಾಪಾಣಿ** (ನಾ). ಚಹ, ತಿಂಡಿ, ನೀರು ಮೊದಲಾದುವುಗಳನ್ನು ತೆಗೆದುಕೊಳ್ಳುವುದಂ ; ಚಹ ಹಾಗೂ ಫಲಾಹಾರ : ಅವನು ಚಾಚಿದ ಬಿಲ್ಲಿನಲ್ಲಿ ಈ ಚಹಾಪಾಣಿಯ ವೆಚ್ಚವೂ ಸೇರಿತ್ತು (ದೀಕನ್ಯ. ೦೦೪).
[ ←ಮರಾ. ಚಹಾಪಾಣೀ ]

**ಚಹಾಪಾನ** (ನಾ). ಚಹವನ್ನು ಕುಡಿಯುವುದಂ : ಚಹಾಪಾನ ನಮ್ಮ ನೀರಡಿಕೆಯನ್ನು ಹಿಂಗಿಸಿದುದಲ್ಲದೆ ನಮ್ಮ ಮನಸ್ಸುಗಳಿಗೂ ನವಚೇತನ ನೀಡಿತು (ಕಾಲಯಾ. ೧). [ ಚಹಾ (<ಚಹ) + ಪಾನ ]

**ಚಳ₁** 'ಚಲ₁' ನೋ.

**ಚಳ₂** 'ಚಲ₂' ನೋ.

**ಚಳ₃** (ನಾ). ಬೆಲ್ಲ: ಮಲಯುರುಹಂ ನುಗ್ಗಿಯ ಬೇರ್ ಜಲಮಂಬುದಮಣಲೆ ಮಾಂಸಿ ಚಳಮೇಲೆಯಿಮಂ ತಳಿವುದು (ಲೋಕೋಪ. ೭-೪೩). [ ? ]

**ಚಳಂಕಿ** (ನಾ). ಒಂದು ಔಷಧಿ ದ್ರವ್ಯ : ಹಲಸಂದೆ ಔಡಲ ಚಳಂಕಿ ಇವು ಕ್ರಿಮಿದೋಷಹರ (ಅಶ್ವಶಾ. ೯೧-೨). [ ? ]

**ಚಳಕ₁** 'ಚಡಿಕೆ' ನೋ.

**ಚಳಕ₂** (ನಾ). ೧. ವೇಗ; ಚಪಲತೆ ; ಶೀಘ್ರತೆ: "ಚಳಕಮೆನಲ್ ವಹಿಲಮೆಂದು ತಿಳಿಗೆ ವಿದಗ್ಧರ್" (ಭಾರನಿ. ೦೧): ಕಲಕಿದನು ಬಲಜಲಧಿಯನು ಬಲು ಚಳಕದಲಿ ತೆಗೆದೆಸುತ (ಸಂಭಪ. ೧೯-೭): ಊರ್ಮಿಳಾಪತಿ

ಚಳಕ[ಪಾಠಾಂ. ವಳಯ, ನಿಳಯ]ದಿಂದೈತಂದು ಕಂಡನು ಕಪಟರಕ್ಕಸಿಯ (ತೊರರಾ. ೩-೪-೨೬) ; ಚಳಕದೆ ಕಳಸದ ಘಟ್ಟವನಿಳಿದು (ಕೆಳನ್ನ. ೧೦-೫೪). ೨. ಜಾಣ್ಮೆ; ಚಾತುರ್ಯ; ಕೌಶಲ; ಚಮತ್ಕಾರ: ಆ ಬಿಲ್ಲನಾ ರಥವ ತಳುವದೆ ಕಡಿದು ಭಂಗಿಸಿದನವನ ಕೈಯ ಚಳಕವನೇನ ಬಣ್ಣಿಪೆನು (ನೇಮಿಸಂ. ೧೨-೭೮) ; ಈ ಉಲಿಯಿಾ ಬಿನ್ನಣ ವಿಾ ಯೊ ಡಲ್ಮಣಿತ ವಿಾಯಿಂದಾಳವಿಾ ಬೀರವಿಾ ಚಳಕಂ ಶ್ರೀಚಿಕದೇವನೊಳ್ ಮೆಱೆಗುಂ (ಚಿಕವಿ. ೪-೧೪೪) ; ಬಿರಿಮುಗುಳ ಬಿಡಿಸುತ್ತಲಿರ್ದನು ಕರದ ಚಳಕದಲಿ (ಅಂಬಿಕಾ. ೪-೨೭) ; ಕೆಲವರು ರಂಗೋಲಿಯ ಕೆಳಗೆ ತೂರುವ ಚಳಕವನ್ನು ತೋರಿಸಿದರು (ನಂಟರು. ೩೦). 'ಚಾಲಾಕು' ಪರಾ. [ ? ]

**ಚಳಕಿ₁** 'ಚಡಿಕೆ' ನೋ.

**ಚಳಕಿ₂** (ನಾ). (?) : ಲಕ್ಷ್ಮೀನರಸಿಂಹದೇವರ ಅಮ್ರಿತಪಡಿಗೆ ಕೊಟ್ಟ ಗ ೫ ಚಳಕಿಯ ವ್ರಿತ್ತಿಯನು (ಎಕ. VI, ಕಡೂರು. ೮೮-೯೬ : 1223 ?). [ ? ]

**ಚಳಕಿಗೆ, ಚಳಿಕಿಗೆ** (ನಾ). ತೋಳಿಗೆ ಧರಿಸುವ ಒಂದು ಆಭರಣ ; ತೋಳ್ಬಳೆ ; ಬಂದಿ: ದ್ವಿಗುಣಿಸೆ ಚಮರಜಮಂ ಪೊಳೆವುಗುರ್ಗಳ್ ಚಳಕಿಗೆಯ ಪೊಚ್ಚ ಪೊಸಮುತ್ತಿನ ತಟಿಗ್ರೋಗೆವಂಶುಮಾಳೆ ಮೇಗಣ್ಣೊಗೆಯೆ ಕುಚಾಭೋಗವಿಮ್ಮಿಕ್ಕಿದರ್ ಚಮರಜಮಂ (ಮಲ್ಲಿಪು. ೮-೧೧೨); ದ್ಯುತಿವೀಱುವ ಮುತ್ತಿನ ಚಳಕಿಗೆಯುಂ ಯುವತಿಯ ನಳಿತೋಳ್ಗೆ ಕಟ್ಟಿದಳ್ ಮತ್ತೊರ್ವಳ್ (ಜಗವಿ. ೧೦-೧೧೬); ಕಂಕೆಲ್ಲಿಯ ಕಂಕಣಮುಮಂ ವಿಚಕಿಳದ ಚಳಕಿಗೆಯುಮಂ . . . ಮನೋಹರಮೆನೆ ಸಮೆದು ತಮತಮಗೆ ಪಸದನಂಗೊಂಡು (ಚಂದ್ರಪು. ೭-೧೧೪ ವ) ; ಕಿಱು ಗೆಜ್ಜೆ ಚಳಕಿಗೆ ಜಾಳಿಯವೆಸೆದವಾನಿಱುಗುರುಳಬಲಾಮಣಿಗೆ (ರಾಮವಿ. ೭-೭೪); ಹಸ್ತಕಡಗ ಚಳಕಿಗೆ ರನ್ನದ ಬಳೆ ಹರಳುಂಗುರಗಳನವುರಿಯರಿಟ್ಟರವಳ್ಗೆ (ಚಂಪುಸಾಂ. ೨೫-೧೩೬). **ಚಳಿಕಿಗೆ** : ಜಾಳಿಯ ಚಿನ್ನಪೂ ಕಮಲಪೂ ಚಳಿಕಿಗೆ ತಾಳಿಹೂ ಬೆಂಬಟ್ಟಿದಂಡೆ ತೋಳೊಂಕೆ . . . ಬಾಲೆಗಾಭರಣವೊಪ್ಪಿದುವು (ಭರತ. ೪೦-೬೫) ; ಗೊಜ್ಜುಗೆಯ ಸಜ್ಜುಕದ ಚಳಿಕಿಗೆಯುನಪ್ಪುಗೆಯ ಪಜ್ಜಳಿಪ ಬಜ್ಜರದ ಬಾಪುರಿಯ (ರಾಜಶೇ. ೧೦-೫೭ ರಗಳೆ). 'ಚಳಕೆ' ಪರಾ.

[ ? ]

**ಚಳಕು₁, ಚಳುಕು₁, ಛಳಕು, ಛಳುಕು** (ನಾ). ಒಮ್ಮಿಂದೊಮ್ಮೆಲೆ ನರ ಮಿಡಿದು ಉಂಟಾಗುವ ನೋವು ; "ನರವಾಯು" (ಜಾನಕೋ. ೫೫). **ಚಳುಕು₁** : ಕೆಲರುರದ ಚಳುಕಿಂ ವಾತಪಿತ್ತಜ್ವರದಿ ಕೆಲಬರು ಮಡಿಯುತಿರ್ದರ್ (ಅರ್ಜಾವಿ. ೮-೨೧) ; ಅಯ್ಯೋ . . . ಮಯ್ಯಲ್ಲೆಲ್ಲ ಚಳಕು(ತುಂಗಭ. ೨೨). **ಛಳಕು**: ಆಗಾಗ್ಗೆ ಸೊಂಟದ ಛಳಕು, ಕೈಕಾಲುಗಳ ಹಿಡಿತದಿಂದ ಸಂಕಟಪಡುತ್ತಿದ್ದ ಮುದುಕಿ, ಹಬ್ಬವಾದುದರಿಂದ . . . ಕೆಲಸಮಾಡುತ್ತಿದ್ದುದನ್ನು ಕಂಡು ರತ್ನಮ್ಮನಿಗೆ ಕೊಂಚ ಕನಿಕರವೂ ಆಯಿತು (ಕೀಲುಗೊಂ. ೧) ; ತೊಡೆ ಛಳಕು ಒಂದೂ ಇಲ್ಲವೆಂದೂ ಚಿಕ್ಕಪುಟ್ಟಮ್ಮ ಹೇಳಿದ್ದಳು (ಮನೋನಂ. ೧೫೦). **ಛಳುಕು** : ಮುಂದೆ ಕಂಕುಳು ಸಂದಿಯಲ್ಲಿ ಬಾತುಕೊಂಡಿತು. ತುಂಬಾ ಛಳುಕು ಕಾಣಿಸಿಕೊಂಡಿತು (ಊರುಕೆ. ೩೨) ; ಅವನಿಗೆ ಛಳುಕು ಹೊಡೆದಂತಾಯಿತು (ರಂಗನಾ. ೧೭೫).

**ಚಳಕುಹಿಡಿ** = ನರಗಳು ಮಿಡಿ ; ಸ್ನಾಯು ಅಲುಗಾಡದಂತಾಗಿ ನೋವಾಗು : ಅವನಿಗೆ ಚಳಕುಹಿಡಿದಂತೆ ಆಗಿತ್ತು (ಕನಕೆ. ೪೯) ; ನನ್ನ ಸೊಂಟ ಚಳಕುಹಿಡಿದದ್ದು, ಕೈಕಾಲು ತತ್ತರಿಸಿದ್ದ ಅವಲಕ್ಷಣವೇ (ಸ್ಮೃತಿಚಿ. ೪೫೦). [ ದೇ. ॥ ತಮಿ. ಮಲ. ಚುಳುಕ್ಕು ]

**ಚಳಕು₂** (ನಾ). (ಹಾಡುವ ಪದ್ಯಗಳ) ಸಮುದಾಯ : ಮುಂದುಮಿಯಲ್ಲಿ . . . ಚೌಪದಿಗಳಿರದೆ, ತ್ರಿಪದಿ ಅರ್ಧಚೌಪದಿ ಮೊದಲಾದವುಗಳ ಕೂಡುವಿಕೆಯ 'ಚಳಕು' ಗಳಿರುವುವು (ಕನ್ನಜಾ. ೯೫).

[ ←ಮರಾ. ಚಳಕ್ ]

**ಚಳಕೆ, ಚಳಿಕೆ₁** (ನಾ). ೧. = ಚಳಕಿಗೆ : ವೈಡೂರ್ಯದ ಹೀರಗಡಗ ಚಳಕೆಗಳ (ಜಿನರಾ. ೯-೧೪೧). **ಚಳಿಕೆ₁**: ೧ ಪಾಣಿ ಕಂಕಣ ಚಳಿಕೆ ಹಿಂಬಳೆಯು (ಜಿನಮು. ೧೨-೩೯); ಕರದ ಕಂಕಣ ಚಳಿಕೆ ಹಿಂಬಳೆ ಕೊರಳ ಸರ (ಜಿರಾಪ್ತಾ. ೨೫-೪೦). ೨. (ಕರಾ) ಕೈಬಳೆಗಳ ನಡುವಿನ ಹಸ್ತಾಭರಣ.

[ ದೇ. ॥ ತುಳು. ಚಳಕಿ ]

**ಚಳಗತಿ** 'ಚಲಗತಿ' ನೋ.

**ಚಳಚಮತ್ಕೃತಿ** (ನಾ). ವೇಗದ ಚಾತುರ್ಯ; ಅದ್ಭುತವಾದ ಚಟುವಟಿಕೆ: ಬಳಿಯ ರಕ್ಕಸರಥಿಕರೆಸುಗೆಯ ಚಳಚಮತ್ಕೃತಿಯಿಂದ ದೂಷಣ ಹಳಚಿದನು (ತೊರರಾ. ೩-೬-೧೪). [ ಚಳ₂ (=ಚಲ₂) + ಚಮತ್ಕೃತಿ ]

**ಚಳಚಳ** (ನಾ). ಒಂದು ಅನುಕರಣ ಶಬ್ದ : ಅಷ್ಟುವಿಂಗೆ ಇಳಿಜಾರಿನಲ್ಲಿ ಚರಿಸುವಾಗ ಹುಟ್ಟುವ ಬುಳುಬುಳು ಚಳಚಳ ಭೋರ್ಭೋರೆಂಬ ಶಬ್ದ ಉಂಟು (ವಡಶಾ. II, ೩೨).

**ಚಳಚಳನೆ** (ಅ). ೧. ಥಳಥಳನೆ: ಚಳಚಳನೆ ಮಿಂಚಿತ್ತು ಸಿಡಿಲ ಕೈದೀವಿಗೆ ಪೊಲ್(ಶಮುದ. ೧೯೩ ಪ್ರಯೋ);ಬಳಬಳನುದುರುತಿರ್ದುದು ಕರ್ವು ಚಿತ್ರ್ಭ್ಪಿ ಚಳಚಳನೊಳಗೇಱುತಿಹುದು (ಭರತ. ೭೭-೩೪). ೨. ಬೇಗನೆ; ಲಗುಬಗೆಯಿಂದ ಕೂಡಿ : ಭೋಜನಕೆ ಸಲುವುಪಕರಣವನಲ್ಲಲ್ಲಿಗೆಲ್ಲಕೆ ಚಳಚಳನ ಗೊಳಿಸಿದರು (ಭರತ. ೪-೫೪) ; ಚಳಚಳನೆಯ್ದುದರಂಗ ಶೃಂಗಾರಾಂಶು ತಳತಳನತ್ತಿತ್ತ ಕಿದಱಿ (ಭರತ. ೩೮-೩). [ <ಚಲ₂ + – ಅನೆ₁ ]

**ಚಳಚಳಿಸು** (ಕ್ರಿ). ಲಕಲಕಿಸು ; ತಳತಳಿಸು ; ಉಜ್ವಲವಾಗು : ಸಿರಿಸೋರ್ವ ಮುಖಪದ್ಮಂ ಚಳಚಳಿಸೆ (ರಾಮಾಶ್ವ. ೬೯-೨೪).

[ <ಚಲ₂ + – ಇಸು₃ ]

**ಚಳಚಿತ್ತ** 'ಚಲಚಿತ್ತ' ನೋ.

**ಚಳಣ, ಛಲ್ಲಣೆ** (ನಾ). ೧. ಅಡಿ ; ಪಾದ ; ಚರಣ : ನರೇಂದ್ರಂ . . . ಭೀಷ್ಮರ ಚಳಣಯುಗಕ್ಕೆಱಗೆ (ಪಂಪಭಾ. ೧೦-೬೦); ಜಳನೇವತೆ ಕೋಡುವ ತಿಳಿಗೊಳದೊಳಗಿರ್ಪಂತೆ ಶೀಲವತಿ ಸೀತೆ ವಿನಿಶ್ಚಳಮಿರೆ ಮನದೊಳ್ ಜಿನಪತಿ ಚಳಣಂ ದಳ್ಳುರಿಯ ನಡುವೆ ಕೋಡುತ್ತಿರ್ದಳ್ (ಪಂರಾಮಾ. ೧೬-೨೪). **ಛಲ್ಲಣೆ** : ೨. ಚಲನೆ ; ಹರಿದಾಟ : ಉದುಕದ ಛಲ್ಲಣೆಯಿಂದ ಚಂದ್ರ ಕಂಪನೆ ಅನುಭವಿಸುವಂತೆ (ತತ್ತ್ವಚಿಂ. ೩-೧೩). [ <ಸಂ. ಚಲನ ]

**ಚಳತುಂಬಿ** (ನಾ). ಸುಳಿದಾಡುವ ದುಂಬಿ ; ಚಂಚಲವಾದ ಭ್ರಮರ : ಗೊಂಚಲನಾಗೋತ್ತರ ಚಳತುಂಬಿಗೆ ಗುಣಗುಟ್ಟುವುದೆ ಮಾಯಾ' (ಚಿದಾವ. ೩೬-೧). [ ಚಳ₂ ( = ಚಲ₂) + ತುಂಬಿ₁ ]

**ಚಳತುಂಬು, ಚಳತೊಂಬು** (ನಾ). ಓಲೆಗೆ ಸೇರಿಸುವ ಜುಮುಕಿಯಂತಹ ಅಲ್ಲಾಡುವ ಒಂದು ಆಭರಣ : ಫುಲ್ಲಲೋಚನೆ ಚಳತುಂಬು ಮಿಾನ ಬಾವುಲಿಯ . . . ಕರ್ಣದಲಿಟ್ಟು (ಶ್ರೀಕೃಪಾ. ೧೧) ; ನೀಲದ ಬಾವುಲಿ ಚವುಕಳಿ ಚಳತುಂಬು ತೂಬು ತಕ್ಕಡಿ ಇಟ್ಟರು (ಕರ್ನಾಕೆ. ೩೦೬) ; ಮುಗಿಲಲ್ಲಾಡುವ ಬಾವಿಲಿ ಮಲ್ಲಿಗೆ ಕಿವಿಗೊಪ್ಪು ಓಲೆಕೊಪ್ಪು ಚಳತುಂಬ (ಗಂ. ೦೦೬-೯) ; ವಾಲೇಗೆ ಚಳತುಂಬ ಮರತೇ ಬಂದ್ನು (ನಾಪದ. ೦೦೪). **ಚಳತೊಂಬು** : ಎಸೆವ ಕಪೋಲ ಹೊಸ ಕುಂಡಲ ಚಳತೊಂಬುಳ್ಳ ಶ್ರವಣ (ಪುರಂದ. ೧-೧೯೧-೪).

[ ಚಳ₂ ( = ಚಲ₂) + ತುಂಬು₄./ತುಳು. ಚಳತುಂ. ಚಳ್ತುಂಬು ]

**ಚಳತೆ** (ನಾ). ೧.ಚಂಚಲತೆ ; ಚಪಲತೆ: ತಿಳಿವು ತಿರುಗಿತು ಲಾಸ್ಯಲೀಲೆಯ ಚಳತ ಚಂಡಿಸಿ ಹಿಂಗಿಹೋಯಿತು (ಪ್ರಭುಲೀ. ೭-೩೪). ೨. ಲಗುಬಗೆ ; ತ್ವರೆ : ಹಿಡಿಗುದುರೆಯ ಸಾವಿರವ ಬಿಡದೆ ಚ[ಪಾಠಾಂ. ದಚ್ಚ]ಳತೆ ಮಾಡಿ ತಂದೊಪ್ಪಿಸಿದನಂದು ಕಡುಗಲಿ ರಾಮನಾಥನಿಗೆ (ಕುರಾಸಾಂ. ೪೨-೮೦).

[ ಸಂ. ಚಲತಾ ]

**ಚಳತೊಂಬು** 'ಚಳತುಂಬು' ನೋ.

**ಚಳದಳ** ‘ಚಲದಲ’ ನೋ.

**ಚಳನ** ‘ಚಲನ’ ನೋ.

**ಚಳನತಳ** (ನಾ). ಪಾದತಲ ; ಕಾಲಡಿ : ಚಳನತಳಂಗಳಂ ತೊಳೆದು ಮುಂ ಬಟಿಕಟ್ಟಿಯೆ ತೀರ್ಥವಾರಿಯಿಂ . . . ಫಳಕುಳದಿಂ ಧರಾಧಿಪತಿ ಪೂಜಿಸಿದಂ (ಚಂದ್ರಪು. ೧೪-೯) ; ಚಳನತಳದ್ಯುತಿಚ್ಛಲದೆ ಕೆಂಬಿಸಿಲಂ ಕಿಡೆ ಮೆಟ್ಟಿ . . . ಪೊಱಮಟ್ಟಳೊರ್ವಳಭಿಸಾರಿಕೆ ಭೂಚರ ಚಂದ್ರಮೂರ್ತಿವೋಲ್ (ವರ್ಧಪು. ೬-೪೮). [ ಚಳನ (=ಚಲನ) + ತಳ್$_2$ (=ತಲ) ]

**ಚಳಪಳ** (ನಾ). ಒಂದು ಅನುಕರಣ ಶಬ್ದ : ನೀರು ಸುರಿಯುವಾಗ ಚಳಪಳ ಸದ್ದು ಕೇಳಿಸುತ್ತಿತ್ತು (ರೂಢಿ).

**ಚಳಪಳನೆ** (ಅ). ಚಳಪಳ ಎಂಬ ಸದ್ದಿನೊಡನೆ : ಚಳಪಳನೆಳ್ದು ಚಿಮ್ಮಿ ಗರಿಗಳ್ ಪೊಳೆಯಲ್ ನೆಗೆದೆಳ್ದು ಮತ್ತೆಯುಂ ತಳತಳಿಸುತ್ತೆ . . . ತೋರ್ದುದಾ ವಿಳಸಿತರತ್ನಕೋಶಮೆನಿಸುತ್ತೆ ಧರಾತಳದೊಳ್ ನಿರಂತರಂ (ಹಾಲಾಸ್ಯ. ೪-೯-೨೧). [ ಚಳಪಳ + – ಅನೆ$_1$ ]

**ಚಳಬಳಿಕೆ** (ನಾ). ೧. ಲಗುಬಗೆ; ಚಪಲತೆ; ಚಳಕ; ವೇಗ: ಚಳಬಳಿಕೆಗಳ ಚಾರುತುರಗಕುಲವನುವಾಗಿ ನಿಂದವು (ಸೋಮಚ. ೬-೨೮); ಭಾವಿಸುವೊಡಾ ಚಳಬಳಿಕೆಯನು ತಾವೆ ಬಲ್ಲರು ದೇವಭಕ್ತರು (ಪ್ರಭುಲೀ. ೨೩-೨೮); ಕುಣಿದ ವಸುರನ ರಥದ ಹಯ ದಿನಮಣಿಯ ದಿವ್ಯವರೂಥವಾಜಿಯ ಹಣೆಗೆ ಹೊಂಚುವ ಖುರದ ಚಳಬಳಿಕೆಯ[ಪಾಠಾಂ. ಪುಟದ ಚಲಗತಿಯ]ಛಡಾಳದಲಿ (ತೊರರಾ. ೬-೨೦-೫೧) : ಮಂಡಲಭೇದ ಚಳಬಳಿಕೆ ಚದುರೋಜೆವೆರಸಿ ರಣರಂಗದೊಳ್ . . . ಉರವಣಿಸಿದುವು (ಜೈಮಿಭಾ.೨೫-೪೫). ೨. ಅಬ್ಬರ: ಪರಮವಿದ್ಯೆಯ ನೆರವಿ ನಿಲುಕುವ ಚಳಬಳಿಕೆ ಮೊಳಗುವ ಜಯಾಂತದ ವಾದ್ಯ ರಭಸದಲಿ (ತೊರರಾ. ೬-೧೮-೮) : ಕೊರಲೊಂದು ಚಳಬಳಿಕೆ [ಪಾಠಾಂ. ಳಕಿ]ಯನುಳ್ಳ ಪಲಬಣ್ಣದಿರವಾಂತ ಜೋದ ಮೈಗಿಟ್ಟು (ವರ್ಧಚ. ೧೧-೧೨೬). ೩. ಗಾನದ ಇಂಪು: ಕೊರಳ ಚಳಬಳಿಕೆಯುಲಿಯೊಳ್ [ಪಾಠಾಂ. ಳಕೆಯೊಳುಳಿಯೆ]ಪುರುಷನೈದೆ . . . ಬಸಕೆ ತಪ್ಪುದಂಗನೆ (ಜನವ. ೮-೨೦) ; ಛಡ್ಡೆಯಿಲ್ಲದೆ ತನ್ನ ಗಂಧರ್ವಗಾಯಕಮನಡ್ಡವಾಡುವತಲಖಿಳ ಚಳಬಳಿಕೆಯಿಂ ಕೊನರಿ (ಲಿಂಗಪು. ೨೬-೪೬). ೪. ಸೊಗಸು; ಚಾತುರ್ಯ; ಬಿನ್ನಾಣ (?) : ಚಳಬಳಿಕೆಯೊಳು ಚಂದದೊಳು ಬಂಧದೊಳು ನಿರ್ಮಳ ಮೋಹಿಗಳು ನೆರೆವಾಗ (ಭರಚ. ೩೧-೧೩೦) ; ಹಾವಭಾವದ ಚಳಬಳಿಕೆ ರಂಜಿಸೆ ತನ್ನ ಹಾವಂತೆ ಬಂದೊರ್ವಳೊಲೆದು (ಭರಚ. ೪೭-೩೮). ೫. [ನಾಟ್ಯ] ಒಂದು ನೃತ್ಯಭಂಗಿ : ಥಾಳ ಡಿಳ್ಳಾಯೆ ಚಂಡಣೆ ಚಳಬಳಿಕೆ ಉಲ್ಲಾಸದಚ್ಚರಿವಡೆಯೆ ನರ್ತಿಸುತ್ತುಮಿರೆಯುಂ (ಶಾಂತೀಶ್ವ. ೧೬-೬೭ ವ).

[ ಚಳಬಳ್$_0$ + – ಇಕೆ ]

**ಚಳಬಳಿಸು** ‘ಚಳವಳಿಸು’ ನೋ.

**ಚಳಮತಿ** (ನಾ). ಚಂಚಲಬುದ್ಧಿಯುಳ್ಳ ವ್ಯಕ್ತಿ : ಚಳಮತಿಯಾದೆ ನೀಂ ಜಡಧಿಸಂಭವೆಯುಪ್ಪುದಱಿಂ (ಗದಾಯು. ೯-೫) ; ಚಳಮತಿ ಬೆಸನಿ ಸುಖಪ್ರಿಯಂ (ಸೂಕ್ತಿಸು. ೧೬-೫೨). [ ಚಳ್$_2$ (= ಚಲ್$_2$) + ಮತಿ ]

**ಚಳಮಾಲೆ** (ನಾ). ಪೊದರಾಗಿ, ನೇರವಾಗಿ ಬೆಳೆಯುವ ಒಂದು ಬಗೆಯ ಮುಳ್ಳಿನ ಗಿಡ.–ಕಂಟಿ : (ಕ). [ ? ]

**ಚಳಮಿಳನೆ** (ಅ). ಚಕಚಕನೆ ; ಮಿರಮಿರನೆ: . ತಾನೆ ಹೂ, ಹಕ್ಕಿ, ಹೆಣ್ಣು ಕಣ್ಣೆಂದಾಗಿ ನೀಡಿ ಬಾನ್‌ವಿಮಾನಂಗಳಲ್ಲು ಚಳಮಿಳನಾಗಿ ಆಗ ಬಗೆಯ ಮಿಂಚಿತ್ತು ಒಂದೇ ಬಿಂಬ (ಮುಕ್ತಕಂ. ೩೨-೭). [ಚಳಮಿಳ್$_0$ + – ಅನೆ$_1$]

**ಚಳಯ್**$_1$ ‘ಚಳೆಯ್$_1$’ ನೋ.

**ಚಳಯ್**$_2$, **ಚಳೆಯ್**$_2$, **ಚಾಳೆಯ**, **ಛಳೆಯ್**$_2$ (ನಾ). ೧. ಲಗುಬಗೆ ; ವೇಗ ; ಶೀಘ್ರತೆ : ಕಟ್ಟಾಯತನಾಗಿ ಚಳಯದಿಂ ಪೊಱಮಟ್ಟಂ (ಅನಂಪು. ೧೦-೫೬) ; ಚಳಯದಲಿ ತರಿಸಿದನು ಸಂಭಾರವನು ತವಕದಲಿ (ಕೌಶಿರಾ. ೧-೫೮). ೨. ಚಲನ ; ಗತಿ : ಸುಳುಹಿನ ಸೂಕ್ಷ್ಮದ ತಿಳುಹಿನ ಚಳಯವ ತಾಳ್ದಿಡೆಯ ಬಲ್ಲರೆ ಬಲ್ಲರೆಂಬೆ (ಮೋಳಿಮಾ. ೧೦೩-೪೦೨). **ಚಳೆಯ್**$_2$: ೧. ಪಟಿನೀರಿಂದಂ ಮರ್ದಿಸಿ ಚಳೆಯ[ಪಾಠಾಂ. ವಳಯ]ದೊಳಂ ಪೂಸೆ (ಖಮದ. ೧೦-೬೮) ; ಚಳೆಯದಿಂ ಸೂತನವನಿಪನ ತರಲಾಲಯಕೆ (ನೀಲಧ್ವ. ೪೦). **ಚಾಳೆಯ**: ೩. ಕುಪ್ಪಳಿಸುತ್ತ ಸಾಗುವ ಒಂದು ರೀತಿಯ ಚಲನ ಕ್ರಮ: “ಚಾ [ಪಾಠಾಂ. ಜಾ] ಳೆಯಂ ಗ[ಪಾಠಾಂ. ದ]ತಿ ಲಂಘನಂ” (ಮಂಗರಾ. ೨೫-೯). ೪. ಕುಸ್ತಿಯಲ್ಲಿ ಅಥವಾ ಕಾಳಗದಲ್ಲಿ ಶತ್ರುವನ್ನು ಹಿಡಿಯಲು ಹೊಂಚು ಹಾಕುತ್ತಾ ವೇಗವಾಗಿ ಸಂಚರಿಸುವ ಕ್ರಮ : ಕಳಾಸ ಚಾಳೆಯ ಮುಂಡಿಸೀರಣಂ ಹಜ್ಜೆಯಕ್ಕುಂ (ಮಂಗರಾ. ೮೮-೩೮) ; ಶಕ್ತಿ ಮೊದಲಾದ ಕೈದುಗಳೊಳು ಕೇಣಮಿಲ್ಲದೆ ಚಾರಿ ಚಳಕ ಚಾಳೆಯ ಚದುಪರ್ಾಣಿ ಲಾಘವ ಪಂಥ ಪಾಡುಗಳನಱಿದು ಬಿನ್ನಾಣದಿಂ ಗಾಯ ಗಾಣಿಸಿದರತಿಬಲರು (ಜೈಮಿಭಾ. ೨೨-೬). ೫. [ಸಂಗೀತ] ಸ್ವರ ವಿನ್ಯಾಸ ಕ್ರಮ : ಗತಿ ಗಮಕ ಗಹಗಹಿಕೆ ತಿರುಪು ಚಾಳೆಯ ಕೊಂಕು ಜತಿ ಜೋಕೆ ಮಾರ್ಗವಣೆ . . . ನುತ ಶುದ್ಧ ಸಾಳಂಗ ಸಂಕೀರ್ಣಮಂ ಯಥೋಚಿತ ತಾರ ಮಧುರಮಂದ್ರಂಗಳಿಂ ಹಾಡಿ ಭೂಪತಿಯ ದುಗುಡವನು ತೊಳೆದರು (ಹಚಕಾ. ೭-೬) ; ಗಹಗಹಿಕೆವಡೆದ ವಹಣಿಯ . . . ಮಹ ಚಾಳೆಯದಲ್ಲಿ ಮೂರ್ತಿವಡೆದುದು ರಾಗಂ (ಯಶೋಚ. ೨-೨೯). ೬. [ನಾಟ್ಯ] ನೃತ್ಯದಲ್ಲಿ ಹೆಜ್ಜೆಯಿಡುವ ಕ್ರಮ: ಪಯ ಪಾಡು ನಿಚ್ಚವಣೆ ಚಾಳೆಯಮುಲ್ಲಾಸಂ ತಿರುಂಪು ತಡವಿತ್ತಡಮುನ್ನಯನವಿಶೇಷಂ ಡಿಳ್ಳಾಯಿಯ ಲುಳಿ ಪುದಿದುಸುರಮುಸೆವಿನಂ ನರ್ತಿಸಿದಳ್ (ಧರ್ಮಪ. ೨-೨೬); ತೋಳ ನೀಡಿವಳು ಮನ್ಮಥನೊಱೆಯಿಂದುರ್ಚಿ ಬಾಳ ನೀಡಿದನೊಯೆಂಬಂತೆ ಚಾಳೆಯದೊಳು ಹೊಳೆದಳು ರಾಜಸುತರೆದೆ ಹೋಳಾಗುವಂತೆ ಹೊಮ್ಮಿಱಿದು (ಭರಚ. ೧೨-೬೬); ಅತಿ ಸೂಠಿಯಲಿ ಚಾಳೆಯವಾಗಿ ತಿರುಹಿದಳು(ಉತ್ತರಾ. ೨೭-೧೮). **ಛಳೆಯ**: ೧.ಛಳೆಯದಲಿ ಬರಹೇಳು ನಿನ್ನೀ ತಲೆಯೊಡೆಯನಹ ವಿಷ್ಣುವನು (ನಿಭಾಗ. ೭-೭-೧೦). [ <ಪ್ರಾ. ಚಲಿಅ. / ಸಂ. ಚಲಿತ ]

**ಚಳಯಂಗುಡು** ‘ಚಳೆಯಂಗೊಡು’ ನೋ.

**ಚಳಯಂಗೊಡು** ‘ಚಳೆಯಂಗೊಡು’ ನೋ.

**ಚಳಯಂಬೆಱು** (ಕ್ರಿ). ಜಲಸೇಚನವನ್ನು ಪಡೆ ; ಸಿಂಪಣೆಯನ್ನು ಪಡೆ : ಕ್ಷಿತಿತಳಂ ಸದ್ರಾಗದಿಂದೆಂಬಿನಂ ಘನಕಾಶ್ಮೀರದ ನೀರಿನಿಂದೆ ಚಳಯಂಬೆತ್ತೆತ್ತಲುಂ . . . ಮಾಡಿತ್ತು ಸಂತೋಷಮಂ (ವರ್ಧಪು. ೧೩-೭೫).

[ ಚಳಯ್$_1$ (<ಚಳೆಯ್$_1$) + ಪೆಱು$_1$ ]

**ಚಳಯಗೊಡು** ‘ಚಳೆಯಂಗೊಡು’ ನೋ.

**ಚಳಯಿಸು** ‘ಚಲಿಸು’ ನೋ.

**ಚಳವಳ, ಚಳವಳಿ, ಚಳುವಳಿ** (ನಾ). ೧. ಚಲನೆ : ಅಲ್ಲಾಡುವಿಕೆ ; ಜರಗುವಿಕೆ. ‘ಚಳವಳಿಸು’ ಪರಾ.೨. ಚಟುವಟಿಕೆಯಿಂದ ನಡೆಸುವ ಸಾಮಾಜಿಕ ವಿಡಾಯ; ಸಾಮೂಹಿಕ ಕ್ಷೋಭೆ ; ಯಾವುದಾದರೂ ಒಂದು ಪದ್ಧತಿ, ಕ್ರಮ ಅಥವಾ ಕಾನೂನಿನ ವಿಷಯವಾಗಿ ನಡೆಸುವ ಸಾಮೂಹಿಕ ಆಂದೋಲನ: ನನ್ನ ಮಿತ್ರರ ಪ್ರೀತಿಯ ಚಳವಳಕ್ಕಾದರೋ ಇದೇ ಒಂದು ನೆವವಾಯಿತು (ಜೀವಸಾ. ೯) ; ರಾಷ್ಟ್ರೀಯ ಚಳವಳದಲ್ಲಿ ಸೇರಿಕೊಂಡು ತ್ಯಾಗಬುದ್ಧಿಯಿಂದ ದೇಶಸೇವೆ ಮಾಡಿದ ವೀರವ್ಯಕ್ತಿ ಅವರು (ರಾಜವ. ೨೭) ; ಬ್ರಿಟಿಷರ ಕಾಲದಲ್ಲಿ ನಾಟ್ಯಕಲೆಯನ್ನ ಬಹಿಷ್ಕರಿಸ ಬೇಕೆಂದು ಚಳವಳವೆದ್ದಿತ್ತು (ಭಾರದ. ೫೫೧). **ಚಳವಳಿ** : ೨. ಸ್ವದೇಶಿ ಚಳವಳಿಯ ಸಮಯದಲ್ಲಿ . . . ತಂದೆಯವರು ತಮ್ಮ ನೌಕರಿಯನ್ನೂ ಬಿಡುವ ಪ್ರಸಂಗ ಬಂದಿದ್ದು (ಭಾರತಿ. ೨) ; ಕರನಿರಾಕರಣೆಯ ಚಳವಳಿಯ ಸಮಯದಲ್ಲಿ . . . ಅಲ್ಲಿ ಇದ್ದೆ (ಬದುಜ. ೧೧). **ಚಳುವಳಿ** : ೨. ಇವರು ಹೂಡಿದ ಚಳುವಳಿ ಯುರೋಪಿನ ಬೌದ್ಧಿಕವಿಕಾಸವನ್ನು ತ್ವರೆಗೊಳಿಸಿತು

(ಕನ್ನಸಂ. ೩೩); ಸ್ವಾತಂತ್ರ್ಯದ ಚಳುವಳಿ ತೀವ್ರವಾಯಿತು (ಭಾರದ. ೪೩೮); ಕ್ಷಾಮನಿವಾರಣೆಗೆ . . . ತಿಲಕರು ಚಳುವಳಿಯನ್ನೆ ಹೂಡಿದರು (ಸ್ವಾವೀರ. ೩೯); ಚಳುವಳಿ ನಿಂತಿತ್ತು, ಕಾಲೇಜು ತೆರದಿತ್ತು (ಇಂಚಾಪ. ೩೯-೫೨).

[ ←ಮರಾ. ಚಳವಳ ]

**ಚಳವಳಿ** ‘ಚಳವಳ’ ನೋ.

**ಚಳವಳಿಖೋರ** (ನಾ). ಚಳವಳಿ ಮಾಡುವವನು ; ಚಳವಳಿ ಮಾಡುವ ಸ್ವಭಾವದವನು: ಈ ಚಳವಳಿಖೋರ ಮಂದೀ ಮನಸೂ ಬಲೇ ಚಂಚಲ (ತಿಡುಗು. ೧೨). [ ಚಳವಳಿ + – ಖೋರ(<–ಕೋರ್$_3$) ]

**ಚಳವಳಿಸು, ಚಳಬಳಿಸು** (ಕ್ರಿ). ೧. ಅಲುಗಾಡು ; ಅಲ್ಲಾಡು ; ಚಲಿಸು : ಅಳವಳಿಸಂ ಬೆಬ್ಬಳಿಸಂ ಕಳವಳಿಸಂ ಕನಲನೊನಲನಳ್ಕಂ ಬಳ್ಕಂ ಚಳವಳಿಸಂ ಚಪ್ಪರಿಸಂ ತಳವಳಿಸಂ ಬೇಸಟಿಯ್ದಿ ಬೆಳ್ಮೊಗದಿನಿರಂ (ಅಜಿಪು. ೫-೯೦); ಕೌತುಕವಿದೇನೆಂದು ಚಳವಳಿಸುತಿರಲೆಲ್ಲರು(ಜನಮು. ೫೦-೫೯). **ಚಳಬಳಿಸು** : ೨. [ನಾಟ್ಯ] ನೃತ್ಯಭಂಗಿಯನ್ನು ತೋರು: ತಾಳದಲಿ ತರಹರಿಸಿ ಮೆಲ್ಲನೆ ಮೇಳದಲಿ ಮೈನಿಗುರಿ ಕರ ಸಂಚಾಳಿಯಲಿ ಚಳಬಳಿಸಿ ತಿರುಪಿನ ಮಡುಪಿನಲಿ ಮಣಿದು . . . ವಿನುತ ಮರಾಳಗತಿಯಲಿ ಗಮಕಿಸುತಮೊಪ್ಪಿರ್ದಳಾ ಮಾಯೆ (ಪ್ರಭುಲೀ. ೪-೫೭). [ ಚಳವಳ + – ಇಸು$_3$ ]

**ಚಳಾಯ** (ನಾ). ಸಾಗಾಣಿಕೆಯ ಸುಂಕ ; ಸ್ಥಳದಿಂದ ಸ್ಥಳಕ್ಕೆ ಸಾಗಿಸುವ ವಸ್ತುಗಳ ಮೇಲೆ ಸಾಗಣೆಗಾಗಿ ಹೇರುವ ಸುಂಕ : ಉಳಿದ ಶೇಷವುವಂ ಚಳಾಯುವುವಂ ಬಿಟ್ಟು (ಎಕ. VI, ತರೀಕೆ. ೨೦-೨೭ ; 1135); ಆರು ವರ್ಷಗಳ ಹಿಂದೆ ದಾಯದರೆ ಎಲ್ಲದರ ಜತೆಗೆ ಚಳಾಯವನ್ನೂ ಘಟಿಕಾಸ್ಥಾನಕ್ಕೆ ಮಾಯಕೊಡಲಾಯಿತು (ಸವತಿ. ೨೦). [ ಚಳ್$_2$(=ಚಲ್$_2$) + ಆಯ$_7$ ]

**ಚಳಿ$_1$, ಸಳಿ$_1$** (ಕ್ರಿ). ಚಳಿತು, ಸಳಿತು (ಭೂತನ್ಯೂ) . ೧. ಪ್ರಭಾವ ಕಡಮೆಯಾಗು ; ಸೆಡೆ ; ಹಿಂದೆಗೆ ; ಕುಗ್ಗು ; “ಚಳಿ–ವಿಗತಪ್ರಭಾವೇ (ಶಕ್ತಿಗುಂದು), ಶೀತೇ ಚ ” (ಶಮಧಾ); ಕಲ್ದ ಕಸವರವಂನೆಲ್ಲಮನೇಗೆಯ್ದು ಯಂದು ಬೆಸಗೊಂಡೊಡನಿತುಮಿರ್ದುವಯ್ಸಾಸಿರಮುಬುಸಾಸಿರ ದೀನಾರಮನ್ನ ಸೂಳೆಗೆ ಬಿಯಮಾದುದುಚಿದುವೆಲ್ಲ[ಂ] ವಣ್ಣ[ಂ] ಚಳಿಯದಿರ್ದುದೆಂದೊಡೆ (ವಡ್ಡಾರಾ. ೧೨೫-೨೫); ತುಂಗಕುಚದ್ವಯ ಶೈಲದುರ್ಗಮಂ ಚಳಿತ[ಪಾಠಾಂ. ತಳೆದ]ರ್ದೆಲೇಟಿದಂಗಜನುಂ (ಗದಾಯು. ೮–೫೯); ಸುನಂದೆಯ ನುಡಿಗೆ ಚಂಡಶಾಸನನೇವೈಸಿ ಮುಳಿಯದೆ ಲಜ್ಜೆಯಿಂ ಚಳಿಯದೆ ಮತ್ತುಮಿಂತೆಂದಂ (ಅನಂಪು. ೧೧-೧೧೭); ಚಳಿಯ ವಾಹವಕಾಂಕ್ಷೆ ಯಕ್ಷರಿಗೆಲೆಲೆ ನೋಡಾ (ಉತ್ತರಾ. ೭–೫೦); ಬವರಿವರಿವ ಚಮ್ಮಟಿಗೆಗೆ ಚಳಿಯದ ಕಡಿಯಾಣಮಂ ಕೈಗೊಳದ ಬಗೆಯಂ ಬಗೆದಂತೆ ಕಂಡು (ರಾಜಶೇ. ೭-೧೦ ವ); ನಿಮ್ಮಾ ಬಲ್ಮೆಯ ಜಂಕಣೆಗಂ ಕಣೆಗಂ ಚಳಿತು (ರಾಮಾಶ್ವ. ೦೨೦-೨೭). ೨. ಬಳಲು ; ಸೋಲು ; ಸೋತುಹೋಗು : ಕೆಯ್ ಚೆಚ್ಚರಿಕೆಯ ಚಲದಿಂ ಕೆಯ್ ಚಳಿವಿನಮಿಱಿದರೆರಡು ಬಲದೊಳ ಮದಟರ್ (ಪಂಪಭಾ. ೦೩-೩೪): ಖಳಿಲ್ ಖಳಿಲ್ ತೊಪ್ಪು ತೊಪ್ಪು ಛಳಿಲ್ ಛಳಿಲೆಂದು ಕೊಳ್ವ ಬಡಿಗಂ ಚಳಿತು (ಧರ್ಮಾಮೃ. ೬-೮೮); ಬಳಸಿ ತೊಟಲ್ದೆನ್ನಡಿಗಳ್ ಚಳಿತುವು ಕಣ್ ನಂದಿ ಬಂದಪುದು (ಲೀಲಾವ. ೧೪-೮೨); ಆವ ಪರಿಯೊಳಾದೊಡೆಯು ಚಳಿಯದೆ ಮತ್ತೆ ಶ್ರೀವರನೊಳು ತೊಳಲಿದರೆ ದೇವದೇವನ ಕಾಣಲಹುದು (ಕೃಷ್ಣಗೋ. ೨-೯೯). **ಸಳಿ$_1$** : ೨. ತಲೆ ಸಳಿತು ಕೈಮಟಿದರಂತೆ ಯೆಸುವಾಳುಗಳ್ ನಿಲೆ ಕಂಡು (ಸಮ್ಮುಕಾ. ೮-೩೮). [ ದೇ.॥ ತಮಿ. ತುಳು. ಚಲಿ ]

**ಚಳಿ$_2$, ಛಳಿ, ಸಳಿ$_2$** (ನಾ). ೧. ಶೀತ ; ಶೈತ್ಯ ; ಥಂಡಿ : “ಚಳಿ–ವಿಗತಪ್ರಭಾವೇ(ಶಕ್ತಿಗುಂದು), ಶೀತೇ ಚ ” (ಶಮಧಾ); ಚಳಿ ಬಿಸುಪು ಬಿಸುಪು ಚಳಿಯನೆ ಬಳೆದುದು ಹಿಮರಾಜತೇಜಮಿಾ ಜಗದೆಡೆಯೊಳ್(ಗಿರಿಕ. ೯-೭೪); ಗಿರಿಯ ಶೃಂಗಾಗ್ರದೆ ಚಳಿ ಮಳೆ ಬಿಸಿಲೆನ್ನದುರುತರ ಯೋಗಮಾರ್ಗದಲ್ಲಿ . . . ಯೋಗೀಶ್ವರರಿರುತಿಹರು (ಕಂನವಿ. ೨-೪೦); ಅಲ್ಲಿ ಕೊರಗೆಂಬುದಿಲ್ಲಮ್ಮ, ಅಲ್ಲಿ ಚಳಿ ಛಿದ್ರವಿಲ್ಲಮ್ಮ (ಇಂಗೀತ. ೯೮-೬). ೨. ಹಿಮ ; ಮಂಜು . ‘ಚಳಿವೆಟ್ಟು’ ಪರಾ. ೩. ಚಳಿಜ್ವರದಲ್ಲಿ ಬರುವ ಮೈ ನಡುಕ : ಅವನಿಗೆ ಚಳಿ ಬಂದಿತ್ತು (ರೂಢಿ). **ಛಳಿ** : ೧. ‘ಛಳಿಗಾಲ’ ಪರಾ. ೩. ‘ಛಳಿಜ್ವರ’ ಪರಾ. **ಸಳಿ$_2$** : ೧. ಚೆಂಕಿಗೆ ಸಳಿ ಬಂದು ಉದಕವ ಕಾಯಲಾಗಿ ಹಿಮ ಹಿಂಗಿ ಜ್ವರ ಬಂದಿತ್ತು (ಸಗಬೊ. ೬೭); ಏನು ಕಾರಣವಾಗಿ ನೀನಿಂತು ಮೌನದಲ್ಲಿ ಮಂಡಿಸಿರ್ಪೆ . . . ಸಳಿ ಮಳೆ ಘಾಳಿ ಬಿಸಿಲ ಬೇನೆ ಬಾಯಾಱಿಕೆ ಪಸಿವು ಮುಂತಾದ ವೇದನೆಗಳೊಂದುಂ ಗಣನೆಗೆ ತಾರದ (ಭಾರಶಾಂ.೧೪-೭೦); ಹರಿಯುಮಿಾ ಹಿಮಕಂಜಿ ಕಲಶಾಬ್ಧಿಯಂ ಬಿಟ್ಟು . . . ಉರುವ ಸಳಿ ತೊಲಗದಿರಲೋಡಿಬಂದಾಗಸದ ತರಣಿಮಂಡಲ ಮಧ್ಯದೋಳ್ಮನೆಯ ಮಾಡಿಕೊಂಡಿರುವನೀ ಹೈಮಂತ ಶಕ್ತಿಯಂ ಬಣ್ಣಿಸಲ್ಕಾರಳವೊ ಮೂಜಗದೊಳು (ಅರ್ಜಾವಿ. ೧-೨೯).

[ ದೇ.॥ ತಮಿ. ಮಲ. ಚಳಿ ; ತುಳು. ಚಳಿ, ಚಲಿ, ಸಲಿ ; ತೆಲು. ಚಲಿ ]

**ಚಳಿ$_3$** ‘ತಳ್$_4$’ ನೋ.

**ಚಳಿಕ** (ನಾ). ಲವಲವಿಕೆ : “ತವಕ, ಲವಲವಿಕೆ, ಚಪಲ, ಅಸವಸ, ಚಳಿಕ” (ಕಂನುಹು. ೪೮). [ ? ]

**ಚಳಿಕಿಗೆ** ‘ಚಳಕಿಗೆ’ ನೋ.

**ಚಳಿಕೆ$_1$** ‘ಚಳಕೆ’ ನೋ.

**ಚಳಿಕೆ$_2$** (ನಾ). ಇಬ್ಬನಿ ; ಹಿಮ : ಪರೆದುದು ಚಳಿಕೆ ರವಿಯ ಕರಂಗಳು ಪರಕರಸಿದವೆಣ್ದೆಸೆಯ ಹರುಷವಾದುದು ಕೋಕಮಿಥುನ ಕೋಕನದ ಕೊರಗೆ ಚಕೋರ ಕೈರವವು (ತರ್ಕಕಾ. ೪-೭೨). [ ? ]

**ಚಳಿಕೊಡು** ‘ಚಳಿಗೊಡು’ ನೋ.

**ಚಳಿಕ್ಕ** ‘ಚಳುಂಕ್ಯ’ ನೋ.

**ಚಳಿಗದಿರ್** (ನಾ). ತಂಪಾದ ಕಿರಣ; ಹಿಮಕಿರಣ: ಶಶಿಯ ಚಳಿಗದಿರ್ಗಳ ಕುಳಿರ್‌ಕಾಂತಿ (ಶ್ರೀರಾಮಾ. ೪೨೦-೭).

[ ಚಳಿ$_2$ + ಕದಿರ್$_2$ ]

**ಚಳಿಗದಿರ, ಸಳಿಗದಿರ** (ನಾ). ತಂಪಾದ ಕಿರಣಗಳುಳ್ಳವನು ; ಚಂದ್ರ : “ಸವಿಗಡಲಣುಗಂ . . . ನೈದಿಲ್ಗೆಳೆಯ ಚಂದ ಚಳಿಗದಿರ ಕತ್ತಲೆವಣಿಯ ಶಶಿಯ ನಾಮಂ” (ಕಬ್ಬಿಕೈ. ೪೩); “ಚಳಿಗದಿರಂ ಕಟ್ಟಲೆವಣಿ ಕುಳಿರ್ವೆಳಗನು . . . ತಣ್ಣದಿರ ಮಂಜುಗ್ಗೆಯಂ ಚಂದಂ” (ಕವಿಕಂ. ೪೩). **ಸಳಿಗದಿರ** : ಸಳಿಗದಿರನ ಕಳಂಕನುದ್ದುವವೊಲು ತಿಲಕವ ತೊಡೆದು (ಜ್ಞಾನಡ. ೪೩-೬೦).

[ ಚಳಿಗದಿರ್ + – ಅ$_7$ ]

**ಚಳಿಗದಿರ್ಗಲ್ಲು** (ನಾ). ಚಂದ್ರಕಾಂತಶಿಲೆ : ಎಕ್ಕಲಂ ಚಳಿಗದಿರ್ಗಲ್ಲಿನೊಳು ದಾಡೆಯಂ ಮಸೆದು ಪದಗೊಳಿಸುವನಿತಕ್ಕೆ (ರಾಘಶ. ೧೭-೭೨).

[ ಚಳಿಗದಿರ್ + ಕಲ್ಲು(<ಕಲ್$_3$) ]

**ಚಳಿಗಾಲ, ಛಳಿಗಾಲ** (ನಾ). ಚಳಿ ಹೆಚ್ಚಾಗಿರುವ ಕಾಲ ; ಮಾಗಿ ; ಹೇಮಂತ ಶಿಶಿರಋತುಗಳ ಸಮಯ : ಹರಿವ ತೊಱೆಗಳ ನಡುವೆ ಧೃತಿಯೋಸರಿಸದುಱಿ ಚಳಿಗಾಲವೆಲ್ಲಂ ನಿರುತದಿಂ ಕೊರಳುದ್ದ ನೀರೊಳು ನಿಂದು (ಬಸವು. ೨-೧೨); ಬಿಸಿಲು ಮಳೆ ಚಳಿಗಾಲವಿವು ಸಂಧಿಸಿದವೇ ರಘುಪತಿಯನೀಯಾಯಸವ ನೋಡಲಿಕಿದ್ದೆವೇ ಶಿವಶಿವ ಮಹಾದೇವ (ತೊರರಾ. ೩-೨-೬). **ಛಳಿಗಾಲ** : ಛಳಿಗಾಲದಲ್ಲಿ ಅವು ಒಂದೂವರೆ ಅಡಿ ಆಳದವರೆಗೂ ಹೋಗುತ್ತವೆ (ಕೀಟಬಿ. ೩).

[ ಚಳಿ$_2$ + ಕಾಲ ]

**ಚಳಿಗಿರಿ** (ನಾ). ಹಿಮಾಲಯ ಪರ್ವತ; ಹಿಮಾಚಲ: ಒಂದು ದಿನ ಚಳಿಗಿರಿಯ [ಪಾಠಾಂ. ಪೆಟ್ಟ] ದೆಸೆಗೆ ಚೆಲ್ಲಲು ನಿತ್ಯದಂತಲ್ಲದತ್ತ ನೀ ಬಿಸುಟ ಪರಿಯ ತಿಳುಹೆನಲ್ಕೆ (ಪ್ರಾಭರಾ. ೪-೧೪). [ ಚಳಿ$_2$ + ಗಿರಿ$_1$ ]

**ಚಳಿಗೊಳ್** (ಕ್ರಿ). ತಣ್ಣಗಾಗು ; ಕುಗ್ಗು ; ತಗ್ಗು : ಕೇಡಿನಲ್ಲಿ ಕಂಗೆಡದೆ ಒಲವು, ಮುಪ್ಪಿನಲ್ಲಿ ಚಳಿಗೊಳದೆ ಗೆಲವು (ಇಂಗೀತ. ೮೫-೧೮).

[ಚಳಿ$_1$ + ಕೊಳ್$_1$]

**ಚಳಿಜ್ವರ, ಛಳಿಜ್ವರ** (ನಾ). ಚಳಿಯೊಡನೆ ಬರುವ ಜ್ವರ ; ಮೈನಡುಕದೊಂದಿಗೆ ಏರುವ ಜ್ವರ ; ಮಲೇರಿಯ : ಇವು ಚಳಿಜ್ವರ ಅಥವಾ ಮಲೇರಿಯಾಜ್ವರವನ್ನುಂಟುಮಾಡುತ್ತವೆ (ಪರಜೀ. ೨೭). **ಛಳಿಜ್ವರ**: ಮಂದಾಗ್ನಿಯಲ್ಲಿ, ಛಳಿಜ್ವರದಲ್ಲಿ [ಪಾಠಾಂ. ಛಳಿಯಲ್ಲಿ] . . . ವಮನ ಕ್ರಿಯೆಯ ಮಾಡಿಸುವುದು (ವೈದ್ಯಸಾ. I, ೩೦) ; ಗರುಗದ ಸೊಪ್ಪಿನಲ್ಲಿ ಒಂದು ಪಾವು ರಸವಂ ಹಿಂಡಿ ಛಳಿಬರುವ ಸಮಯದಲ್ಲಿ ಕೊಡಲು ಛಳಿಜ್ವರಂ ಮಾಣ್ಗುಂ (ಸಕವ್ಯ. ೭೩). [ಚಳಿ$_2$ + ಜ್ವರ]

**ಚಳಿತ$_1$** (ನಾ). ಚಳಿ ; ಶೀತ ; "ಕುಳಿರ್ದುದು" (ಚತುನಿ. ಕಿ. I, ೩೭).

[ಚಳಿ$_2$ + – ತ$_2$]

**ಚಳಿತ$_2$** 'ಚಲಿತ' ನೋ.

**ಚಳಿನಾಡು** (ನಾ). ಚಳಿ ಹೆಚ್ಚಾಗಿರುವ ನಾಡು ; ಶೀತವಲಯದಲ್ಲಿ ಇರುವ ನಾಡು : (ಕ). [ಚಳಿ$_2$ + ನಾಡು]

**ಚಳಿಯ** 'ಚಳೆಯ$_1$' ನೋ.

**ಚಳಿಯಿಸು** 'ಚಲಿಸು' ನೋ.

**ಚಳಿಲ್** (ನಾ). ಒಂದು ಅನುಕರಣ ಶಬ್ದ : ಪೊಸ ಪೂವಿನೊಳ್ ಪೊರೆದು ಪೊಣ್ಮದ [ಕ]ಂಪು ಮೊಗಂಗಳಂ ಚಳಿಲ್ಲೆನೆ ಕೊಳೆ ಪೊಯ್ಕೆ ತೀಡಿದುದು ತೆಂಕಣಗಾಳಿ ವಸಂತಮಾಸದೊಳ್ (ಪಂಪಭಾ. ೫-೩೪) : ಉರ್ಕಂಬುಗಳೆಱಗಿ ರೋಮರೋಮಕ್ಕೆ ನೆಳಿಲ್ ನೆಕ್ಕು ಚಳಿಲ್ ಚಕ್ಕು ದೊಗಲ್ ದೊಕ್ಕೆನೆ ನಾಂಟಿದುವರಾತಿಭಟರವಯವಮಂ (ಜಗವಿ. ೭-೮೦).

**ಚಳಿಲನೆ** (ಅ). ಒಮ್ಮೆಲೆ ; ಕೂಡಲೆ : ಚಳಿಲನೆ, ಕಿಳಿಲನೆ, ಗಳಗಳನೆ, ಕಿಳಕಿಳನೆ (ಶಬ್ದಾನು. ೧೪೦ ವ್ಯಾಖ್ಯಾ). [ಚಳಿಲ್ + – ಅನೆ$_1$]

**ಚಳಿವೆಟ್ಟ** 'ಚಳಿವೆಟ್ಟು' ನೋ.

**ಚಳಿವೆಟ್ಟಣುಗಿ** (ನಾ). ಹಿಮವಂತನ ಮಗಳು; ಪಾರ್ವತಿ: ಚಳಿವೆಟ್ಟಣುಗಿ ಯಾಣ್ಮನ ಭಕ್ತ ಸಂಗನಾದಳವ ನೋಡಲ್ಕೆ . . . ಸೂರ್ಯನುದಯಂಗೈದನಾ ಸಮಯದಿ (ಪ್ರಾಥರಾ ೧೩-೨೯).

[ಚಳಿವೆಟ್ಟು + ಅಣುಗಿ (< ಅಣುಂಗಿ)]

**ಚಳಿವೆಟ್ಟಳಿಯ** (ನಾ). ಹಿಮವಂತನ ಅಳಿಯ; ಶಿವ: "ಎಲರುಣಿವೆದೆಯಂ ಚಳಿವೆಟ್ಟಳಿಯಂ ಸಸಿದಲೆಯ . . . ಪೇಟ್ವರ್ ಸ್ಮರಹರಂಗೆ ನಾಮವಿದೆನುತುಂ" (ಕವಿಕಂ. ೧೫). [ಚಳಿವೆಟ್ಟು + ಅಳಿಯ]

**ಚಳಿವೆಟ್ಟಾಣ್ಮ** (ನಾ). ಹಿಮಗಿರಿಯ ಒಡೆಯ ; ಹಿಮವಂತ ; ಚಳಿವೆಟ್ಟಾಣ್ಮನ ಪುತ್ರಿ ಸುರ್ಕೆ ಚಳಿಯಿಂ (ರಾಜಶೇ. ೯-೧೭).

[ಚಳಿವೆಟ್ಟು + ಆಣ್ಮ (<ಆಳ್ಮ)]

**ಚಳಿವೆಟ್ಟು, ಚಳಿವೆಟ್ಟ, ಛಳಿವೆಟ್ಟು** (ನಾ). ಹಿಮಗಿರಿ ; ಹಿಮಾಚಲ : "ಕುಳಿರ್ವೆಟ್ಟೈಕಿಲ್ವೆಟ್ಟುಂ ಚಳಿವೆಟ್ಟು ಹಿಮಾದ್ರಿ" (ಚತುನಿ. ೧೦) ; ಮನ್ಮಥನು ತಳಿರ್ರಥವನೇಱಿ ಮುಂದೆ ಪೋಗಲ್ಕಾ ಚಳಿವೆಟ್ಟು ಕಣ್ಗೆ ರಂಜಿಸಿತು (ಮೋಹತ. ೬-೪೫). **ಚಳಿವೆಟ್ಟ**: ಚಳಿವೆಟ್ಟದಳಿಯ ಕೇಳುಳಿದ ಮಾತೇನೀಗ (ಮಲ್ಹಾರಿ. ೬-೪). **ಛಳಿವೆಟ್ಟು**: ಛಳಿವೆಟ್ಟನಿಂದಬ್ಧಿಪರಿಯಂತದವನಿಯು ತದಾಕಾರದಂತೆಸೆವುದು (ನವಮೋ. ೨-೧೮).

ಚಳಿವೆಟ್ಟುಮಗಳ್ = ಚಳಿವೆಟ್ಟಣುಗಿ: ಚಳಿವೆಟ್ಟುಮಗಳ ನಲ್ಲಂ ಪೇಳ್ದ ಶಾಸ್ತ್ರಂಗಳ್ (ಏಕೋಪು. ೬-೭೮). [ಚಳಿ$_2$ + ಬೆಟ್ಟು$_2$]

**ಚಳಿವೆಱು** (ಕ್ರಿ). ಚಳಿಯನ್ನು ಹೊಂದು ; ಶೀತದಿಂದ ಬಾಧೆಪಡು : ಭೀತಿಯಲಿ ಚಳಿವೆತ್ತು ನಡುಗುವಂದದಿ ಪೇಳ್ದ ರಣದುಮ್ಮಳಿಕೆಯ ಬಹಳ ನಿಷ್ಠುರವ (ಮೋಹತ. ೩೪-೪೩). [ಚಳಿ$_2$ + ಪೆಱು$_1$]

**ಚಳಿಸು$_1$** 'ತಳಿಸು$_1$' ನೋ.

**ಚಳಿಸು$_2$** 'ಚಲಿಸು' ನೋ.

**ಚಳುಕಿ$_1$** 'ಚಳುಕ್ಯ' ನೋ.

**ಚಳುಕಿ$_2$** (ನಾ). ಒಂದು ಬಗೆಯ ವಿಮಾನ: "ಚಳುಕಿಯೆನೆ ಶಿಂಶುಮಾರಂ" (ವಸ್ತುಕೋ. ೨೩-೬). [ ? ]

**ಚಳುಕಿಡು** (ಕ್ರಿ). ನರಗಳ ಮಿಡಿತದಿಂದ ಬೇನೆಯುಂಟಾಗು; ನರಗಳಲ್ಲಿ ಚುಚ್ಚಿದಂತೆ ನೋವುಂಟಾಗು: ನವಮಾಸ ಪೂರೈಸಲಾ ಸತಿಗೆ ಬಿಡದೊಡನೆ ದಿವದಲ್ಲಿ ಕಾಂಚಿ ಕಟಿ ಮಿಡಿಮಿಡಿದು ಚಳುಕಿಡಲ್ (ಪರಬು. ೩-೪೯). [ಚಳುಕು$_1$ (<ಚಳಕು$_1$) + ಇಡು$_1$]

**ಚಳುಕು$_1$** 'ಚಳಕು$_1$' ನೋ.

**ಚಳುಕು$_2$** (ನಾ). (?) : ಅಳರಶರಕೇಳಿಪೆಂಪಿಂದಲಾಸ್ಯಶ್ರೀಯ ಚಳುಕಿನಿಂ ನೋಳ್ಪರಂತಃಕರಣತುಷ್ಟಿಯ ಸುಸೋಪನೇವರ್ಣಿಸುವೆನು (ಜಿನಮು. ೨-೧೨). [ ? ]

**ಚಳುಕ್ಯ, ಚಲಿಕ್ಯ, ಚಳಿಕ್ಕ, ಚಳುಕಿ$_1$, ಚಟಿಕ್ಯ, ಚಾಳೋಕ್ಯ, ಸಳುಕಿ** (ನಾ). = ಚಾಲುಕ್ಯ: ಸತ್ಯಾಶ್ರಯವೆಸರೆಸೆದುದಾ ಚಳುಕ್ಯಾನ್ವಯದೊಳ್ (ಕಇಅ. ೨-೨-೨೦ ; 1058). **ಚಲಿಕ್ಯ** : ಚಲಿಕ್ಯೋ ವಲ್ಲಭೇಶ್ವರಃ (ಎಇ. XXVII, ೮-೩; 543). **ಚಳಿಕ್ಕ**: ಸಮಜನಿ ನವಮಸ್ತಸ್ಯ ರಾಜ್ಞಶ್ಚಳಿಕ್ಕ ಕ್ಷ್ಮಾಪ (ಎಕ. VII, ಶಿವಮೊ. ೮೩-೧೪ ; 1587). **ಚಳುಕಿ$_1$** : ಚಳುಕಿ ವಂಶೋತ್ತಮರಂ (ಎಇ. XVI, ೩೮-೫: 1107). △ **ಚಟಿಕ್ಯ** : ಚಟಕ್ಯರನ್ವಯಂ ನೆಗಳೆ ನಗಳ್ತೆಯಂ ತಳೆದು ತಂನಯ ತೇಜದೊಳಾಣೆಯೋಲೆಯುಂಡಿಗೆ ಸಲೆ ಸಾಧ್ಯವಾದ ನೆಲನಂ ತಳೆದಂ ನೃಪಮೇರುತೈಲಪಂ (ಕಇಅ. ೯೫-೪-೯ ; 12ನೆಯ ಶತ). **ಚಾಳೋಕ್ಯ**: ನನ್ನಿಯಂ ಪೇಳುವೆನರಸ ಕೇಳಿನ್ನು ಚಾಳೋಕ್ಯಾನ್ವಯದವರು ಮುನ್ನ ನಿಕ್ಷೇಪಿಸಿದುದೆಂಬತ್ತೆಂಟು ಕೋಟಿ ಧನ ನಿನ್ನ ಸಿಂಹಾಸನದ ಕೆಳಗಿದೆ (ಬಸಪು. ೫-೫೭). **ಸಳುಕಿ** : ವಿದಿತ ಶ್ರೀ ಸಳುಕಿ ರಾಜ್ಯ[ದೊ]ಳ್ (ಸೌಇಇ. XI-i, ೧೪-೧೫; 872).

[<ಸಂ. ಚಾಲುಕ್ಯ]

**ಚಳುಪು** (ನಾ). = ಚಳಕು$_1$ : (ಕ). [ ? ]

**ಚಳುಮ** (ನಾ). = ಚಳಕಂ$_1$ : ಯೋನಿಯೋನಿಯಲ್ಲಿ ಭೇದ ಚಳುಮ ರುಜಾ ಇತರ ತೋದ ನೋವು (ಬಾಹಟೀ. ೨-೧-೭೭ ವ). [ ? ]

**ಚಳುವಳಿ** 'ಚಳವಳ' ನೋ.

**ಚಳೆ$_1$** 'ತಳೆ$_4$' ನೋ.

**ಚಳೆ$_2$** 'ಚಿಲ್ಲ$_1$' ನೋ.

**ಚಳೆ$_3$** 'ಸೆಳೆ$_4$' ನೋ.

**ಚಳೆ$_4$** 'ತಟಿ' ನೋ.

**ಚಳೆ$_5$** (ನಾ). ೧. ಒಂದು ಬಗೆಯ ಬಟ್ಟೆ : ದೇವಾಂಗದ ಚಳೆಯ ಪಟ್ಟಿಯ ಪಟ್ಟಾವಳಿಯೆಕ್ಕಾರೋಹಣದ ಕಕ್ಕರವಟಯಿಗೆಯ ದುಗುಳದ ಪಾಗುಡಂಗಳಂ . . . ತೊಟ್ಟು (ಮಹಾನೀ. ೯-೪ ವ). ೨. ಚಿಕ್ಕಮಕ್ಕಳನ್ನಾಗಲಿ, ಅಶಕ್ತರನ್ನಾಗಲಿ ಎತ್ತಿಕೊಂಡು ಹೋಗುವುದಕ್ಕಾಗಿ ಬಳಸುವ ಬಟ್ಟೆ; ಜೋಳಿಗೆ : (ಕ).

**ಚಳೆಕೊಡು** 'ಚಳೆಗೊಡು' ನೋ.

**ಚಳೆಗೊಡು, ಚಳಿಕೊಡು, ಚಳೆಕೊಡು** (ಕ್ರಿ). ಸಿಂಪಡಿಸು; ಚಿಮುಕಿಸು ; ತಳಿಸು: ಕೇಸರಿಪೀತವ ಪಾಸಿ ಕಸ್ತೂರಿನೀರ ಪೋಸರಿಸದೆ ಚಳೆಗೊಡುವ (ಅನಂಚ. ೫-೫೭); ಕಸ್ತೂರಿಯಾ ಜಲದಿಂದೆ ಚಳೆಗೊಟ್ಟು (ನವಮೋ. ೧೦-೭೮): ಸಾರಣೆಯನೇ ಹಾಕಿ ಚಳೆಗೊಟ್ಟು ರಂಗವಲ್ಲಿಯನಿಟ್ಟು (ಮಲ್ಲಜ. ೨-೧೫). **ಚಳಿಕೊಡು** : ಅಂಗಳ ಸಾರಿಸಿ ಗಂಧದ ಚಳಿಕೊಟ್ಟು (ಲೋಕಗೀ. ೨೦೫). **ಚಳೆಕೊಡು** : (ಕ). [ಚಳೆ$_1$ (< ತಳೆ$_4$) + ಕೊಡು$_1$]

**ಚಳೆಯು$_1$, ಚಳಯು$_1$, ಚಳಿಯ, ಛಳಯ, ಛಳೆಯು$_1$** (ನಾ). (ನೆಲವನ್ನು ಗುಡಿಸಿದ ಬಳಿಕ)ನೀರು ತಳಿಯುವುದು,-ಸಿಂಪಿಸುವುದು,-ಚಿಮುಕಿಸುವುದು : "ಚಳಿಯಮನೆ ನೀರ ತಳಿದುದು" (ಭಾರನಿ. ೧೧) : "ಚಳೆಯುಮುಮೆನೆ ಸಿಂಪಿಸುವುದಕ್ಕಂ" (ಕವಿಕಂ. ೨೧೬) ; ಎಳೆದಳಿರ ಹಸೆ ಪನ್ನೀರ ಚಳೆಯ ಮೆಚಿದವಾ ಶೈತ್ಯಶಾಲೆಯೊಳಗೆ (ಹದಕಾ. ೩-೪೫) ; ಕತ್ತುರಿನೀರ ಚಳೆಯದೊಳಂ (ಪುಷ್ಪಪು. ೮-೩೦ ವ) ; ಚಂದ್ರಕಾಂತದ ಜಲದ ಚಳೆಯಮಂ ಕೊಟ್ಟು (ಸೌಂದಪು. ೮-೨೦) ; ಚಳೆಯದಿಂ ಚೆಲ್ಲಿದ ಚಂದನರಸದಿಂದ ಪೊಳಲು ಕಣ್ಗೆಸೆದುದು (ಕುರಾಸಾಂ. ೪೦-೬೬) ; ಮೇಗಣೆಂದುದಿರ್ವ ಕಮ್ಮಲರ್ಸರಿಯ ಪನ್ನೀರ್ಚಳೆಯದ . . . ಅಗಜೆಯಿರ್ಪೆಡೆ ಮೆಚಿದುದು (ನಂದಿಮಾ. ೭-೩). **ಚಳಯು$_1$** : "ಜಲಸೇಚನಂ ಚಳಯಮೆನಿಕುಂ" (ಕಶಶ. ೧೨೩) ; ಪುಷ್ಪರಸದ ಚಳಯಂಗಳೆನೆ ಮೈಸಿರಿಯನಾಂತ ತದ್ವನದೇವಿ (ಸೌಂದಪು. ೧೮-೩೨) ; ಪನಿನೀರೊಳೊದವಿದ ಚಳಯವೊಪ್ಪಿದುದು (ವರ್ಧಪು. ೫-೪೩). **ಚಳಿಯ** : ಬೀದಿಬೀದಿಯೊಳ್ ಬಿಡದಿತ್ತ ಪನ್ನೀರ ಚಳಿಯ ವಾಡುವ ಪಾತ್ರದ (ಚಬಪು. ೩೬-೦೭). **ಛಳಯ** : ಅರಳಿದ ಹೂವುಗಳಲ್ಲಿ ಸುರಿವ ಮಕರಂದದಿಂದ ವನಪ್ರದೇಶವೆನುವ ಬೀದಿಯೊಳ್ ಛಳಯಮಂ ಕೊಟ್ಟು (ಸೌಗಂಧಿ. ೪೭೨-೧). **ಛಳೆಯು$_1$** : ಬಾವನ್ನಮಂ ಕದಡಿ ಸಿಂಪಿಸುವ ಛಳೆಯದಿಂ (ನಳಚಂ. ೧೯೫) ; ಹರುಷದಿಂ ಗುಡಿಗಟ್ಟಿ ವೀಥಿವೀಥಿಯಲಿ ಛಳೆಯದಿ ರಂಗವಲಿಗಳಿಂದ ವಿರಚಿಸಲು (ಲಶಿಚಂ. ೩೬-೫೦) ; ಪನ್ನೀರ ಬಾವನ್ನದೆಸೆವ ಛಳೆಯಂ ಮೃಗಮದೋನ್ನತದ ಸಾರಣೆಯು (ರಾಘಚ. ೪-೫). [ ಚಳಿ$_1$ (<ತಳಿ$_4$) + - ಅ$_6$ ]

**ಚಳೆಯು$_2$** 'ಚಳಯು$_2$' ನೋ.

**ಚಳೆಯು$_3$** 'ತಟಿ' ನೋ.

**ಚಳೆಯುಂಗುಡು** 'ಚಳೆಯುಂಗೊಡು' ನೋ.

**ಚಳೆಯುಂಗೆಯ್** (ಕ್ರಿ) .=ಚಳೆಗೊಡು: ತಂಗೆ ತಲೆವೀದಿಯಂ ತೊಡೆಯದಿರು ಕೂಡೆ ಚಳೆಯುಂಗೆಯ್ದಲಂಕರಿಸು (ಹದಕಾ. ೪-೨೪). [ ಚಳೆಯು$_1$ + ಕೆಯ್$_1$ ]

**ಚಳೆಯುಂಗೊಡು, ಚಳಯುಂಗುಡು, ಚಳಯುಂಗೊಡು, ಚಳಯಗೊಡು, ಚಳೆಯುಂಗುಡು, ಛಳೆಯುಂಗೊಡು**(ಕ್ರಿ). = ಚಳೆಗೊಡು : ಚಳೆಯುಂಗೊಡುವವೋಲೆಸೆದುದಾ ಚಟುಕುವನಿ ಸಿದ್ಧಪತಿ ನಲಿಯಲು (ಸಿದ್ಧರಾ. ೩-೩೨) ; ಕೇರಿಕೇರಿಯೊಳು ಪನ್ನೀರಿನಿಂದರರೆ ಚಳಿ [ಪಾಠಾಂ. ಳೆ] ಯುಂಗೊಟ್ಟು (ಸಿದ್ಧೇಪು. ೧೯-೧೪). **ಚಳಯುಂಗುಡು** : ಚಲ್ಲಂ ಚಳ [ಪಾಠಾಂ. ಳೆ]ಯುಂಗುಡುತ್ತುಮಿರೆ ರಾಗರಸಾಮೃತದಿಂ (ಅರ್ಧನೇ. ೨-೯೫); ಘುಸೃಣರಸಂಗಳಿಂ . . . ಚಳಯುಂಗುಡುತಿರ್ಪ ಮೌಕ್ತಿಕಪ್ರಸರದೆ ಕೂಡೆ ರಂಗವಲಿಯಂ ನಲಿದಿಕ್ಕುತುಂ (ವರ್ಧಪು. ೧೩-೭೪). **ಚಳಯುಂಗೊಡು** : ಅನಿಮಿಷವಧು ಕತ್ತುರಿಗದಡಿನ ಚಳಯುಂಗೊಟ್ಟಳ್ (ಅನಂಪು. ೬-೪೬). **ಚಳಯಗೊಡು**: ಚಳಯಗೊಟ್ಟುದು ಲೇಸು ಕುಸುಮಾಜಿ ಹೊಸರಂಗವಲಿ ಲೇಸು ಕುಸುಮಾಂಗಿ (ಭರಚ. ೧೦-೯). **ಚಳೆಯುಂಗುಡು** : ಜೋಳಿಸುವ ಲಾಲಾಜಲಂ ಖುರಹತಿಯಿಂ ನೆಗೆವ ದೂಳ್ಗೆ ಚಳೆಯುಂಗುಡೆ (ಗಿರಿಕ. ೬-೫೫ ವ); ಘುಸೃಣರಸಂಗಳಿಂದೆ ಚಳೆಯುಂಗುಡುವಂತೆ (ಅನಂಪು. ೧೦-೩೫). **ಛಳೆಯುಂಗೊಡು** : ಪುನುಗು ಜವಾದಿ ಜಲದೀಯುಲ್ಲ ಪೊರವಳೆಯುಂಗಣದಿ ಛಳೆಯುಂಗೊಟ್ಟು (ನವಮೋ. ೨೧-೧೪). [ ಚಳೆಯು$_1$ + ಕೊಡು$_1$ ]

**ಚಳೆಹಾಕು** (ಕ್ರಿ). = ಚಳೆಗೊಡು : ಅಂಗಳಕ್ಕೆಲ್ಲ ಚಳೆಹಾಕಿ ರಂಗವಲ್ಲಿ ಇಟ್ಟಿದ್ದಾರೆ (ರೂಢಿ). [ ಚಳೆ$_1$ (<ತಳಿ$_4$) + ಹಾಕು (<ಪಾಯ್ಕು$_1$) ]

**ಚಳೆಹೊಡೆ** (ಕ್ರಿ) .=ಚಳೆಗೊಡು: ಮತ್ತೆ ಕೆಲವರು ಬೀದಿಗಳಿಗೆ ಪನ್ನೀರಿನ ಚಳೆ ಹೊಡೆಯುತ್ತಲಿದ್ದರು (ದೇಯಾನಿ. ೦೫೦).

[ ಚಳೆ$_1$ (<ತಳಿ$_4$) + ಹೊಡೆ$_1$ (<ಪೊಡೆ$_1$) ]

**ಚಳ್ಳ** 'ಸೆಳ್ಳ' ನೋ.

**ಚಳ್ಳಪಿಳ್ಳಿ, ಚಳ್ಳೆಪಿಳ್ಳೆ** (ನಾ). ಒಂದು ಬಗೆಯ ಮಕ್ಕಳಾಟ : ಚೆಳ್ಳಿ ಬಂಗಾರಿಟ್ಟುಕೊಂಡು ಒಳ್ಳೆ ವಸ್ತ್ರ ಹೊದ್ದುಕೊಂಡು ಚಳ್ಳಪಿಳ್ಳಿ [ಪಾಠಾಂ. ಅಳ್ಳಿಂಚೀರ, ಆಳ್ಳಾಚಾರಿ]ಗೊಂಬೆಯಂತೆ ಆಡಿಹೋಯಿತು (ಕನಕ. ೧೧೭-೩). **ಚಳ್ಳೆಪಿಳ್ಳೆ** : "ಮಕ್ಕಳ ಆಟ" (ಜಾನಕೋ. ೫೫). 'ಚಿಳ್ಳೆಪಿಳ್ಳೆ' ಪರಾ. [ ? ]

**ಚಳ್ಳವರೆ** (ನಾ). (ಉಕ) ಒಂದು ಬಗೆಯ ಸಸ್ಯ ಮತ್ತು ಅದರ ಕಾಯಿ; ಹಿತ್ತಲವರೆ ; ಚಪ್ಪರದವರೆ : ಔಡಲಗಿಡಗಳ ಬೊಡ್ಡೆಯಲ್ಲಿ ಚಳ್ಳವರೆಯ ಬೀಜವನ್ನು ಹಾಕಿ ಆ ಬಳ್ಳಿಯನ್ನು ಔಡಲಗಿಡಗಳಿಗೆ ಹಬ್ಬಿಸಬೇಕು (ಕೃಷಿಪ್ರ. ೧೫೫) ; ನಾನೇನು ನಿಮ್ಮ ತೋಟದಲ್ಲಿ ಬೆಳೆದ ಬದನೆ ಕಾಯಿಯೇ ಚಳ್ಳವರೆಯೇ (ಇಪ್ಪಕ. ೨೦೫). [ ಚಳ್ಳು (<ಸೆಳ್ಳು) + ಅವರೆ$_1$ ]

**ಚಳ್ಳಿಸು** 'ಚಲ್ಲಿಸ್ಸು' ನೋ.

**ಚಳ್ಳು** 'ಸೆಳ್ಳು' ನೋ.

**ಚಳ್ಳುಗುರ್** 'ಸೆಳ್ಳುಗುರ್' ನೋ.

**ಚಳ್ಳುಗುರು** 'ಸೆಳ್ಳುಗುರ್' ನೋ.

**ಚಳ್ಳೆ** 'ಸೆಳ್ಳ' ನೋ.

**ಚಳ್ಳೆಕೆಂದಾಳ** (ನಾ). ಒಂದು ಬಗೆಯ ಮರ : ಚಳ್ಳೆಕೆಂದಾಳ, ಕೆಂಪುಚಳ್ಳಿ (ಮೃತಿಗಿ. ೨೪-೪೫೫). [ ? ]

**ಚಳ್ಳೆಪಿಳ್ಳೆ** 'ಚಳ್ಳಪಿಳ್ಳಿ' ನೋ.

**ಚಱಪು** 'ಸೆಱಪು' ನೋ.

**ಚಱಿಂಗಯ್ಯ** (ನಾ). ಒಬ್ಬಾತನ ಹೆಸರು : ಮಲ್ಲಿಸೇನಭಟಾರರ ಗುಡ್ಡಂ ಚಱಿಙ್ಗಯ್ಯಂ ತೀರ್ತ್ಥಮಂ ಬನ್ದಿಸಿದಂ (ಎಕ. II, ೪-೧ ; ಸು. ೨೦೦). [ ? ]

**ಚಱಿತ್ತಿ** (ನಾ). ಒಬ್ಬಾಕೆಯ ಹೆಸರು : ಮಾರವರ್ಮ್ಮಸ್ವಾಮಿಗೆ ಸುನ್ದರಿ ಚಱಿತ್ತಿಯರಾ ದೇಗುಲಂ ಮೂದೆಯ್ವುದಾ ವೃತ್ತಿಯುಂ ಸರ್ವ್ವಪರಿಹಾರು ವಿಟ್ಟಾರ್ (ಎಕ. VI, ಚಿಕ್ಕಮ. ೯೨-೪ ; ಸು. 750 ?). [ ? ]

△ **ಚಟಿಕ್ಕ** 'ಚಳುಕ್ಕ' ನೋ.

**ಚಟುವಟಿ** (ನಾ). ಪ್ರತಿಜ್ಞೆ (?) : ಸಾಸಿಗ × × × ಪಱಿಯರೊಡೆಯ × ಜಿವೆಡೆಯವ್ಮಂ ಹರಿತ್ತನ ಕುಮಾರಂ ಚಟುವಟಿ ಪೊಡದು ನುಡಿದು ಮತ್ತೆನ್ನದಾತನ್ ನುಡಿವಕ್ಕು (ಸೌಇಇ. IX-i, ೨೨-೧೧ : 923). [ ? ]

**ಚಾ$_1$** (ನಾ). ೧. ಒಂದು ಅನುಕರಣ ಧ್ವನಿ : ಇದ್ದರೆಲ್ಲರ ಕೂಡಿಕೊಂಡು ಎದ್ದನು ಯುವರಾಜನೆಡೆಗೆ ಚಾ[ಪಾಠಾಂ. ಬಾ] ಹೋಯೆನೆ ಗೆದ್ದನು ಜಗದ ಜಾಣರನು (ಭರಚ. ೫೬-೮೫). ೨. ದನಕರುಗಳನ್ನು ಅಥವಾ ಮೇಕೆಗಳನ್ನು ಮುಂದಕ್ಕೆ ಹೋಗುವಂತೆ ಅಟ್ಟುವಾಗ ಬಳಸುವ ಧ್ವನಿ : ಹುಡುಗನು ಚಾ ಎಂದು ಎತ್ತುಗಳನ್ನು ಹೊಡೆದುಕೊಂಡು ಹೋಗುತ್ತಾನೆ (ರೂಢಿ).

**ಚಾ$_2$** 'ಚಹ' ನೋ.

**ಚಾಂಕಿಮಯ್ಯ** (ನಾ). ಒಬ್ಬಾತನ ಹೆಸರು : ಚಾಂಕಿಮಯ್ಯನ ಮಾಡಿಸಿದ ಶ್ರೀಶಾಂತಿನಾಥದೇವರ ತ್ರಿಭುವನತಿಲಕ ಚೈತ್ಯಾಲಯದಲಿರ್ಪ್ಪ ರಿಶಿ(ಷಿ) ಯರ್ (ಇಆ. XIX, ೨೭೩-೩೫ : 1054). [ ಚಾಂಕಿಮ$_0$+ಅಯ್ಯ$_1$ ]

**ಚಾಂಗಾಳ್ವ** 'ಚಂಗಾಳ್ವ' ನೋ.

**ಚಾಂಗು, ಚಾಗು, ಚಾಂಗು, ಜಾಗು$_3$** (ಅ). ಭಲೆ, ಭೇಷ್, ಭಾಪು ಎಂಬರ್ಥದ ಹೊಗಳಿಕೆಯ ಮಾತು,-ಕೊಂಡಾಟದ ನುಡಿ: ಇಂದಿನ್ನ ಮನೆಗೆ ಪ್ರಮಥರು ಬಂದಹರೆಂದು ಗುಡಿತೋರಣವ ಕಟ್ಟಿ . . . ರಂಗವಾಲಿಯನಿಕ್ಕಿ ಉಘೆ ಚಾಂಗು ಭಲಾ ಎಂಬೆ (ಬಸವ. ೩೬೬) ; ಉಗೆ ಚಾಂಗು ಬಲಯೆಂಬ ನೆಗೆವ ರಭಸಂಗಳೊಳು(ದೀಕ್ಷಾಬೋ. ೧೦೭-೭) ; ಚಾಂಗು ಬಲಾಯೆನಲು ನಂದಿಧ್ವಜವುಜವು (ಬಸಪು. ೫-೩೯) ; ಜಯ ಜಯ ಚಾಗು ಬೊಲ್ಲೆಂಬ ರಭಸದಿಂ ಕೀರ್ತಿಸುತ್ತ (ವೀಶೈಪು. ೪-೦೨-೪೫) ; ಪಾದವಚ್ಚಟಿಕೆ

ಪರಾಕು ಚಾಂಗೆಂದು ಮುಂದೋದೆ ಕೈಸನ್ನೆಯೊಳ್ನಿಲಿಸಿ . . . . ಪಾಡುವ ನಾದವ ನಿಲಿಸಿಯೆಯ್ದಿದನು (ಭರಚ. ೪೯-೯). **ಚಾಗು:** "ಅರರೆ ಧಣು . . . ಚಾಗು ಸಲೆ ಸುಂಪುರೆಯೆನೆ ಕೊಂಡಾಟದ ನುಡಿ" (ಭಾರನಿ. ೪೭); ಮರುಘ ಪೂತು ಪಾಯಕು ಗಂಡುಗಲಿಯಹೆ ಚಾಗು ತೊಟ್ಟೆಸು (ಕು ವ್ಯಾ, ಭೀ. ೧೦-೧); ಎಲ್ಲರುಂ ಪೂತುರೇ ಸುಭಟ ಚಾಗೆಂದುಲಿಯೆ ಕೋಪದಿಂ ಗುಹನಾರ್ದು ತೆಗೆದೆಚ್ಚನು (ಚಿಬಪು. ೪೩-೧೭); ಚಾಗು ದಣುದಣು ಭಾಪು ಭಳಿರೆ ಬಲ ಬಲರೆ ಕೇಳೀಗ ನಿನ್ನಂ ಪೋಲ್ವರಂ ಕಾಣೆನು (ರುಕ್ಮಾಂಗ. ೧೩-೭೩). **ಜಾಂಗು:** ಸಭೆಯೊಳುಣ್ಮೆ ಪೊಣ್ಮೆತ್ತು ಜಾಂಗು ಬೊಲ್ಲ ಶುಭ ಬೊಲ್ಲ ಮಾಂಗಳಿಕ ಬೊಲ್ಲಮೆಂಬೀ ರವಂ (ಜಗವಿ. ೧೧-೭೨) ; ಕರಿಗಮನೆಯರು ತಂದರು ರತ್ನ ಮಯ ಹೊನ್ನ ಹರಿವಾಣ ದುಂಬಿದಾರತಿಯ ತಿರುಹಿ ನಿವಾಳಿಸಿ ಜಾಂಗು ಬೊಲ್ಲೆಂದೆಂದು ಸಿರಿವೆತ್ತು ನಿಂದರಿಕ್ಕಲದಲಿ (ಮೋಹತ. ೨೨-೧೩). **ಜಾಗು₂:** "ಅರರೇ ಭಾಪುರೆ . . . ಜಾಗುಮಾ ಧಣು ಧಿರುರೇ ಪುರೆಯೆನೆ ಕೊಂಡಾಟಂ" (ಚತುನಿ. ೫೫); ಜಾಗು ಧಣು ಧಣು ಪೂತು ಕಾರ್ಮುಖಿ ಯೋಗಸಿದ್ಧನೆ (ಕುವ್ಯಾ.ಆ. ೧೫-೨೯); ಸೊಲ್ಲಿಸಿದರು ಜಾಗು ಬೊಲ್ಲು ಶಬ್ದವ ಕೆಂಬಲ್ಲ ತಳಿಗೆ ಗಾರ್ತಿಯರು (ಮೋಹತ. ೧೫-೩೭).

**ಚಾಗುಚಾಗು, ಜಾಗುಜಾಗು** (ದ್ವಿರುಕ್ತಿ): ತಾನೊಹಿಸಿಕೊಳೆ ಸದರ ಗಂಡನೆ ಚಾಗುಚಾ[ಪಾಠಂ. ಜಾಗುಜಾ]ಗೆನುತೆ (ಮದೀಪು. ೩-೫೫); ಸುಭಟ ರಹುದೋ ಜಾಗುಜಾಗೆನುತೊಲೆದನಾ ದ್ರೋಣ (ಕುವ್ಯಾ.ದ್ರೋ. ೨-೧೧); ಜಾಗುಜಾಗೆಂದಸುರ ಖಾತಿಯೊಳುಬ್ಬಿ ಘರ್ಜಿಸಿದ (ಅಂಬಿಕಾ. ೧೫-೨).

[ ←ತೆಲು. ಜಾಂಗು. / ಮರಾ. ಜಾಂಗ ]

**ಚಾಂಗೇರಿ** (ನಾ). ಒಂದು ಬಗೆಯ ಸೊಪ್ಪು: ಹುಲ್ಲುಹುಳಿಗನ ಸೊಪ್ಪು: ಪುಲ್ಲಂಪುರುಚೆ : (ಕ). [ ಸಂ. ಚಾಂಗೇರೀ ]

**ಚಾಂಚಲ್ಯ** (ನಾ). ಚಂಚಲತೆ : ಅಸ್ಥಿರತೆ : ಕುದುರೆಗಳೆರಡೂ ಚಾಂಚಲ್ಯ ತೋರಿದವು (ಇಪ್ಪಕ. ೩೨೧). 'ಚಿತ್ತಚಾಂಚಲ್ಯ' ಪರಾ. [ ಸಂ. ]

**ಚಾಂಡಾಲ, ಚಾಂಡಾಳ** (ನಾ). ಚಂಡಾಲ : ಹೀನ : ಕರ್ಮಾಧಿಗತ ಚಾಂಡಾಲರಿವದಿರ ಮಾತುಗಳನೆಲೆ ನಂಬದಿರು ಭೂಪ (ಬಸಪು. ೫೭-೫೧); ಏಕಗೋತ್ರದ ಪುರುಷಸತಿಯರಜ್ಞಾನದಿಂದಾ ನೆರೆದಲ್ಲಿ ಪುಟ್ಟಿದಂ ಚಾಂಡಾಲನೈ (ವೀಶೈಪು. ೭-೨-೨೧). **ಚಾಂಡಾಳ:** ಇದನಳಿದಾತಂಗಕ್ಷಯ ನರಕಂ ನಿಜವಂಶಕ್ಷಯವಾತಂ ಧರಿತ್ರಿಯೊಳು ಚಾಣ್ಡಾಳ (ಸಾಇಇ. XX,೧೦೭-೫೦; 1138). [ಸಂ.]

**ಚಾಂಡಾಲಗಿತ್ತಿ** (ನಾ). ಹೊಲತಿ : ಪಂಚಮಸ್ತ್ರೀ : ಕೀಳು ವರ್ಗದ ಹೆಂಗಸು : ಕಂಡಕಂಡವರ ಹಿಂದೆ ಹರಿವ ಚಾಂಡಾಲಗಿತ್ತಿಯಂತೆ (ಗಣಭಾ. ೨೮೯-೧). [ ಚಾಂಡಾಲ + – ಗಿತ್ತಿ ]

**ಚಾಂಡಾಲತ್ವ** (ನಾ). ಹೊಲೆತನ: ಪಂಚಮ ವರ್ಗಕ್ಕೆ ಸೇರಿರುವಿಕೆ : ಉತ್ತಮದ ರವಿಕುಲದೊಳುದಿಸಿ ಚಾಂಡಾಲತ್ವವೆತ್ತ ಸತಿಯರ್ಗೆಳಿಸಿ ಘೋರ ನರಕಾಳಿಗನಿಮಿತ್ತ ಹೋಹವನಲ್ಲ (ಹಚಕಾ. ೮-೨೫). [ ಸಂ. ]

**ಚಾಂಡಾಲಪತಿ**(ನಾ). ಹೊಲೆಯರ ಪ್ರಮುಖ : ಪಂಚಮರ ಮುಖ್ಯಸ್ಥ: ಚಾಂಡಾಲಪತಿಯ ಮನವೊರ್ದೆಗೊಂಡು ಮನಃಪದ್ಮ ಮುಕುಳಮಂ ಸವಿವಳಿಯಂ ಕಂಡೊಡೆ ಮುನಿವಾ ನರರುಂ ಪೆಂಡಿರುದಾರತೆಗದೇಕೆ ಮುನಿವರೋ ದೇವಿ (ಶಾಂತಿಪು. ೯-೧೯೪). [ ಚಾಂಡಾಲ + ಪತಿ₂ ]

**ಚಾಂಡಾಲಿಕೆ** (ನಾ). ಕೀಳುದರ್ಜೆಯ ಒಂದು ಬಗೆಯ ವಾದ್ಯ.

[ ಸಂ. ಚಾಂಡಾಲಿಕಾ ]

**ಚಾಂಡಾಳ** 'ಚಾಂಡಾಲ' ನೋ.

**ಚಾಂಡಾಳಿಸು** (ಕ್ರಿ). ಚಂಡಾಲನಂತೆ ವರ್ತಿಸು : ಮದ್ಯಮಂ ಕುಡಿಕುಡಿದು ಮರುತಹತಿಯಿಂದ ಚಾಂಡಾಳಿಸುವ ಚಿತ್ತೈಯರನರಸ ನೋಡುತ ಬಂದನು (ಹಚಕಾ. ಪರಿ. ೪-೫೫). [ ಚಾಂಡಾಳ (= ಚಾಂಡಾಲ) + – ಇಸು₃ ]

**ಚಾಂತ** (ನಾ). ಚಕಾರವನ್ನು ಕೊನೆಯಲ್ಲಿ ಉಳ್ಳ ಶಬ್ದ : (ಕ).

[ ಚ + ಅಂತ₂ ]

**ಚಾಂತಿ** 'ಸಾಂತಿ' ನೋ.

**ಚಾಂದಣ, ಚಾಂದನಿ** (ನಾ). ಮೇಲ್ಕಟ್ಟು : ವಿತಾನ : ಛತ್ತು: ವಿಧವಿಧದಿ ಪಾಸಿ ಚಾಂದಣಗಳಂ ಕಟ್ಟಿ (ಕೃಷ್ಣವಿ. ೨-೯೦); ಹಡಗಿನ ಮೇಲ್ಗಡೆ ಚಾಂದಣ ಯನ್ನು ಕಟ್ಟಿದ್ದಿತಾದ ಕಾರಣ ಹಡಗಿನೊಳಗಿದ್ದ ಪ್ರಯಾಣಿಕರಿಗೆ ಯಾವುದೂ ಗೊತ್ತಾಗುತ್ತಿರಲಿಲ್ಲ (ಕಪಾಕುಂ. ೩). **ಚಾಂದನಿ :** (ಕ).

[ ←ಮರಾ. ಚಾಂದಣೀ ; ಹಿಂ. ಚಾಂದನೀ ]

**ಚಾಂದನಿ** 'ಚಾಂದಣ' ನೋ.

**ಚಾಂದಸ, ಚಾನಸ, ಛಾನಸ** (ಗು). ೧. ಸಂಪ್ರದಾಯನಿಷ್ಠ. (ನಾ). ೨. ವೇದಾಧ್ಯಯನ ಮಾಡಿದವನು; ವೈದಿಕ: ಛ ಕಾರಕ್ಕೆ ಚಕಾರಂ–ಛವಿ–ಚವಿ . . . ಛಾಂದಸ – ಚಾಂದಸ (ಶಮದ. ೨೫೫ ಪ್ರಯೋ). ೩. ಮಂದಮತಿ ; ದಡ್ಡ : ವರರತ್ನಘೋಷನ ಪರಿಯಲ್ಲ ವಿದ್ಯಾಸಾಗರನಾದ ವ್ಯಾಳಿಯಂತಲ್ಲಾ ಪರಮಚಾಂದಸನಾದನು (ಭೃರಸೂ. ೩೨೭). **ಚಾನಸ:** ೪. ಎಚ್ಚರವಿಲ್ಲದಿರುವಿಕೆ: ಅಜಾಗರೂಕತೆ: ಹುಲಿಯು ದುಷ್ಟಮೃಗ ವೆಂದು ತಿಳಿದಿದ್ದರೂ . . . ಚಾನಸದಿಂದ ಹುಲಿಯ ಬೋನಿಗೆ ಬಿದ್ದಿರುವ ಬಾಗಿಲ ಹಲಗೆಯನ್ನು . . . ಎತ್ತಿದನು (ಕಥಾಮಂ. IV, ೮೮). **ಛಾನಸ :** ೧. ಸ್ವಲ್ಪ ಛಾನಸ ಸ್ವಭಾವದ ಪದ್ದಕ್ಕನಿಗೆ ದೇವರು ದಿಂಡರ ಕೆಲಸಗಳನ್ನು ಎರಡನೆಯವರು ಮಾಡಿದರೆ ಎಷ್ಟೂ ಒಗ್ಗುತ್ತಿರಲಿಲ್ಲ (ಸಾವಿಲು. ೭೭). ೩. ಉರಿದುಮೀ ನಿಮ್ಮಯ ತಪೋಜಪ ಧ್ಯಾನಂಗಳಿರವದೇಂ ಛಾನಸಮದೊರ್ವ ಮಾಯಾವಿ ನಿಮ್ಮ ರಿಸಿಯರನೊಲಿಸಿಕೊಂಡೊಯ್ದಪಂ ಬಿಡಿಸಿಕೊಳಿ ಮೇಳೆಂದೊಜಿಲ್ದರಂದು (ಚಿಬಪು. ೨೦-೨೩). 'ಛಾನಸತನ' ಪರಾ.

[ <ಸಂ. ಛಾಂದಸ ]

**ಚಾಂದಸಿಕೆ** (ನಾ). ತಡಮಾಡುವಿಕೆ; ಆಲಸ್ಯ; ಜಡತೆ: ಚಾಟುಕಾತಿಯರು ಚಾಂದಸಿಕೆಯ ನೂಂಕಿ ಸಘಾಟಿಕೆಯಿಂದ ಪಾಡಿದರು (ಭರಚ. ೫-೫೮). 'ಛಾಂದಸಿಕ್ಕೆ' ಪರಾ.

[ ಚಾಂದಸ + – ಇಕೆ ]

**ಚಾಂದ್ರ** (ಗು). ೧. ಚಂದ್ರನಿಗೆ ಸಂಬಂಧಿಸಿದ. (ನಾ). ೨. ಮೃಗಶಿರಾ ನಕ್ಷತ್ರ. [ ಸಂ. ]

**ಚಾಂದ್ರಜ್ಞಾನಿ** (ನಾ). ಚಂದ್ರಮಂಡಲವನ್ನು ಕುರಿತು ವಿಶೇಷ ಜ್ಞಾನ ವುಳ್ಳವನು : ಚಂದ್ರಮಂಡಲದ ವಿಷಯದಲ್ಲಿ ವಿಶೇಷಜ್ಞಾನವುಳ್ಳ ಜ್ಯೋತಿರ್ವಿಜ್ಞಾನಿ ಅಥವಾ ನಾವಿಕ : ಚಾಂದ್ರಜ್ಞಾನಿ (Lunarian. ಇಂಕನಿ).

[ ಸಂ. ಚಾಂದ್ರಜ್ಞಾನಿನ್ ]

**ಚಾಂದ್ರಪ್ರಭ** (ಗು). [ಜೈನ]ಚಂದ್ರಪ್ರಭನೆಂಬ ತೀರ್ಥಂಕರನಿಗೆ ಸಂಬಂಧಿಸಿದ : ಕಣ್ಗೆಂಬಾದ ಚಾಂದ್ರಪ್ರಭಂ ರೂಪಂ . . . ಏಮ್ರೊಳ್ ಮಾಟಕ್ಕೆ ನೈರ್ಮಲ್ಯಮಂ (ಚಂದ್ರಪು. ೧-೧). [ ಸಂ. ]

**ಚಾಂದ್ರಮಸ** (ಗು) .=ಚಾಂದ್ರ. [ ಸಂ. ]

**ಚಾಂದ್ರಮಸಾಯನ** (ನಾ). ಚಂದ್ರನ ಮಗ: ಬುಧ: "ರೌಹಿಣೇಯಃ, ಬುಧಃ, ಸೌಮ್ಯಃ, ಚಾಂದ್ರಮಸಾಯನಃ – ಈ ೪ ಬುಧನ ಪೆಸರ್" (ಹಲಾಯು. ೯-೪೭). [ ಸಂ. ]

**ಚಾಂದ್ರಮಾನ** (ನಾ). ಚಂದ್ರನ ಗತಿಯನ್ನು ಅನುಸರಿಸಿ ಕಾಲವನ್ನು ಗಣಿ ಸುವ ಕ್ರಮ : ಚಂದ್ರನ ಗತಿಯ ಸಂಬಂಧದಿಂದ ಎಣಿಸಲ್ಪಡುವ ಪಕ್ಷ, ಮಾಸ, ವರ್ಷಗಳ ಮಾನವು ಚಾಂದ್ರಮಾನವೆಂದೆನಿಸಿಕೊಳ್ಳುತ್ತದೆ (ಮುಂಬಯಿ. ೭-೭೮); ಚಾಂದ್ರಮಾನದ ಮಧ್ಯಾಹ್ನದಲ್ಲಿ, ಚಂದ್ರನ ಭಾಗ ಸೂರ್ಯಾಭಿಮುಖವಾಗಿರುವುದರಿಂದ ಅದು ಕುದಿಯುವ ನೀರಿನಷ್ಟು ಕಾವುಳ್ಳದ್ದಾಗಿರುತ್ತದೆ (ಆಕಾಶ. ೩೯). [ ಸಂ. ]

**ಚಾಂದ್ರಮಾಸ** (ನಾ). ಚಾಂದ್ರಮಾನ ಕ್ರಮದಲ್ಲಿರುವ ಚೈತ್ರ, ವೈಶಾಖ ಮೊದಲಾದ ತಿಂಗಳು : ಈ ರೀತಿಯಾದ ಪರಿಕ್ರಮಣವೇ . . . ಆತನ ಕಲೆಗಳಿಗೆ ಕಾರಣವಾಗಿ, ಅವುಗಳಿಂದ ಚಾಂದ್ರಮಾಸವು ನಿರ್ಧಾರಿತವಾಗಿರುವುದು (ಜ್ಯೋತಿರ್ವಿ. ೨೦೨). [ ಚಾಂದ್ರ + ಮಾಸ₂ ]

**ಚಾಂದ್ರಾಯಣ** (ನಾ). ೧. ಚಂದ್ರನ ಗತಿ,-ಚಲನೆ ; ಚಂದ್ರನು ಕ್ಷಯಿಸುವುದು ಮತ್ತು ವೃದ್ಧಿಯಾಗುವುದು. ೨. ಚಂದ್ರನ ವೃದ್ಧಿ ಕ್ಷಯಗಳಿಗನುಸಾರವಾಗಿ ತಮ್ಮ ಆಹಾರವನ್ನು ಒಂದು ತುತ್ತಿನಿಂದ ಆರಂಭಿಸಿ, ದಿನಕ್ಕೆ ಒಂದೊಂದೇ ತುತ್ತು ಹೆಚ್ಚಿಸುತ್ತ ಆಮೇಲೆ ಕ್ರಮೇಣ ಒಂದೊಂದೇ ತುತ್ತು ಕಡಮೆ ಮಾಡುತ್ತಾ ಬರುವ ಒಂದು ವ್ರತ : ಪ್ರಿಯಕಾರಿಣಿಯುಂ . . . ಚಾಂದ್ರಾಯಣಮಂ ನೋಂತು (ಶಾಂತಿಪು. ೯-೧೪೪) ; ಅನುದಿನಂ ಭುಂಜಿಸಿದ ಶವದ ಶಿರದಕ್ಕಿಯಲ್ಲನಪೇಯ ಚಾಂದ್ರಾಯಣಂ (ಹರಿಕಾ. ೧೪-೭); ಅತಿಕೃಚ್ಛ್ರ ಚಾಂದ್ರಾಯಣ ಸಾಂತಪನಾದಿ ವ್ರತನಿಯಮದ ಪವಣಲ್ಲ (ಹರಿಬ. ೨-೧೩). ೧, ೨: ನೆಲೆಮಾಡ ದೊಳೆಡೆಯಾಡುವ ಕಲಹಂಸಾಲಸ ವಿಳಾಸವತಿಯರ ಮುಖಮಂಡಲಕೆ ಸರಿಯಾಗಲಾಜಿದೆ ಸಲೆ ಮಾಣ್ಬಂ ಚಂದ್ರನಿಂತು ಚಾಂದ್ರಾಯಣಮಂ (ಯಶೋಧ. ೦-೩೦). [ ಸಂ. ]

**ಚಾಂದ್ರಿ** (ನಾ). ಬುಧಗ್ರಹ: ಚಾಂದ್ರಿ ನೋಡೆ ಯಮಳ ಸ್ತ್ರೀಜನ್ಮಂ (ಜಾತತಿ. ೩-೧೩). [ ಸಂ. ]

**ಚಾಂಪೇಯ** (ನಾ). ೧. ಸಂಪಿಗೆ ; ಚಂಪಕ : ಧರೆಗೆಲ್ಲಂ ಸೊಗಸಂಬಳಿಕ್ಯೊದವಿ ಚಾಂಪೇಯಮೋರಂತೆ ಪಟ್ಟರಣಂಗಳ್ಗೆಯಪಥ್ಯಮಾದ ತೆಱದಿಂ (ಶ್ರೀಸೋಶ. ೭೫) ; ವಿಲಸಿತ ಚಾಂಪೇಯದ ಮೊಗ್ಗೆ ತುದಿಯೊಳು ನೆಲಸಿದ ತುಹಿನಾಂಬುವೆನಲು (ಜ್ಞಾನಚ. ೩-೭೦). ೨. ನಾಗಸಂಪಿಗೆ ; ನಾಗಕೇಸರ. ೩. ಚಿನ್ನ ; ಬಂಗಾರ. ೪. ಚಂಪಾದೇಶದ ರಾಜಪುತ್ರ ; ಕರ್ಣ : ಬಾಳ್ವ ವಸ್ತುಗಳೆಲ್ಲ ದಾನಕೆ ಸರಿಯು ಸರಿಮಾಡಿ ಕೀಳ್ವರಿಗೆ ಕೊಟ್ಟಮಲಕೀರ್ತಿಯೊಳಾಳ್ವ ಧರ್ಮೋದ್ಯೋಗದಲಿ ಕೃತ ಬಾಳ್ವನೀ ಚಾಂಪೇಯಗೆಣೆಯಾರೆಂದಲಿಂದುಮುಖಿ (ಜನಭಾ. ೧೯-೫೧). [ ಸಂ. ]

**ಚಾಂವ** 'ಚಾಮು' ನೋ.

**ಚಾಂವಯ್ಯ** (ನಾ). ಒಬ್ಬಾತನ ಹೆಸರು: ಜಟಾಸಿಂ[ಗ]ನಂದಿ ಆಚಾರ್ಯ್ಯರ ಪದವ ಚಾ[ಂ]ವಯ್ಯಂ ಮಾಡಿಸಿದೋಂ(ಕಇಇ. ೭೨-೭-೨; ಸು. 10ನೆಯ ಶತ). [ ಚಾಂವ (<ಚಾಮು) + ಅಯ್ಯ₁1 ]

**ಚಾಕ** (ಗು). ೧. ಅಚ್ಚುಕಟ್ಟಾದ; ಚೊಕ್ಕಟ ; ಚೊಕ್ಕ: (+). (ನಾ). ೨. ಚೊಕ್ಕತನವುಳ್ಳವನು : ಈ ಕಾಯಕ್ಕೆ ಬಂದವರ ಸಾಕುವೆನೆಂಬೊ ಮಹ ವ್ಯಾಕುಲದಲ್ಲಿ ತಿರುಗಿ ಚಾಕಾನಾಗದೆ ಪೋದೆ (ಮೋಕ್ಷದೀ. ೫೪-೧). [ ←ಮರಾ. ಚಾಕ್ ]

**ಚಾಕಗೌಡ** (ನಾ). ಒಬ್ಬಾತನ ಹೆಸರು: ಚಾಕಗೌಡ ಮಾಳಗವು[ಡ] ನಿಲಿಸಿದ (ಎಕ. VIII, ಸೊರಬ. ೭೨-೭: 1034 ?). [ಚಾಕ₀+ಗೌಡ (<ಗಾವುಂಡ)]

**ಚಾಕಚಕ್ಯ** (ನಾ). ೧. ಲಗುಬಗೆ ; ವೇಗ; ತ್ವರೆ : ಹೆಣ್ಣು . . . ಅತಿ ಮುಂದಾಗಿ ಚಾಕಚಕ್ಯದಿಂದ ನುಗ್ಗಬಾರದು (ಹಳ್ಳಿಬಾ. ೭೫); ಈ ಕೆಲಸವನ್ನು ಚಾಕಚಕ್ಯದಿಂದ ನೆರವೇರಿಸಿದ ಹೆಂಡತಿಯ ಬಗ್ಗೆಯೂ ಅವರಲ್ಲಿ ಅಸಮಾಧಾನ ಮೂಡಿತು (ಜಿವರಿ. ೫೭). ೨. ಚಾಣ್ಮೆ; ಚಾತುರ್ಯ ; ಕೌಶಲ: ಲೋಕ ನಾಯಕ ಶಿಕ್ಷೆ ರಕ್ಷೆಯು ಚಾಕಚಕ್ಯದೊಳಾರು ನೀನುಳಿದೇಕೆ ಸೆರೆವಿಡಿದಿರ್ಪೆ (ರಾಮಾಸಂ. ೦-೩-೦೪) ; ಅವಳು . . . ಅತ್ಯದ್ಭುತವಾದ ಚಾಕಚಕ್ಯದೊಡನೆ ಅಭಿನಯಿಸಲಾಗಿ, ಸಭೆಯಲ್ಲೆಲ್ಲೆಲ್ಲಿಯೂ ಭೇಷ್ ಭೇಷ್ ಎಂಬ ಜಯಜಯಕಾರವು ಹುಟ್ಟಲು (ಮೂಗ್ನು. ೫೦); ಎದುರಾಳಿಗಳನ್ನು . . . ದುಡುಮ್ಮನೆ ಪರಾಜಯಗೊಳಿಸುವ ಒಂದು ನೂತನ ಚಾಕಚಕ್ಯವಿದೆ ಅವರಲ್ಲಿ (ರಾಜವ. ೮೦). [ ಸಂ. ]

**ಚಾಕಚಕ್ಯತೆ** (ನಾ). ಚಾತುರ್ಯ ; ಚಾಲಾಕು : ಸಹೋದರನನ್ನು ಚಾಕಚಕ್ಯತೆಯಿಂದ ಮೂಲೆಗೊತ್ತಿಸಿ . . . ಔರಂಗಜೇಬ್ ಅಟ್ಟಹಾಸ ಮಾಡುತ್ತಿರುವ ಪರ್ವಕಾಲ (ದುರಂನಾ. ೩) ; ಉಡುಪಿನೊಳಗೆ ಬಹಳ ಚಾಕಚಕ್ಯತೆಯಿಂದ ಸೇರಿಸಿದ್ದ ವಜ್ರ, ನೀಲ . . . ನವರತ್ನಗಳು ಹೊರಬಿದ್ದುವು (ಪ್ರವಾಇ. II,೧೦); ನಾಲ್ಕುಜನರಿಗೆ ಹೊಂದಿಕೊಂಡು ಸರಿಯಾಗಿ ನಡೆಯುವ ಚಾಕಚಕ್ಯತೆಯೂ ಇತ್ತು (ಕುರುಕಾ. ೮೪). [ ಚಾಕಚಕ್ಯ + – ತೆ₃ ]

**ಚಾಕಣ** 'ಚಕ್ಕಣ' ನೋ.

**ಚಾಕರ** (ನಾ). ಆಳು; ಸೇವಕ; ನೌಕರ: ಅವಗೆ ಚಾಕರರಾಗಿ ನಾವಿರ್ದಿವನು ಭಾವಿಸಬಾರದು (ಜನಭಾ. ೪೭-೪೦) : ಒಡೆಯನಂತೆ ಚಾಕರ (ಮುಂಬಯಿ. ೪-೩೩) ; ಇವನಂತಿರುವ ಚಾಕರನು ದೇವರ ದಯದಿಂದಲೇ ನಮಗೆ ದೊರಕಿದನು (ವಾಗ್ಮೀವಿ. ೨). [ ← ಪಾರ. ಹಿಂ. ಮರಾ. ಚಾಕರ್ ]

**ಚಾಕರವಾನ** 'ಚಾಕರಿವಾನ' ನೋ.

**ಚಾಕರಿ** (ನಾ). ಊಳಿಗ ; ಸೇವೆ ; ನೌಕರಿ : ಚಾಕರಿಯ ಮಾಡಿದರೆ ಆಚೀಚೆಲಾಡುವರು (ಪುರಂದ. ೦-೧೪೮-೫) ; ತುರಗದ ಚಾಕರಿಯೊಳಿರುವವನಿಗೆ ತರುಣಿಯ ಭೋಗವು ಬೇಕೆ (ವಾದಿಕೀ. ೭೭-೧೧) ; ತಂತಮ್ಮ ಚಾಕರಿಯನ್ನು ಮಾಡಿದ ನೃಪಗೆ ತಾವು ಚಾಕರಿಯ ಮಾಡಿದರು (ಯುನಳ. ೯); ಕೆಲವರು ಚಾಕರಿ ಇಲ್ಲವೆ ದಿನಗೂಲಿ ಮಾಡಿ ಹೊಟ್ಟೆ ತುಂಬಿಕೊಳ್ಳುವರು (ಮುಂಬಯಿ. ೪-೧೩೪) ; ಸರ್ಕಾರದ ಚಾಕರಿಯನ್ನು ಸಂಪಾದಿಸಿಕೊಳ್ಳುವುದಕ್ಕೆ . . . ಹೋದರು (ದೇವೀಚಾ. ೩೩) ; ನ್ಯಾಯದ ಚಾಕರಿಯನ್ನು ಅವಳು ಈಗ ಬಿಟ್ಟುಬಿಟ್ಟಿರುವುದಾಗಿಯೂ . . . ಸರಕಾರಕ್ಕೆ ಅರ್ಜಿ ಕೊಡಲು ಸೂಚಿಸಿದರು (ಗಂಗಾಸಾ. ೧೭). [ ←ಪಾರ. ಹಿಂ. ಮರಾ. ಚಾಕರೀ ]

**ಚಾಕರಿದಾರ** (ನಾ). =ಚಾಕರ : ನಾನಂತೂ ಚಾಕರಿದಾರ ; ಕೇಳಲೇಬೇಕು (ನಮ್ಮಳ್ಳಿ. ೩೦). [ ಚಾಕರಿ + – ದಾರ₄ ]

**ಚಾಕರಿವಾನ, ಚಾಕರವಾನ** (ನಾ). =ಚಾಕರ : ಚಕ್ರವರ್ತಿಯಿಂದ ಚಾಕರಿವಾನನವರೆಗೆ ಎಲ್ಲರ ಮನೆಯ ವೃತ್ತಾಂತಗಳೂ . . . ಪ್ರತ್ಯಕ್ಷವಾಗಿ ಬಿಡುತ್ತವೆ (ಶ್ರೀಕಥ. ೭೭). **ಚಾಕರವಾನ** : ಖಾವಂದರಾದವರು ತಾವೆ ಯಿದಕ್ಕೆ ಸಾಹಸ ಮಾಡಿದರೆ ಚನ್ನವಲ್ಲದೆ ನಮ್ಮಂಥಾ ಚಾಕರವಾನರು ಮಾಡುವ ಕೆಲಸವಲ್ಲಾ (ಹೈದರ. ೭೫). [ <ಚಾಕರಿ ]

**ಚಾಕಲೆಟ್** 'ಚಾಕಲೇಟು' ನೋ.

**ಚಾಕಲೇಟು, ಚಾಕಲೆಟ್, ಚಾಕ್ಲೇಟ್** (ನಾ). ಕೋಕೋ ಬೀಜದ ಹಿಟ್ಟನ್ನು ಕಲಸಿ ಮಾಡುವ ಒಂದು ಬಗೆಯ ಸಿಹಿಯಾದ ತಿಂಡಿಯ ಬಿಲ್ಲೆ : ಚಾಕಲೇಟು ಬಹಳ ತಿನ್ನಲಿಕ್ಕೆ ಕೊಡಬೇಡಿರಿ (ಕುರಿಹಿ. ೦೩೨). **ಚಾಕಲೆಟ್** : ಇಂಗ್ಲೀಷ್ ಕೇಕ್, ಚಾಕಲೆಟ್ ಮುಂತಾದ ಅನೇಕ ಬಗೆಯ ತಿಂಡಿಗಳೂ . . . ಇಡಲ್ಪಟ್ಟಿವೆ (ಪ್ರಕಾಶ. ೧). **ಚಾಕ್ಲೇಟ್** : ಅವರಿಗೆಲ್ಲ ರಾಯರು ಈವರೆಗೆ ಅದೆಷ್ಟು ಚಾಕ್ಲೇಟ್, ಪೆಪ್ಪರಮಂಟ್ . . . ಕೊಟ್ಟಿದ್ದಾರೋ (ಕಂಬಹು. ೧೨೧). [ ←ಇಂ. Chocolate ]

**ಚಾಕಿ** (ನಾ). ಮೊಟ್ಟೆಯೊಡೆದು ಆಗ ತಾನೆ ಹೊರಬಂದ ರೇಷ್ಮೆ ಹುಳುವಿನ ಮರಿ.

**ಚಾಕಿಕಟ್ಟು** = ಮೊಟ್ಟೆಯಿಂದ ಆಗತಾನೆ ಬಂದ ರೇಷ್ಮೆಹುಳುವಿನ ಮರಿಗೆ (ಆಹಾರದ) ಸೊಪ್ಪು ಹಾಕು: ಚಾಕಿಕಟ್ಟುವುದಕ್ಕೆ ಹಿಪ್ಪೇನೇರಳೆ ಸೊಪ್ಪನ್ನು ಸಣ್ಣಗೆ ಕತ್ತರಿಸಿಟ್ಟುಕೊಳ್ಳಬೇಕು (ರೂಢಿ). [ ? ]

**ಚಾಕು** (ನಾ). ಕೊಯ್ಯುವ ಸಾಧನ ; ಚಿಕ್ಕ ಚೂರಿ : ಒಂದು ಹರಿತವಾದ ಚಾಕುವಿನಿಂದ ಕೀವನ್ನು ಹೊರಗೆ ತೆಗೆದು ಹಾಕಬೇಕು (ಗ್ರಾಮಾಕ. ೦೪೯) ; ಊಹಾಪೋಹಗಳು ತಮ್ಮ ಸರ್ಜರಿ ಚಾಕುಗಳಿಂದ ನನ್ನನ್ನು . . . ಕತ್ತರಿಸಿದುವು (ಎಮುಕ. ೭೫). [ ←ಪಾರ. ಹಿಂ. ಮರಾ. ಚಾಕೂ ]

**ಚಾಕುಸು** (ನಾ). ಒಂದು ಬಗೆಯ ಸಸ್ಯ ; ಆವರಿಕೆ ; ತಂಗಡಿ ; “ಆಹುಲೀ” (ಪಂಡಿತ). [ ? ]

**ಚಾಕ್ರಿಕ** (ನಾ). ೧. ಮೇಳದವರೊಂದಿಗೆ ಗಾಯನ ಮಾಡಿ ರಾಜನನ್ನು ಹೊಗಳುವವನು. ೨. “ಕಾಲವನ್ನು ತಿಳಿಸುವವರು” (ಅಮರ. ಟೀಕೆ). [ ಸಂ. ]

**ಚಾಕ್ಲೇಟ್** ‘ಚಾಕಲೇಟು’ ನೋ.

**ಚಾಕ್ಷುಷ** (ಗು). ೧. ಕಣ್ಣಿಗೆ ಸಂಬಂಧಪಟ್ಟ. (ನಾ). ೨. ಕಣ್ಣಿಗೆ ಕಾಣುವಂತಹುದು : ಅಕ್ಕರಂ . . . ವಿವಿಧಾಕಾರಂ ಲಿಪಿಭೇದವೃತ್ತಿಯಿಂ ಚಾಕ್ಷುಷಂ ಪುರಾತನ ಮತದಿಂ (ಶಮದ. ೩) ; ಕೆಲವು ಚಾಕ್ಷುಷಂಗಳ್ ಕೆಲವು ಅಚಾಕ್ಷುಷಂಗಳಪ್ಪುವು (ತತ್ತ್ವಪ್ರ. ೨೪೬). ೩. ಹದಿನಾಲ್ಕು ಮನುಗಳಲ್ಲಿ ಒಬ್ಬ. [ ಸಂ. ]

**ಚಾಕ್ಷುಷಪ್ರತ್ಯಕ್ಷ** (ನಾ). ಸ್ವತಃ ಕಣ್ಣಿಂದ ನೋಡಿ ತಿಳಿಯತಕ್ಕುದು : ಈ ವಸ್ತು ಕರಿದಿದು ಬಿಳಿದು ಎಂಬಿವು ಮೊದಲಾಗಿ ಪುಟ್ಟುವ ತಿಳಿವು ಚಾಕ್ಷುಷ ಪ್ರತ್ಯಕ್ಷಮೆನಿಪುದು (ಚಿಕಬಿ. ೩). [ ಚಾಕ್ಷುಷ + ಪ್ರತ್ಯಕ್ಷ ]

**ಚಾಕ್ಷುಷಿ** (ನಾ). [ವೀಶೈ] ಸಾಧಾರ ದೀಕ್ಷೆಯ ಐದು ಪ್ರಕಾರಗಳಲ್ಲಿ ಒಂದು ; ನೋಟದ ಮೂಲಕ ಕೊಡುವ ದೀಕ್ಷೆ: ಗುರು ತನ್ನ ನಯನಮಂ ಮುಚ್ಚಿ ಶಿಷ್ಯನ ನೋಡಿಯುಱಿದುಮಾಹ್ವಾನಮಂ ಮಾಡಿ ಮೋಕ್ಷವನೀವುದರರೆ ಚಾಕ್ಷುಷಿ (ವೀಶೈಪು. ೬-೬-೬೫); ವರದೇಶಿಕೇಂದ್ರನುರು ವಾಸುಭಕ್ತನಂ . . . ಕರ ಚೆಲ್ವ ದಿಟ್ಟಿ ಪೊರೆಯೇರೆ ನೋಡಲಾ ದುರಿತಾರಿ ದೀಕ್ಷೆಯಿರದಾಯ್ತು ಚಾಕ್ಷುಷೀ (ಹಾಲಾಸ್ಯ. ೪-೧೦-೪೩). [ಸಂ. ಚಾಕ್ಷುಷೀ]

**ಚಾಗ**$_1$, **ಜಾಗ**$_1$ (ನಾ). ೧. ಹಸಿರು ಬಣ್ಣ ; ಮರಕತ ವರ್ಣ : ಚಾ[ಪಾಠಾಂ. ಜಾ]ಗದ ಬಲ್ವಲಾದ ಪೊನಲಿಂ ಬಳೆದೊಪ್ಪುವ ನಾಳಿಕೇರದಿಂ (ಮಲ್ಲಿಪು.೨-೪೫). ಜಾಗ$_1$: ೧. “ಜಾಗಮೆಂದುಂ, ಪಸುರ್ಪೆಂದುಂ ಮರಕತ ವರ್ಣಂ” (ಕಶಸಾ. ೧೧-೨೧೯) ; ಜಾಗದ ನೆಲೆವಡಲಗೆಗಳ ಜಾಗಂಗಳ ಪಸುರ್ಗಳೆಸೆಯೆ (ಆದಿಪು. ೪-೩೧); ಜಾಗದ ಪೊನಲ್ ಕೃತಕಾಚಳ ನಿರ್ಜರಾಂಬುವೆಂಬಿನಿತಱಿನಾದ ಕೊಟ್ಟಿಗ್ಗಸಱಿಂ (ಪುಷ್ಪಪು. ೨-೪೦). ೨. ಪಚ್ಚೆ ಮಣಿ ; ಮರಕತ : ಜಾಗಂಗಳೆಸೆವ ಪಸುರ್ವೆಳಗುಂ ಪ್ರಜ್ವಳಿಪ ಮಣಿ ಸ್ತಂಭದ ಕೆಂಬೆಳಗುಂ ಪಸರಿಪುವು ಸುರಶರಾಸನಶತಮಂ (ಚಂದ್ರಪು. ೬-೫೧).

**ಚಾಗ**$_2$ (ನಾ). ತ್ಯಾಗ; ದಾನ: “ಚಾಗಂ ತ್ಯಾಗದೊಳಂ” (ಕರ್ಣಾನಿ. ೪೯) : ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯಲಂಪಿನಿಂಪುಗಳ್ಗಾಗರವಾದ ಮಾನಸರೆ ಮಾನಸರ್ (ಪಂಪಭಾ. ೪-೨೯); ರವಿನಂದನ ನನ್ನಿ ಚಾಗ[ಪಾಠಾಂ. ಸತ್ಯ]ಮಣ್ಮೆಂಬಿನಿತರ್ಕಂ ನೀನೆ ಮೊತ್ತಮೊದಲಿಗನಾದೈ (ಗದಾಯು.೫-೧೭): ಚಾಗದ ಪೆಂಪಿಂದಮೆ ಗಜ್ಜರಾಜನೆಸೆದಂ (ಎಕ. II, ೩೮೪-೧೯ ; ಸು. 1135).

**ಚಾಗಜಗಝಂಪ** = ತ್ಯಾಗ ಗುಣದಲ್ಲಿ ಲೋಕಪ್ರಸಿದ್ಧನಾದವನು ; ಒಂದು ಬಿರುದು : ಚಟ್ಟಭೂಪಂಗೆ ನೆಟ್ಟನೆ ಕೊಟ್ಟಂ ಧರೆ ಮೆಚ್ಚೆ ಚಾಗ ಜಗಝಂಪಂ ಝಂಪಳಾಚಾರ್ಯಂ (ಎಇ. XIII, ೩೦೨-೧೮ ; 1125).

**ಚಾಗವೆಡಂಗಿ** = ತ್ಯಾಗಗುಣದ ವೈಭವವುಳ್ಳವಳು ; ಒಂದು ಬಿರುದು : ನೆಗಟ್ದಳ್ ಜಗಕ್ಕೆ ವಿನಯಗುಣೈಕಾಸ್ಪದೆ ಸುಗ್ಗಿಯಬ್ಬೆ ತನಗೊಂದಿದ ಚಾಗವೆಡಂಗಿಯೆಂಬ ಪೆಸರೆಸೆವಿನೆಗಂ (ಕಾವ್ಯಾವ. ೧೬೧). [<ಸಂ. ತ್ಯಾಗ]

**ಚಾಗಂಗೆಯ್** (ಕ್ರಿ). ದಾನಮಾಡು : ಅಂತು ಚಾಗಂಗೆಯ್ದು ಜಗನ್ಮಂಗಳ ಗಂಗಾವಾರಿಯೊಳ್ . . . ಮಿಂದು (ಪಂಪಭಾ. ೯-೭೨ವ); ಲೇಸಪ್ಪ ವಸ್ತ್ರನಿಕರಮನೋಸರಿಸದೆ ಸೂಱೆಗೊಂಡು ಚಾಗಂಗೆಯ್ವಂ(ಧರ್ಮಾಮೃ. ೨-೩೩). [ ಚಾಗ$_2$ + ಕೆಯ್$_1$ ]

**ಚಾಗಗುಣ** (ನಾ). ದಾನಮಾಡುವ ಗುಣ; ದಾನಶೀಲತೆ: ಸುರಭೂರುಹಮುಮನಗ್ಗದ ಸುರಭಿಯುಮಂ ಚಾಗಗುಣದೊಳೆಮ್ಮರಸಂ ತ್ರಸ್ತರಿಯಾಡುವಂ (ಧರ್ಮಾಮೃ. ೪-೨೧೭). [ ಚಾಗ$_2$ + ಗುಣ ]

**ಚಾಗಟೆ** (ನಾ). ಒಂದು ಬಗೆಯ ಬಳ್ಳಿ : ಕುದುರೆಯ ರಿಕಾಪು ಚಾಗಟೆಯ ಬಳ್ಳಿಯೊಂದಕ್ಕೆ ತೊಡಕಿಕೊಂಡಿತು (ಹುಂಪಾ. ೬). [ ? ]

**ಚಾಗವಟ್ಟೆ** (ನಾ). ಒಂದು ಬಗೆಯ ಕೇದಗೆ ; ಹುಚ್ಚುಕೇದಗೆ : ಹುಚ್ಚುಕೇದಗೆ ಎಂದರೂ ಚಾಗವಟ್ಟೆ ಎಂದರೂ ಗಾಯದೆರಿ ಎಂದರೂ ಒಂದೇ ಪರ್ಯಾಯವು (ಕೃಷಿಪ್ರ. ೧೩೨). [ ? ]

**ಚಾಗವಿಕ್ಕು** (ಕ್ರಿ). ೧. ದಾನಮಾಡು ; ತ್ಯಾಗಮಾಡು. ೨. ಹೊರಚೆಲ್ಲು : ಮನದೊಳ್ತೀವಿರ್ದ ಮೋಹಾಮೃತರಸಮನೆ ಸರ್ವಾಂಗಮುಂ ಚಾಗವಿಕ್ಕುತ್ತೆನಿಸಲ್ ಘರ್ಮಾಂಬು ತಳ್ತೊಪ್ಪಲು (ಕಾದಂಬ. ೫೨೩). [ಚಾಗ$_2$+ಇಕ್ಕು]

**ಚಾಗಿ** (ನಾ). ತ್ಯಾಗಗುಣವುಳ್ಳವನು ; ದಾನಿ ; ದಾನಶೀಲ ; ಕೊಡುಗೈ. ಯಾತ : “ಚಾಗಿಯೆ ತಾಂ ತ್ಯಾಗಿ” (ಚತುನಿ. ೪೩) ; ನೊಟವ್ವುದೊಡ್ಡರು ವಿರ್ವ್ವಡಿ ಚಾಗಿಗಳಃ ಮಹಾದೇವರ ದೇಗುಲಮಂ ಮಾಡಿಸಿ (ಸೌಇಇ. IX-1, ೦೭-೧೬ ; 9ನೆಯ ಶತ) ; ಭಯಮಱಿಯದ ಕಲಿಯುಂ ಚಾಗಿಯುಮೆನಿಸದೆ . . . ಪಂದೆಯುಮಾಗಿ (ಪಂಪಭಾ. ೬-೭೩) ; ದೇವೋತ್ತಮ ನೀನೆ ಚಾಗಿವೆಸರಂ ಪಡೆದೈ (ಪಂರಾಮಾ. ೫-೩) ; ಚಾಗಿಗಳ ನಡುವೆ ಕಡುಚಾಗಿ ಸಂಗನ ಬಸವ (ಬಸರ. ೯-೮೩) ; ಚೋಳಕುಲಕಮಲಬಾಲಾರ್ಕನೆನಿಪ ಚಾಗಿ ಕುವರನನಿತ್ತು ರಕ್ಷಿಸನೆ (ಭಾವಚಿಂ. ೩-೩೨). [ < ಸಂ. ತ್ಯಾಗಿನ್ ]

**ಚಾಗಿಗುಣ** (ನಾ). ತ್ಯಾಗಮಾಡುವವನ ಗುಣ ; ದಾನಶೀಲತೆ : ಚಾಗಿಗುಣಂ ಧಾರಿಣಿಪತಿಗೋಗಡಿಸದೆ ವೈಶ್ಯಜಂಗೆ ಲುಬ್ಧಗುಣಂ . . . ಸಹಜಮಕ್ಕುಂ ಜಗದೊಳ್ (ಧರ್ಮಾಮೃ. ೧೩-೩೮). [ ಚಾಗಿ + ಗುಣ ]

**ಚಾಗಿಯಬ್ಬೆ** (ನಾ). ಒಬ್ಬಾಕೆಯ ಹೆಸರು : ಚಾಗಿಯಬ್ಬರಸಿಯು ಬೂತುಗನು ಬಿತ್ತುವಟ್ಟಮ ಕೊಟ್ಟ (ಎಕ. XV, ಅರಸೀ. ೨೩೭-೧೭ ; 971). [ ಚಾಗಿ$_0$ + ಅಬ್ಬೆ$_1$ ]

**ಚಾಗು** ‘ಚಾಂಗು’ ನೋ.

**ಚಾಗುರೆ, ಜಾಗುರೆ** (ನಾ). = ಚಾಂಗು : ಪೂತುರೇ ಹನುಮಂತ ಚಾಗುರೇ ಪೂತು ಮರುತಜ (ಕಾಶಿರಾ. ೨೭-೩೯); ಕಾದಿ ಮಿಗಿಲಪ್ಪ ವರವಂ ಚಾಗುರೇ ಪಡೆದೆ (ವೀಶೈಪು. ೩-೧೮-೪೦); ಭಳಿರೆ ಚಾಗುರೆ ಚಾಗು ಸಹಸಿಗಳು ಕೈವಾರಗಳನು ತೋರಲ್ಬಂದಿರೇ (ತುರಂಗ. ೫೮-೧೩) . **ಜಾಗುರೆ** : ಜಾಗುರೆ ಜಾಗು ಭಲರೆ ನುತ್ತಿರ್ಪವರ್ಕೆಲಬರು (ಅರಾಜ. ೮-೩೦). ಜಾಗುಜಾಗುರೆ (ದ್ವಿರುಕ್ತಿ): ಜಾಗುಜಾಗುರೆ ಕರ್ಣ (ಕುವ್ಯಾದ್ರೋ. ೧-೩೬). [ ? ]

**ಚಾಗೆ** ‘ಚೇಗೆ’ ನೋ.

**ಚಾಚಪುಟ** (ನಾ). [ಸಂಗೀತ] ತಾಳ ಕ್ರಮದಲ್ಲಿ ಒಂದು: ಸಮರಪ್ರಚಂಡಗೀತನಿ[ ನೃ ]ತ್ಯರತ ವಿತತಘನಶುಷಿರವಾದ್ಯಲಯ ಚಚ್ಚಪುಟ ಚಾಚಪುಟ ಪರಮೇಶ್ವರಮುಖಕಮಳ . . . ಬ್ರಹ್ಮವೀಣಾದಿ ಗೇಯ ಗಾಂಧರ್ಬ್ಬ[ ರ್ವ ] (ಕೊಲ್ಲಾಶಾ. ೨೨-೧೪ : 1257) ; ಎಸೆವೆರಡು ತಾಳಂಗೊಂಡು ಚಚ್ಚಪುಟವೆಂಬಿನಿಂ ಚಾಚು[ಚ]ಪುಟ . . . ಪ್ಲುತದಶಪ್ರಾಣವಱಿದೊತ್ತೆ (ಚೀರಮ. ೧೦-೩೩) ; ಚಚ್ಚುಪುಟದ ಚಾಚು[ಚ]ಪುಟದ ಸಾಂಬ್ರಾಣಿಯ ಕೆಚ್ಚು ಕೀಲಣೆಗಳನಱಿದು . . . ಪಾಡಿದರು (ಭರತ. ೧೨-೮೩). ‘ಚಚ್ಚಪುಟ’ ಪರಾ. [ ಸಂ. ]

**ಚಾಚತ್ಪುಟ** (ನಾ). = ಚಾಚಪುಟ : ಬಳಿಕ ಧ್ರುವ . . . ಏಕವೆಂಬ ಸಪ್ತತಾಳಭೇದಂಗಳಂ ಅವುಗಳೊಳು ಚಂಚತ್ಪುಟ ಚಾಚತ್ಪುಟ . . . ಜಯಾಳವೆಂಬಿವು ಮೊದಲಾದ ನೂಱೆಂಟು ತಾಳಂಗಳುಂ (ವಿವೇಕ. ೨೩೮). [ ಸಂ. ]

**ಚಾಚರೆ** (ನಾ). ಮುಂದಕ್ಕೆ ಚಾಚಿಕೊಂಡಿರುವ ಬಂಡೆ,–ಕಲ್ಲು : ಬಾನ್ ಬಟ್ಟೆಯಲೆವ ಬರ್ದಿಲರಾ ಚಾಚರೆಯೊಳೇಗಳುಂ ಕುಳಿತಿರ್ದ ಶಿಖರಗಾತ್ರದ ಪರ್ದುಮುದಿಯನಂ ಕಂಡು (ಶ್ರೀರಾಮಾ. ೩೬೩-೩೯). [ ಚಾಚು$_1$ + ಅರೆ$_2$ (<ಅಱೆ$_4$) ]

ಸಂಕೋಲೆ: ವಿಟಜನಕ್ಕೆ ತೊಡರ್ವ ಚಾರಿಯೆನಿಪ ಸೂಳೆಗೇರಿಯಿಂ ವಿದಗ್ಧ ಹೃದಯಹಾರಿಯಿಂ (ಪಂಪಭಾ. ೧-೫೮ ರಗಳೆ). ೪. ಅಗ್ಗದ ಬೆಲೆ; ಸುಲಭ ಬೆಲೆ : (ಕ). ೫. ಕಾಳಗದ ಒಂದು ವರಸೆ; ಯಂದ್ಧದ ಒಂದು ಬಗೆಯು ತಂತ್ರ ; ಉಪಾಯಂ : ಸುಳಿದರೆಡಬಲ ಚಾರಿಯುಲಿ ಚಾಪಳದ ಪಯ ಪಾಡಿನಲಿ (ಕುವ್ಯಾಗ. ೬-೨೨) ; ಕೇಣವಿಲ್ಲದೆ ಚಾರಿ ಚಳಕ ಚಾಳೆಯು ಚದುರ್ಪಾಣಿ ಲಾಘವ ಪಂಥ ಪಾಡುಗಳನಱಿದು (ಜೈಮಿಭಾ. ೨೨-೬). ೬. [ಸಂಗೀತ] ವಾದ್ಯವನ್ನು ನುಡಿಸುವ ಒಂದು ಕ್ರಮ್ಮ,-ಬಗೆ : ಬಹು ಲಯಭೇದದೋಜೆ ಗತಿಭೇದದೊಡಂ ಚಾರಿಭೇದ ದುರ್ವಹಿತೆ ತಗುಳ್ದ ಳಂಕರಣಭೇದದವರ್ಕೆ ನಿವಿರ್ಕೆಯಿಂ . . . ಹೃದ್ಯವಾದ್ಯಮಂ ಬಹಳಿಕೆ ವೆತ್ತು ಬಿತ್ತರಿಸಿ ಬಾಜಿಸಿದರ್ (ಪುಷ್ಪಪು. ೧೨-೨೬). ೭. [ನಾಟ್ಯ] ನರ್ತನದಲ್ಲಿ ಒಂದು ರೀತಿ; ನೃತ್ಯದಲ್ಲಿ ಹೆಜ್ಜೆ ಹಾಕುತ್ತಾ ಮುಂದೆ ಸಾಗುವಿಕೆ: "ಸುತ್ತುವಳಯುಂ ತಿರುಪು ಚಾರಿ ಬೈಸಿಕೆ ಪುಟವದೊತ್ತಿ ತೋಱುವ ಹಜ್ಜೆಯೆನಿಕ್ಕು" (ಮಂಗರಾ. ೨೫-೯) ; ಚರಣದ ಚಾರಿಯು ಚಲ್ಲಿಯು ಪರಿಕ್ರಮು ಕ್ರಮದ ಭಂಗಿಗಳ್ ನೆಗಟ್ಟಿಡೆಯೊಳ್ ಸುರವಂದಿಗಳಿಂ ಹೋಹೋಯಿರೆಯೆನಿಸಿ ದುದಾಟವಿಂತು ನೀಲಾಂಜನೆಯು (ಆದಿಪು. ೯-೩೯); ಚಾರಿವೆಟ್ಟುವ ಭಂಗಿ ದೋರ್ವಲನಂ ಮನಂಗೊಳೆ . . . ಮುರಾರಿ ಕೈಪಱಿಗಾಡಿವಂ (ಜಗವಿ. ೩-೫೨) ; ನಿಲವಿವು ಗತಿಗಳಿವಾಸನಕುಲವಿವು ಚಾರಿಗಳಿವೆಂದು ತಾನಭಿನಯಿಸುತ್ತ (ಕುಸುಮಾ. ೭-೬೨). [ಸಂ. ಚಾರೀ]

ಚಾರಿಗತಿ (ನಾ). [ನಾಟ್ಯ] ನರ್ತನದಲ್ಲಿ ಒಂದು ಗತಿ : ಚಾರಿಗತಿಯುಲಿ ನಡೆವನೊಡನೊಡನೆ ಹೊಡೆಯುವನು (ಭಾಸನಾ. ೧೦೬).
[ಚಾರಿ$_2$ + ಗತಿ]

ಚಾರಿಟಿ (ನಾ). ಒಂದು ಅನುಕರಣ ಶಬ್ದ ; ಪಾರಿವಾಳದ ಕೂಗು : ಪಾರಿವಾಳದ ಪಕ್ಕಿ ಮದನಕೈಯೊಳು ತನ್ನ ನಾರಿಗಿದಿರು ನಡೆದಾಡಿ ಗೂರುಳು ಗುಕುಗುಕು ಗುಟುಗುಟು ಗುಱುಗುಱು ಚಾರಿಟಿಯೆಂದುವಲ್ಲಲ್ಲಿ (ಭರಚ. ೧೫-೩೨).

ಚಾರಿತ್ರ (ನಾ). ಶೀಲ; ನಡತೆ ; ಆಚಾರ : "ಚರಿತಂ ರೀತಿ ಚಾರಿತ್ರವೆನೆ . . . ಆಚಾರಕಕ್ಕು ನಾಮಂ" (ಮಂಗರಾ. ೭೪-೩) ; ತತ್ತ್ವಭೇದನೆ ಚಾರುತರ ಸುಜ್ಞಾನವದರಾಚರಣೆ ಚಾರಿತ್ರ (ಪಶುಭಾ. ೫-೨೦). [ಸಂ.]

ಚಾರಿತ್ರಂಗೆಡು (ಕ್ರಿ). ನಡತೆಗೆಡು ; ಶೀಲವನ್ನು ಬಿಡು : ಚಾರಿತ್ರಂಗೆಟ್ಟ ರನಾಟ್ಕಡಿಗಳೆವಂತೆ ಚಾರಿತ್ರಮುಳ್ಳರನೇಕಾಟ್ಕಡಿಗಳೆಯರ್ (ಧರ್ಮಾಮೃ. ೭-೪೩). [ಚಾರಿತ್ರ + ಕೆಡು$_1$]

ಚಾರಿತ್ರಕ (ನಾ). ಶೀಲ ; ಗುಣ : ಹೃದಯಕ್ಲೇಶವನು ಬಿಡು ತೊಡಸು ಚಾರಿತ್ರಕದ ಭೂಷಣವ (ತಿಮ್ಮಸ್ಮೀ. ೨-೬೭). [ಸಂ.]

ಚಾರಿತ್ರಮೋಹ (ನಾ). = ಚಾರಿತ್ರಮೋಹನೀಯ : ಇರ್ತಱನಪ್ಪ ವೇದನೀಯಮುಮಂ ದರ್ಶನಮೋಹದೊಳಂ ಚಾರಿತ್ರಮೋಹದೊಳಂ ಯಥಾಕ್ರಮದಿಂ . . . ಸ್ತ್ರೀಪುನ್ನಪುಂಸವೇದಮೆನಿಸಿಯುಂ (ಸು ಕು ಮಾ. ೩-೩೯ ವ). [ಚಾರಿತ್ರ + ಮೋಹ]

ಚಾರಿತ್ರಮೋಹನೀಯ (ನಾ). [ಜೈನ] ಮೋಹನೀಯ ಕರ್ಮಗಳಲ್ಲಿ ಒಂದು ; ಆಚಾರವನ್ನು ದೂಷಿಸುವ ಒಂದು ಕರ್ಮವಿಧ : ದರ್ಶನ ಮೋಹನೀಯಮುಂ ಚಾರಿತ್ರಮೋಹನೀಯಮುಮೆಂದಿರ್ತೆಱನಕ್ಕುಂ (ಶಾಂತಿಪು. ೧೨-೧೧ ವ). [ಚಾರಿತ್ರ + ಮೋಹನೀಯ]

ಚಾರಿತ್ರವಂತ (ನಾ). ಸದಾಚಾರಶೀಲ. 'ಚಾರಿತ್ರವಂತಿಕೆ' ಪರಾ.
[ಚಾರಿತ್ರ + – ವಂತ]

ಚಾರಿತ್ರವಂತಿಕೆ (ನಾ). ಒಳ್ಳೆಯ ಶೀಲವನ್ನು ಪಡೆದಿರುವಿಕೆ; ಸದಾಚಾರ ಶೀಲತೆ : ಇದ್ದ ಬಿದ್ದವರಲ್ಲಿ ಚಾರಿತ್ರವಂತಿಕೆಯಿಲ್ಲ (ಸಮಜೀ. ೩೩).
[ಚಾರಿತ್ರವಂತ + – ಇಕೆ]

ಚಾರಿತ್ರಾರಾಧನೆ (ನಾ). [ಜೈನ] ಸಮ್ಯಗ್ದರ್ಶನ, ಸಮ್ಯಗ್‌ಜ್ಞಾನ, ಸಮ್ಯಕ್ಚಾರಿತ್ರ ಎಂಬ ರತ್ನತ್ರಯದಲ್ಲಿ ಮೂರನೆಯದು ; ಒಳ್ಳೆಯ ಚಾರಿತ್ರವನ್ನು ಅನುಸರಿಸುವಿಕೆ : ಪಾಪಕ್ರಿಯೆಯುಂ ನಿವೃತ್ತಿಮಾಡಿ ಶುಭ ಪರಿಣಾಮಮಂ ತನ್ನೊಳ್ ನಿಱಿಸುವುದು ಚಾರಿತ್ರಾರಾಧನೆ (ಜೀವಸಂ. ೩-೮ ವ). [ಚಾರಿತ್ರ + ಆರಾಧನೆ]

ಚಾರಿತ್ರಿಕ (ಗು). ಚರಿತ್ರೆಗೆ ಸಂಬಂಧಿಸಿದ; ಐತಿಹಾಸಿಕವಾದ: ಚಾರಿತ್ರಿಕಾ ಧಾರಗಳೇನೂ ಇಲ್ಲವಾದರೂ ಹಾಗೆ ಇದ್ದಿತ್ತು ಎಬುದನ್ನು ಊಹಿಸುವುದು ಕಷ್ಟವೇನೂ ಅಲ್ಲ (ಸವತಿ. V. ಪ್ರಸ್ತಾವನೆ). [ಸಂ.]

ಚಾರಿತ್ರ್ಯ (ನಾ). = ಚಾರಿತ್ರ : ಚಾರಿತ್ರ್ಯವಿಲ್ಲದ ಚಾರುತ್ವವೇತಕೆ ಬರಿಯ ಚತುರುತ್ವವೆ ಸಾಕೆ (ಇಂಚಾಪ. ೧೭೮-೭೯). [ಸಂ.]

ಚಾರಿವರಿ$_1$ (ಕ್ರಿ). ೧. ಸಂಚನ್ನು ನೋಡಿ ನುಗ್ಗು ; ಯುಕ್ತಿಯಿಂದ ಮುಂದೆ ಸರಿ; ಯುಕ್ತಿಯಿಂದ ಮುಂದೆ ಸಾಗು: ನೃಪನೊಡಹುಟ್ಟಿದನ ಹೊಯ್ದರುಣಜಲದಲಿ ಚಟ್ಟಱಿದು ರಿಪು ಚಾರಿವರಿದನು ಕಳನ ಚೌಕದಲಿ (ಕುವ್ಯಾಕ. ೨೦-೨) ; ಹಱಿದು ತೇಜಿಯ ಥಟ್ಟನಂಬರಕುಱುಬಿ ರಕ್ಕಸ ಭಟರ ಬೀದಿಯ ತೆಱಹ ತಪ್ಪಿಸಿ ಚಾರಿವರಿದೊಡಹೊಕ್ಕರಗಲದಲಿ (ತೊರರಾ. ೬-೧೧-೧೫) ; ಅರಿಯರೆನಿಪ ರಾಯರ ಪೌಜಿನೊಳು ಚಾರಿವರಿದಾಡಿದನಾ ಸುಭಟ (ನೇಮಿಸಂ. ೧೨-೮೦) ; ರಸಿಕಜನದಕ್ಷಿಗಳಂ ಚಾರಿವರಿದಾಡಿಸಿದಳೆ ಚ್ಚಾರಿ ತದಂಗಮನಸಂಗನಿರೆ ಪಿಂಗಡೆಯೊಳ್ (ರಾಜಶೇ. ೧೨-೮೯). ೨. ಸುತ್ತುವರಿ ; ಆವರಿಸು; ಆಕ್ರಮಿಸಂ: ದನುಜನಾಯಕರಾಳಿಗೊಂಡರು ಚಾರಿವರಿದರು ಸಿಂಗಣೀಕರನು (ಕಾಶಿರಾ. ೧೭-೪೫); ಅಕ್ಕತುಳ ವೀರರ್ಕಳಂ ಚಾರಿವರಿದೆಂಟುದಿಕ್ಕಿನೊಳ್ (ರುಕ್ಮಾಂಗ. ೧೩-೫೪) ; ಘೋರತರ ದಂಡಮಂ ಪಿಡಿದಿರ್ದು ಕರ್ಬುರ ಶರೀರದಿಂ ಭೀಕರಾಕ್ಷಿಗಳಿಂದಳಂತಕಂ ಚಾರಿವರಿವನು ಜನರಂ (ತುರಂಗ. ೮೭-೪). [ಚಾರಿ$_2$ + ಪರಿ$_2$]

ಚಾರಿವರಿ$_2$ 'ಚಾಲುವರಿ' ನೋ.

ಚಾರಿವರಿ$_3$ (ನಾ). ಸಂಚನ್ನು ನೋಡಿ ನುಗ್ಗುವಿಕೆ. 'ಚಾರಿವರಿವರಿ' ಪರಾ. [< ಚಾರಿವರಿ$_1$]

ಚಾರಿವರಿಯಿಸು, ಚಾರಿವರಿಸು (ಕ್ರಿ). ಯುಕ್ತಿಯಿಂದ ನಡೆಸು : ತಾರಕನ ಸುತರುಳಿದ ಧೊರೆಗಳೊಳು ತೇರ್ಗಳಂ ಚಾರಿವರಿಯಿಸಿ ಕಾದುತಿರೆ (ವೀಶೈಪು. ೨-೧೧-೧೮). ಚಾರಿವರಿಸು : ಒಬ್ಬೊಬ್ಬರೆಯ್ತಂದು ಸಸಿನೆ ಸರಳಿನ ಮಳೆಯ ಕರೆಯಲು ನಸುನಗುತ ಕಡಿದೆಲ್ಲವನು ಮಗುಳೆಸೆದು ರಣದಲಿ ಚಾರಿವರಿಸಿದನಮಿತ ಸಾಹಸದಿ (ಕೋಗಯು. ೨೫-೨೬).
[ಚಾರಿವರಿ$_1$ + – ಇಸು$_3$]

ಚಾರಿವರಿವರಿ (ಕ್ರಿ). = ಚಾರಿವರಿ$_1$ : ಅನಿತು ಚಾತುರ್ಬಲವನಾಗಳೊರ್ವನೆ ಚಾರಿವರಿವರಿದು . . . ಕೊಲ್ವುದಂ ಕಂಡು (ಜೈಮಿಭಾ. ೮-೨೯).
[ಚಾರಿವರಿ$_3$ + ಪರಿ$_2$]

ಚಾರಿವರಿಸು 'ಚಾರಿವರಿಯಿಸಂ' ನೋ.

ಚಾರಿಸು (ಕ್ರಿ). ೧. ಅರೆ ; ರುಬ್ಬು ; ಮರ್ದಿಸಂ : ಅಸುವೆಯ ಕಲ್ಗಳಂ ತೊಳೆದು ಚಂದನಮಂ ಪನಿನೀರ್ಗಳಿಂದೆ ಚಾ [ಪಾಠಾಂ. ಸಾ]ರಿಸಿ (೧ರಿಕ. ೨-೮೯). ೨. ಉಜ್ಜು ಅಥವಾ ಅರೆದು ಮಿಶ್ರಮಾಡಂ ; ಕೂಡಿಸು : ಏರಂಡತೈಲದೊಳ್ ಸುರವಾರುಣಿಯುಂ ಕಲಸಿ ತಾಮ್ರಪಾತ್ರೆಯೊಳಧಿಕಂ ಚಾ[ಪಾಠಾಂ. ಬಾ]ರಿಸಿ ಪೂಸುತಿರೆ (ಲೋಕೋಪ. ೯-೧೪೦); ನೀರೊಳಗರೆವುದು ಸೌತೆಯ ಬೇರಂ ಬೀಜಮುಮನಲ್ಲಿ ಬೆಲ್ಲಮನಿನಿತಂ ಚಾರಿಸಿ ಕುಡುವುದು (ಅಶ್ವಶಾ. ೧೧-೨೬) ; ಹೆತ್ತ ತುಪ್ಪವ ತೆಗೆದು ಚಾರಿಸಿದ ನಿಂಬೆಹುಳಿಯೆಣ್ಣೆ ಸುಣ್ಣವ ಕದಡಿ (ಸೂಪಶಾ. ೨-೧೯). ೩. ಚಾತುರ್ಯದಿಂದ ನಡೆಸಂ ; ಜಾಣತನದಿಂದ ನೆರವೇರಿಸಂ : ಚಾ[ಪಾಠಾಂ. ಬಾ] ರಿಸಿ ಬಾಳಾಗಮುಮವ ತಾರಂಗೆಯ್ದಂತೆ ಕಾಲದಂತಕನನೆ ಪೋಲ್ತು . . . ವೊಯ್ದು ಕೊಂದರ್

ಪಲರಂ (ಪಂಪಭಾ. ೧೦-೮೩) ; "ಕತ್ತಿಗಳನ್ನು ಝುಳಪಿಸಿ" (ಪಂಪದೀ. ೩೬೪); ಇನ್ನದಱ ಪೊಱಗಿಗ್ಗಲಿಕೆಯೆನಿಪತಿವಿಷಮ ಮನದಱಿವಿಷಮುದುಷ್ಕರಮೆಂಬ ದುಷ್ಕರವಂ ಎಳೆಯೊಳೊರ್ವನೆ ಚಾರಿಸಲ್ ಬಲ್ಲಂ (ಎಕ. II, ೧೩೩-೮೩ : ೯೩೨). [ ಚಾರಣ + – ಇಸು₃ ]

**ಚಾರು** (ಗು). ೧. ಚೆಲುವಾದ ; ಸುಂದರವಾದ ; ಆಹ್ಲಾದಕರವಾದ : ಚಾರು ರೂಪಭಾಸಕ ಸತಿಯೇ (ಛಂದೋಂಬು. ಕ. ೦-೨೭) ; ಸುಳಿವುದಲ್ಲಿ ಚಾರು ಸಮೀರಂ (ಜಗವಿ. ೨-೩೫) ; ಚಾರು ಕಂಗಳ ಮುಚ್ಚಿ ಮೆಱದಿವೆ ನಾರಿಕೇಳಗಳು (ಜೀವಂಡ. ೧೭-೧೧). ೨. ಉತ್ತಮವಾದ ;ಶ್ರೇಷ್ಠವಾದ: 'ಚಾರುಚರಿತ್ರ' ಪರಾ. [ ಸಂ. ]

**ಚಾರುಕಲ್ಯಾಣ** (ನಾ). [ಸಂಗೀತ] ತಾಳ ಪ್ರಭೇದಗಳಲ್ಲಿ ಒಂದು ; ಬಳಿಕ ಧ್ರುವ . . . ಏಕವೆಂಬ ಸಪ್ತತಾಳ ಭೇದಂಗಳಂ ಅವುಗಳೊಳು ಚಂಚತ್ಪುಟ . . . ಚಾರುಕಲ್ಯಾಣ . . . ಜಯಾಳವೆಂಬಿವು ಮೊದಲಾದ ನೂಱೆಂಟು ತಾಳಂಗಳುಂ (ವಿವೇಕ. ೨೩೪). [ ಚಾರು + ಕಲ್ಯಾಣ ]

**ಚಾರುಕೇಶಿ** (ನಾ). [ಸಂಗೀತ] ಒಂದು ರಾಗದ ಹೆಸರು : ಚಾರುಕೇಶಿ– ಜನಕರಾಗ ೫ನೇ ಬಾಣಚಕ್ರದ ಎರಡನೇ ರಾಗ ಮೇಳಸಂಖ್ಯೆ ೨೬ . . . ಈ ರಾಗದ ಪೂರ್ವಾಂಗ ಶಂಕರಾಭರಣ, ಉತ್ತರಾಂಗ ತೋಡಿ (ಸಂಗೀಚಂ. ೧೬೪). [ ಸಂ. ಚಾರುಕೇಶೀ ]

**ಚಾರುಗಣ್ಣು** (ನಾ). ಹಿತಕರವಾದ ದೃಷ್ಟಿ : ಚಾರುಗಣ್ಣಿನಿಂದ ಮಾಳೊನನ್ನು ನೋಡಿ, ಮುಂಗೈ ತಗುಲಿಸಿ ಕೆಳದನಿಯಲ್ಲಿ ಕೇಳಿದನು (ಪವನ. ೧೩). [ ಚಾರು + ಕಣ್ಣು (<ಕಣ್) ]

**ಚಾರುಗಾತ್ರ** (ನಾ). ೧. ಚೆಲುವಾದ ದೇಹ : ಚಾರುಗಾತ್ರದ ಸುಪ್ರಸನ್ನ ಮುಖಾರವಿಂದದ . . . ಸಾರ ಸೌಭಾಗ್ಯದಲಿ ಬಲದೈತ್ಯಾರಿಗಳು ರಂಜಿಸಿ ದರಾ ಜನನಿವಹಮಧ್ಯದಲಿ (ನಿಭಾಗ. ೧೧-೧೭-೩೦). ೨. ಚೆಲುವಾದ ದೇಹವುಳ್ಳವನು : ಘನವಿರಾಟ್ಚಾರುಗಾತ್ರ ಕೃತವಿಷ್ಣು ಕಮಳಜ ತುರಾಷಾಟ್ಟಿಕಿತ ಚಂಚಲಿತ ತಾಂಡವಾಡಂಬರ ದಿಗಂಬರಾಂಬರ ಕುಂತಲ (ಉದ್ಭಟೀ. ೬-೩೨). [ ಚಾರು + ಗಾತ್ರ ]

**ಚಾರುಚರಿತ್ರ** (ನಾ). ೧. ಒಳ್ಳೆಯ ನಡತೆ ; ಸದಾಚಾರ: ಒಡಲುಂ ಚಾರುಚರಿತ್ರದೊಳ್ ಧನಮನಿಪ್ಪಾಪೂರ್ತದೊಳ್ ಸತ್ಯಮುಂ ನುಡಿಯೊಳ್ . . . ತಾಳ್ದಿದಂ (ಶೋಕಕೋಷ. ೧-೧೮ ಟೀಕೆ) ; ಚಾರುಚರಿತ್ರ ತೀರ್ಥ ಜಲದಿಂದಘಕರ್ದಮಮಂ ಕಟಲ್ಚಿ (ಪಂರಾಮಾ. ೧-೧೪) . ೨. ಒಳ್ಳೆಯ ನಡತೆಯುಳ್ಳವನು ; ಸದಾಚಾರಿ : ಚಾರುಚರಿತ್ರನಪ್ಪುದು ಗುಣಾನ್ವಿತ ನಪ್ಪುದು (ಧರ್ಮಾಮೃ. ೩-೧೧). [ ಚಾರು + ಚರಿತ್ರ ]

**ಚಾರುಚೋಪಿ** (ನಾ). ಚೂರು ಚೂರು (?): ಸ್ವರ್ಗ ನಿರ್ಗವೆಂಬವಾನು ಚಾರುಚೋಪಿ ಮಾಡಿದೇನು ಅಗ್ಗ ಮಾಡಿದೇನು ನಾಲ್ಕು ಪದಗಳೆಂಬವಾ ಸುಗ್ಗು ಮಾಡಿ ಕಳೆದೆ ನಾನು ದಶಾವಾಯುವೆಂಬರಾ (ಜಿದಾವ. ೧೪೪-೧೩). [ ? ]

**ಚಾರುತರ** (ಗು). ೧. ಹೆಚ್ಚು ಚೆಲುವಾದ ; ಹೆಚ್ಚು ಸುಂದರವಾದ : ಚಾರುತರಾಪ್ಸರಾಸ್ತ್ರೀವಂದ್ಯೆಯಹ ರಂಭೆ (ಬಸಪು. ೧೧-೩) : ಪೊಗಳೆ ಕೆಸರ್ಮಲ್ಲಿಗೆಯನಲ್ಲಾವರೆಗೆ ಚಾರುತರಮಪ್ಪ ನಾಮಮುಕ್ಕುಂ (ಶಬ್ದಿಕೈ. ೧೨) ; ಜನರೆಲ್ಲ ಚಾರುತರ ಬೋಧೆಯ ನೀಡುವರು (ಸಿದ್ಧಪು. ೧೧-೮). ೨. ಉತ್ತಮವಾದ ; ಶ್ರೇಷ್ಠವಾದ : ಚಾರುತರ ಯಜ್ಞ ವಿದ್ಯಾ ಪಾರಗರ ರವಂಗಳಿಂ . . . ನೆಗೆಟ್ಟುದಾಹುತಿಧೂಮಂ (ಪಂಪಭಾ. ೬-೩೪). (ನಾ). ೩. ಉತ್ತಮವಾದ ರೀತಿ : ಚಾರುತರದಲಿಕ್ಕೇರಿಯವರ ಬಲ ವಾರಿಧಿ ಮುತ್ತಿ ಮೂದಲಿಸಿ (ಕಂನವಿ. ೧೪-೧೦). [ ಸಂ. ]

**ಚಾರುತ್ವ** (ನಾ). ಮನೋಹರತೆ ; ಸುಂದರತೆ: ನಿಶಾಂತಸ್ವಾರ ಚಾರುತ್ವ ಮಾಗಿಯುಂ ಅನಿಶಾಂತ ಸ್ವಾರ ಚಾರುತ್ವಮುಂ . . . ಎನಿಸಿ (ಚಂದ್ರಪು. ೧೧-೧೭ ವ) ; ತತ್ಪಂಕಜಾಕರ ಚಾರುತ್ವಕೆ ಮೆಚ್ಚಿ ತೂಗೆ ಶಿರವಂ (ರಾಜಶೇ. ೨-೬೩) ; ಚಾರಿತ್ರ್ಯವಿಲ್ಲದ ಚಾರುತ್ವವೇತಕೆ ಬರಿಯ ಚತುರತ್ವವೆ ಸಾಕೆ (ಇಂಚಾಪ. ೧೭೮-೭೯) ; ರಚನೆಯಿಂದಲೂ ಪ್ರಸಾದದಿಂದಲೂ ಚಾರುತ್ವ ದಿಂದಲೂ ತುಂಬಿಕೊಂಡಿರುವ ಶಬ್ದಗಳನ್ನೇ ಕಾವ್ಯದಲ್ಲಿ ಸೇರಿಸಬೇಕು (ಭಾರಮಿಾ. ೭೭). [ ಸಂ. ]

**ಚಾರುರೂಪ** (ನಾ). ಮನೋಹರವಾದ ರೂಪು ; ರಮಣೀಯವಾದ ಆಕೃತಿ : ಈ ಚಾರುರೂಪ ಲಲಿತ ವನೇಚರಿಯರನೀ ಕುರೂಪರೊಳ್ ಕೂಡಿ (ಪುಷ್ಪಪು. ೫-೯೧). [ ಚಾರು+ ರೂಪ ]

**ಚಾರುರೂಪಿಣಿ** (ನಾ). ಸುಂದರವಾದ ರೂಪವುಳ್ಳವಳು ; ಸುಂದರಿ : ಇಂದೆನಿತು ಚಾರುರೂಪಿಣಿಯಾಗಿ ತೋರುತಿಹೆ ನೀನೆನಗೆ (ಶ್ರೀರಾಮಾ. ೭೪-೨೮೭). [ ಸಂ. ಚಾರುರೂಪಿಣೀ ]

**ಚಾರುವೃತ್ತ** (ನಾ). ೧. ಮನೋಹರವಾದ ವರ್ತುಲಾಕಾರವುಳ್ಳದು. ೨. ಮನೋಹರವಾದ ನಡತೆಯುಳ್ಳವನು. ೧, ೨ : ಮಂಜು ಮಹಿಮಾಸ್ಪದಂ ಚಾರುವೃತ್ತಂ ಕಲಾಪುಂಜಂ . . . ರಾಜನೆನ್ನವೊಲಾ ದೊಡಂ (ತ್ರಿಮಿಥಾ. ೨೮-೬೨). [ ಚಾರು + ವೃತ್ತ ]

**ಚಾರುಹಾಸ** (ನಾ). ಮೋಹಕವಾದ ನಗು ; ಮನೋಹರವಾದ ನಗು : ಚಾರುಹಾಸನಿವಾಸನಾಡಿದನಾಡಿದಂ ಸುಭಗಂ (ಜಗವಿ. ೩-೩೩). [ ಚಾರು + ಹಾಸ₂ ]

**ಚಾರುಹಾಸಿನಿ** (ನಾ). ಮೋಹಕವಾದ ನಗೆಯುಳ್ಳವಳು : ಒಡಂಬಟ್ಟು ಚಾರುಹಾಸಿನಿ ನಿಜನಿವಾಸಕ್ಕೆ ಪೋದಳ್ (ಗದಾಯು. ೨-೧೦ ವ). [ ಸಂ. ಚಾರುಹಾಸಿನೀ ]

**ಚಾರೆ** (ನಾ). (ಕರಾ) ಹಲಸಿನ ತೊಳೆ ತೆಗೆದು ಉಳಿದ ಭಾಗ; ಸೋಲೆ; ಸೆಡೆ. [ ? ]

**ಚಾರ್ಕಲ** (ನಾ). ನಕ್ಷತ್ರ ; ಚುಕ್ಕೆ ; ತಾರೆ : ತಂಗೀಯ ಕರೆಯೆಂದ್ರು ಸಂಜೆ ಯಾಯಿತೆಂದ ಬಂಗಾರದ ಕೊರಳ ಮಡದೀಯ ಕರೆಯೆಂದ್ರು ಚಾರ್ಕಲದ ಬೆಳಕು ಹಗಲೆಂದ (ಹಳ್ಳಿಯ. ೧೬೩): ಚಾರ್ಕಲಕ್ಕೆ ಎಂದಾದರೂ ಚಂದ್ರ ಮನ ಸೊಬಗು ಬಂದೀತೆ ? (ರೂಢಿ). [ ? ]

**ಚಾರ್ಖಾನೆ** (ನಾ). ಚಚ್ಚೌಕವಾದ ಮನೆ ; ಚಚ್ಚೌಕ ; ಪೊಪ್ಪಳಿ: (ಕ). ಚಾರ್ಖಾನೆಸೀರೆ = ಚಚ್ಚೌಕವಾದ ಮನೆಗಳಿಂದ ಕೂಡಿದ ಸೀರೆ ; ಚೌಕಡಿಸೀರೆ: (ಕ). [←ಪಾರ. ಹಿಂ. ಚಾರ್‌ಖಾನಾ; ಮರಾ. ಚಾರಖಣೀ]

**ಚಾರ್ಚಿಕ್ಯ** (ನಾ). ೧. ಗಂಧ ಮೊದಲಾದ ಸುಗಂಧದ್ರವ್ಯಗಳನ್ನು ಶರೀರಕ್ಕೆ ಲೇಪಿಸುವುದು ; ಸಂಗಂಧದ್ರವ್ಯಗಳನ್ನು ಮೈಗೆ ಲೇಪಿಸಿ ಕೊಳ್ಳುವಿಕೆ. ೨. ಅಂಗರಾಗದ ಹಿಟ್ಟು,–ಹುಡಿ ; ಬುಕ್ಕಿಹಿಟ್ಟು : "ಚರ್ಚಾ, ಚಾರ್ಚಿಕ್ಯಂ, ಸ್ಥಾಸಕಃ – ೩ ಕುಂಕುಮ ಮುಂತಾದ ಅಂಗ ರಾಗದ ಹಿಟ್ಟಿಗೆ ಹೆಸರು, ಮೈಯಿಂಚುಪುಡಿ, ಮೈಗುಜ್ಜುವ ಗಂಧಪುಡಿ, ಉದ್ವರ್ತನಚೂರ್ಣ, ಬುಕ್ಕಿಹಿಟ್ಟು" (ಸಿದ್ಧಾಂತಿ. ೧೭೪). [ ಸಂ. ]

**ಚಾರ್ಜು, ಛಾರ್ಜು** (ನಾ). ೧. ಪ್ರಯಾಣದ ವೆಚ್ಚ, – ಖರ್ಚು ; ಪ್ರವಾಸದ ಟಿಕೆಟ್ಟು ಮೊದಲಾದುವುಗಳ ಬೆಲೆ : ಹೋಗಿ ಬರುವ ಚಾರ್ಜು ಕೊಟ್ಟೇ ಕಳುಹಿದ್ದೆ (ಹುಚ್ಚುಹು. ೫೫). ೨. ಹೊಣೆ ; ಅಧಿಕಾರ; ವಶ : ಯಾವುದಾದರೂ ಒಂದು ಕೋರ್ಟಿನ ಚಾರ್ಜಿಗೆ ನೇಮಿಸತಕ್ಕದ್ದು (ಗ್ರಾಮಾಕ. ೧೦) ; ಕಿಟ್ಟಿ ಹೊಸ ದಪ್ತರಿನ ಚಾರ್ಜು ತೆಗೆದುಕೊಂಡಿರಲಿಲ್ಲ (ಗಂಮಾಯಿ. ೨೨) ; ಚಾವಡಿಯ "ಚಾರ್ಜು" ಓಲೆಕಾರನ ಕಡೆಗೆ ಇರುವುದು (ಗಾಳಿಗು. ೩). **ಛಾರ್ಜು** : ೧. ಮೈಸೂರಿಗೆ ಹನ್ನೆರಡಾಣೆ ಛಾರ್ಜು (ನನ್ನಪ. ೨೭). [ ←ಇಂ. Charge ]

**ಚಾರ್ಮಣ** (ಗು). ೧. ಚರ್ಮದ ಆವರಣವುಳ್ಳ. (ನಾ). ೨. ಚರ್ಮಗಳ ರಾಶಿ ; ತೊಗಲಿನ ಸಮೂಹ. ೩. ಗುರಾಣಿಗಳ ಸಮೂಹ. [ಸಂ.]

**ಚಾರ್ವಕ** (ನಾ). = ಚಾರ್ವಾಕ ೧ : ವಾಗ್ಬಲದ ಪೊಡರ್ಪ್ಪು ವೇಡ ಗಡ ಚಾರ್ವ್ವಕ ಚಾರ್ವ್ವಕ ನಿಮ್ಮ ದರ್ಪ್ಪವಂ ಸಲಿಪನೆ ಗೋಪನನ್ನಿ ಮುನಿಪುಂಗವನೆಂಬ ಮದಾನ್ಧ ಸಿನ್ಧುರಂ (ಎಕ. II, ೬೯-೪೦ ; ಸು. 1100).

[ <ಸಂ. ಚಾರ್ವಾಕ ]

**ಚಾರ್ವರಿ** 'ಚಾಲುಂವರಿ' ನೋ.

**ಚಾರ್ವಾಕ** (ನಾ). ೧. ನಿರೀಶ್ವರವಾದಿ ; ದೇವರ ಅಸ್ತಿತ್ವದಲ್ಲಿ ನಂಬಿಕೆ ಯಿಲ್ಲದವನು ; ನಾಸ್ತಿಕ : "ಲೋಕಾಯತಿಕಃ, ಚಾರ್ವಾಕಃ – ಈ ೨ ಚಾರ್ವಾಕನು" (ನಾಚಿರಾ. ೧೨೬); ಎಲೆ ಚಾರ್ವಾಕ ನಿನಗಿದು ಕೇಳುಪೊಡೆ ಪವಣಲ್ಲ (ಬಸವು. ೪೯-೨೫); ಸಂಪನ್ನ ತನುವೇ ಆತ್ಮನೆಂಬರು ಕೆಲರು ವಾದಿಗಳು ಕೆಲಕೆಲರು ಚಾರ್ವಾಕರು (ಅಮೃತ. ೩-೫೭). ೨. ಆರು ನಾಸ್ತಿಕ ದರ್ಶನಗಳಲ್ಲಿ ಒಂದು : ಈ ಮೂಲ ತತ್ತ್ವಾನ್ವೇಷಣ ರೂಪದಲ್ಲಿ ಚಾರ್ವಾಕ, ವೈಭಾಷಿಕ . . . ಆರು ನಾಸ್ತಿಕದರ್ಶನಗಳೂ . . . ಆವಿರ್ಭವಿ ಸಿರುತ್ತವೆ (ಭಾರದ. ೨೨೯). [ ಸಂ. ]

**ಚಾರ್ವಾಕತೆ** (ನಾ). ನಾಸ್ತಿಕತೆ ; ನಿರೀಶ್ವರವಾದ : ಈ ಚಾರ್ವಾಕತೆಯ ಒಂದು ಕ್ಷಣ ಅವನಿಗೆ ಮೋಜಾಗಿ ಕಂಡಿತ್ತು (ಸಮುಜೀ. ೬೬೩).

[ ಸಂ. ಚಾರ್ವಾಕತಾ ]

**ಚಾರ್ವಾಕದರ್ಶನ** (ನಾ). ನಿರೀಶ್ವರವಾದವನ್ನು ಪ್ರತಿಪಾದಿಸುವ ದರ್ಶನ; ನಾಸ್ತಿಕತ್ವವನ್ನು ತಿಳಿಸುವ ಶಾಸ್ತ್ರ : ದರ್ಶನಗಳಿಗೆಲ್ಲ ಮೊದಲನೆಯದಾಗಿಯೂ, ಸರ್ವದರ್ಶನ ಪ್ರತಿಕಕ್ಷಿಯಾಗಿಯೂ ಇರುವ ದರ್ಶನವು ಚಾರ್ವಾಕದರ್ಶನವು (ಹಿಂದಶಾ. ೧೦).

[ ಚಾರ್ವಾಕ + ದರ್ಶನ ]

**ಚಾರ್ವಾಕಮತ** (ನಾ). = ಚಾರ್ವಾಕದರ್ಶನ : ಕೃತಕದ್ವಿಜಂ ಚಾರ್ವಾಕ ಮತಾವಲಂಬಿಯಾಗಿ . . . ಮಹೀಪಾಲನೊಳ್ ಸಹಸ್ರಜಿಹ್ವನಪ್ಪ ನಾಗ ರಾಜನನೆ ಪೋಲ್ತು ನುಡಿಯೆ (ಶಾಂತಿಪು. ೮-೧೨೬ ವ).

[ ಚಾರ್ವಾಕ + ಮತ ]

**ಚಾರ್ವಾಕವಾದ** (ನಾ). ನಿರೀಶ್ವರವಾದ: ನಾಸ್ತಿಕವಾದ: ಅವನ ವಿಚಾರ ವಾದವೆಲ್ಲ ವಾದಸರಣಿಯೆಲ್ಲ ಚಾರ್ವಾಕವಾದ, ಚಾರ್ವಾಕವಾದಸರಣಿ (ಭಾರದ. ೧೦೨). [ ಚಾರ್ವಾಕ + ವಾದ ]

**ಚಾಲ್** 'ಚಾಲು' ನೋ.

**ಚಾಲ** (ನಾ). ಒಂದು ಬಗೆಯ ಮರ : ಕಗ್ಗಲಿ ಚಾಲ ಮೂಲ ಕವಳಂ (ಯಾದವ. ೪-೫೨). [ ? ]

**ಚಾಲಕ, ಚಾಳಕ**₁ (ನಾ). ೧. ನಡೆಯಿಸುವವನು; ನಿರ್ವಾಹಕ; ವ್ಯವಸ್ಥಾಪಕ : ಬ್ಯಾಂಕು ಸ್ಥಾಪನೆಯಾಗುವಾಗ . . . ಚಾಲಕರು ಬ್ಯಾಂಕ್ ರಿಜಿಸ್ಟರ್ ಮಾಡಿದ ಬಗ್ಗೆ ಪತ್ರಿಕೆಯನ್ನು ಹೊರಡಿಸುವರು (ಬ್ಯಾಂಕಕ್ಕೆ. ೧೧) ; ಈ ಉದ್ಯಮದ ಚಾಲಕರೆಂದರೆ ಸ್ವಯಂ ಶ್ಯಾಮಲಾಲರು (ಕುರಿಹಿಂ. ೧೪೮). ೨. ಸಾರಥಿ ; ಬಂಡಿ ಹೊಡೆಯುವವನು : ಜ್ಞಾನಾಂಬೆಯನ್ನು ಬಂಡಿಯಲ್ಲಿ ಕೂರಿಸಿ ಚಾಲಕನನ್ನು ಪನ್ನಂಪಳ್ಳಿಯ ಕಡೆ ಬಿಡಲು ಹೇಳಿದೆ (ಪ್ರತಾಪ. ೩೦). ೩. ಮದಿಸಿದ ಆನೆ. ೪. ಚಲನಶಕ್ತಿಯನ್ನು ನೀಡುವ ಯಂತ್ರ : ಈ ವಿಧಿಯನ್ನನುಸರಿಸಿ ವಿದ್ಯುತ್ಪ್ರವಾಹದಿಂದ ತಿರುಗುವ ಚಾಲಕಗಳನ್ನು (Motors) ಕಟ್ಟಿರುತ್ತಾರೆ (ಭೌತವಿ. ೩೩೭). **ಚಾಳಕ**₁ : ೧. ಚಾಳಕನಿಲ್ಲದೂರು . . . ಸೊಬಗಿಲ್ಲದ ನಾರಿಯರೊಪ್ಪಲಾರ್ಪರೇ (ನೀತಿಸಾ. ೧೫೭). [ ಸಂ. ]

**ಚಾಲತಿ, ಚಾಲ್ತಿ** (ಗು). ೧. ವ್ಯವಹಾರದಲ್ಲಿರುವ ; ಚಲಾವಣೆಯಲ್ಲಿ ರುವ ; ಬಳಕೆಯಲ್ಲಿರುವ : ಅಲ್ಲಿಯ ಪ್ರಮುಖ ವ್ಯಾಪಾರಿಯು ಆ ಯಾವತ್ತು ಕಾಳನ್ನು . . . ಚಾಲತಿ ಬೆಲೆಗೆ ಸಾಟಿ ಮಾಡುತ್ತಾನೆ (ಚಾಲಪ್ರ. II, ೪೯೩) ; ಅದು ಸಾಧಾರಣ ಚಾಲತಿ ಶ್ರೇಣಿಯ ಆದರ್ಶ (ನಿಬಂಧ. II, ೦೪). (ನಾ). ೨. ಜನಬಳಕೆ; ವ್ಯವಹಾರ: ಬೆಂಕಿಕಡ್ಡಿ ಬಂದ ಮೇಲೆ ಚಕಮಕಿ ಬೆಂಕಿ ಚಾಲತಿಯಲ್ಲಿಲ್ಲ (ರೂಢಿ). ೩. ವಾದ್ಯಗಳ ವಾದನದ ರೀತಿಗಳಲ್ಲಿ ಒಂದು : ಮೇಳದವರು ಅದಕ್ಕೆ ಮೊಟ್ಟಮೊದಲು 'ಮುಕ್ತಾಯ' ಕೊಟ್ಟು ಚಾಲತಿಯನ್ನು ಬಾರಿಸಿ ಮುಗಿಸುವರು (ಬಟ್ಟಹೊ. ೧೩). **ಚಾಲ್ತಿ**: ೨. ಕೆಂಪು ಔಷಧಿ ಸವರಿದ ಕಡ್ಡಿಗಳೇ ಆಗ ಚಾಲ್ತಿ (ಬೆಂಗೂ೦. ೧೦೨) ; ಕತ್ತಿ ಏರುವ, ಕೊಂಡ ಹಾಯುವ . . . ಸಂಪ್ರದಾಯ ಈ ಶತಮಾನದಲ್ಲಿಯೂ ಎಲ್ಲ ಕಡೆಯೂ ಚಾಲ್ತಿಯಲ್ಲಿದೆ (ನಂಜುಂಡ. ೧೩೪) ; ರಂಜಣದಲ್ಲಿಯು . . . ನಾಣ್ಯ ಚಾಲ್ತಿಯಿಲ್ಲದೆ ಹಸರುಗಟ್ಟಿದ್ದವಂತೆ (ಗೀಡುಗ. ೩). [ ←ಮರಾ. ಚಾಲತೀ ]

**ಚಾಲತಿಠೇವಣಿ** (ನಾ). = ಚಾಲತಿಠೇವು : ಅವನು ಸಿರಿವಂತನಾದ್ದರಿಂದ ಚಾಲತಿಠೇವಣಿಯಲ್ಲಿಯೇ ಬಹಳ ಹಣ ಇಟ್ಟಿದ್ದಾನೆ (ರೂಢಿ).

[ ಚಾಲತಿ + ಠೇವಣಿ ]

**ಚಾಲತಿಠೇವು** (ನಾ). (ದಿನನಿತ್ಯದ ವ್ಯವಹಾರಕ್ಕೆ ಬಳಸುವುದಕ್ಕಾಗಿ) ಬ್ಯಾಂಕು ಮೊದಲಾದುವುಗಳಲ್ಲಿ ಇಟ್ಟ ಹಣ; ಕರೆಂಟ್ ಡಿಪಾಸಿಟ್ಟು: ಬಳಿಕೆಯ ಇಡುಗಂಟ(ಚಾಲತಿಠೇವಿ)ನಲ್ಲಿಟ್ಟರೆ . . . ಈ ಖಾತೆಯ ಉಪಯೋಗವನ್ನು ಹೆಚ್ಚಾಗಿ ಮಾಡಿಕೊಳ್ಳುವರು (ಬ್ಯಾಂಕಕ್ಕೆ. ೧೭).

[ ಚಾಲತಿ + ಠೇವು ]

**ಚಾಲತಿದಪ್ತರ** (ನಾ). ದಿನನಿತ್ಯದ ವ್ಯವಹಾರಕ್ಕೆ ಸಂಬಂಧಪಟ್ಟ ಲೆಕ್ಕಪತ್ರ,–ದಾಖಲೆ : (ಜ). [ ಚಾಲತಿ + ದಪ್ತರ ]

**ಚಾಲತಿಭಂಡವಲ** (ನಾ). ವ್ಯವಹಾರದಲ್ಲಿ ತೊಡಗಿಸುವ ಬಂಡವಾಳ : ಚಲಾವಣೆಯಲ್ಲಿರುವ ಹಣ : ಇದಕ್ಕೆಲ್ಲ ಬೇಕಾಗುವ ಚಾಲತಿಭಂಡವಲ (Working Capital)ವೂ ಬಹಳವಾಗಿದೆ (ಚಾಲಪ್ರ. I, ೪೭೪).

[ ಚಾಲತಿ + ಭಂಡವಲ (<ಬಂಡವಲ) ]

**ಚಾಲತಿಮಾಲು** (ನಾ). ಸದ್ಯ ಬಳಕೆಯಲ್ಲಿರುವ ಸರಕು : ಅವನಿರುವ ಅಂಗಡಿಯಲ್ಲಿ ಚಾಲತಿಮಾಲಿನ ದಾಸ್ತಾನೇ ಹತ್ತು ಲಕ್ಷ ರೂಪಾಯಿಗಳಷ್ಟಿರ ಬಹುದಂತೆ (ಜಾರುದಾ. ೬೬). [ ಚಾಲತಿ + ಮಾಲು₄ ]

**ಚಾಲತಿಸಾಲು, ಚಾಲ್ತಿಸಾಲು** (ನಾ). ನಡೆಯುತ್ತಿರುವ ವರ್ಷ : ಕಂದಾಯದ ಬಾಕಿಗೋಸ್ಕರ ರೈತರು ಪಾವತಿ ಮಾಡುವ ಹಣವನ್ನು ಮತ್ತು ಚಾಲತಿಸಾಲಿಗೆ ಕೊಟ್ಟ ಹಣವನ್ನು ಲೆಕ್ಕದಲ್ಲಿ ದಾಖಲ್ಮಾಡಿ . . . ದಸ್ಕತ್ತು ಮಾಡಬೇಕು (ಗ್ರಾಮಾಕ. ೭೦). **ಚಾಲ್ತಿಸಾಲು** : 'ಚಾಲ್ತಿಸಾಲಿ'ನ ಬಾಕಿಯನ್ನು ಗುದಸ್ತ ಬಾಕಿಯನ್ನೂ ಬೇರೆ ಬೇರೆ ಹಾಕಿ . . . ತಲೆ ಕೆಡಿಸುತ್ತಿದ್ದರು (ನನ್ನೂರು. ೧೫೩). [ ಚಾಲತಿ + ಸಾಲು₃ (<ಸಾಲ್₃) ]

**ಚಾಲನ** (ನಾ). ೧. ನಡೆಸುವಿಕೆ ; ಚಲಿಸುವಂತೆ ಮಾಡುವಿಕೆ : "ಚಾಲನ. ಪ್ರೇರಣ" (Actuation. ಇಂಕನಿ). ೨. ಜರಡಿ ಮೂಲಕ ಸೋಸುವಿಕೆ. ೩. ಅಲ್ಲಾಡಿಸುವಿಕೆ. 'ಲಾಂಗೂಲಚಾಲನ' ಪರಾ. ೪. ಸಡಿಲ ಗೊಳಿಸುವಿಕೆ. [ ಸಂ. ]

**ಚಾಲನಿ, ಚಾಳನಿ** (ನಾ). ಸಾರಣಿಗೆ ; ಒಂದರಿ ; ಜರಡಿ : "ಚಾಲ[ಪಾಠಾಂ. ಳ]ನಿ ರಂಧ್ರಿ ಸಾರಣಿಗೆ" (ಮಂಗರಾ. ೬೨-೨೦).

**ಚಾಳನಿ** : "ಚಾಳನಿಯೆನೆ ಶಾರಣಿಕಂ" (ವಸ್ತುಕೋ. ೪೯-೨೭).

[ ಸಂ. ಚಾಲನೀ ]

**ಚಾಲನೆ** (ನಾ). ಚಲನಶಕ್ತಿ ; ಪ್ರೇರಣೆ : ಅವರಿಗೆ ನಾವು ಚಾಲನೆ ಕೊಟ್ಟರೆ ಅವರಿಗೆ ಸರಿಯಾದ ದಾರಿ ಸಿಗಬಹುದು (ಅಪನಾ. ೧೬೫) ; ಒಂದು ದೃಷ್ಟಿ ಯಿಂದ ಈ ಎಲ್ಲ ಚಾಲನೆ ಶೇಖರಿಸುವುದು ನರಹರಿ ಕುಸುಮಾರ ಪರಿಸರದಲ್ಲಿ (ಸಮಜೀ. ೧೭, ಪೀಠಿಕೆ) ; ಇದಕ್ಕೆ ಹೆಚ್ಚಿನ ಚಾಲನೆಯನ್ನು ಕೊಡಬೇಕೆಂದು ಅವಳು ಅವನ ಹರಟೆಯ ಕೊನೆಗೆ ಹೇಳುತ್ತಿದ್ದಳು (ರಂಗರೋ. ೩೪).

[ ಸಂ. ಚಾಲನ ]

**ಚಾಲವರಿ** 'ಚಾಲುವರಿ' ನೋ.

**ಚಾಲಾಕಿ, ಚಲಾಕಿ** (ನಾ). ಚುರುಕುತನ; ಬುದ್ಧಿವಂತಿಕೆ: ಅಹಹಹಾ ನಿನ್ನ ಚಾಲಾಕೀನೇ (ರಂಗವ. ೨೨೨). **ಚಲಾಕಿ:** ಅಂಗಡಿಗಳ ವೈವಿಧ್ಯ, ವ್ಯಾಪಾರದ ಚಲಾಕಿ, ಜನರ ಮಾತುಕತೆ ಅವನ ಪ್ರಬಂಧದಲ್ಲಿ ಮರುಧ್ವನಿಸುತ್ತವೆ (ಕೃಷ್ಣಹೊ. ೦೦೦): ತಮ್ಮ ಮಾತಿನ ಚಲಾಕಿ ತೋರಿಸಿ, ತನಗೂ ವೇದಾಂತ ಸಾಕಷ್ಟು ತಿಳಿದಿದೆ ಅನ್ನುವುದೇನು ? (ಆಳಸಿ. ೪೨).

[ ←ಪಾರ. ಚಾಲಾಕೀ; ಮರಾ. ಚಲಾಕೀ, ಚಲಾಖೀ ]

**ಚಾಲಾಕು, ಚಲಾಕು, ಚಾಲೂಕು, ಚಾಲೋಕು** (ನಾ). ೧. ಚುರುಕು; ಚಾತುರ್ಯ; ಜಾಣತನ; ಚಾಕಚಕ್ಯತೆ: ವ್ಯಾಪಾರ ಮಾಡಲು ತುಂಬ ಚಾಲಾಕು ಬೇಕು (ರೂಢಿ). ೨. ಚತುರನಾದ ವ್ಯಕ್ತಿ; ಬುದ್ಧಿವಂತಿಕೆಯುಳ್ಳವ್ಯಕ್ತಿ: ನೀವು ಮಾತಿನಲ್ಲಿ ತುಂಬಾ ಚಾಲಾಕಿದ್ದೀರಿ(ಬದುಜ. ೧೨೩); ಅವನ್ನ ಹಿಡೀಬೇಕಾದರೆ ನಿಮಗಿಂತ ಚಾಲಾಕಾದವರು ಬರಬೇಕು (ಶಕಾರ. ೩೩); ಹುಡುಗಿ ಒಳ್ಳೇ ಚಾಲಾಕಾಗಿ ಭಾಗೀರಥಿಗೆ ಕಂಡಳು (ಭಾರಥಿ. ೧೬). **ಚಲಾಕು:** ೨. ಪಾರಜದಂತೆ ಚಲಾಕಾದ ಸಾಹೇಬರೂ ಕೂಡ, ಅಕಾಲ ಜಡತ್ವವನ್ನು ಪಡೆದಂತಾಗಿತ್ತು (ದೀಪಹ. II, ೩೭೪). **ಚಾಲೂಕು:** ೧. ಸ್ವರಸೃಷ್ಟಿಯಲ್ಲಿ ಅವರಿಗೆ ಅಪಾರವಾದ ಚಾಲೂಕಿತ್ತು (ಸಂಗೀತ. ೨೬). **ಚಾಲೋಕು:** ೨. ಈಗಿನ ಕಾಲದ ಹುಡುಗಿಯರಂತೆ ಆಗಿನ ಕಾಲದವರು ಚಾಲೋಕೂ ಅಲ್ಲ (ಅನಾಮಿ. ೬೦).

[ ←ಪಾರ. ಚಾಲಾಕ್; ಮರಾ. ಚಲಾಕ್, ಚಲಾಖ್ ]

**ಚಾಲಿ₁** (ನಾ). [ನಾಟ್ಯ] ನೃತ್ಯದಲ್ಲಿ ಒಂದು ಭಂಗಿ: ಅನುವಿನಂ ಚೌಷಷ್ಟಿ ಹಸ್ತ ಮುವ್ವತ್ತೆರಡು ವಿಸುಪ ದೃಷ್ಟಿಗಳು ನಾಲ್ವತ್ತು ಮಂಡಲ ವಿನೂತನದ ಪನ್ನೆರಡು ಪೈಪಾಡು ಪಿರಿದೆನಿಸುವೈವತ್ತೊಂದು ಚಾಲಿಯಿಂದೆ . . . ನರ್ತನಂಗೆಯ್ಯುತಿರೆ (ಪಾಸೋಪು. ೦-೪೮). [ <ಸಂ. ಚಾರೀ ]

**ಚಾಲಿ₂** (ನಾ). (?): ಬನದಾಗ ಬಿತ್ತೂದು ಬನದಾಗ ಬೆಳೆಯೂದು . . . ಬನದಾಗ ಚಾಲೀ ಎರಗೂವ ಬಿದುರೀನ ಬುಟ್ಟಿ ಭೂಮಾಕ ಬರಬೇಕ (ಮಲ್ಲಿಗ. ೬೧). [ ? ]

**ಚಾಲಿತ** (ಗು). ೧. ಚಲಿಸುವಂತೆ ಮಾಡಿದ; ನಡೆಸಿದ. ೨. ಅಲುಗಿಸಿದ; ಬೀಸಿದ: ವಿಭವರಮೆಯ ಕಟಾಕ್ಷವೆಂಬಂತೆ ಭಾಮಿನೀಚಾಲಿತ ಚಾರು ಚಾಮರಂ ಮುಂಬಿನೊಳಿಂಬುವಡೆಯೆ ಬಳಜಳಧಿಯೊಳ್ಗಿಗೆದ ತರಂಗದಂತೆ ಸೂಸುವ ಸೀಗುರಿ ದೇಸಿವಡೆಯೆ (ರಾಜಶೇ. ೦೩-೭೧ ವ). [ ಸಂ. ]

**ಚಾಲಿಸು, ಚಾಳವಿಸು, ಚಾಳಿಸು₂, ಚಾಳೈಸು₁** (ಕ್ರಿ). ೧. ಚಲಿಸುವಂತೆ ಮಾಡು; ನಡೆಯಿಸು: ಮೂಲೆ ಮೂಲೆಯಲಿ ವಿದ್ಯುಲ್ಲಹರಿಯೊಂದು ಧೂಲಿಕಣ ಭೂಗೋಳ ರವಿಚಂದ್ರತಾರೆಗಳ ಚಾಲಿಪುದು ಬಿಡು ಕೊಡದೆ (ಮಂಕುಕ. ೪೩). ೨. ಅಲ್ಲಾಡಿಸು; ಅಲುಗಿಸು: ಚಾಲಿಪ ಬಾಲಮರುಗುರ್ವಿ ಪಾನನಂ . . . ಅರಲ್ದ ಮೂಗೆಸೆಯೆ ತರಕ್ಷುದಂಸಶತಸಂವೃತಮಿರ್ದುದು (ರಾಜಶೇ. ೫-೩೨). ೩. ಪಸರಿಸು; ವಿಸ್ತರಿಸು; ಹಬ್ಬು: ಏಳು ಪಾತಾಳ ಅಪ್ಪಟಿಗಲಕೆ ಚಾಲಿಸಿಹುದೆಂಬತ್ತ್ಯೆರಡೇ ಕೋಟಿ ಪರಿಯಂತ ಕೀಳು ತಾ ಭೂವಳಯ . . . ಚಾಲಿಸಿಹುದದಕರಸಯರಡೇ ಲಕ್ಷ ಲವಣಾಂಬು (ಸಂಭಪ. ೦೦-೭). **ಚಾಳವಿಸು:** ೪. ಹೆಚ್ಚುವಂತೆ ಮಾಡು; ಅಧಿಕಗೊಳಿಸು: ಮೇಲೆ ಮೇಲಭಿಲಾಷೆ ಧೈರ್ಯವ ಚಾಳವಿಸೆ ಪರಿತೋಷ ಪೂರಣದೇಳುಮುಳುಗಾಯ್ತುತ್ತರಕೆ ನಸು ಬಾಗಿದಳು ಶಿರವ (ಕುವ್ಯಾಅ. ೭-೦೦೨). ೫. ಚಲಿಸು; ನಡೆ; ಮಂದ್ನುಗ್ಗು: ಚಾಳವಿಸಿದುದು ವಿಷಯ ಸೌಖ್ಯದ ಮೇಲೆ ಮನ (ನಿಭಾಗ. ೩-೩-೫). **ಚಾಳಿಸು₂:** ೧. "ಚಾಳಿಸು—ಚಾಪಲ್ಯೇ" (ಶಮಧಾ). ೨. ಶೈಲ ಸುಂಕುಳಮಂ ಚಾಳಿಪ ಮಲ್ಲ ಜಟ್ಟಿಗಳಿಂ (ಕುಸುಮಾ. ೩-೮೭). ೫. ಚಾಳಿಸಬೇಡ ವಿಗ್ರಹಕೆ ವಿಕಳ ಬಲನಿವನು (ಕುವ್ಯಾಕ. ೦೨-೫). ೬. ನಿವಾರಿಸು; ಹೋಗಲಾಡಿಸು: ಪಾಲುಂ ನೇಱುಲ ಪಣ್ಗಳನಾಲೋಚಿಸದಧಿಕವಾಗಿ ಕೊಂಡತಿವಿಷಮಂ ಚಾಳಿ[ಪಾಠಾಂ. ಲಿ]ಸುಗುಂ ನೆಲ್ಲಿಯಕಾಯ್ (ಜಿಮದ. ೨-೮೦). ೭. ಹಾಳುಮಾಡು; ಕಳೆ: ಬರಿದೆ ರತಿಗೊಡದೆ ಈ ಪೊತ್ತ ಚಾಳಿಸಿದೆ (ಪ್ರಾಥರಾ. ೯-೩೦). ೮. ಸುಳ್ಳು ಹೇಳಿ ನಂಬಿಸು; ಠಕ್ಕಿಸು: ಅದಕಲ್ಲ ನೋಡೊಂದು ನೋಂಪಿಯೆಂದೆಮ್ಮನೊಪ್ಪದಿ ಚಾಳಿಸುವುದೊಂದು ಬಗೆಯ (ಭರಚ. ೬-೨೦). ೯. ಬಿಡು; ತ್ಯಜಿಸು; ದೂರಮಾಡು (?): ಬೀಡ ಚಾಳಿಸುವನಾನಾಡ ಚಾಳಿಸುವನ ಕೂಡೆ ಜಾಣ್ಮೆಯ ತೋಱುವಂತೆ ನೋಡಣ್ಣ ನಿನ್ನ ತಮ್ಮಂದಿರಾಟವನೆಂದ (ಭರಚ. ೪೫-೪೮); ಮೇಲಾದೊಡವೆಯ ಸಿಳಿ ಕೊಂಡಾತನ ಚಾಳಿಸಿ ಬಿಡು ನೀ ಮಗಳೆ (ಕಂನವಿ. ೬-೦೩೭); ಬಾಲಕಂ ತೊದಲಿಸುತೆ ನುಡಿದರಾವೋದಮಂ ತಾಳದುರೆ ತಮತಮಗೆ ತಾತಮಾತಯರದಂ ಚಾಳಿಸುತೆ ಜರೆದಪರೆ (ಪರಶು. ೧-೨೦). **ಚಾಳೈಸು₁:** ೫. ತರುಗಳೊಳಡಗುತ್ತ ಕಡೆಗಣ್ಣನಲಿ ನೋಡುತ್ತ ತರಳೆ ಚಾಳೈಸಿದಳು (ನಿಭಾಗ. ೮-೧೧-೧೯). ೮. ಬಲ್ಲೆವೈ ನೀನಿಷ್ಟು ಜಾಣನೆಂಬುದ ಮಾತಿನಲ್ಲಿ ನಮ್ಮನು ಚಾಳೈಸದಿರು (ಭರಚ. ೪೮-೨೨). [ ಚಾಲನ + – ಇಸು₁ ]

**ಚಾಲು, ಚಾಲ್, ಚಾಲೂ, ಚಾಳಿ₂, ಚಾಳ್₂** (ನಾ). ೧. ಚಲಿಸುವಿಕೆ; ಚಲನೆ: (ಹ). ೨. ಆರಂಭ; ತೊಡಗುವಿಕೆ: ಈ ಬಲವು ಕಾರನ್ನು ಹೊಸದಾಗಿ 'ಚಾಲು' ಮಾಡುವಾಗಲೋ (Starting) ಗುಡ್ಡದ ರಸ್ತೆಯಲ್ಲಿ ಹತ್ತುವಾಗ ಕಾರು ಕಡಿಮೆಯ ವೇಗದಲ್ಲಿ ಹೋಗುವಾಗಲೋ ಬೇಕಾಗುತ್ತದೆ (ಶಿಲ್ಪನಾ. ೨೦೪). ೩. ನಡೆವಳಿಕೆ; ವರ್ತನೆ; ಸ್ವಭಾವ: ಈಗಲಾದರೂ ತಮ್ಮ ಚಾಲು ಬಿಡದೆ, ಮತ್ತೂ ಈ ಮೇಲೆ ಸರಕಾರದ ನಿಶಾನಿ ತಂದು, ನಮ್ಮ ಜನದ ಮೇಲೆ ಚಿಕ್ಕಪುಟ್ಟ ಮಾತನಾಡಿದರು (ರಾಜೇಂದ್ರ. ೦೦೩). ೪. ಸಂಪ್ರದಾಯ; ಪದ್ಧತಿ: ಗೌಡರು ಅಳಿಯತನಕ್ಕೆ ಅತ್ತೆ ಮನೆಗೆ ಹೋಗುತ್ತಿದ್ದಾಗಲೂ ಎರಡು ಮೂರು ದಿನಗಳು ಇದ್ದು ಬರುವುದೇ 'ಚಾಲೂ' ಗಿತ್ತು (ನನ್ನೂರು. ೧೨೭). ೫. ಚಲಾವಣೆ; ಬಳಕೆ; ಚಾಲ್ತಿ: ಕಱುವಿಲ್ಲದ ಎಮ್ಮೆಗೆ ಕೊಟ್ಟರು ಮೂಱುಹೊನ್ನುಗಳ ಎರಡು ಸವಕಲು ಒಂದು ಚಾಲ[ಪಾಠಾಂ. ಸಲ್ಲಲೆ]ಇಲ್ಲ (ಪುರಂದ. ೩-೨೭-೪). ೬. ಕುಂದುರೆಯ ಹೆಜ್ಜೆ,–ನಡೆ: (ಹ). ೭. [ಸಂಗೀತ] ಹಾಡಿನ ಧಾಟಿ: ಇಂಗ್ಲಿಷ್ ಪದ್ಯಗಳನ್ನು ಹಿಂದುಸ್ತಾನಿ ಚಾಲುಗಳಲ್ಲಿಯೂ ಆಲಾಪ ಮಾಡಿ ಆ ನಂತರ ಭಾರತೀಯ ಗೀತೆಗಳನ್ನು . . . ರಾಗ ಎಳೆಯುವವನು (ಗಾಳಿಪ. ೪೪); ಆಮೇಲೆ ಶಂಕರಾಭರಣ ರಾಗ ಏಕತಾಳದ 'ಚಾಲು' ಕುಣಿತವನ್ನೂ ಕುಣಿದ (ನನ್ನೂರು. ೩೦೮). **ಚಾಲ್:** ೩. ಹಾಗೆ ಬಂದಂತಾವರ ಚಾಲ್ ಚಲನ್ ವಗ್ಯೆರೆ ನಡತೆಗಳನ್ನು ಇನ್ನೂ ಅವರ ಸಮ್ಮಂಧವಾಗಿ ತಿಳಿಯತಕ್ಕ ಸಂಗತಿಗಳನ್ನೆಲ್ಲಾ ವಿಚಾರಿಸಿ ತಿಳಿದುಕೊಂಡು . . . ರಿಪೋರ್ಟ್ ಮಾಡತಕ್ಕದ್ದು (ಗ್ರಾಮಾಕ. ೪೬). **ಚಾಲೂ:** ೫. ಆಹಾರಧಾನ್ಯಗಳ ರೇಶನ್ನು ಚಾಲೂ ಆಗಿ . . . ಸಾಗಿಸಲ್ಪಡುತ್ತಿತ್ತು (ಪಾನಕ. ೬೧). **ಚಾಳಿ₂:** ೩. ಕೀಳುಜಾತಿಯ ಮನೆಯಲುಂಬುದು ಮೇಲೆ ತಂದೆಯ ತಲೆಯನರಿವುದು ಚಾಳಿಯೇ ಭಕ್ತರಿಗೆ ಭಕ್ತರ ಭಕ್ತಿ ಏತಜಿದು (ಬಸಪು. ೨೮-೩೨); ಭಾವಶುದ್ಧಿಯಲ್ಯೆವರನು ಸಂಭಾವಿಸುವೆನವರವರ ಚಿತ್ತದ ಭಾವವಱಿದುಪಚರಿಸುವೆನು ಚತುರತೆಯ ಚಾಳಿಯಲಿ (ಕುವ್ಯಾಅ. ೧೫-೨೩); ಹೊತ್ತ ಜೋಹಕೆ ಚಾಳಿ[ಪಾಠಾಂ. ಜೋಹದಜಾಳಿ]ಲೇಸಾಯಿತ್ತು(ತೊರರಾ ೪-೪-೪೦). ೮. ಚಟ; ಅಭ್ಯಾಸ; ಗೀಳು: ಆಱುತೇಱುತ ಬೆರಳು ಚಾಳಿ ಮಿಡುಕುವ ಬಾಯಿ ಮೇಳದೊಳು ತೊಡಕ ಬಿಡದವನ ಜಪವದುವೆ ಹಾಳುಮನೆಯಂತೆ (ಸರ್ವಜ್ಞ. ೦೬೩); ದೇವಲೋಕದವರಿಗೂ ಅಂಥ ಚಾಳಿ ತಪ್ಪಿದ್ದಲ್ಲ (ಕಲ್ಲಿಕಾ. ೧೪೭): ಯಾವ ಮನೆಹಾಳು ನನಮಗ ಕಲಿಸಿದನೋ ಈ ಚಾಳೀನ (ಬೆಂಗಬ. ೬): ಹಿರಿಯಕ್ಕನ ಚಾಳಿ ಮನೆಮಂದಿಗೆಲ್ಲ (ಗಾದ). ೯. ಬಗೆ; ರೀತಿ: ತಾಳಮೇಳದ ಗತಿಯ ಗಮಕದ ಕೀಲಣೆಯ ಕಾಲಾಟ ವಿಘಟಿಸಿ ಚಾಳಿಯಲಿ ತಬ್ಬಿಬ್ಬಾಗುತ

ಲಿರ್ದಳಾ ಮಾಯೆ (ಪ್ರಭುಲಿೀ. ೭-೨೬): ವನರುಹಾಕ್ಷನ ಧ್ಯಾನದಲಿ ಕೀಳಿನಕುಲೇಶ್ವರ ಸತಿಯರೀತನನನುವಟಿತು ಹೊದ್ದಿದರು ಹರಿಮೇಖಲೆಯ ಚಾ[ಪಾಠಾಂ. ಥಾ]ಳಿಯಲಿ (ತೊರರಾ. ೧-೫-೪೭). ೧೦. ಮಲ್ಲಯುದ್ಧದ ಒಂದು ವರಸೆ: ಭಾಳನೇತ್ರನ ವರದ ಗರುಡಿಯ ಚಾ[ಪಾಠಾಂ. ಜಾ]ಳಿಯೆನಿತುಂಟನಿತನಿವರಲಿ ಮೇಳವಿಸಿದನು (ತೊರರಾ. ೧-೦೩-೧): ಸೂಳುದೆಗದದ್ರಿಯಲಿ ತರುಶಾಖಾಳಿಯಲಿ ಮುಷ್ಟಿಯಲಿ ಲಾಗಿನ ಚಾಳಿಯಲಿ ಮಂಡಿಯಲಿ ಕಾದಿದರು (ಅನಂರಾ. ೪-೧-೪೫). ಚಾಳ್ಯು: ೮. ತಾಳದ ಶ್ವಾಪದ ಲೋಲಭಕ್ತರಿಗೀವ ಚಾಳಿಹಿದೀತಗೆ ಪಾಲಿಸಲೆಂತು (ಅಂಬಿಕ. ೧-೧೦೦).

ಚಾಳಿ ಬಿಡು=ಸ್ನೇಹ ಬಿಡು ; ಸಂಗ ಬಿಡು: ಇಷ್ಟು ಸಣ್ಣ ಮಾತಿಗಾಗಿ ಅಣ್ಣ ತಂಗಿಯರಲ್ಲಿ ವೈಮನಸ್ಸು ಹುಟ್ಟಿತು ; ಮೊದ ಮೊದಲು ಹುಡುಗರಂತೆ ಚಾಳಿ ಬಿಟ್ಟರು (ಭೂಮಿತಾ· ೪೧). [ ←ಹಿಂ. ಮರಾ. ಚಾಲೂ ]

ಚಾಲುಕ್ಯ, ಚಾಳುಕ್ಯ (ನಾ). ಕರ್ನಾಟಕದ ಒಂದು ಪ್ರಾಚೀನ ರಾಜವಂಶದ ಹೆಸರು: ಚಾಲುಕ್ಯರ ಶಿಲ್ಪದಲ್ಲಿ ನಾಗರ ಮತ್ತು ದ್ರಾವಿಡ ರೀತಿಗಳ ಮಿಳಿತವಿರುವುದರಿಂದ ಅದನ್ನೇ ವೇಸರವೆಂದು ಹೇಳಬಹುದು(ಭಾರದ.೪೫೨). ಚಾಳುಕ್ಯ: ಕಾದಿಯೋಡಿದೊಡೆಬ್ಬಟ್ಟಿದನಟ್ಟಿ ಮುಟ್ಟಿ ಪಿಡಿದಂ ಚಾಳುಕ್ಯ ಚಕ್ರೇಶ್ವರಂ(ಕಾವ್ಯಾವ. ೭೭): ಕದಂಬರು . . . ಚಾಳುಕ್ಯರು, ಹೊಯ್ಸಳರು– ಇವರ ಪ್ರೋತ್ಸಾಹದಿಂದ ಜೈನಧರ್ಮ ಹನ್ನೆರಡನೇ ಶತಮಾನದವರೆಗೆ ಬೆಳೆದು ಬೆಳಗಿತು (ಕರಾಅ. ೭೯): ಚಾಳುಕ್ಯರ ಶಿಲ್ಪವನ್ನನುಸರಿಸಿಯೇ ಪಲ್ಲವರು ದೇವಾಲಯಗಳನ್ನು ನಿರ್ಮಿಸಿದರು (ಹೊಯ್ಸಾವಾ. ೩).

ಚಾಳುಕ್ಯಕಂಠೀರವ = ಚಾಳುಕ್ಯ ಪಂಚಾನನ ; ಕಾಂತೆಯ ಮುಂದೆ ಪೂಣ್ದು ನುಡಿದಂ ಚಾಳುಕ್ಯ ಕಂಠೀರವಂ (ಗದಾಯು. ೧-೭೪). ಚಾಳುಕ್ಯ ಚಕ್ರವರ್ತಿ = ಒಂದು ಬಿರುದು : ಚಾಳುಕ್ಯ ಚಕ್ರವರ್ತಿ ಶ್ರೀಸಾಹಸಭೀಮವಿಜಯದೊಳ್ ಭೀಮಸೇನಪ್ರತಿಜ್ಞಾವರ್ಣನಂ (ಗದಾಯು. ೧-೭೪ ವ). ಚಾಳುಕ್ಯ ನಾರಾಯಣ = ಚಾಳುಕ್ಯರಲ್ಲಿ ನಾರಾಯಣ ನಂತಿರುವವನು ; ಒಂದು ಬಿರುದು : ಶಂಕರ ಕಲ್ಪದ್ರುಮನೀಗಭೀಷ್ಟ ಫಲಮಂ ಚಾಳುಕ್ಯ ನಾರಾಯಣಂ (ಗದಾಯು. ೧-೩). ಚಾಳುಕ್ಯಪಂಚಾನನ = ಚಾಳುಕ್ಯರಲ್ಲಿ ಸಿಂಹದಂತಿರುವವನಂ ; ಒಂದು ಬಿರುದು : ಚಾಳುಕ್ಯ ಪಞ್ಚಾನನಂ ಶ್ರೀಮತ್ ಪಞ್ಚಲದೇವರ್ (ಎಇ. VI, ೨೫೯-೪ ; 975). ಚಾಳುಕ್ಯ ಮಾರ್ತಂಡ = ಚಾಳುಕ್ಯರಲ್ಲಿ ಸೂರ್ಯನಂತಿರುವವನಂ ; ಒಂದು ಬಿರುದು : ಮಾಟಕ್ಕೆ ಮಂಗಲಮುಚ್ಚಂಡಕರಂ ಮಹೀವಲಯದೊಳ್ ಚಾಳುಕ್ಯಮಾರ್ತಂಡನಾ (ಗದಾಯು. ೧-೪). ಚಾಳುಕ್ಯಾಭರಣ = ಚಾಳುಕ್ಯರಿಗೆ ಆಭರಣದಂತಿರುವವನು ; ಒಂದು ಬಿರುದು : ಸತ್ಯಾಶ್ರಯ ಕುಳತಿಳಕಂ ಚಾಳುಕ್ಯಾಭರಣಂ (ಸೌಇಇ. XX, ೪೭-೪ ; 1072).

[ ಸಂ. ]

ಚಾಲುಗೇಣಿ(ನಾ). ವರ್ಷಕೊಮ್ಮೆ ಕೊಡುವ ಗೇಣಿ,–ಗುತ್ತಿಗೆ : ಮಳೆ ಬಿದ್ದೊಡನೆ ಅವರು ಕೆಲಸಕ್ಕೆ ಬರುವುದನ್ನು ನಿಲ್ಲಿಸಿದರು, ಅವರದೂ ತಪ್ಪಲ್ಲ ಏಕೆಂದರೆ ಅವರೂ ಹಂಗಿನ ಚಾಲುಗೇಣಿ ಒಕ್ಕಲುಗಳೇ (ಬಾಳಿಗಿ. ೫೬).

[ ಚಾಲು + ಗೇಣಿ (<ಕೇಣ್ಯ) ]

ಚಾಲುವರಿ, ಚಾರಿವರ್ಿ₂, ಚಾರ್ವರಿ, ಚಾಲವರಿ, ಚಾಲುವರೆ, ಚಾಲ್ವರಿ (ಕ್ರಿ).ಬೇಡು; ಅಂಗಲಾಚು; ಬಹಳವಾಗಿ ಬೇಡಿಕೊಳ್ಳು; ಗೋಗರೆ: ಚಾಲುವರಿದು ನಾನು ಅವರನ್ನು ಇಲ್ಲಿಗೆ ಕರೆಸಿಕೊಂಡಿದ್ದೇನೆ (ಹುಚ್ಚಾಟ. ೧೧) ; ಕಾಕಾ ಊಟ ಮಾಡಿಕೊಂಡು ಹೋಗಿರೆಂದು ಚಾಲುವರಿದ (ವೃನಿ. ೨೬೯). ಚಾರಿವರ್ಿ₂ : ಛಲವಿಡಿದೊಂದನೆಳಸಿ ಚಾರಿವರಿಯದೆ ನೆಲವಿಡಿದೊಂದಟಿಳಿರದೆ ನೆಟಿ ನಿಂದ ನೀರ ತೆಪ್ಪದವೋಲು (ಹದಿಬ. ೩-೩೭). ಚಾರ್ವರಿ : ಚಂದಿರನ ಕಾಣುತಲೆ ಚಾರ್ವರಿಯೆ ಚಿತ್ರಾ (ರಾವದಿ. ೪೧).

ಚಾಲವರಿ : ಕಾಲನು ಪೊರಳಿಗೆ ಬೀಳು ಕಟ್ಟಿಸಿಕೊಂಡೆ ಚಾಲವರಿದೆ ಗೊಲ್ಲಬಾಲೆಯರೆಲ್ಲರಿಗೆ (ವಿದಾಕ್ಯ. ೧೫೫-೩) : ಅವ ಕಾವ ಗೋವ ಚಾಲವರಿದು ಕೂಗಿ ಶುದ್ಧ ಲಾವಕರಟ್ಟುಳಿ ಬಿಡಿಸು (ಮೋಕ್ಷದೀ. ೩೮-೫). ಚಾಲುವರೆ : ಬೇಕಾದಷ್ಟು ಚಾಲುವರೆದು ಹೇಳಿತಿದ್ದೆ (ನಮ್ಮಬ. ೧೩) : ವೇಲೂರ ಮುತ್ತಿಗೆ ಯನ್ನೆಬ್ಬಿಸಬೇಕೆಂತಲೂ ಚಾಲುವರೆದುದರಿಂದ ಕೂಟ್ಸು ಆ ಮಾತಿಗೆ ಒಡಂಬಟ್ಟು (ಚರಿಸಂ. ೧೫೪). ಚಾಲ್ವರಿ : ಹಲವು ದೈವರಿಗೆ ಕೇವಲ ಚಾಲ್ವರಿದರೆ ಹಲಬುವುದಲ್ಲದೆ ಬಳಲಿಕೆ ಪೋಗೋದೇನಯ್ಯ (ಮೋಕ್ಷದೀ. ೫೩-೩) ; ಕೈಲಿ ಬೆಣ್ಣೆಯಿದ್ದವನು ತುಪ್ಪಕೆ ಚಾಲ್ವರಿವುದುಂಟೆ (ಕುಚೇಲೋ. ೧೮). ‘ಅಲ್ವರಿ’ ಪರಾ. [ ? ]

ಚಾಲುವರೆ ‘ಚಾಲುವರಿ’ ನೋ.

ಚಾಲೂ ‘ಚಾಲು’ ನೋ.

ಚಾಲೂಕು ‘ಚಾಲಾಕು’ ನೋ.

ಚಾಲೋಕು ‘ಚಾಲಾಕು’ ನೋ.

ಚಾಲ್ತಿ ‘ಚಾಲತಿ’ ನೋ.

ಚಾಲ್ತಿಸಾಲು ‘ಚಾಲತಿಸಾಲು’ ನೋ.

ಚಾಲ್ವರಿ ‘ಚಾಲುವರಿ’ ನೋ.

ಚಾವಂಡಯ್ಯ (ನಾ). ಒಬ್ಬಾತನ ಹೆಸರು : ಚಾವಣ್ಡಯ್ಯಂಗೆ ಇವರ್ಪೆಟ್ಟಿ ನಾಡುಸಾಸನಂಗೊಟ್ಟ (ಎಕ. IX, ಹೊಸಕೋ. ೧೧೦-೭ ; 997).

[ <ಚಾವುಂಡ + ಅಯ್ಯ₁ ]

ಚಾವಕ (ನಾ). [ಗಣಿತ] ಒಂಭತ್ತು ಎಂಬ ಸಂಖ್ಯೆಯ ಸಂಕೇತ : ನವ . . . ಚಾವಕ, ಕೌಶವ ? . . . ನಾಟ್ಯಾಂಗ, ಇಂತಿನಿತುಂ ೯ಕ್ಕೆ ಪೆಸರು (ವ್ಯವಹಾ. ೧೧). P ‘ನವಕ’ ಇರಬಹುದೆ ?

ಚಾವಗಾವುಂಡ (ನಾ). ಒಬ್ಬ ವ್ಯಕ್ತಿಯ ಹೆಸರು : ಲಕಗಾವುಣ್ಡಂ ಭವಗಾವುಣ್ಡ ಚಾವಗಾವುಣ್ಡ ಭಸಗಾವುಣ್ಡ (ಎಕ. IV, ಹಗ್ಗಡ. ೧೦೪-೯ ; 1037).

[ <ಚಾವು + ಗಾವುಂಡ (<ಗಾಮುಂಡ) ]

ಚಾವಟಿ ‘ಚಾಟಿ₁’ ನೋ.

ಚಾವಟೆಯು ‘ಚಾಪಟೆಯು’ ನೋ.

ಚಾವಡಿ, ಚಾವಡೆ, ಚಾವುಡಿ, ಛಾವಡಿ (ನಾ). ೧. ಆಸ್ಥಾನ ; ಸಭಾಮಂದಿರ ; ಓಲಗಶಾಲೆ : ಮುತ್ತಿನೊಳೆಸೆವ ಚಾವಡಿಯೊಳು ಕುಳ್ಳಿರ್ದು . . . ನುಡಿದನು (ಅಂಜಜ. ೭-೦೩೬) ; ಮರುಳು ತಂಡಗಳಾಪ್ತಸೈನ್ಯವು ನಿರುತ ಚಾವಡಿ ರುದ್ರಭೂಮಿಯು (ಕಾಶಿರಾ. ೨-೨೨) ; ಭಿತ್ತಿಯೊಳ್ ಪೊಱಮಟ್ಟು ಚಾವಡಿ ಮದನಕೈಯೆತ್ತಿದ ಪದೆಪುದಂಡೆಗಳು . . . ರಂಜಿಸಿತು (ಮೋಹತ. ೨೨-೭). ೨. ಹಳ್ಳಿಯಲ್ಲಿಯ ಪಂಚಾಯಿತಿ ಸಭೆ ಸೇರುವ ಸ್ಥಳ ; ಹಳ್ಳಿಯ ಕಚೇರಿ ; ಗ್ರಾಮಂಕಚೇರಿ : ಈತನು ಗ್ರಾಮದ ಚಾವಡಿಯಲ್ಲಿ ಬಂದ ವ್ಯವಹಾರಗಳನ್ನು ಇತ್ಯರ್ಥ ಪಡಿಸುತ್ತಿರುವಾಗ . . . ಸೈನ್ಯಸಮೇತನಾಗಿ ಬಂದು (ಸಂಸಕ. ೧೧೭) ; ಊರು ಎನಿಸಿಕೊಳ್ಳುವುದಕ್ಕೆ ಒಂದು ‘ ಚಾವಡಿ ’ ಇರಬೇಡವೆ ? (ಗ್ರಾಳಿಗು. ೦) ; ಚಾವಡಿಯಲ್ಲಿ ಕುಳಿತು ನಡೆಸುವ ತಾಳಮದ್ದಳೆಯ ಸಂಪ್ರದಾಯ (ಯಕ್ಷಬ. ೧೬). ೩. ಮನೆಯ ಮುಂದಿನ ಜಗುಲಿ,–ಕಟ್ಟೆ. ೪. ಆಶ್ರಯಸ್ಥಾನ : “ ಹಕ್ಕೆ ಗವಿ . . . ಚಾವಡಿ ಪೊಟಲ್ ಬೀಡುವಾಗರವೆಂದೊಡಾಶ್ರಯಾಕೆ ನಾಮಮುಕ್ಕುಂ ” (ಕಬ್ಬಿಕ. ೬೩) ; “ ಚಾವಡಿಯು ಮೇರೆಯಾಗಾರ ವಸದಂ ” (ಕವಿಕಂ. ೦೩೫). ೫. ಕೊತವಾಲನ ಕಚೇರಿ ; ಪೋಲೀಸ ಚೌಕಿ : ಚೆಂನ್ನಪಟ್ಟಣದ ಚಾವಡಿಗೆ ಸಲುವ ಕಿಱುಗವರ ಸ್ಥಳದ ಸುಳ್ಳೆರಿಯ ಕಾಲುವಳಿ ಹಿರಿಯಾಕ ಮನೆಯ ವಣಪುಮಾಣಿನಲ್ಲಿ ಕುಳಬಳಿ ಸಾಂಮ್ಯ ಸಹ (ಎಕ. IX (S), ಚನ್ನಪ. ೨೯೯-೮; 1387) ; ಕಳ್ಳನನ್ನು ಹಿಡಿದು . . . ಕಟ್ಟಿ ಚಾವಡಿಗೆ ತೆಕ್ಕೊಂಡು ಹೋಗಿ ಲಾಲಕಂಭಕ್ಕೆ ಬಿಗಿದರು (ಕಥಾಮಂ. IV, ೨೭).

ಚಾವಡೆ: ೨. ಮುಳುವಾಯ ಚಾವಡೆಯ ಮಂನೆಯ ಶ್ರೀಮನ್ಮಹಾನಾಯಜ್ಯಾಚಾರ್ಯರ . . . ಮಕ್ಕಳು (ಎಕ. X, ಚಿಂತಾಮ. ೩೯-೩ ; 1407?). ಚಾವುಡಿ: ೫. ಮೇಷಲಗ್ನ ಉದಯದಲಿ ಘಳಿಗೆ ೬ ಯಲೂ ಬೇಲೂರು ಚಾವುಡಿಗೆ ಸಲುವ ಎಲಹಜ್ಜ ನಾಡ ಸಿವನಸಮುದ್ರ ಸೀಮೆ ವೊಳಗಣ . . . ಸರ್ವ್ವಮಾನ್ಯದ ಅಗ್ರಹಾರದಲೂ (ಎಕ. IX, ನೆಲಮಂ. ೩೦-೩ ; 1533). ಛಾವಡಿ: ೩. ಮಾತನಾಡುತ್ತ ನಮ್ಮ ಛಾವಡಿಯವರೆಗೂ ಅವನನ್ನ ಕರೆದುಕೊಂಡು ಹೋದೆ (ತುಟಮಿ. ೪೪).

[ ←ಹಿಂ. ಮರಾ. ಚಾವಡೀ ]

**ಚಾವಡಿಕಾರ** (ನಾ). ಪಂಚಾಯತಿಯ ಸದಸ್ಯ ; ಪಂಚ (ಉಕ) : ಶಿವಾಚಾರದ ನಂಜಪ್ಪಯೆಂಬ ಚಾವಡಿಕಾರ ಬಂದು (ರಾಜೇಂದ್ರ. ೧೪೧).

[ ಚಾವಡಿ + - ಕಾರ$_1$ (< - ಕಾಱ) ]

**ಚಾವಡಿವನೆ** (ನಾ). ಚಾವಡಿಯ ಮನೆ; ಸಭಾಮಂದಿರ ; ಓಲಗಶಾಲೆ: ದಿನಪನುದಯಾಚಲದ ಚಾವಡಿವನೆಗೆ ಬರೆ ಬಲವೆರಡು ಗಳಗರ್ಜನದಿ ಬಂದೊಡ್ಡಿದವು ಕಳನೊಳು ಖತಿಯ ಪಡಪಿನಲಿ (ಕುವ್ಯಾಭೀ. ೬-೮).

[ ಚಾವಡಿ + ಮನೆ ]

**ಚಾವಡಿವಳಿತ** (ನಾ). ಆಸ್ಥಾನದ ಅಧಿಕಾರ ; ಸೀಮೆಯ ಆಡಳಿತ : ಈ ನಮ್ಮ ಅವಸ್ಥೆಯ ಗುಟ್ಟನ್ನು ಭೇದಿಸಿಕೊಳ್ಳಬಲ್ಲ ಗೂಢಚಾರ ಪ್ರಣಿಧಿಗಳು ಮೈಸೂರ ಮಹಾಸ್ವಾಮಿಯವರ ಚಾವಡಿವಳಿತದಲ್ಲಲ್ಲದಿಲ್ಲವೆಂಬ ನಿಶ್ಚಯವೂ ನಮ್ಮನ್ನು ಕದಡಿರಲಿಲ್ಲ (ಟಿಟ್ಕುಅ. ೬೫-೧೯).

[ ಚಾವಡಿ + ವಳಿತ (=ವಲಿತ) ]

**ಚಾವಡೆ** 'ಚಾವಡಿ' ನೋ.

**ಚಾವಣಿ** 'ಛಾವಣಿ' ನೋ.

**ಚಾವಣಿಗೆಗೊಳು** (ಕ್ರಿ). ಆಶ್ರಯಕೊಡು (?): ತಲೆಗಾಯಿದುತ್ತ ಮರನೂ ಚಾವಣಿಗೆಗೊಳುತಲ್ಲಿಗಲ್ಲಿಗುರೆ ಕನಕಮಣಿ ಕೇವಲುತ್ಕ್ಯೃಷ್ಟದಿಂ (ಪರಶು. ೧೦-೦೫). [ ಚಾವಣಿಗೆ ? + ಕೊಳು (<ಕೊಳ್$_1$) ]

**ಚಾವಬ್ಬೆ** (ನಾ). ಒಬ್ಬಾಕೆಯ ಹೆಸರು: ಚಾವಬ್ಬೆಯ ಮಗಂ ಪೋಚನಕಲ್ಲ (ಮ್ಯಆರಿ. ೧೯೪೨, ೨-೭ ; 973 ?) [ <ಚಾಮ + ಅಬ್ಬೆ$_1$ ]

**ಚಾವಯ್ಯ** (ನಾ). ಒಬ್ಬಾತನ ಹೆಸರು: ಕನ್ನಬ್ಬರಸಿಯ ತಮ್ಮ ಚಾವಯ್ಯನುಂ ದಮ್ಮಡಯ್ಯನುಂ ನಾಗವರ್ಮನುಂ ಬಂದಿಲ್ಲಿ ದೇವರಂ ಬಂದಿಸಿದರ್ (ಎಕ. II, ೪೬೬-೧ ; ಸು. 1000).

[ <ಚಾಮ + ಅಯ್ಯ$_1$ ]

**ಚಾವಲ, ಚಾವಳ, ಜಾವಳ$_1$** (ನಾ). ಚಾಪಲ್ಯ; ಚಪಲತನ; ದುಡುಕುವ ಸ್ವಭಾವ. 'ಚಾವಲಿಸು' ಪರಾ. ಚಾವಳ: ಪತ್ಸಕ್ಕೆ ವತ್ಸಂ - ಕಪಿಲಾ - ಕವಿಲೆ . . . ಚಾಪಳ - ಚಾವಳ (ಶಮದ. ೨೫೮ ಪ್ರಯೋ). ಜಾವಳ$_1$: "ಜಾವಳಮೆನಲ್ಕೆ ಚಾಪಲಮದು ತಾಂ" (ಕವಿಕಂ. ೨೦೦).

[ <ಸಂ. ಚಾಪಲ ]

**ಚಾವಲಿಸು, ಚಾವಳಿಸು, ಜಾವಳಿಸು** (ಕ್ರಿ). ೧. ಚಪಲತೆಯನ್ನುಂಟು ಮಾಡು ; ದುಡುಕುವಂತೆ ಮಾಡು : ಕುಲಮದವೊಂದು . . . ರಾಜ್ಯಮದವೊಂದಿನಿತುಂ ಮದಮೆಯ್ದೆ ಕೂಡೆ ಚಾ[ಪಾಠಾಂ. ಜಾ]ವಲಿಸೆ ಮದೋದ್ಧತರ್ಕಳಿರಲಾರದೆ ಪೇಟಿ ಬೆಸನಾವುದೆಂದು . . . ಕದರ್ಥಿಸಿದರ್ ಸಹಸ್ರನಂದನರ್ (ಅಜಿಪು. ೧೦-೧೦). ಚಾವಳಿಸು: ೨. ಅಲ್ಲಗಳೆ ; ಜರೆದು ಮಾತನಾಡು ; ಹೀಯಾಳಿಸು : ಇಳಿಯುಂ ತಾಳ್ದಿದ . . . ಧೂಮಧ್ವಜಂ ಝಳಮಂ ಮೇಲೆ ಕಡಂಗಿ ಪೊಯ್ವುವಿಳಿಕೆಯ್ದೀನಾನುಮಂ ಕೀಟಿ ಚಾ[ಪಾಠಾಂ. ಜಾ]ವಳಿಪಂತಾದುದು ಜೀರ್ಣಪರ್ಣಪರುಷಪ್ರಧ್ವಾನದಿಂ ಮಾರುತಂ (ಪಂಠಾಮಾ. ೬-೧೦೨). ೩. ಧ್ವನಿಮಾಡು ; ತೊಂಡುಗೆಡೆ : ಕಾಮನ ಡಾಮರಮಲ್ಲಿ ಕೋಕಿಲೋತ್ಕರರವಮಲ್ಲಿ ಚಾವಳಿಪ ರಾಜಶುಕವ್ರಜಮಲ್ಲಿ . . . ಸಾರದಿರಾ ಮರನಂ ವಸಂತದೊಳ್ (ಕಾವ್ಯಾವ. ೩೬೭) ; ಅರಗಿಳಿವಿಂಡು ಬಂಡಳಿಪ ಸಾರಿಕೆ ಚಾವಳಿಪನ್ನದಾಳಿ ಗಾವರಿಸುವ ಸೋಗೆ (ಪುಷ್ಪಪು. ೧೪-೨೩). ಜಾವಳಿಸು: ೨. ಉದ್ಯ್ರಮರ ಮುದ್ಯ್ರಮರಂಗಳ ಗಾವರಕ್ಕೆ ಜಾ[ಪಾಠಾಂ. ಚಾ, ಬಾ]ವಳಿಸಿ ಜಡಾಳದೊಳ್ಮೊರೆವುವು (ಅನಂಪು. ೧-೭೭). [ ಚಾವಲ + - ಇಸು$_3$ ]

**ಚಾವಳ** 'ಚಾವಲ' ನೋ.

**ಚಾವಳಿಸು** 'ಚಾವಲಿಸು' ನೋ.

**ಚಾವಿ** (ನಾ). ಬೀಗದ ಕೈ; ಕೀಲಿ ಕೈ: ಒಳಗಣ ಹೊರಗಣ ಬಿಯ್ಯಗಗಳಿಗೆ ಎಷ್ಟು ಚಾವಿ - ಬೀಗದ ಕಯ್ಗಳು ? (ಮುಂತ್ರಶ. ೫೩-೨೩) ; ಚಾವೀನ ತಗೊಂಬಾಂತ ಹೇಳಿದ್ರು (ದೇಶಭು. ೯೩).

[←ಹಿಂ. ಚಾಬೀ ; ಮರಾ. ಚಾವೀ. ]

**ಚಾವುಂಡ** (ನಾ). ಒಬ್ಬಾತನ ಹೆಸರು : ನೆಗಟ್ಟ ಮಾಬಳಯ್ಯಂಗನೇಕ ಗುಣರತ್ನರಾಶಿ ಮನುಮುನಿಚರಿತಂ ವಿನಯವಿಭೂಷಣನೊಳ್ಪಿಂಗಿನೆಯಂ ಮೊದಲೆನಿಸಿ ಪುಟ್ಟಿದೊಂ ಚಾವುಣ್ಡಂ (ಎಕ. III, ತಿರುಮ. ೬೯-೧೫ ; ಸು. 980). [ <ಚಾಮುಂಡ ]

**ಚಾವುಂಡಿ, ಚವಡಿ, ಚವುಡಿ, ಚೌಡಿ** (ನಾ). = ಚಾಮುಂಡಿ : ಮಕಾರಕ್ಕೆ ವಕಾರಂ - ಅಮರೀ - ಅವರಿ . . . ಚಾಮುಂಡೀ - ಚಾವುಂಡಿ (ಶಮದ. ೨೬೩ ಪ್ರಯೋ). ಚವಡಿ: ಬಲಪ್ಪದಂನಾಯಕರ ಪ್ರಧಾನ ಕಳವತಿಷ ಚವಡಿಯಕ್ಕನವರು (ಎಕ. X. ಕೋಲಾರ. ೩೨-೯ ; 1342). ಚವುಡಿ: ಅವನು ಚವುಡಿಯನ್ನು ಪೂಜಿಸುತ್ತಿದ್ದಾನೆ (ರೂಢಿ). ಚೌಡಿ: ಬೆಟ್ಟದ ಚೌಡಿಗೆ ಗಡಿಯ ಭೈರವನಿಗೆ ಕೊಟ್ಟೆವು ನರಬಲಿಯೆನುತ (ಕಂನವಿ. ೩-೭೦).

[ <ಚಾಮುಂಡಿ ]

**ಚಾವುಡಿ** 'ಚಾವಡಿ' ನೋ.

**ಚಾಷ** (ನಾ). ಒಂದು ಬಗೆಯ ನೀಲಿಬಣ್ಣದ ಪಕ್ಷಿ; ಶಕುನದ ಪಕ್ಷಿ; "ಚಾಷಃ, ಕಿಕೀದಿವಿಃ - ೨ ಹಂಗನಹಕ್ಕೀ ಹೆಸರು. ಶಕುನದಹಕ್ಕಿ, ಆಂಧ್ರದಲ್ಲಿ ಪಾಲಪಕ್ಷಿ" (ಸಿದ್ಧಾಂತಿ. ೧೩೮) ; ತರದಿಂ ಚಾಷ[ಪಾಠಾಂ. ಪ] ಮಯೂರ ತಾರ ತಿಳಿಗೋಕ್ಷೀರಾಬ್ಜ ನೀರೋಪಮಂ ದೊರೆಕೊಳ್ಗುಂ ಶಶಿ ಭಾನುಗಳ್ಗೆ (ಲೋಕೋಪ. ೪-೨೯) ; ಚಾಷ ಭಾಸ ಹಂಸ ಬಕ . . . ಸುಪರ್ಣಾದಿ ಪಕ್ಷಿ ಸಮೂಹಗಳಂ (ಭಾರಶಾಂ. ೩೬-೨೬೪). [ಸಂ. ]

**ಚಾಷಗತಿ** (ನಾ). [ನಾಟ್ಯ] ನರ್ತನದಲ್ಲಿ ಒಂದು ಬಗೆಯ ಪಾದಚಲನೆ; "ಬಲಗಾಲನ್ನು ಒಂದು ಗೇಣಂ ಮುಂದಿರಿಸಿ ಪುನಃ ಅದೇ ಕಾಲನ್ನು ಜಾಗ್ರತೆ ಎರಡು ಗೇಣು ಹಿಂದಕ್ಕಿರಿಸಿ ನೆಗೆದಂ ಸ್ವಭಾವವಾಗಿ ನಿಂತುಕೊಂಡು ಹೆದರಿಕೆಯಿಂದ ಕೂಡಿರುವಂತೆ ಹಿಂದಕ್ಕೂ ಮುಂದಕ್ಕೂ ಅನೇಕಾವರ್ತಿ ಚಲಿಸುವುದು" (ಲಾಸ್ಯರಂ. ೩೧೬ ಗದ್ಯಾನುವಾದ) : ಮಿಸುಗುವ ಸಮಪಾದಂ ರಂಜಿಸುತ್ತಿರ್ಪ ಸ್ಥಿತಾವರ್ತ ಶಕಟಾಸ್ಯಂಗಳ್ ಪಸರಿಪ ವಿಚ್ಯವೆಯುಧ್ಯರ್ಧಿ ಸಮಂತಾ ಚಾಷಗತಿಯುಮಂಬುಜಗಂಧೀ (ಲಾಸ್ಯರಂ. ೬-೨). [ ಚಾಷ + ಗತಿ ]

**ಚಾಸರಾಳ್** (ನಾ). ಒಂದು ಊರಿನ ಹೆಸರಂ (?): ಶ್ರೀ ಚಾಸರಾಳ್ ಪೊನ್ನಾಕವಳಿಗೆ ಕಾಳಮ್ಮನ್ ಮಾನ್ದಳಿ ಬೀರಿಯದುಳ್ಳಿ ಬಲವೆಮ್ಮರಸರ ಕಾಳೆಗದುಳ್ಳೆ ಎಱಿದು ಸತ್ತನ್ (ಎಕ. XVI, ತುಮಕೂ. ೧೦೦-೧ ; 780).

[ ? ]

**ಚಾಹಡ** 'ಚಹಡ' ನೋ.

**ಚಾಹಿಯ** (ನಾ). ಛತ್ರಿ ಹಿಡಿಯುಂವವನು (?) : ಸಿಡಿದು ಕರ್ಣನ ತಲೆ ಧರಿತ್ರಿಗೆ ಕೆಡೆಯೆ . . . ಹಡಪಿಗರು ಚಾಮರದ ಚಾಹಿಯರೊಡನೆ ನೆಲ ಕುರುಳಿದರು (ಕುವ್ಯಾಶ. ೧-೮). [<ಪ್ರಾ. ಛಾಹಿ, ಛಾಹಿಯಾ = ನೆರಳು ]

**ಚಾಹುಲ್ಲು** (ನಾ). ಶುಂಠೀಹುಲ್ಲು; "ಭೂತೃಣಾ" (ಪಂಡಿತ.) [ ? ]

**ಚಾಳ, ಚಾಳು₁** (ನಾ). (ಉಕ) ಒಂದೇ ಬಗೆಯ ಮನೆಗಳ ಸಾಲು; ಹಲವು ಮನೆಗಳನ್ನೊಳಗೊಂಡ ವಠಾರ : ಗಿರಣಿಯ ಕೂಲಿಕಾರರು ವಾಸಿಸುವ 'ಚಾಳ'ದಂಥ ಓಣಿ (ವೋಹಬ. ೪೫೯) : ದೊಡ್ಡ ದೊಡ್ಡ ಚಾಳಗಳನ್ನು ಕಟ್ಟಿಸುವವರು . . . ಗಿರಣಿಯ ಮಾಲಕರು ನಿಮ್ಮ ಕಣ್ಣ ಕಕ್ಷೆಯಲ್ಲಿ ಬರದಿರುವದು ವಿಚಿತ್ರವಾಗಿದೆ (ಮಣ್ಣಿಮ. ೩೩೧). **ಚಾಳು₁** : ಆ ಚಾಳುಗಳನ್ನು ನೋಡಿ ಪಾರಿವಾಳಗಳನ್ನಿಡುವುದಕ್ಕೆ ಮಾಡಿದ ಪೆಟ್ಟಿಗೆಯ ನೆನಪಾಯಿತು ಶಾಮಣ್ಣನಿಗೆ (ಮೂರಾಬ. ೯೭) : ನಮ್ಮ ಚಾಳಿನ ಬಾಡಿಗೆ ಎಷ್ಟು ವಸೂಲಾಯಿತು (ಪರಿಲ. ೮); ಮಳೆಗಾಲದಲ್ಲಿ ಚಾಳಿನಲ್ಲಿರುವವರ ಬವಣೆ ಹೇಳತೀರದು (ಸಾವಿಉ. ೧). [←ಮರಾ. ಚಾಳ್./ಸಂ. ಶಾಲಾ]

**ಚಾಳಂಕಿ** 'ಚಾಳಾಂಕಿ' ನೋ.

**ಚಾಳಕ₁** 'ಚಾಲಕ' ನೋ.

**ಚಾಳಕ₂, ಚಾಳ್ಕ** (ಗು). ೧. ತುಂಟತನದ; ಧೂರ್ತತೆಯುಳ್ಳ; ಕುಟಿಲವಾದ :(ಓ).(ನಾ). ೨. ತಂತ್ರಿ; ಉಪಾಯಗಾರ; ಧೂರ್ತ; "ಹಂಚಿಕೆಯುಳ್ಳವ, ಕಿಡಿಗೇಡಿ" (ಜಾನಕೋ. ೫೭) : ಸರಡುಪತ್ರುದ ಲಾಳು ಗೊಂಬಗಡ ನಮ್ಮನೀ ನರೆದಲೆಯಚಾಳಕನೆನುತ ಕೋಪಿಸಿದ ಸೌಂದರಕುವರನಾ ವಿಪ್ರನ (ಸೌಂದಪು. ೫-೯) : ಚಾಳಕನ ನಗೆನುಡಿಯು ಮಾಳಿಗೆಯು ಮುಜುದಂತೆ ಬಾಳು ಉಳ್ಳವರ ಬಿಜು ನುಡಿಯು ಬೀಳ್ವನೆಯು ಏಳಿಗಾದಂತೆ (ಸರ್ವಜ್ಞ. ೧೩೯೯). **ಚಾಳ್ಕ**: 'ಚಾಳ್ಕತನ' ಪರಾ. [←ಹಿಂ. ಚಾಲಕ್]

**ಚಾಳಣಿ** (ನಾ). = ಚಾಲನಿ : ಆ ಡಬ್ಬಿ ತಳದ ತಗಡಿನೊಳಗ ಎಷ್ಟು ಚಾಳಣಿ ಆಗಬಹುದಂತ ಅನ್ನಿಸತದ ನಿನಗ ? (ಪ್ರಪಾಪಿ. ೪೨). [<ಸಂ. ಚಾಲನೀ]

**ಚಾಳನಿ** 'ಚಾಲನಿ' ನೋ.

**ಚಾಳಯಿಸು** 'ಚಾಳಿಸು₁' ನೋ.

**ಚಾಳವಿಸು** 'ಚಾಲಿಸು' ನೋ.

**ಚಾಳಾಂಕಿ, ಚಾಣಕಿ, ಚಾಣಕ್ಕಿ, ಚಾಣಾಂಕಿ, ಚಾಳಂಕಿ, ಜಾಣಾಂಕಿ** (ನಾ). ಒಂದು ಬಗೆಯ ಪಕ್ಷಿ; ಮೈನಾಹಕ್ಕಿ; ಸಾರಿಕೆ : ಜಯವಿಲ್ಲನ ಮುಂದೆ ಪೂಸರನನು ಪೊಗಳ್ವರು ಖೂಳರೆಂದು ಸಂತೋಷದಿ ಚಾಳಾಂಕಿ [ಪಾಠಾಂ. ಚಾಣಾಂಕಿ, ಜಾಣಾಂಕಿ, ಜಾಣ್ಣಕ್ಕಿ]ಯುಲಿದವು (ಸೊಬಸೋ. ೩-೧೭) : ಹಂಸೆಗಳಿಗಲಸಗಮನಂಗಳಂ ತೋಱುತಂ ಚಾಳಾಂಕಿಗಳಿಗೆ ನೀತಿಯನು ಸಿರುತ . . . ಬೆಲೆವೆಣ್ಗಳೆಸೆದಿರ್ದರು (ಚಬಪು. ೧೧-೪೦). **ಚಾಣಕಿ** : ಕಳಹಂಸೆ ನಲಿಯಲೊಪ್ಪದೆ ಸೋಗೆ ಕುಣಿಯೆ . . . ಗಿಳಿವಿಂಡುಗಳ ಮಾತು ಸೊಗಸೆ ಚಾಣಕಿಯೋದೆ (ಲಶಿಚಂ. ೧೯-೩೩). **ಚಾಣಕ್ಕಿ** : ಶುಕಸಾರಿಕಾಭ್ಯಾಂ = ಗಿಳಿಯುಂ, ಚಾಣಕ್ಕಿಯುಮೆಂಬಿವಱಿಂ (ನೀತಿವಾ. ೯-೩೩) ; ನಿಂಬಿಯ ಬನದೊಳು ಹೊಂಬುಳ್ಳ ಚಾಣಕ್ಕಿಗಳಿರಾ ರಂಬಿ ಗಿರಿಜಮ್ಮನರಸಗ ಸೋ ಇಂದು ಧರಗ ತುಂಬಿದಾರೂತಿ ಬೆಳಗಿರೆ (ಲೋಕಗೀ. ೧೪). **ಚಾಣಾಂಕಿ** : ಮಿಾನ್ಪುಲಿಗ ಮರಕುಟಕ ಚಾಣಾಂಕಿ (ರುಕ್ಮಾಂಗ. ೧೧-೫). **ಚಾಳಂಕಿ** : ಕೋಕಿಳಂಗಳ ರವದ ಕಹಳೆ ಚಾಳಂಕಿ ಪಾಠಕರ ಕಳಕಳದಿಂದೆ ಪೊಱಮಟ್ಟನು (ಚಬಪು. ೩೫-೭) ; ಪಾರಿವಾಳದ ಪಕ್ಷಿ ಮಱಿಹುಲ್ಲೆ ಚಾಳಂಕಿಗಳಾ ಸರಸಗೋಷ್ಟಿಗೆ ಸಲೆ ಹೇಮಪಂಜರದೊಳಿರಿಸಿ (ಜಿನರಾ. ೭-೫೮). **ಜಾಣಾಂಕಿ** : ಅರಗಿಳಿ ಪಠಿಸಲರ್ಥೈಸುವ ಜಾಣಾಂಕಿ . . . ನರ್ತಿಪ ನವಿಲು (ಶ್ರೀಪಾಲ. ೧-೨೪). [ ? ]

**ಚಾಳಿ₁** 'ಚಾಟಿ²' ನೋ.

**ಚಾಳಿ₂** 'ಚಾಲು' ನೋ.

**ಚಾಳಿತನ** (ನಾ). ದುರಭ್ಯಾಸ ; ಕೆಟ್ಟನಡತೆ : ಕಡಿಮೆ ಹೆಂಡಿರು, ಹದಿನಾರು ಸಾವಿರ ಮಂದಿ ಬಿಡು ನಿನ್ನ ಚಾಳಿತನವೆಂದ (ಕರ್ಣಾಕ. ೨೮೭). [ಚಾಳಿ₂ (<ಚಾಲು) + – ತನ]

**ಚಾಳಿಸು₁, ಚಾಳಯಿಸು, ಚಾಳೈಸು₁** (ಕ್ರಿ). ೧. ಜರಡಿ ಹಿಡಿ; ಶೋಧಿಸು: ಹಳೆಯ ಗಂಟು ಗಡಡಿಗಳನ್ನೆಲ್ಲಾ ಚಾಳಿಸಿ ಅದನ್ನು ಹುಡುಕಾಡಿಕೊಂಡನು (ಬೆಳಗು. ೨೫); ಡಬ್ಬಿಯೊಳಗಿನ ಹಿಟ್ಟನ್ನು ಪರಾತಕ್ಕೆ ಚಾಳಿಸಿದನು (ರಕ್ತರೃ. ೩೩೦). ೨. ಸೋಲಿಸು; ಹಿಮ್ಮೆಟ್ಟಿಸು; ಓಡಿಸು: "ಚಾ [ಪಾಠಾಂ. ಜಾ] ಳಿಸಿತೆಂದು ಸೋಲಿಪುದು" (ಕಬ್ಬಿಕೈ. ೬೩) : ವಿಜಯದ ಗುಡಿವಿಡಿಸಿ ಅರಿನೃಪರಂ ಭೇದಿಸಿ ಪಾಂಚಾಳರಂ ಚಾಳಿ[ಪಾಠಾಂ. ಚಾರಿ, ಬಾರಿ]ಸಿ ಗಾಂಧರ್ವರಂ ವಿರಥರ್ ಮಾಡಿ (ಪಂಪಭಾ. ೬-೨೯ ವ) : ಮಲ್ಲಶ್ರಮದೆ ಪೊಣರ್ದು ಗೋಪಾಲರಂ ಚಾ [ಪಾಠಾಂ. ಜಾ]ಳಿಸುತ್ತುಂ (ಜಗವಿ. ೯-೩೮). ೩. ಹೀಯಾಳಿಸು ; ತಿರಸ್ಕರಿಸು : ಓರೊರ್ವರಂ ಜೊಕ್ಕರಿಸು ತ್ತೋರೊರ್ವರಂ ಚಾಳಿಸುವ ಪದದೊಳ್(ಜಗವಿ. ೬-೭೪); ಜೊಕ್ಕೆಯುದಾಸೆಗೆ ಪೊಕ್ಕ ಮಲ್ಲನನಿಕ್ಕಿ ಮೆಟ್ಟೆ ವಜ್ರದ ಬಳ್ಳಿಯಂತೆ ಭಡಿಕೆಯೊಳ್ ಬಿಗಿದು ಚಾಳಿಸಿ ನೂಂಕುವ (ಗಿರಿಳ. ೨-೧೦೫ವ). ೪. ಪೀಡಿಸು ; ಕಾಡು : ಎಂದು ತನ್ನಟಿಪನದರೆ ಚಾಳಿಸಿ ನುಡಿದು ಪೋಗುತ್ತುಂ (ಅನಂಪು. ೧೧-೯೫ ವ) : ತೆಗೆದೆತ್ತೆ ಬಾರದಿರೆ ಸಿದ್ಧನಂ ಚಾಳಿಸಲ್ಬಗೆದು (ಪಾಸೋಪು. ೧೦-೭೪) : ಅಱಿವುಗೇಡಿಂ ನಾಡೆ ನಿಮ್ಮವರಂ ಚಾಳಿಸಿದೆವು (ರಾಮಾಶ್ವ. ೧೨೨-೪). ೫. [ಸಂಗೀತ] ರಾಗಾಲಾಪನೆಮಾಡು, –ಹಾಡು : ಸುಖಸುಧಾರಸದೊಳ್ ಪರಿಷಜ್ಜನಂಗಳಂ ಮುಱುಗಿಸಿದತ್ತು ಚಾಳಿಸಿದ ರಾಗಮೆ ನಚ್ಚಿನ ಮಂಜುಘೋಷೆಯಾ (ಅನಂಪು. ೪-೮೮). **ಚಾಳಯಿಸು** : ೨. ಚಾಳಯಿಸಿ ಕೊಂಡುಳಿದವಿನ್ನಾ ಬಾಳಿ ಸಾಕೆಮಗೆಂದು ಭೂಪರು ಚಾಳಿಸಿದೊಡ ಬಲೆಯರು ನಗುತಿರೆ ನಾಚಿ ತವಕದಲಿ (ಜೀವಂಚ. ೧೫-೩೭). **ಚಾಳೈಸು₂**: ೬. ತಾತ್ಸಾರಮಾಡು ; ಬೇಸರಪಡು : ಪೇಳಲದಾರ ಜಪ್ಪೆಗಸಾಧ್ಯ ರತ್ನದ ಮೇಳವಿದೆಲ್ಲಿ ಸಿದ್ಧಿಸಿತೋ ಚಾಳೈಸದೆ ಕೆತ್ತಿದನಾರೊ ಕೆಲಸಿಯೆಂದಾಳೋಚಿಸಿದಳು (ಮೋಹತ. ೨೬-೨೯). [<ಜಾಲಿಸು]

**ಚಾಳಿಸು₂** 'ಚಾಲಿಸು' ನೋ.

**ಚಾಳಿಸು₃** 'ಚಾಳೀಸು' ನೋ.

**ಚಾಳೀಸ** 'ಚಾಳೀಸು' ನೋ.

**ಚಾಳೀಸಪತ್ರೆ** 'ತಾಳೀಸಪತ್ರೆ' ನೋ.

**ಚಾಳೀಸು, ಚಾಳಿಸು₃, ಚಾಳೀಸ, ಚಾಳೇಸ** (ನಾ). ೧. ನಲವತ್ತು. ೨. ಸುಮಾರು ನಲವತ್ತರ ವಯಸ್ಸಿಗೆ ಉಂಟಾಗುವ ದೃಷ್ಟಿಮಾಂದ್ಯ ; ದೂರದ ವಸ್ತುಗಳು ಮಾತ್ರ ಕಣ್ಣಿಗೆ ಸ್ಫುಟವಾಗಿ ಕಾಣುವ ಕಣ್ಣಿನ ಕುಂದು : ವಯೋನುಗುಣವಾಗಿ ಮನುಷ್ಯನಿಗೆ ಚಾಳೀಸು (Long Sight) ಬಂದಮೇಲೆ . . . ಓದುವುದನ್ನು ಕಡ್ಡಾಯವಾಗಿ - ನಿಲ್ಲಿಸಬೇಕಾಗಿತ್ತು (ಶಿಲ್ಪನಾ. ೧೫೨). ೩. ಕನ್ನಡಕ; ಉಪನೇತ್ರ; ಸುಲೋಚನ: ಚಾಳೀಸು ಹಾಕಿ ಚಿರೂಟು ಸೇದುವ ಅಕಬರಬಾದಶಹನೂ . . . ಔರಂಗಜೇಬನೂ ಇತಿಹಾಸಕ್ಕೊಂದು ಹೊಸ ಮುಖವನ್ನು ತಂದು ಕೊಟ್ಟರು (ಗಾಳಿಪ. ೭೦); ಸರಿಯಾಗಿ ಕಾಣೋದಿಲ್ಲಾ ಅಂತಾನೆ 'ಚಾಳೀಸು' ಹಾಕೇನಿ (ಚಿಂದುಟ. ೫೨): ಜೋಶಿಯವರು ಪುನಃ ಚಾಳೀಸನ್ನು ಮೂಗಿಗೇರಿಸಿದರು (ಜೀಟಿನಾ. ೧೪). **ಚಾಳಿಸು₃**: (ಓ). **ಚಾಳೀಸ** : ೨. ನಿನ್ನ ಕಣ್ಣಿಗೆ ಚಾಳೀಸ ಹುಟ್ಟಿ (ಜಿನರಾ. ೯-೨೭) ; ಏನೋ ಸಹಜವಾಗಿ ವಯೋಧರ್ಮದಿಂದುಟಾಗಿರುವ, ದೃಷ್ಟಿಮಾಂದ್ಯವೆಂದೋ ಇಲ್ಲವೇ ಚಾಳೀಸವೆಂದೋ ಕಡೆಗಣಿಸುವುದುಂಟು (ನಿಮ್ಮದ್ಕ. ೮೩). ೩. ಚಾಳೀಸ–ತಂತಿಯ ಬದಲು ತಂತುವನ್ನು ಕಟ್ಟಿಕೊಂಡಿದ್ದ ಚಾಳೀಸವನ್ನು ಮೂಗಿನ ಮೇಲಿಟ್ಟುಕೊಂಡು ದಾರವನ್ನು ಕಿವಿಗೆ ಸುತ್ತಿದ್ದಾರೆ (ಸುವಸಂ. ೭೮). **ಚಾಳೇಸ** : ೨. ಕಣ್ಣುಗಳಲ್ಲಿ ನೀರು ಸ್ಫುರಿಯಲು ಕಣ್ಣು ಚಾಳೇಸವಾಗಿ ವಿಕಾರವಾಗಿರಲು (ಅಶ್ವಟೀ. ೩೮-೧೦). [←ಮರಾ. ಚಾಳೀಸ, ಚಾಳಿಸೀ; ಹಿಂ. ಚಾಲೀಸ್ /ಪ್ರಾ. ಚತ್ತಾಲೀಸ್./ಸಂ. ಚತ್ವಾರಿಂಶತ್]

**ಚಾಳು$_1$** 'ಚಾಳ' ನೋ.

**ಚಾಳು$_2$** 'ಚಾಲು' ನೋ.

**ಚಾಳುಕ್ಯ** 'ಚಾಲುಕ್ಯ' ನೋ.

**ಚಾಳುವ** 'ಸಾಳುವ' ನೋ.

**ಚಾಳೆಯ** 'ಚಳಯ್ಯ$_2$' ನೋ.

**ಚಾಳೀಸ** 'ಚಾಳೀಸು' ನೋ.

**ಚಾಳೈಸು$_1$** 'ಚಾಲಿಸು' ನೋ.

**ಚಾಳೈಸು$_2$** 'ಚಾಳಿಸು$_1$' ನೋ.

**ಚಾಳೋಕ್ಯ** 'ಚಳುಕ್ಯ' ನೋ.

**ಚಾಳ್ಕ** 'ಚಾಳಕ$_2$' ನೋ.

**ಚಾಳ್ಕತನ (ನಾ).** ಧೂರ್ತತನ : ಉಪಾಯಗಾರಿಕೆ : ಆರನೆಯ ಸೂಳಿ ನೊಳ್ ಚಾಳ್ಕತನದಿಂ ಕಳಿಂಗನಂ ಚೀನಹಮ್ಮೀರರಂ ಕೊಂದು (ಪರಶು. ೩೭-೧೮) : ಬೀಳ್ಕೊಟ್ಟರಾವು ಪೋಪೆವೆಂದವಿಳ ಬಾಡಬರ್ ಚಾಳ್ಕತನ ದೀನತೆಯೊಳಭಿನಮಿಸಲ್ (ಪರಶು. ೪೧-೨೧).

[ ಚಾಳ್ಕ (<ಚಾಳಕ$_1$) + – ತನ ]

**ಚಾಟ್, ಚಾಳಿ$_1$ (ನಾ).** ನವಗ್ರಹಗಳಲ್ಲಿ ಒಂದು ; ರಾಹು : "ಚಾಟ್= ರಾಹು" (ಶಮುದ. ಪರಿ. ೧) : "ಚಾಟ[ಪಾಠಾಂ. ಜಾಳ]ಲರ್ವಟ್ಟಿವಾವೆನೆ ರಾಹು" (ಶಬ್ದಮಂ. ೧೮): "ಚಾಟಿನಲ್ ಚಾವೆ[ಪಾಠಾಂ. ಚಾಪ]ನಿಪ್ಪುದು" (ಸಂಜೀವ. ೩). **ಚಾಳಿ$_1$** : ಅಕಟವನ ನೊಸಲಲ್ಲಿ ತಿಂಗಳಂ ಬರೆಪೋಗಿ ಚಾಳಿಯಂ ಗೀಟಿದೆಯೊ (ಹಬ್ಬರ. ೩೩-೧೪೨).

[ ದೇ.॥ ಮಲ. ಚಾಟ್=ಕೆಟ್ಟಗಳಿಗೆ ; ಕೆಟ್ಟಶಕುನ ]

**–ಚಿ (ಪ್ರ).** ಒಂದು ತದ್ಧಿತ ಪ್ರತ್ಯಯ. 'ಕುಡಿಚಿ' ಪರಾ.

**ಚಿಂಕಿಲು (ನಾ).** ಸಣ್ಣಕೀಲು (?) : ವಜ್ರದ ಫಾಲಿಗೆ ವಜ್ರದ ಚಿಂಕಿಲು ವಜ್ರದ ನೊಗ ಹೊಮ್ಮಿಗಳು ವಜ್ರಾಯುಧನ ವಾಹನದಂತೆ ವಾಜಿಯು ಪ್ರಜ್ವಲ ಸಾಲದಿದುರದ (ದೇವಾಂಪು. ೩-೧೭೯). [ ? ]

**ಚಿಂಕು (ನಾ).** ಒಂದು ಬಗೆಯ ಆಭರಣ : ವೀರಮುದ್ರಿಕೆ ಪಂಚಸರ ಗೌಳಸರ ಮುಕ್ತಾಹಾರ ಹೊಂಬಂದಿ ಚಿಂತಾಕು ತೋರವಮೂಗುತಿ ಹೊನ್ನ ಕುಸುಮ ಚಿಂಕು ಕರ್ಣಪೂರ ಕೊರಲ ಕಂಠಿಕೆಗಳ (ಶಾಂತೀಶ. ೩-೭೦).

[ ? ]

**ಚಿಂಗಯ್ಯ (ನಾ).** ಒಬ್ಬಾತನ ಹೆಸರು : ಚಿಂಗಯ್ಯನ ಚಾವಬ್ಬೆಯ ಮಗಂ ಪೋಚನಕಲ್ಲ (ಮೈಆರಿ. ೧೯೪೨, ೨-೭ ; 973 ?). [ ಚಿಂಗ$_0$ + ಅಯ್ಯ$_1$ ]

**ಚಿಂಚ$_1$ (ನಾ).** ಮೈಮೇಲೆ ಚುಂಕ್ಕೆಗಳಿರುವ ಎತ್ತು : ಕೆಲವ ಕೇಸಿಗ ನಿಜಾವ ಹಂಡ ಹಾರುವ ಚಿಂಚ ಮಲೆವ ಪುಲ್ಲೋರಿ . . . ಕಬ್ಬಸಿಗಳೊಳ ಗಾದ ಪಲವು ಪರಿಯೆತ್ತು ತೊಂಬತ್ತಾರು ಲಕ್ಷ ಮೇಳೈಸಿ ಪಿಡಿದುವು ಗೆಲ್ಲಕೆ (ಸಿಂಗಿರಾ. ೩೫-೭): ಚಿಂಚವೆರಡೆತ್ತಾಗಿ ಸಂಚಿನ ಸೊಸೆಯಾಗಿ ಮಿಂಚಾಗಿ ಬರುವ ಮಗನಾದರಾ ಮನೆಗೆ ಲಂಚ ತಪ್ಪುವುದೆ (ಸರ್ವಜ್ಞ. ೧೭೫೪).

**ಚಿಂಚ$_2$ (ನಾ).** ಹುಣಸೆಮರ : ಬದರಿಯ ಫಲವಂ ಮೇಣ್ ಚಿಂಚದ ಚಿಗುರಿಂ ಕೂಡಿ ಪುದಿದ ಸಜ್ಜಿಗೆಯಿಂ ಮಾಡಿದ ಸೇವಗೆಯಂ (ಲೋಕೋಪ. ೮-೦೩): ಕನಕಮಂಡುಕ ಮತ್ಸ್ಯ ಕಮಠ ಕಲ್ಪೇಂದು ಚಂದನ ಚಿಂಚ ಮಧು ಶೃಂಗ ಕಡವ ಪೂರುಷ ಶೇಷವೃಕ್ಷಂಗಳು (ಮದೇಪು. ೩೦-೦೩).

[ ದೇ.॥ ತಮಿ. ಚಿನ್ತ ; ತೆಲು. ಚಿಂತ ; ಕೊಲಾ. ಸಿಂತಾ ;

ನಾಯ್ಕಿ. ಶಿತ್ರ ; ಗೊಂಡಿ. ಸಿತ್ತಾ./ಸಂ. ಚಿಂಚಾ ]

**ಚಿಂಚಕ (ನಾ).** ಒಂದು ಬಗೆಯ ಮರ : "ಲವಣಕಿಂಶುಕಃ–ಕಂಗುಂಗೆ, ಚಿಂಚಕ" (ಒಷಧಿ. ೧೪೨). [ ? ]

**ಚಿಂಚಗ (ನಾ).** ಒಂದು ಬಗೆಯ ಗಿಡ : ಕೆಂಪು ಗೋರಂಟೆ : "ಕಿಂಕಿರಾತಃ –ಹೊಂಗೋರಟಿ, ಚಿಂಚಗ" (ಒಷಧಿ. ೩೩). [ ? ]

**ಚಿಂಚಪಟ್ಟಿ (ನಾ).** ಒಂದು ಬಗೆಯ ಕೊರಳಿನ ಆಭರಣ ; ಹುಣಿಸೆ ಎಲೆ ಆಕಾರದ ಪದಕಗಳುಳ್ಳ ಸರ : ನೇತ್ರಾವಳಿಯ ಸೀರಿ ಮಿತ್ರಿ ಗಂಗವ್ವ ಉಟ್ಟು ನಕ್ಷತ್ರಮಾಲೆ ಚಿಂಚಪಟ್ಟಿ ಮುಗಬೊಟ್ಟು ಕರ್ತುವಿನ ಕಾರ್ಯಕ್ಕೆ ತೊಡಗಿದಳು (ಸಿದ್ಧಪು. ೧೯-೯೮). [←ಮರಾ. ಚಿಂಚಪಟೀ, ಚಿಂಚಪೇಟೀ]

**ಚಿಂಚಿಲ (ನಾ).** ಒಂದು ಊರಿನ ಹೆಸರು; ☞ ಈಗಿನ ಗದಗ ತಾಲೂಕಿನ ಚಿಂಚಲಿ : ಚಿಞ್ಚಿಲದಯ್ವತ್ತುಇುವರುಂ ಮಹಾಜನದ ಕಾಲಂ ಕಟ್ಟಿ ಕೊಟ್ಟು (ಸೌಇಇ. XI-i, ೧೫-೨ ; 871) ; ಚಿಂಚಿಲಗ್ರಾಮಸ್ಯ (ಎಇ. IV, ೨೦೭-೨೪ ; 982) ; ಅದಱಿಂ ಮೂಡಣ ಚಿಂಚಿಲ ಅಕ್ಕಸಾಲೆಯ ಕೆಯಿಂ ಮೂಡಲು ಮತ್ತರು ೧ (ಸೌಇಇ. XX, ೨೨೦-೩೯ ; 1283). [ ? ].

**ಚಿಂಚು (ನಾ).** ಒಂದು ಬಗೆಯ ಸಸ್ಯ (?) : "ಚಿರುಂಡಿ ಚಿಂಚು" (ಅಕಾನಿ. ೧೦-೩೭). [ ? ]

**ಚಿಂಚಿ (ನಾ).** ಮೈಮೇಲೆ ಚುಕ್ಕೆಯನ್ನು ಉಳ್ಳ ಹಸು : ಭೃಂಗೆ ಚಿಂಚಿ ಪಿಂಗೆ ಹಂಡೆ ಶೃಂಗಿ ಕೃಷ್ಣೆ ರಂಗು ಮುತ್ತಿ ಪಿಂಗಳೆ ಹೇಮಾಂಗಿಯೆಂದು ರಂಗ ಕರೆದನು (ಪ್ರಸಭಾ. ೩೧-೬). [ಚಿಂಚ$_1$ + – ಇ$_2$]

**ಚಿಂಚಿಗ (ನಾ).** ಒಂದು ಬಗೆಯ ಗಿಡ : ಚಿಂಚಿಗದ ಸೊಪ್ಪನು ಎಳ್ಳೆಣ್ಣೆ ಯಲ್ಲಿ ಎಳವದನಾಗಿ ಹುರಿದು ಒಣಗಿಸಿ ಪುಡಿಮಾಡಿ (ಸಕವೈ. ೧೯೪).

[ ? ]

**ಚಿಂಡೆ (ನಾ).** ಒಂದು ಬಗೆಯ ಸಸ್ಯ : ಚಿಂಡೇ, ಹೊಂಡೇಮರ (ವೃಕ್ಷಿಗ. ೨೦-೩೫೮). [ ? ]

**ಚಿಂತಕ (ನಾ).** ಯೋಚಿಸುವವನು ; ಯಾವುದಾದರೂ ವಿಷಯವನ್ನು ಚಿಂತಿಸುವವನು : "ಧ್ಯಾತಾ, ಧ್ಯಾಃ, ಧ್ಯಾಯಕಃ–ಈ ೩ ಚಿಂತಕಂ" (ಕಾಶಕ್ಕ. ೭೩). 'ಹಿತಚಿಂತಕ' ಪರಾ. [ ಸಂ. ]

**ಚಿಂತಕುಂಟೆ (ನಾ).** ಒಂದು ಊರಿನ ಹೆಸರು: ಚಿರುಪಿಯು ಚಿನ್ತಕುಣ್ಟೆಯು ಚಿಱಿಯವೊಟಲು ಪುಳುವಟ್ಟು ನಾಲ್ಕೂರುವಿ ಟ್ಟು ನಡೆದ ಕೆಲ್ಲಿಗೊಡಂಗೆ ಯೊಡ್ಡಿನ ಕೆಟಿಗೆ (ಸೌಇಇ. IX-i, ೨೬-೧೦; 950).

[ ಚಿಂತ$_0$ + ಕುಂಟೆ$_3$ ]

**ಚಿಂತನ (ನಾ).** ೧. ಯೋಚನೆ ; ಆಲೋಚನೆ : ಗುರುತತ್ವಚಿಂತನವದು ಗುರುಧ್ಯಾನ (ಬಸಪು. ೩೯-೨೯) ; ವಿಷಯಗಳ ಚಿಂತನದಿಂದ ಮನುಷ್ಯನಿಗೆ ಅವುಗಳಲ್ಲಿ ಆಸಕ್ತಿ ಹುಟ್ಟುತ್ತದೆ (ಧರ್ಮಸಾ. ೧೩೨). ೨. ಧ್ಯಾನ : ಭವದಂಘ್ರಿ ಚಿಂತನಮೆ ಕೇಳ್ ಕೈವಲ್ಯಲಕ್ಷ್ಮೀಸುಖೋತ್ಸವಮಂ ಸಾರ್ಚುವ ದೂತಿ (ಶಬಶಂ. ೫-೩೨). [ ಸಂ. ]

**ಚಿಂತನಪರ (ಗು).** ಚಿಂತನದಲ್ಲಿ ಆಸಕ್ತವಾದ ; ಯೋಚನೆಯನ್ನು ಅವಲಂಬಿಸಿದ : ಒಂದೊಂದು ಶಬ್ದವೂ ಸ್ಫೂರ್ತಿಯ ಒಂದೊಂದು ಕುಡಿಯಾಗುತ್ತದೆ . . . ವಿಚಾರಿತ ರಮಣೀಯ ಇಲ್ಲವೆ ಚಿಂತನಪರ ಶೈಲಿಯಾಗುತ್ತದೆ (ನವ್ಯಕಾ. ೩೫). [ ಸಂ. ]

**ಚಿಂತನಶೀಲ (ಗು).** = ಚಿಂತನಪರ: ಅವರು ತುಂಬ ಚಿಂತನಶೀಲ ಕವಿಗಳು (ರೂಢಿ). [ ಸಂ. ]

**ಚಿಂತನಾಂಶ (ನಾ).** ೧. ಯೋಚಿಸಲು ಯೋಗ್ಯವಾದ ಭಾಗ. ೨. ಯೋಚನೆಯ ಅಂಶ ; ಯೋಚನಾಭಾಗ : ನನ್ನ ಈಗಿನ 'ದರ್ಶನ'ಕ್ಕೆ ಒಪ್ಪುವ ಭಾವಾಂಶ ಚಿಂತನಾಂಶ ಕಲ್ಪನಾಂಶ ರೂಪಾಂಶಂಗಳಲ್ಲಿ ಏರಕ ಹೊಯ್ದು ಅದನ್ನೊಂದು ಹೊಸಕೃತಿಯಾಗಿಯೆ ಮಾಡಿದ್ದೇನೆ (ಚಿಂದ್ರಸ. IV, ಮುನ್ನುಡಿ). [ ಚಿಂತನ + ಅಂಶ ]

**ಚಿಂತನೀಯ (ಗು).** ೧. ಆಲೋಚಿಸತಕ್ಕ; ಯೋಚಿಸಬೇಕಾದ; ಯೋಚನೆಗೆ ಯೋಗ್ಯವಾದ. (ನಾ). ೨. ಯೋಚಿಸತಕ್ಕುದು : ಯೋಚನೆಗೆ ಯೋಗ್ಯವಾದುದು : ಈ ವಿವರಣೆ ಚಿಂತನೀಯವಾಗಿದ (ದ್ರಾವಿವಿ. ೧೨೬). [ ಸಂ. ]

**ಚಿಂತನೆ** (ನಾ). ೧. = ಚಿಂತನ ೧ : ಅಕ್ಷರ . . . ಚಿಂತನೆ . . . ಇವೆಲ್ಲವ ಕಲಿತಡೇನೋ ಚೌಷಷ್ಟಿ ವಿದ್ಯಾಕಳಾವಿದನೆನಿಸಿಕೊಂಬನಲ್ಲದೆ ಲಿಂಗವಂತನೆನಿಸಿಕೊಂಬುದಿಲ್ಲ (ಮಡಿವಾ. ೪೩-೬೧); ಈ ಎರಡು ಅನುಭವಗಳ ತಾರತಮ್ಯದ ಚಿಂತನೆಯನ್ನು ಪದ್ಯರೂಪದಲ್ಲಿರಿಸಿದ್ದಾರೆ (ಸೌಂದಸ. ೩೨೫); ತಾವು ಹೇಳಿದ ಸಂಗತಿಯನ್ನೆಲ್ಲ ಇನ್ನೊಮ್ಮೆ ಚಿಂತನೆ ಮಾಡುತ್ತೇವೆ (ಮುಂಬಯಿ. ೪-೯೩). ೨. ಧ್ಯಾನಿಸುವುದು : ಎಜಗಿ ನೋಡುವುದೊಂದಱಿ ಎರಡಱಿ ಚಿಂತನೆ . . . ವೇಣ್ ಹತ್ತಱಿ ಮರಣ ಇವು ದಶಾವಸ್ಥೆಗಳೆನಲು (ಬಸವು. ೩೭-೩೨) ; ಮನೆಯಲ್ಲಿ ಕೂತುಕೊಂಡು ಇದೇ ರೋಗದ ಚಿಂತನೆ ಮಾಡಿದರೆ ಒಳ್ಳೆಯದಲ್ಲ ಎಂದು ಕೆಲಸಕ್ಕೊ ಕಳುಹಿಸುತ್ತಿದ್ದೆ (ಮನೋನಂ. ೮೨). [ಸಂ. ಚಿಂತನಾ]

**ಚಿಂತನೆಗೊಳು** (ಕ್ರಿ). ಆಲೋಚನೆಗೆ ಒಳಗಾಗು ; ಯೋಚನಾಪರನಾಗು : ಚಿಂತೆಮಾಡು : ಜಿನದೀಕ್ಷೆಗೆಳಸಿ ತಂದೆಗೆ ಪೇಳಲಂಜಿ ಚಿಂತನೆಗೊಳುತೆಯ್ತಂದರಾಗ (ಭರತ. ೪೫-೩೯). [ಚಿಂತನೆ+ಕೊಳು(<ಕೊಳ್$_1$)]

**ಚಿಂತಾಕ** 'ಚಿಂತಾಕು' ನೋ.

**ಚಿಂತಾಕು, ಚಿಂತಾಕ** (ನಾ). ೧. ಕೊರಳಲ್ಲಿ ಧರಿಸುವ ಒಂದು ಬಗೆಯ ಆಭರಣ ; ಅಡ್ಡಿಕೆ ; ಹುಣಿಸೆಯ ಎಲೆಯ ಆಕಾರದ ರತ್ನಗಳನ್ನು ಕೆತ್ತಿರುವ ಆಭರಣ : ಕಾಂತನ ಮುಖಕೆ ಕಾಂತಿಯನೀವುದೊಂದು ಸುಕಾಂತ ಚಿಂತಾಕನಂಗನೆಗೆ ಕಾಂತೆಯರೊಲಿದು ಕಟ್ಟಲು (ಅಂಜಿಡ. ೮-೩೯); ಮೂಕುತಿ ಮುತ್ತಿನ ಸರ ಕರ್ಣಪತ್ರ ಚಿಂತಾಕು ನೇವಳ ಲುಳಿ ಪದಕ (ಭರತ. ೩೦-೪೩) ; ವಜ್ರದ ಚಿನ್ನದ ಚಿಂತಾಕು (ಸಿದ್ಧಪು. ೧೯-೬೨) ; ಚಿಂತಾಕು ಇಟಗೊಂಡು ಚಿಪ್ಪಾಡಿ ಬಳಿವಾಕಿ ಚಿಂತಿಲ್ಲ ಏನ ನಿನಗಪ್ಪು ನಿಮರಾಯ ಅಲ್ಲೊಬ್ಬ ಕೂಡ ನಗುತಿದ್ದ (ಕನ್ನಜಾ. ೫೮). ೨. ಒಡ್ಯಾಣ; ನಡುಪಟ್ಟಿ ; ಡಾಬು : ತೂಕದ ಮೊಲೆಗಳ ಬಡನಡು ತಾಳದೆಂದಾ ಕಾಂತೆ ಚಿನ್ನದ ಕಟ್ಟಾ ಜೋಕೆಗೈದಳೊಯೆನೆ ನವರತ್ನಮಯದ ಚಿಂತಾಕು ತೋಱುತು ನಡುವಿನೊಳು (ಭರತ. ४೦-೫೭) ; ಪದಕ ಕೊರಲ ಪಂಚಸರ ನಾನಾರತ್ನ ಪುದಿದ ನಡುವಿನ ಚಿಂತಾಕು . . . ಸುದತಿಯೊಳೊಂದಿ ಮೆಱದುವು (ರಾಮವಿ. ೭-೬೨). **ಚಿಂತಾಕ** : ೧. ಕಾಂತಾಕಚಭಾರದಿಂದೆ ನುಣ್ಗೊರಲು ಮುಂದೆಂತಹುದೆಂದು ಸಂದೆಗದೆ ಸಂತತ ಬಣ್ಣಗಲ್ಲುಗಳ ಕೇವಣಿಸಿರ್ದ ಚಿಂತಾಕ ಬಲುಹನಿಕ್ಕಿದರು (ಮೋಹತ. ೨೩-೩೮) ; ಪರದೈವ ಪರಿಯೆಂಬೊ ಮುತ್ತಿನ ಮೂಗುತಿಯು ತರಣಿ ಭಾಸನೆಂಬೊ ಮುತ್ತಿನ ಚಿಂತಾಕ (ವಿಸಾಸು. ೫೪-೫) ; ಸರ ಮುತ್ತು ಚಿಂತಾಕ ಸರಿಗೆ ತಾಯಿತ ಮುತ್ತು ಮೆರೆವ ಯೇಕಾವಳಿಯು (ಶ್ರೀಕೃಪಾ. ೧೨) ; ನನಗೊಂದು ಚಿಂತಾಕವು ಬೇಕಾಗಿರುವುದರಿಂದ ನಮ್ಮ ತಂದೆಯು . . . ಪೇಟೆಗೆ ಹೋಗಿದ್ದಾನೆ (ತೊಳಮು. ೭೯).

[ದೇ.॥ ತಮಿ. ಚಿನ್ನಾಕ್ಕು ; ತೆಲು. ಚಿಂತಾಕು./ಮರಾ. ಚಿತಾಂಕ್, ಚಿತಾಕ್ ]

**ಚಿಂತಾಕುಲ, ಚಿಂತಾಕುಳ** (ಗು). ೧. ಯೋಚನೆಯಿಂದ ಕಲಕಿದ; ವ್ಯಸನದಿಂದ ಕೂಡಿದ ; ಚಿಂತೆಯಿಂದ ವ್ಯಗ್ರವಾದ. **ಚಿಂತಾಕುಳ** : (ನಾ). ೨. ಚಿಂತೆಗೆ ಒಳಗಾದವನು ; ಚಿಂತಾಕ್ರಾಂತ : ಫಲುಗುಣನ ಪರಮವಿವೇಕವನು ಪತಿಕರಿಸಿ ನೆಱೆ ಚಿಂತಾಕುಳನ ಮಾಡಿದನು ಕೌರವರಾಯನನು ಭೀಷ್ಮ (ಕುವ್ಯಾಭೀ. ೧೦-೨೮).

[ಸಂ. (ಚಿಂತಾ + ಆಕುಲ) ]

**ಚಿಂತಾಕುಲತೆ, ಚಿಂತಾಕುಳತೆ** (ನಾ). ಚಿಂತೆಯಿಂದ ವ್ಯಗ್ರವಾಗಿರುವಿಕೆ,– ಪೀಡಿಸಲ್ಪಟ್ಟಿರುವಿಕೆ. **ಚಿಂತಾಕುಳತೆ** : ಒಳಗೊಳಗಳಲ್ದು ಚಿಂತಾಕುಳತೆಯನೊಳಕೊಂಡು ಬೇಡನಿವನೆನ್ನಿಂದಗ್ಗಳಿಸಿದನೆ (ಶಲಕಂ. ४-೯೨).

[ಸಂ. ಚಿಂತಾಕುಲತಾ (ಚಿಂತಾ + ಆಕುಲತಾ) ]

**ಚಿಂತಾಕುಲಿತ** (ನಾ). ಚಿಂತೆಯಿಂದ ವ್ಯಗ್ರನಾದವನು ; ಚಿಂತಾಕ್ರಾಂತನಾದವನಂ : ಚಿಂತಾಕುಲಿತನನಾಱಿಸುವಂತಿರೆ . . . ಪರ್ಣಕುಟೀರಾತಂರವುಂ ಪೊಕ್ಕು (ಕಾದಂಉ. ೭೦೦). [ಸಂ. (ಚಿಂತಾ + ಆಕುಲಿತ) ]

**ಚಿಂತಾಕುಳ** 'ಚಿಂತಾಕುಲ' ನೋ.

**ಚಿಂತಾಕುಳತೆ** 'ಚಿಂತಾಕುಲತೆ' ನೋ.

**ಚಿಂತಾಕ್ರಾಂತ** (ಗು). ೧. ಚಿಂತೆಗೊಳಗಾದ ; ಚಿಂತೆಯಿಂದ ತುಂಬಿದ. (ನಾ). ೨. ಚಿಂತೆಯಿಂದ ಕೂಡಿದವನು ; ವ್ಯಥೆಗೆ ಒಳಗಾದವನು : ಆ ಪಾರ್ವಂಗೆ ಮಕ್ಕಳಿಲ್ಲದಿರೆ ಪೆಂಡಿತಿಯುಂ ತಾನುಂ ನಿಚ್ಚನಿಚ್ಚಲುಂ ಚಿಂತಾಕ್ರಾಂತರಾಗಿರ್ಪರ್ (ಜೀವಸಂ. ೩೭-೨೨ ವ) ; ಲಕ್ಷ್ಮಣ . . .ಮೂರ್ಖರಿಗೊಡೆಯ ನೀನೆನುತೊಱಿ ಪೊಡವಿಗೆ ಕೆಡೆದು ಹೊರಳಲು ರಾವ ಚಿಂತಾಕ್ರಾಂತನಾಗಿರ್ದ (ಕಾಶಿರಾ. ४३-೩೭). [ಸಂ. (ಚಿಂತಾ + ಆಕ್ರಾಂತ)]

**ಚಿಂತಾಕ್ರಾಂತೆ** (ನಾ). ಚಿಂತೆಯಿಂದ ಕೂಡಿದವಳು : ತನಗೆರಡಿಲ್ಲದೊಪನ ವಿಯೋಗದೊಳ್ ಚಿಂತಾಕ್ರಾಂತೆಯಾಗಿರ್ದ ಕೆಳದಿಗಿಂತೆಂದಳ್ (ಶಾಂತಿಪು. ೮-೧೦೭) ; ಕಾಂತೆ ತಾಂ ಸುತರಿಲ್ಲದಿರ್ದಡನಂತ ಚಿಂತಾಕ್ರಾಂತೆಯಾಗುತೆ ತೂಂತು ನೋಂಪಿಗಳಂ ಪಲವನುಱೆ ನೋಂತು ಬೇಸತ್ತು (ಬಸವು. ३-४೮).

[ಸಂ. ಚಿಂತಾಕ್ರಾಂತಾ (ಚಿಂತಾ + ಆಕ್ರಾಂತಾ) ]

**ಚಿಂತಾಪರ** (ಗು). ೧. ಯೋಚನೆಯಲ್ಲಿ ಆಸಕ್ತವಾದ ; ಚಿಂತನೆಯಲ್ಲಿ ಮುಳುಗಿದ. ೨. ಧ್ಯಾನದಲ್ಲಿ ತೊಡಗಿರುವ ; ಧ್ಯಾನಮಗ್ನವಾದ. (ನಾ). ೩. ಚಿತನೆಯಲ್ಲಿ ಮುಳುಗಿದ ವ್ಯಕ್ತಿ ; ಆಲೋಚನಾಶೀಲ : ವಿಜ್ಞಾನಿಗಳು ಸಾಮಾನ್ಯವಾಗಿ ಚಿಂತಾಪರರಾಗಿಯೇ ಇರುತ್ತಾರೆ (ರೂಢಿ).

[ಸಂ. (ಚಿಂತಾ + ಪರ) ]

**ಚಿಂತಾಪರವಶತೆ** (ನಾ). ಚಿಂತೆಯಿಂದ ಮೈಮರೆಯುವಿಕೆ : ಚಿಂತಾಪರವಶತೆಯಿನಿಸಂ ತಡೆದಿದಿರೇಟದಾತ್ಮಪರ್ಯಂಕದೊಳಾ ಕಾಂತಂ ಕುಳ್ಳಿರೆ (ಪುಷ್ಪಪು. ೩-೬೬). [ಸಂ. ಚಿಂತಾಪರವಶತಾ(ಚಿಂತಾ + ಪರವಶತಾ) ]

**ಚಿಂತಾಭರ** (ನಾ). ಯೋಚನೆಯ ಹೊರೆ ; ಚಿಂತೆಯ ಆಧಿಕ್ಯ : ಆಕ್ರಾಂತಚಿಂತಾಭರಸ್ತಿಮಿತ ಗಾತ್ರೆಯುಂ . . . ಆಗಿರ್ಪನೆಗಂ (ಚಂದ್ರಪು. ೩-೫೦ ವ). [ಸಂ. (ಚಿಂತಾ + ಭರ) ]

**ಚಿಂತಾಮಗ್ನ** (ಗು). ೧. ಚಿಂತೆಯಲ್ಲಿ ಮುಳುಗಿದ. (ನಾ). ೨. ಚಿಂತೆಯಲ್ಲಿಯೇ ಮುಳುಗಿರುವವನು: ಮುಕುಂದರಾಯರು . . . ಹುಬ್ಬುಗಂಟಿಕ್ಕಿ ಚಿಂತಾಮಗ್ನರಾಗಿದ್ದಾರೆ (ವೀರಯೋ. ೨). [ಸಂ. (ಚಿಂತಾ + ಮಗ್ನ)]

**ಚಿಂತಾಮಣಿ** (ನಾ). ೧. ಸ್ವರ್ಗಲೋಕದ ಒಂದು ದಿವ್ಯರತ್ನ ; ಬೇಡಿದಂದನ್ನು ಕೊಡಬಲ್ಲುದೆಂದು ನಂಬಲಾದ ದೇವಲೋಕದ ರತ್ನ : ಅದರ್ಕೆ ಮುನ್ನ ಚಿಂತಾಮಣಿ ಕಾಮಧೇನು ಸುರಭೂರುಹಮೆಂಬಿವನೇಕೆ ಮಾಡಿದಂ ತಾಮರಸೋದ್ಭವಂ (ಆದಿಪು. ೧-೬೨); ಚಿಂತಾಮಣಿ ಬಂದಂತಿರೆ . . . ಒಸಗೆಯಾಯ್ತುರವಮನೆಯೊಳ್ (ಪುಷ್ಪಪು. ೧೩-೧೨೨) ; ತರುಗಳೊಳು ಕಲ್ಪವನೀಜಂ . . . ರತ್ನನಿಕರದೊಳಗೆ ಚಿಂತಾಮಣಿಯು (ಬಸವು. ೫-೬೯) ; ಚಿಂತಾಮಣಿಗೆ ಕೈದುಡುಕಿ ಹರಳುತಕ್ಕೆಯಿದೆಂಬ ಪಾತಿಗೆ ಪರಮಗುರು ನಾನಾದೆನೈ (ಕುವ್ಯಾಭೀ. ೩-೬೯) ; ರಸದ ಬಾವಿಯು ಮನೆಮನೆಗಳಲಿ ಮಿಸುಪ ಚಿಂತಾಮಣಿಗಳಿರುತಿರೆ ಎಸೆವ ಪರುಷದ ಕಣಿಗಳಗ್ಗದ ವೀಥಿವೀಥಿಯಲಿ (ಕಾಶಿರಾ. ೩೯-೬). ೨. (ಆಲಂ) ತುಂಬ ಬೆಲೆಯುಳ್ಳ ವ್ಯಕ್ತಿ ; ಶ್ರೇಷ್ಠವ್ಯಕ್ತಿ : ಸೋಬಾನಕ ನೀ ನಡಿಯ ಸೊಬಗಿನ ಚಿಂತಾಮಣಿಯೆ (ಲೋಕಗೀ. ೦೦). 'ದಾನಚಿಂತಾಮಣಿ' ಪರಾ. ೩. [ಸಂಗೀತ] ಒಂದು ರಾಗದ ಹೆಸರು : ಚಿಂತಾಮಣಿ, ಕಲ್ಗಡ . . . ಮುಂತಾದ ಕಷ್ಟ ರಾಗಗಳಲ್ಲಿ ಕೃತಿರಚನೆ ಮಾಡಿ ಶಾಸ್ತ್ರಿಗಳು ಆ ರಾಗಗಳ ಸ್ಪಷ್ಟ ಪರಿಚಯ ಮಾಡಿ ಮಾರ್ಗದರ್ಶಕರಾಗಿದ್ದಾರೆ (ಸಂಗೀತಂ. ೨೯४).

[ಸಂ. ]

**ಚಿಂತಾಯಕ** (ನಾ). ಭಕ್ತರ ಕ್ಷೇಮವನ್ನು ಕುರಿತು ಯಾವಾಗಲೂ ಚಿಂತಿಸುತ್ತಿರುವವನು ; ವಿಪತ್ತನ್ನು ನಿವಾರಣೆ ಮಾಡತಕ್ಕವನು : ಸಂತಸದಿ ಗುರುವಿನಡಿಗಂತಾಗ ಮೈಯಿಕ್ಕಿ ಚಿಂತಾಯಕನೆ ಮತ್ತದೆಂತೆಂದೆನೆ (ಮನೋವಿ. ೨-೧೦) ; ತಾಯನಗಲಿದ ಶಿಶುವಿನಂದದಿ ಬಾಯಬಿಡು ವಂತಾಯ್ತಲೇ ಚಿಂತಾಯಕನೆ ಬಿಡಬೇಡ ರಕ್ಷಿಸು(ಹರಿಸಾ. ೯೪) ; ಇಂತಿವಪ್ಪಾ ದಶದೋಷಾ ಚಿಂತಾಯಕಗಿಲ್ಲವದರಿಂದ ಸುಖಿವೆ ನಿರಂತರ ನಿಜದೊ ಳೊಪ್ಪಿಹುದು (ಭರತ. ೬೬-೧೧೬) ; ಮುದದಿ ಚಿಂತಾಯಕಂ ಅವರ ಚಿತ್ತ ಶುದ್ಧಿಯ ನೋಳ್ಪೆನೆಂದು ನಟಿಸಿದ ಸತ್ಕನೌ (ಪ್ರಭುಪು. ೫-೧೫೭) ; ಚಿಂತೆ ಯನುಳಿದಾತನವನು ಚಿಂತಾರತ್ನ ಚಿಂತಾಯಕ ರಂಗಧಾಮ (ಶತಸಾಂ. ೫೮-೯೭). [ ಸಂ. ]

**ಚಿಂತಾರತ** (ನಾ). ಮನಸ್ಸಿನಲ್ಲಿಯೇ ಒಡಗೂಡುವಿಕೆ ; "ಸಂಕಲ್ಪ ಸಮಾಗಮ" (ಕಾದಂಊ. ಅಡಿಟಿ) : ಕರ್ಣಪೂರೋತ್ಪಲದಿಂ ಚಿಂತಾರತ ಕ್ಕಾಟಿಸಿ ಮಣಿಮಯದೀಪಂಗಳಂ ನಂದೆ ಪೊಯ್ವಳ್ (ಕಾದಂಊ. ೩೩೯).
[ ಸಂ. (ಚಿಂತಾ + ರತ) ]

**ಚಿಂತಾರತಿ** (ನಾ). ಯೋಚನೆಯಲ್ಲಿ ಆಸಕ್ತಿ : ಇವರಿರವಿನ ಚಿಂತಾರತಿ ನಿವಗೇಕೀ ಕ್ಷುಧೆಯನೀ ಪಥಶ್ರಮಮುಮಂ ತೀರ್ಚುವ ಬಗೆಯಂ ಬೇಗಂ ಮಾಡುವುದು (ಗಿರಿಕ. ೯-೯೩). [ ಸಂ. (ಚಿಂತಾ + ರತಿ) ]

**ಚಿಂತಾರತ್ನ** (ನಾ).=ಚಿಂತಾಮಣಿ ೧: ರತ್ನಂಗಳ ನಡುವಣ ಚಿಂತಾರತ್ನ ದಂತೆ . . . ಗಿರಿರಾಜತನೂಜೆ ವಿರಾಜಿಸುತಿರ್ದಳ್ (ಗಿರಿಕ. ೪-೪೩ ವ) ; ಬಸವನೆಂಬ ವಿನೂತ್ನ ಚಿಂತಾರತ್ನವಿರುತಿರಲು (ಬಸಪು. ೬೦-೮೪).
[ ಸಂ. (ಚಿಂತಾ + ರತ್ನ) ]

**ಚಿಂತಾಲು** (ನಾ). ಒಂದು ಬಗೆಯ ಭಾರಮಾಪಕ ; ತೂಕದ ಪರಡಿ ಗಳಿಲ್ಲದ, ಬರಿ ಕೊಂಡಿಗಳಿಗೆ ಭಾರವನ್ನು ಅಳವಡಿಸಿ ತೂಕ ಮಾಡುವ ಒಂದು ಸಾಧನ. ೨. ದೊಡ್ಡ ತಕ್ಕಡಿ : ಗೋಣಿಯ ಚೀಲದಂತೆ ಚಿಂತಾ ಲಿನಲ್ಲಿಟ್ಟು ತೂಗುವುದಕ್ಕಾಗುವುದಿಲ್ಲ (ನಿಬಂಧ. II, ೨೦೫) ; ಅದಕ್ಕೆ ಶಿಭಿಯು ಒಪ್ಪಿ ಚಿಂತಾಲನ್ನು ತರಿಸಿ (ವಚಭಾ. ೦೪೯). ೩. "ಬಂಗಾರ-ಬೆಳ್ಳಿಗಳನ್ನು ತೂಗುವ ಸಣ್ಣ ತಕ್ಕಡಿ, ತರಾಜು" (ಕಸ್ತೂಕೋ. ೩೯೩) ; ತುಲಾ-ತ್ರಾಸು. ಚಿಂತಾಲು. ತಕ್ಕಡಿ. ತೂಗುಕೋಲು (ಸಿದ್ಧಾಂತಿ. ೨೫೭).
[ ? ]

**ಚಿಂತಾಲೋಲ** (ಗು). ೧. ಯೋಚನೆಯಿಂದ ಕೂಡಿದ ಮನಸ್ಸುಳ್ಳ ; ಆಲೋಚನಾ ಪರವಾದ. (ನಾ). ೨. ಚಿಂತೆಯಲ್ಲಿ ಮುಳುಗಿದವನು : ಸೈಂಧವನು ಚಿಂತಾಲೋಲನಿರ್ದನು ಮರಣಜೀವನಜಾತಸಂಶಯನು (ಕುವ್ಯಾದ್ರೋ. ೮-೬೮). [ ಸಂ. (ಚಿಂತಾ + ಲೋಲ) ]

**ಚಿಂತಿ** (ನಾ). ಒಂದು ಬಗೆಯ ಆಭರಣ ; ಚಿಂತಾಕು : ಎಡೆನರೆ ಬವರಿ ಮುತ್ತಿನ ಚಿಂತಿ ಕುಲ್ಲಾವಿ ಬೆಡಗುಗಾಣಿಸುತಿರಲೆಯ್ದಿ (ನಾಗಕು. ೨೯-೫).
[ <ಚಿಂತಾಕು./ತಮಿ. ಚಿನ್ತಿ ]

**ಚಿಂತಿತ**(ಗು). ೧. ಯೋಚಿಸಿದ; ಆಲೋಚಿಸಿದ. ೨. ಸ್ಮರಿಸಿದ; ಎಣಿಸಿದ; ನೆನೆದ. (ನಾ). ೩. ಯೋಚನೆ. ೪. ಬಯಕೆ; ಇಷ್ಟಾರ್ಥ: ಇಂತೆಂದು ನುತಿಸಲಿಂದ್ರಂ ಸಂತಸದಿಂ ಶಂಭುವೆಂದನೆಲೆ ಸುರನಾಥನೆ ಚಿಂತಿತಮನೀ ವೆನೀಗಳೆ ನೀಂ ತಳ್ವದೆ ಬೇಡೆನಲ್ಕೆ ಕೈಮುಗಿದೆಂದಂ (ಹಾಲಾಸ್ಯ. ೦-೨-೯೭). ೫. [ಸಂಗೀತ]ಸ್ವರದೋಷಗಳಲ್ಲಿ ಒಂದು : ಕಂಪಿತ ಚಿಂತಿತ . . . ಕಾಲಹೀನವೆಂಬ ಹದಿನೈದು ಸ್ವರದೂಷಣಂಗಳಂ ತೊಱೆದು (ವಿವೇಕ. ೨೩೭). [ ಸಂ. ]

**ಚಿಂತಿಸು** (ಕ್ರಿ). ೧. ಯೋಚಿಸು; ಆಲೋಚಿಸು; ಭಾವಿಸು: ಮಾರ್ಗಗದಿತ ದೋಷಂಗಳುಮಂ ಚಿಂತಿಸಿ (ಕವಿರಾ. ೦-೪೭) ; ಧುರದೊಳ್ ಮೂಱುಂ ಲೋಕಂ ನೆರೆದಿರೆಯುಂ ಕುಡುವ ಪೊ[ಟ್ರ]ಱೊಳ್ ಮೋರುವೆ ಮುಂದಿರೆಯುಂ ಬೀರದ ಬಿಯದಂತರಕ್ಕೆ ಕಿಱಿದೆಂದು ಚಿಂತಿಪಂ ಪ್ರಿಯಗಳ್ಳಂ (ಪಂಪಭಾ. ೧-೪೮); ಮತಿಯಂ ಬಿಪ್ಪಂಡಿಪಳ್ ಲಕ್ಷಣಮನೆನಿ ಸಳೌದಾರ್ಯಮಂ ಚಿಂತಿಸಳ್ (ಕಾದಂಪೂ. ೫೪೮); ಚಿಂತಿಸಿದೊಡಲ್ಲದೀಯದು ಚಿಂತಾಮಣಿ (ಸಮಪ. ೩೯೪-೮ ಅನುಬಂಧ. I) : ಅಳಿಯನಳಿವನು ಪೇಳ ಬಾರದು ತಿಳಿಯಲಿದನಿನ್ನೆನುತ ಚಿಂತಿಸಿ ನಳಿನಲೋಚನ ಬರುತ ಕಂಡನು (ಕುವ್ಯಾದ್ರೋ. ೮-೨) ; ಮುಂದೊರ್ವ ಖಳನುಯ್ಯನೆಂದು ಚಿಂತಿಸಿ ಭಾನು ಸಂದನು ಪಡುಗಡಲೊಳಗೆ (ವೀಾಹತ. ೪-೭೨). ೨. ಆತಂಕಪಡು ; ಕಳವಳಿಸು; ವ್ಯಥೆಗೊಳ್ಳು: ಮಾವಂ ಚರಿತಾರ್ಥಂ ನೀನಣಂ ಚಿಂತಿಸದಿರು ನಮಗಿನ್ನುಂಟೆ ಶೋಕಾವಕಾಶಂ (ಆದಿಪು. ೪-೮೯) : ಅಂತವನಿಪನಿಕರಂ ಕೈಯಾಂತವನಿಪನಿಕರವೊಂದುಕೋಟಿಗೆ ಮಿಗಿಲೆಂಬಂತಾದೊಡಮೊಳ ಸೋಱಿದೆ ಚಿಂತಿಸದಾಂತಿಱುಗುವಿಗಾಗುವಿಱುವಬೆಡಂಗಂ (ಗದಾಯು.೦-೧೫); ತಾ ಮುನ್ನ ಕರ್ಣನ ಶರಹತಿಯಲೇಕಳಿದುದಿಲ್ಲಾ ಎನುತ ಚಿಂತಿಸಿದ (ಕುವ್ಯಾಕ. ೧೨-೮). ೩. ಮನನ ಮಾಡು ; ಆರಯ್ಯು ; ಬಗೆದು ನೋಡು : ಮಾಣದೆ ಚಿಂತಿಸದೋದುಂ ಪಲವಂ ಭಾವಿಸುತಿರ್ಪನ ತಪಮುಮೊಪ್ಪಲಾರ್ಕುಮೆ ಕಡೆಯೊಳ್ (ಧರ್ಮಾಮೃ. ೨-೮೨). ೪. ಧ್ಯಾನಮಾಡು : ಚಿಂತಿಪುದು ಜಿನೇಶ್ವರನಂ ಸಂತತಮುತ್ಸವದೆ (ಸಮಪ. ೧-೧೧೧). [ ಚಿಂತನ + – ಇಸು₃ ]

**ಚಿಂತೂರ್** (ನಾ). ಒಂದು ಊರಿನ ಹೆಸರು. 'ಚಿಂತೂರ್‌ಬೋಯ' ಪರಾ. [ ? + ಊರ್ ]

**ಚಿಂತೂರ್‌ಬೋಯ** (ನಾ). ಒಬ್ಬಾತನ ಹೆಸರು : ಚಿಂತೂರ್ ಬೋಯಸ್ಯ ಭಾರದ್ವಾಜಸಗೋತ್ರ (ಇಆ. VII, ೧೮೭-೨೪ ; ೬೬೮).
[ ಚಿಂತೂರ್ + ಬೋಯ ]

**ಚಿಂತೆ** (ನಾ). ೧. ದಂಃಖದಿಂದ ಕೂಡಿದ ಯೋಚನೆ ; ದುಮ್ಮಾನ: "ಬೇವಸಮೆ ಚಿಂತೆ" (ಚತುನಿ. ೨೦) ; "ಚಿಂತೆ ತಾನೆಯುಬ್ಬೆಗಮಕ್ಕುಂ" (ಕಬ್ಬಿಗ. ೭೧) ; ಚಿಂತೆಯಿದೇನೋ ಸಂತತಿಗೆ (ಪಂಪಭಾ. ೧-೧೧೪); ಪೇಟ್ ನಿನಗಿನಿತೊಂದು ಚಿತ್ರದ ನಿಮಿತ್ತದ ಚಿಂತೆ (ಪುಷ್ಪಪು. ೩-೭೦) ; ಚಿಂತೆ ಏತಕೋ ಬಯಲ ಭ್ರಾಂತಿ ಏತಕೋ (ಪುರಂದ. ೧-೬೮-೦) ; ಆ ಚಿಂತೆಯೇ ವ್ಯಾಧಿ (ರತ್ನಾಕ. ೭೪). ೨. ಯೋಚನೆ ; ಆಲೋಚನೆ : ಪರರ ಚಿಂತೆ ನಮಗೇಕಯ್ಯ ನಮ್ಮ ಚಿಂತೆ ನಮಗೆ ಸಾಲದೆ (ಬಸವ. ೫೦೬) ; ಮಚ್ಚೀತದೊಳುಣ್ಮಿ ಪೊಣ್ಮುವ ತನೂಭವ ಲಾಭದ ಚಿಂತೆ ಪೋ ಸುನಿರ್ಣೀತಮಿದೆಂದದೇಂ ನುಡಿದನೋ ಬಗೆಯಂ ನವಭಾವಕೋವಿದಂ (ಪುಷ್ಪಪು. ೩-೭೨). ೩. ಧ್ಯಾನ : ಅವರು ಯಾವಾಗಲೂ ದೇವರ ಚಿಂತೆ ಯಲ್ಲಿಯೇ ಕಾಲಕಳೆಯುತ್ತಾರೆ (ರೂಢಿ). ೪. ಅಡ್ಡಿ ; ಆತಂಕ : ಎಷ್ಟು ಕಠಿಣವಾದರೂ ಚಿಂತೆಯಿಲ್ಲ (ದ್ರಾವಿವಿ. ೬೩). ೫. [ಕಾವ್ಯಮಿ]ಸಂಚಾರೀ ಭಾವಗಳಲ್ಲಿ ಒಂದು ; ಅನುಭೂತವಸ್ತುವನ್ನು ಎಡೆಬಿಡದೆ ಧ್ಯಾನಿ ಸುವುದು : ಮತಿ ನಿರ್ವೇದ . . . ಚಿಂತೋಗ್ರತೇರ್ಷ್ಯಾಧೃತಿ . . . ಇವಿಂತೆಯ್ದಿ ಸಂಚಾರಿಭಾವಂ (ಕಾವ್ಯಾವ. ೭೯೫) ; ಮತಿ ಲಜ್ಜೆ . . . ಚಿಂತೆ . . . ಅಪಸ್ಮಾರಗಳೆಂಬ ಮೂವತ್ತು ಮೂಱು ಸಂಚಾರೀಭಾವಂ ಗಳಂ ಪರಿವರ್ಧಿಸಿ (ವಿವೇಕ. ೨೨೭).೬. ಹತ್ತು ಕಾಮಾವಸ್ಥೆಗಳಲ್ಲಿ ಒಂದು: ಅಭಿಲಾಷೆ ಚಿಂತೆ . . . ಮರಣವೆಂಬ ದಶಾವಸ್ಥಾವಿಚಾರಪರರಿಂದು ಪಾಶ್ರಿತರಾಗಿ (ವಿವೇಕ. ೨೩೦). [ ಸಂ. ಚಿಂತಾ ]

**ಚಿಂತೆಗೆಯ್** (ಕ್ರಿ). ೧. ತಲ್ಲಣಿಸು ; ಉಮ್ಮಳಿಸು ; ಕಳವಳಿಸು: ಇನ್ನಿದಕೆ ಚಿಂತೆಗೆಯ್ವೊಡೆ ಪನ್ನತಿಕೆಗೆ ಬನ್ನವಲ್ತೆ (ರಾಜಶೇ. ೧೩-೯೭). ೨. ಯೋಚನೆ ಮಾಡು ; ಆಲೋಚಿಸು : ಒಂದು ದಿವಸಂ ಸುಕವಿಯಂತಪೂರ್ವಾರ್ಥ ಲಬ್ಧಿಗೆ ಚಿಂತೆಗೆಯ್ದು ತನ್ನೊಳಿಂತೆಂದು ಬಗೆದಂ (ಪಂಚತಂ. ೨೨-೧೦).
[ ಚಿಂತೆ + ಕೆಯ್₁ ]

**ಚಿಂತೆಗೊಳ್ಳು** (ಕ್ರಿ). ವ್ಯಥೆಪಡು ; ಕಳವಳಪಡು ; ಉಮ್ಮಳಿಸು : (+). [ ಚಿಂತೆ + ಕೊಳ್ಳು$_1$ (<ಕೊಳ್$_1$) ]

**ಚಿಂತೆದಾಳ್** (ಕ್ರಿ).=ಚಿಂತೆಗೊಳ್ಳು : ಪೇಳು ವೈಶಂಪಾಯು ಮುನಿರಾಯ ಧರ್ಮಸುತನಾಳೋಚನೆಯನೇಕೆ ಮಾಳ್ಪ ರೋಮಹರ್ಷನಂದು ಪೇಳಿದ ರಹಸ್ಯ ವನ್ನಾರೊಡನೆಯುಸುರನರ್ಜುನ ಬಂದ ಮೇಲೆ ಚಿಂತೆದಾಳಬೇಡೆಂದು (ಲಕ್ಷ್ಮೀ. ೩-೩೨-೩). [ ಚಿಂತೆ + ತಾಳ್$_1$ ]

**ಚಿಂತೆವಡು** (ಕ್ರಿ).=ಚಿಂತೆಗೊಳ್ಳು: ಇಂತು ಹನ್ನೆರಡು ಸಾವಿರ ಮುಕೋಟಿ ಯುರು ಮುಂತಾಗ ವಿಜಯಾಪುರಕೆ ಚಿಂತೆವಡುತಲೈದಿ (ಕಂಸವಿ. ೧೩-೬೩). [ ಚಿಂತೆ + ಪಡು$_1$ ]

**ಚಿಂತೆವಿಡಿ** (ಕ್ರಿ).=ಚಿಂತೆಗೊಳ್ಳು : ಮಕ್ಕಳ ಹರುಷಗಾಣದೆ ಚಿಂತೆವಿಡಿದರೆ ಹಲವು ವರ್ಷಗಳು (ಕುವ್ಯಾ.ಅ. ೬೦೮. ಪರಿ. ೩೦೨). [ ಚಿಂತೆ + ಪಿಡಿ$_1$ ]

**ಚಿಂತೆವೆಱು** (ಕ್ರಿ).=ಚಿಂತೆಗೊಳ್ಳು : ಇಂತಿರುತಿರಲ್ಕೆ ಕೌಂಡಿನ್ಯನೆಂಬೊರ್ವ ಮುನಿಪಂ ತನ್ನ ಮನೆಗೆ ಬರಲಾತನಂ ಸತ್ಕರಿಸಿ ಚಿಂತೆವೆತ್ತಿರಲವನಿದೇನೆಂದು ಬೆಸಗೊಂಡೊಡೆ (ಜೈಮಿಭಾ. ೧೦-೨೫). [ ಚಿಂತೆ + ಪೆಱು$_1$ ]

**ಚಿಂತ್ಯ** (ಗು). ೧. ಯೋಚಿಸತಕ್ಕ ; ಪರಿಶೀಲಿಸಲು ಯೋಗ್ಯವಾದ ; ಆಲೋಚಿಸತಕ್ಕ : "ಚಿಂತ್ಯ(ತರ್ಕ್ಯ)" (Conceivable. ಪಾರಿನಿ. ೧೯) ೨. ಯೋಚಿಸಲು ಸಾಧ್ಯವಾದ. 'ಅಚಿಂತ್ಯ' ಪರಾ. [ಸಂ.]

**ಚಿಂತ್ಯಾಗಮ** (ನಾ). ಆಗಮಗಳಲ್ಲಿ ಒಂದು ಬಗೆ : ಮತ್ತಮಾ ಸಿದ್ಧಾಂತ ಭೇದಂಗಳಾವಾವವೆಂದೊಡೆ ಕಾಮಿಕಾಗಮ ಯೋಗಜಾಗಮ ಚಿಂತ್ಯಾಗಮ . . . ಇಪ್ಪತ್ತೆಂಟು ದಿವ್ಯಾಗಮಗಳಕ್ಕುಂ (ವಿವೇಕ. ೬೪). [ಸಂ.]

**ಚಿಂದ** (ನಾ). ನಪುಂಸಕ ; ಖೊಜ್ಜೆ : ಅದಱೊಳ್ ಪುಟ್ಟಿದ ಗಂಡರೆಲ್ಲ ಮತಿವೀರರ್ ಪೆಂಡಿರೆಲ್ಲಂ ವಿಲಾಸದ ಸೌಭಾಗ್ಯದ ಸೀಮೆಗಳ್ . . . ಮೂಕರುಂ ಚದುರರ್ ಚಿಂದ[ಪಾಠಾಂ. ಲೆಂಕ]ರುಮಾಯಕಾಜಿರಥಮ ವ್ಯಾಪಾರಿಗಳ್ ಧಾರ್ಮಿಕರ್ (ಕಾವ್ಯಸಾ. ೧೯೪) ; (ಅನಂಪು. ೧೧ ೧೨ ನೋ). [ <ಪ್ರಾ. ಚಿಂಧ ]

**ಚಿಂದಗಾವುಂಡ** (ನಾ). ಒಬ್ಬಾತನ ಹೆಸರು : ಚಿನ್ನಗಾವುಣ್ಣರ ಮಗ ನಾಡ ಗಾವುಣ್ಣ ಗಾವುಣ್ಣಗೆಯ್ವನ್ನು (ಎಕ. X, ಮಾಲೂರು. ೯೭-೮ ; ಸು. 950). [ ಚಿಂದ$_0$ + ಗಾವುಂಡ(<ಗಾಮುಂಡ) ]

**ಚಿಂದರಿ** (ನಾ).=ಚಿಂದಿ ೨ : ಉಟ್ಟ ಮಲ್ಲಗಂಟಿನ ತೊಡರ್ಚಿದುಡೆಗಂಟೆಯ ಕಿರ್ಗಟ್ಟಿನ ಸುರಗಿಯ ಕಟ್ಟಿದ ಚಿಂದರಿಯ [ಪಾಠಾಂ. ಚಿಂದಿಯ] ತೊಟ್ಟ ಕಂಚುಳಿಕೆಯ ಹಿಡಿದ ಬಿಲ್ಲ ಬಲಗೈಯ ಸರಳ ಬೆನ್ನ ಬತ್ತಳಿಕೆಯ . . . ಸಿಂಗರಂಬೆರಸಿ (ಗಿರಿಕ. ೬-೫೫ ವ). [ ?. ತೆಲು. ಚಿಂದರ, ಚಿಂದಱ. / ಮರಾ. ಚಿಂದರ್, ಚಿಂದರೀ ]

**ಚಿಂದರುಬಾವಲಿ** (ನಾ). ಒಂದು ಬಗೆಯ ಕರ್ಣಾಭರಣ : ಕೆಂದೆತ್ತು ಕೈಯಾಗ ಕೆಂಪಂಗಿ ಮೈಯಾಗ ಚಿಂದರುಬಾವಲಿ ಕಿವಿಯಾಗ ಇಟ್ಕೊಂಡು ತಂಗಿಯರ ಕರೆಯೆ ಬರುತಿದ್ದ (ಹಳ್ಳಿಬಾ. ೬೨) ; ಚಿಂದರುಬಾವಲಿ ಕಿವಿಯಲ್ಲಿ ಇಕ್ಕೊಂಡು ಅಣ್ಣಾ ಬಂದಾ ತಂಗೀ ಕರೆಯೋಕೆ (ಜಗೀತ. ೨೯). [ <ಚಂದ್ರಬಾವುಲಿ ]

**ಚಿಂದಾಟಿ** (ನಾ). ಚಿಂದಿಚಿಂದಿಯಾದುದು ; ಹರಕಲು ಬಟ್ಟೆ : ಎರಡನೆಯ ಖಲೀಫನಾದ ಉಮರನು ಭರತಖಂಡದ ನೂಲಿನ ಬಟ್ಟೆಯ ನಿಲುವಂಗಿ ಯನ್ನು ತೊಟ್ಟಿದ್ದನೆಂತಲೂ ಅದಕ್ಕೆ ೧೨ ತೂತುಗಳು ಬಿದ್ದು ಅದು ಹರಿದು ಚಿಂದಾಟಿಯಾಗಿದ್ದಿತೆಂತಲೂ ಉಲ್ಲೇಖವಿದೆ (ಪಾದಿಶಾ. ೨೦). [ ←ಮರಾ ಚಿಂಧೋಟೀ ]

**ಚಿಂದಿ** (ನಾ). ೧. ಹರಕು ಬಟ್ಟೆ ; ತುಂಡು ಬಟ್ಟೆ : ಒಂದು ಪಟ್ಟಾವಳಿಯ ಚಿಂದಿಯೊಳೊಂದೆಸೆಯೊಳೀಶ್ವರನೊಡನೆ ಬಲುಹೊಂದಿ ಸಂಧಿಸಿ (ಬಸವು. ೨೬-೧೩) ; ಪೀತಾಂಬರಗಳ ಹೊದೆಯುವರಲ್ಲಿ, ಕೌಪೀನಕೆ ಚಿಂದಿಯು ಸಿಗದಿಲ್ಲಿ (ಪಾಂಡಜ. ೬೭-೨೦). ೨. ತಲೆಗೆ ಕಟ್ಟಿಕೊಳ್ಳುವ ಚಿಕ್ಕ ವಸ್ತ್ರ: ತೋರದ ದೇಹ ಕುಂಡಲವೆದೆ ನರೆಗಡ್ಡ ಸೇರಿದ ಚಿಂದಿ ಕುಲ್ಲಾಯಿ (ಧರಿಕ. ೧೩-೯) ; ವೈಯಾರದ ಬಿರುದಿನ ಚಿಂದಿಗಳ ಚೆಲ್ವರಾಯ ರಾವುತರ್ಕೈದಿದರು (ಕಂಸವಿ. ೨೩-೮೫) ; ವಾರೆದುರುಬಿನ ಚಿಂದಿ ವಾರಣದ ಶಿಖಿಯಲ್ಲಿ (ಕೊಟ್ರಬ. ೧೫-೫೦) ; ಇಟ್ಟ ಮುತ್ತಿನ ಚೌಕಳಿ ಚಿಂದಿ ಹರೆನಾಮ ತೊಟ್ಟ ಭೂಷಣ ರತ್ನಾಭರಣ (ಸೌಂದಕಾ. ೯-೬೫) ; ಚಿಂದಿಯೊಳಪೊಕ್ಕು ಬ್ರಹ್ಮಸ್ಥಾನ ಗೊರೆದು(ಜನಮು. ೨೭-೧೧). ೩. ಸೊಂಟಪಟ್ಟಿ ; ನಡುಕಟ್ಟು : ಕಟ್ಟಿದ ಚಿಂದಿಯುಂ ಸುರಿಗೆಯುಂ ಪೆಗಲೇಱಿದ ಮಕ್ಕಳುಂ (ಸೂಕ್ತಿಸು. ೧೮-೩೩).

**ಚಿಂದಿಉಡಾಯಿಸು** = ಸ್ವಲ್ಪವೂ ಉಳಿಯದಂತೆ ಕೊಳ್ಳೆಹೊಡೆ.– ಲಪಟಾಯಿಸು : ಅಂತೂ ಇಂಥ ಅತಿರಥ ಮಹಾರಥರ ಸಂಘಟನೆಯಲ್ಲಿ ಕಳವು ಮಾಲು ಚಿಂದಿ ಉಡಾಯಿಸಿ ಹೋಗುವುದರಲ್ಲಿ ಸಂದೇಹವಿಲ್ಲ (ಕಲಸಿ. ೧೦೮). **ಚಿಂದಿಯಾಗು** = ಚೂರು ಚೂರಾಗು : ಉಟ್ಟಿದ್ದ ಧೋತ್ರ, ತೊಟ್ಟಿದ್ದ ವಸ್ತ್ರಗಳು ಮುಳ್ಳುಪೊದೆಗಳಿಗೆ ಸಿಕ್ಕಿ ಹರಿದು ಚಿಂದಿಯಾಗಿವೆ (ಶಾಂತಲಾ. ೩೩೭). [ ?./ ಹಿಂ. ಚಿಂದೀ ; ಮರಾ. ಚಿಂಧೀ./ಪ್ರಾ. ಛಿಂದಾವಿಯ=ಹರಿದ ; ಕತ್ತರಿಸಿದ ]

**ಚಿಂದಿಬಟ್ಟೆ** (ನಾ). ತುಂಡುಬಟ್ಟೆ : ಮೊದಲಿದ್ದ ಚಿಂದಿಬಟ್ಟೆಯೂ ಈಗ ಮಾಯವಾಗಿದ್ದಿತು (ಬಾಡಿಅ. ೧೦೯). [ ಚಿಂದಿ$_1$ + ಬಟ್ಟೆ$_2$ ]

**ಚಿಂದು** (ನಾ). ೧. [ನಾಟ್ಯ] ನೃತ್ಯದಲ್ಲಿ ಒಂದು ಬಗೆ ; ಅಭಿನಯದಲ್ಲಿ ಒಂದು ರೀತಿ : ಮಾತಂಗಿ ಶಬರಿ ಯೋಗಿಣಿ ಮುಂತಾದ ಆಟಮನಾಡಿ ನಾನಾದೇಶ ವೇಷ ಭಾಷೆಗಳನಳವಡಿಸಿ ಚಿಂದು ಜಕ್ಕಡಿ . . . ಮೊದಲಾದ ಆಟಗಳಿಂ (ವಿರೂಪಾ. ೯೦) ; ಕೋಲಚಾರಿಯ ಕೊಳ ವನ ಚಿಂದು ಮೊದಲಾದ ಲೀಲೆಯನೆಲ್ಲವ ತೋಱಿ (ಧರಿಕ. ೧೨-೯೩) ; ಚಿಂದು ಚಕ್ಕಡಿ ಕೋಲಚಾರಿಗಳ್ (ಚಬಪು. ೨-೨೯). ೨. [ಸಂಗೀತ] ಸಂಗೀತದ ಸ್ಥಾಯಿ ಗಳಲ್ಲಿ ಒಂದು ಬಗೆ : ಜಕ್ಕಡಿ ಚಿಂದು ಮೊದಲಾದ ಠಾಯವು . . . ಮೆಱೆಯೆ (ರೇವಣ. ೩೦-೩೪) ; ಗೀತಕ್ರಮದಿ ಸಂಕೀರ್ಣವೆತ್ತು ರತಿ ಜೋಡಣೆಗೆ ಚಿಂದು ಜಕ್ಕಡಿ ಗೀತ ಕಂಪನವ ಸೂಡೆ ಸರಸಾಲಾಪದಿ (ಲಿಂಗಪು. ೨೭-೧೬). [ ದೇ.॥ ತಮಿ. ಚಿನ್ದು ; ತೆಲು. ಚಿಂದು ]

**ಚಿಂಪಯ್ಯ** (ನಾ). ಒಬ್ಬಾತನ ಹೆಸರು . ಕೊವರಪೆಯ ಚಿಂಪಯ್ಯನುಂ ಲೋಕಯ್ಯನುಂ ಕೊಟ್ಟಾರದ ಮಾರ ಪುಲಿಯುಂ (ಎಕ. XII, ಶಿರಾ. ೨೮-೫೦ ; 943). [ ? + ಅಯ್ಯ$_1$ ]

**ಚಿಂಪಾಂಜಿ** (ನಾ). (ಮನುಷ್ಯನನ್ನು ಹೋಲುವ) ಒಂದು ವಾನರ ಜಾತಿ : ಮಂಗನ ಮರಿಗೆ ಇನ್ನೂ ಹೆಚ್ಚು ಕಾಲ ಶಿಕ್ಷಣ ಅಗತ್ಯ. ಚಿಂಪಾಂಜಿ ಎಂಬ ಮಾನವ ಮಂಗದ ಮರಿಗಳು ಇನ್ನೂ ಹೆಚ್ಚುಕಾಲ ತೆಗೆದುಕೊಳ್ಳುತ್ತವೆ (ಶಿಕ್ಷದ. ೮೭). [ ←ಇಂ. Chimpanzee ]

**ಚಿಂಪಿ** 'ಸಿಪ್ಪ' ನೋ.

**ಚಿಂಪಿಗ** 'ಸಿಪ್ಪಿಗ' ನೋ.

**ಚಿಂಪೆ** 'ಸಿಪ್ಪ' ನೋ.

**ಚೀ** (ನಾ). ಜುಗುಪ್ಸೆ, ತಿರಸ್ಕಾರ ಮುಂತಾದುವುಗಳನ್ನು ಸೂಚಿಸುವ ಒಂದು ಅನುಕರಣ ಶಬ್ದ ; ಧಿಕ್ಕರಿಸುವ ಶಬ್ದ : ಆ ಸುದತಿಯ ರೂಪಿನಿಂ ಪೆಱತನೆಂದೊಡೆ ಚೀ ಕರವೆಗ್ಗನಾಗೆನೇ (ಆದಿಪು. ೨-೭೪) ; ಚೀ ಜಪವೆಣಿಸುವ ನೆವದಿಂದಂ ನೃಪ ತದ್ಗುಣಗಣಮನೀಗಳೆಣಿಸುತ್ತಿರ್ಪೆಂ (ಕಾದಂಪೂ. ೯೫೬) ; ಸಾರಮಸಾರಮಿದೆಂದು ವಿಚಾರಿಸಿ ಕೈಕೊಂಡು ಕಿಡಿಸ ಲಾರ್ಪುದೆ ಚೀ ನಿಷ್ಕಾರಣಂ (ಧರ್ಮಾಮೃ. ೩-೨೨೦).

**ಚೀಗೈ** (ಕ್ರಿ). ತಿರಸ್ಕರಿಸು; ಧಿಕ್ಕರಿಸು: ಮನಮೇಕೊ ಕಳವಳಂಗೊಳುತಿರ್ಪು ದಾಶೆಯಂ ಚೀಗೈದು (ಶ್ರೀರಾಮಾ. ೮೨೨-೨೯೩). [ ಚೀ + ಗೈ (<ಕೆಯ್$_1$) ]

ನೀಳಕುಂತಳದ ವಿಡಾಯ ಚಿಮ್ಮುರಿಯ ಚೆಲ್ವ ತುಱುಂಬಿನ . . . ವಿಟ ಸಾರ್ವಭೌಮ (ಹಮ್ಮೀರ. ೬-೨೧). ೨. ಬಿಗಿದ ದಟ್ಟಿ ; ವೀರಗಚ್ಚೆ : ಸುತ್ತಿದ ಚಿಮ್ಮುರಿ ತೊಟ್ಟಿದ್ದ ಚಿಮ್ಮುರಿ ಮತ್ತೆ ಪಿಡಿದ ಕೈಯಲಗು ಮುತ್ತಿನ ಸಂಜೋಗದ ಕುದುರೆಯನೇಱಿಯುತ್ತಮರಾವುತರೆಯ್ದೆ (ಜೀವಂಸಾಂ. ೫-೩೮) : ಮುರಿದುಟ್ಟ ಕಾಸೆ ಚಿಮ್ಮುರಿ ಬಿಟ್ಟ ಜಡೆ (ಭರತ. ೬೩-೧೪). ೩. ಕೈಗಳನ್ನು ಬೆನ್ನ ಹಿಂದೆ ಸೇರಿಸಿ ಬಿಗಿದು ಕಟ್ಟು ವುದು ; ಹೆಡಮುರಿಗೆ ; ಹಿಂಗಟ್ಟು : ಸಾಧುಗಳನಾದರಿಸುವೆನು ಮಾಱಾಂತರನು ಚಿಮ್ಮುರಿಯ ಬಿಗಿಸುವೆನಮುರಿಯರ ಕಡೆಗಣ್ಣ ಕಣ್ಣಿಯಲಿ (ಕುವ್ಯಾಸ.೨-೩೦). [ ? + ಮುರಿ$_3$ ]

**ಚಿರ** (ಗು). ೧. ದೀರ್ಘಕಾಲ ಬಾಳುವ ; ಬಹುಕಾಲದ. ‘ಚಿರಕಾಲ’ ಪರಾ. (ನಾ). ೨. ಬಹುಕಾಲವಿರತಕ್ಕುದು; ಶಾಶ್ವತವಾದುದು : ಚಿರ ಮಲ್ತೆನ್ನಯ ತೇಜಮುಂ(ಅನಂಪು. ೩-೬೯); ಅರಸೊತ್ತಿಗೆಯ ನಂಬಿ ಬಿರುಸು ಮಾತುಗಳೇಕೆ ಚಿರವೆ ಹೊಬಿಸಿಲು ತಿಳಿಯರಸ ಪರಿಕಿಸಲು (ಕನ್ನಜಾ. ೨೪೩). [ ಸಂ. ]

**ಚಿರಋಣಿ** (ನಾ). ಉಪಕಾರವನ್ನು ಸದಾ ಸ್ಮರಿಸಿಕೊಳ್ಳುತ್ತಿರುವವನು ; ಕೃತಜ್ಞ : ನಾನು ಅವರಿಗೆ ಚಿರಋಣಿ (ಜೀವಾತ್ಮ. XI, ಸಂಕಲ್ಪ) ; ನಾನು ತಮ್ಮ ಉಪಕಾರಕ್ಕೆ ಚಿರಋಣಿಯಾಗಿರುತ್ತೇನೆ (ರಾಯಕ. ೩೫) ; ಅವುಗಳ ಅಪಾರವಾದ ಮಹತ್ವವನ್ನು ತೋರಿಸಿಕೊಟ್ಟದ್ದಕ್ಕೆ ಭಾರತೀಯರು ಚಿರ ಋಣಿ (ಕನ್ನಜಾ. ೩೭). [ ಸಂ. ಚಿರಋಣಿನ್ ]

**ಚಿರಂ** (ಅ). ಶಾಶ್ವತವಾಗಿ ; ಯಾವಾಗಲೂ : ಕಿಸಱಿಕ್ಕುಗೆ ಭೃಗು ಸುತನುದಯಮಾಗೆ ನಿಲ್ಕುಂ ಚಿರಮುಂ (ಲೋಕೋಪ. ೩-೨೭). [<ಚಿರ]

**ಚಿರಂಜೀವ** (ನಾ). ೧. ಬಹುಕಾಲ ಬಾಳುವವನು,-ಬದುಕುವವನು. ೨. ಹಿರಿಯರು ಚಿಕ್ಕವರನ್ನು ಕರೆಯುವಾಗ ಬಳಸುವ ಶಬ್ದ : ಚಿರಂಜೀವ, ರಾಜಶ್ರೀ . . . ಮೊದಲಾದ ಶಬ್ದಗಳನ್ನೂ . . . ಪತ್ರ ಸ್ವೀಕರಿಸತಕ್ಕವರ ಹೆಸರಿನ ಹಿಂದೆ ಜೋಡಿಸಿ ಬರೆಯುವ ಸಂಪ್ರದಾಯ ವುಂಟು (ಮುಂಬಯಿ. ೪-೮೪). ೩. ಮಗ ; ಪುತ್ರ: ಇಂವ ನಿನ್ನ ಚಿರಂಜೀವ ಏನು ? (ಆಪನಾ. ೧೧). [ ಸಂ. ]

**ಚಿರಂಜೀವಿ** (ನಾ). ೧. ಬಹಳ ಕಾಲ ಬದುಕಿರುವವನು. ೨.=ಚಿರಂಜೀವ ೩: ತಮ್ಮ ಚಿರಂಜೀವಿ ಎಂತಹ ಸುಸಂಸ್ಕೃತ ಯುವಕ(ಮಹಾಗ. ೧೮೩). ೩. ಬಹಳ ಕಾಲ ಬದುಕಿರುವವರೆಂದು ಪುರಾಣಪ್ರಸಿದ್ಧರಾದ ಏಳು ಜನರು; ಅಶ್ವತ್ಥಾಮ, ಬಲಿ, ವ್ಯಾಸ, ಪರಶುರಾಮ, ವಿಭೀಷಣ, ಕೃಪಾಚಾರ್ಯ ಮತ್ತು ಆಂಜನೇಯ. P ಕೆಲವರು ‘ಮಾರ್ಕಂಡೇಯ’ ನನ್ನೂ ಇವರ ಜೊತೆ ಸೇರಿಸುತ್ತಾರೆ. ೪. ಕಾಗೆ: ದೊರೆಯೇ ಮಲ್ಲಿಗೆಗೆಕ್ಕೆ ಹಂಸೆಗೆ ಬಕಂ . . . ಪಿಕನಿಕಾಯ[ಕ್ಕೆ] ಚಿರಂಜೀವಿಗಳ್ (ಕಇ. IV, ೧-೮೯; 1204). [ ಸಂ. ಚಿರಂಜೀವಿನ್ ]

**ಚಿರಂಟಿ**(ನಾ). ೧. ತಂದೆಯ ಮನೆಯಲ್ಲಿಯೇ ಇರುವ ಪ್ರಾಪ್ತವಯಸ್ಕಳಾದ ಹೆಂಗಸು. ೨. ಯುವತಿ: ಪಾಡೆ ಚಿರಂಟಿಯರ್ (ಉದ್ಭಟ. ೮-೭೦). [ ಸಂ. ಚಿರಂಟೀ ]

**ಚಿರಂಟಿಕೆ** (ನಾ).=ಚಿರಂಟಿ ೧ : “ಚಿರಂಟಿಕೆ ಸುವಾಸಿನಿಯಪ್ಪವಳುಂ ವಯಸ್ಥೆಯುಂ” (ವಸ್ತುಕೋ. ೧೨೮-೬೫). [ ಸಂ. ಚಿರಂಟಿಕಾ ]

**ಚಿರಂತನ** (ಗು). ೧. ಪೂರ್ವದ ; ಹಿಂದಿನ ಕಾಲದ ; ಪ್ರಾಚೀನವಾದ : ಚಿರಂತನಭವದ ಕಿಲ್ಬಿಷ ಕರ್ಮಪಾಕಪ್ರವರ ದುರಿಯೋಧನನ ಸವ್ಯಪದೇಶ ಮಾತ್ರದಲಿ ಎವಗೆ ರಚಿಸಿತು ರಾಜ್ಯವಿಭ್ರಂಶವನು (ಕುವ್ಯಾಗ. ೧೧-೪೪). ೨. ಸ್ಥಿರವಾದ ; ಶಾಶ್ವತವಾದ : ಆತ್ಮಜ್ಞಾನ, ಜಗದ ಅನುಭವ, ಅನುಭಾವಗಳೇ ಅಕ್ಕನ ಸಾಹಿತ್ಯಕ್ಕೆ ಚಿರಂತನ ವಸ್ತು ! (ಕರ್ನಾಕ. ೭೬). (ನಾ). ೩. ನಿರಂತರ ; ಸತತ : ಚಿರಂತನವೂ ನೂತನವೇರುತ್ತಿರುವ ಜೀವನದ ಸ್ವರೂಪ ಎಂಥದು ? (ಶಿಕ್ಷದ. ೧). ೪. ವಯಸ್ಸಾದವನು ; ಹಿರಿಯಂ : ಅವಱೊಳಗೆ ಚಿರಂತನನುಂ ಬುದ್ಧಿವಂತನುಮಪ್ಪುದೊಂದು ಕಪೋತಂ ಪಕ್ಷಿಗಣಕ್ಕಿಂತೆಂದುದು (ಪಂಚತಂ. ೨೮೮-೧೯). [ ಸಂ. ]

**ಚಿರಂತಹಿಂಸೆ** (ನಾ). ಒಂದು ಬಗೆಯ ನರಕ : ಯಮಾನುಗನಿಯಮನ . . . ಚಿರಂತಹಿಂಸೆಗಳೆಂಬೈದು ಮಂತ್ರಿನರಕಂಗಳಿಂ ಭಯಂಕರಮಾಗಿ ಯಮಮಾಯೆಯೆಂಬರಸುನರಕವಿಹುದು (ವಿವೇಕ. ೧೮೧). [ ? + ಹಿಂಸೆ ]

**ಚಿರಂತನಾಚಾರ್ಯ** (ನಾ). ಹಿಂದಿನ ಕಾಲದ ಆಚಾರ್ಯ,-ವಿದ್ವಾಂಸ: ಮಿಗೆ ಕನ್ನಡಗಬ್ಬಂಗಳೊಳಗಣಿತಗುಣಗದ್ಯಪದ್ಯಸಮ್ಮಿಶ್ರಿತಮಂ ನಿಗದಿಸು ವರ್ಗದ್ಯಕಥಾಪ್ರಗೀತಿಯಿಂ ತಚ್ಚಿರಂತನಾಚಾರ್ಯರ್ಕಳ್ (ಕವಿರಾ. ೧-೨೭). [ ಚಿರಂತನ + ಆಚಾರ್ಯ ]

**ಚಿರಕಾಲ** (ನಾ). ಬಹಳ ಕಾಲ; ದೀರ್ಘಕಾಲ: ಚಿರಕಾಲಂ ಬಂಧನದೊಳ್ ಮರುಳಾಗಿರ್ದನ ಮರುಳ್ತನಂ ತಿಳಿದವೊಲೋಸರಿಸಿರೆ ಮಿಥ್ಯಾತ್ವಂ (ವರ್ಧಪು. ೧೨-೩) ; ಅಂತು ದೀಕ್ಷೆಯಂ ಕೆಯ್ಕೊಂಡು . . . ಚಿರಕಾಲವಿರ್ದು (ಪುಷ್ಪಪು. ೯-೯ ವ). [ ಚಿರ + ಕಾಲ ]

**ಚಿರಕಾಲಿಕ** (ನಾ). ಬಹಳ ಕಾಲ ಇರುವುದು: ಜನಸಮುದಾಯವು ಒಂದು ರಾಜಕೀಯೋದ್ದೇಶದಿಂದ ಚಿರಕಾಲಿಕವಾಗಿ ಸ್ಥಾಪಿಸಲ್ಪಟ್ಟಿರಬೇಕು (ರಾಜ್ಯಾಂಗ. ೨೭) ; ಆ ಸತ್ಯ ಚಿರಕಾಲಿಕವಾಗಲಿ ಎಂದು ಶ್ರಮಿಸುವ ಮಾತು ಬೇರೆ (ವಾತ್ಸಲ್ಯ. ೨೭೯). [ ಸಂ. ]

**ಚಿರಚ** ‘ಚಿರತೆ$_1$’ ನೋ.

**ಚಿರಚು** ‘ಚಿರತೆ$_1$’ ನೋ.

**ಚಿರಜೀವಿ**(ನಾ). ೧. ಬಹಳ ಕಾಲ ಬದುಕುವವನು ; ದೀರ್ಘಾಯುಸ್ಸುಳ್ಳವನು : ಪುತ್ರಾನ್ವಿತಂ ಲಂಬಮುಷ್ಕನವಂ (ತಾಂ) ಚಿರಜೀವಿ ತತ್ಸಮತೆಯಿಂದಂ ಧೈರ್ಯಮಂ ತಾಳ್ದುಗುಂ (ಲೋಕೋಪ. ೧೧-೫) ; ಕಡಲ ಕಡೆ, ಸುಧೆಯ ಕುಡಿ; ಹರಿಹರರ ಮೀರಿ ಚಿರಜೀವಿಯಾಗು! (ಪಾಂಚಜ. ೪೪-೩) ೨. ಕಾಗೆ : “ಅರಿಷ್ಟಃ . . . ಚಿರಜೀವೀ, ವಾಯಸಃ-ಈ ೧೦ ಕಾಗೆ” (ಹಲಾಯು. ೪೧-೯೨). [ ಸಂ. ಚಿರಜೀವಿನ್ ]

**ಚಿರಜೀವಿತೆ** (ನಾ). ಬಹಳಕಾಲ ಬದುಕುವಿಕೆ ; ಶಾಶ್ವತವಾಗಿರುವಿಕೆ : ಇನ್ನೇವೆಸಗೊಂಡಪುದಣ್ಣ ನರರ ಚಿರಜೀವಿತೆಯಂ (ಚಂದ್ರಪು. ೨-೬೨). [ಸಂ. ಚಿರಜೀವಿತಾ ]

**ಚಿರಡಿ$_1$** (ನಾ). ಕಿರಿಗೆ ; ಚಿಕ್ಕಸೀರೆ : ಚಿರಡಿ ಚಿಂದಿ ಕದ್ದನಂತೆ (ನಡೆದಾ. II, ೮೫೭). [ ←ಮರಾ. ಚಿರಡೀ ]

**ಚಿರಡಿ$_2$** (ನಾ). ಕೋಪ ; ಸಿಟ್ಟು : ಅವರ್ನ ಚಿರಡಿಗೆ ತರಸ್ತಾನ (ದೀಪಹ. II, ೨೦೭).

ಚಿರಡಿಗೇಳು=ಸಿಟ್ಟಿಗೇಳು; ರೇಗು: ಚಿರಡಿಗೆದ್ದು ರಾಗಿನ್ನ ಒಂದೇಟು ಹೊಡೆದ (ವ್ಯನಿ. ೩೫೩) ; ಅವರಿಗೆ ಉಂಟಾದ ಕುಂಠಿತತನವನ್ನು ಕಂಡು ಅವರು ಬಹಳ ಚಿರಡಿಗೇಳುವರು (ಸ್ಮೃತಿಚಿ. ೪೨೯). [ ←ಮರಾ. ಚಿರಡೀ ]

**ಚಿರಣೆ** ‘ಚೀರಣ’ ನೋ.

**ಚಿರಣೆಗೆಲಸ** ‘ಚೀರಣಗೆಲಸ’ ನೋ.

**ಚಿರತೆ$_1$, ಚಿರಚ, ಚಿರಚು, ಚಿರ್ಚ, ಚಿರ್ಚು** (ನಾ). ಮೈಮೇಲೆ ಚುಕ್ಕೆಗಳಿರುವ ಹುಲಿಜಾತಿಗೆ ಸೇರಿದ ಒಂದು ಬಗೆಯ ಕ್ರೂರಪ್ರಾಣಿ ; ಚಿಟ್ಟೆಹುಲಿ: ಹುಲಿಜಾತಿ : ಹುಲಿ, ಹೆಬ್ಬುಲಿ . . . ಚಿರತೆ (ನಮ್ಮನು. ೨೩೯). ಚಿರಚ: ಹುಲಿ ಜಾತಿ : ಹುಲಿ, ಹೆಬ್ಬುಲಿ . . . ಚಿರತೆ, ಶಿವಂಗಿ, ಚಿರಚ (ನಮ್ಮನು. ೨೩೯). ಚಿರಚು : ಚಿರಚು ಕಾಮುಕಪ್ರಾಣಿಯೆಂದೂ . . . ಹೇಳಿರುವನು (ಪರಪ. ೨೯). ಚಿರ್ಚ : (ಕ). ಚಿರ್ಚು : ಅಡವಿಗಳಲ್ಲಿ ಚಿರ್ಚು . . . ಅಡವಿಯ ಬೆಕ್ಕು ಮುಂತಾದವುಗಳಿರುತ್ತವೆ (ಬೆಳವ. ೩೪) [ ದೇ.II ತಮಿ. ಚಿಱುತ್ತೈ; ಕೊಡ. ಚಿರತೆ; ತೆಲು. ಚಿಱುತ ]

**ಚಿರತ್ನೆ** (ನಾ). ಶಾಶ್ವತ ಪದವಿ ; ಮೋಕ್ಷ : ನಲವಿಂದ ಚಿರತೆಯ ಬಯಸಿ ಜಿನೇಂದ್ರನ ಚರಣಸೇವೆಯನಂ ಮಾಳ್ಪೆನೆಂದು (ಚಂಪ್ರಸಾಂ. ೨೪-೧೨೬). [ ಸಂ. ಚಿರತಾ ]

**ಚಿರನವತೆ** (ನಾ). ಸದಾ ಹೊಸದಾಗಿರುವಿಕೆ: ಒಂದು ಕೊಂಬೆಯು ಬಾಡಲಿ ನ್ನೊಂದು ಚಿಗುರುವುದು ಸಂದಿಹುದು ಚಿರನವತೆಯುಶ್ವತ್ಥಮರಕೆ (ಮಂಕುಕ. ೨೩೨). [ ಚಿರ + ನವತೆ ]

**ಚಿರನಿದ್ರೆ** (ನಾ). (ಆಲಂ) ಸಾವು: ಆ ರೋಗಿಯನ್ನು ಚಿರನಿದ್ರೆ ಆವರಿಸಿತು (ರೂಢಿ). [ ಚಿರ + ನಿದ್ರೆ ]

**ಚಿರನಿಧಿ** (ನಾ). ಶಾಶ್ವತವಾದ ಆಶ್ರಯ ; ಶಾಶ್ವತವಾದ ನೆಲೆ: ವಿವಿಧ ಪಯೋಜದಿ ವ್ಯರ್ಥಯಾಸದಿ ತೊಳಲಿದೆ ತೃಪ್ತಿಯ ಚಿರನಿಧಿಗೆ (ಅಗ್ನಿಹಂ. ೧೧-೬). [ ಚಿರ + ನಿಧಿ ]

**ಚಿರನಿಮಿಷ** (ನಾ). ಬಹಳ ಹೊತ್ತು ಕಣ್ಣು ಮುಚ್ಚಿಕೊಂಡಿರುವುದು : ಇರ್ದುದನಿಮಿಷಜಾತಂ ಚಿರನಿಮಿಷಮಾಗೆ ಕಣ್ಬಳ್ಳುವಿನಂ (ಜಗವಿ. ೦-೪೭). [ ಚಿರ + ನಿಮಿಷ ]

**ಚಿರನೂತನ** (ನಾ). ಸದಾಕಾಲ ಹೊಸದಾಗಿರುವುದು : ಅವನ ಕಾವ್ಯ ಕನ್ನಡಕ್ಕೆ ಚಿರನೂತನ ಚಿರಂತನ (ಸಾಹಿಸ. ೧೦೯). [ ಚಿರ + ನೂತನ ]

**ಚಿರಪರಿಚಿತ** (ನಾ). ಬಹುಕಾಲದಿಂದಲೂ ತಿಳಿದಿರುವುದು : ಇದು ದಿನದುಥ, ಚಿರಪರಿಚಿತವಾದ ಹಗಲಲ್ಲ (ಚಿತಂಬಾ. ೧) ; ಮತ್ಸ್ಯ, ಕೂರ್ಮ . . . ಕಲ್ಕಿ ಎಂಬ ದಶಾವತಾರಗಳು ಚಿರಪರಿಚಿತವಾಗಿವೆ(ಭಾರದ. ೧೪೨). [ ಚಿರ + ಪರಿಚಿತ ]

**ಚಿರಪು** 'ಸೆಜಿಪು' ನೋ.

**ಚಿರಪ್ರಣಯ** (ನಾ). ಬಹುಕಾಲದ ಪ್ರೀತಿ : ಕಡೆಯಲ್ಲಿ ಒಂದು ಬಾರಿ ಮುದ್ದಿಸಿ ಚಿರಪ್ರಣಯವಿದ್ದುದರಿಂದ ಮತ್ತೆ ಮರುಗಿದವನಾಗಿ . . . ಆಳತೊಡಗಿದನು (ಕವಿಕ. ೩೨). [ ಚಿರ + ಪ್ರಣಯ ]

**ಚಿರಬಿಲ್ವ** (ನಾ). ಹುಲಿಗಿಲ ಮರ ; ಹೊಂಗೆಮರ ; ಕರಂಜವೃಕ್ಷ : ಅರನೇಱಲ್ ತಾಱ . . . ದಿಂದಂ ಚಿರಬಿ[ಪಾಠಾಂ. ಚಿ]ಲ್ವಂ ಬ್ರಹ್ಮವೃಕ್ಷಂ ಕಱಕೆ ತಱಯಿದಿಂದೊಪ್ಪುತಿರ್ದತ್ತರಣ್ಯಂ (ಗಿರಿಕ. ೧-೬೨). [ ಸಂ. ]

**ಚಿರಮಂಗಲವತಿ** (ನಾ). ಯಾವಾಗಲೂ ಮುತ್ತೈದೆತನವನ್ನುಳ್ಳವಳು : ಚೆನ್ನಮಲ್ಲಿಕಾರ್ಜುನನನ್ನು ಅಮರಪತಿಯನ್ನಾಗಿ ವರಿಸಿದಳು ; ಚಿರಮಂಗಲವತಿಯಾದಳು (ಬಾಳಬಿ. ೩೦). [ ಸಂ. ಚಿರಮಂಗಲವತೀ ]

**ಚಿರಮುತ್ತೈದೆ** (ನಾ). = ಚಿರಮಂಗಲವತಿ : ಆಯುಷ್ಯವಂತೆಯಾಗಿ ಐಶ್ವರ್ಯವಂತೆಯಾಗಿ ಚಿರಮುತ್ತೈದೆಯಾಗಿರು (ಚಂಗಾಳ್ಮ. ೧೨). [ ಚಿರ + ಮುತ್ತೈದೆ (<ಮುತ್ತಯ್ದೆ) ]

**ಚಿರರಾತ್ರ** (ನಾ). ಅಸಂಖ್ಯಾತ ರಾತ್ರಿಗಳು ; ಬಹಳ ಕಾಲ ; ದೀರ್ಘಕಾಲ : "ಹಲವಿರುಳಾದೆಡೆ ಗಣರಾತ್ರಮೆಂಬುದು ಅಲ್ಲಿಂದಂ ಮೇಲೆ ಚಿರರಾತ್ರಮೆಂಬುದು" (ಹಲಾಯು. ೧೪-೧೧೪). [ಸಂ.(ಚಿರ + ರಾತ್ರಿ + – )]

**ಚಿರರಾತ್ರೆ** (ನಾ). = ಚಿರರಾತ್ರ : "ಚಿರರಾತ್ರೆಯೆಂಬುದುಮಸಂಖ್ಯಾತ ದಿರುಳು" (ಮಂಗರಾ. ೨೦-೭). [ ಸಂ. ಚಿರರಾತ್ರ ]

**ಚಿರವಿಚ್ಛೇದ** (ನಾ). ಶಾಶ್ವತವಾದ ಬೇರ್ಪಡೆ,-ಅಗಲಿಕೆ : ಕಪಾಲ ಕುಂಡಲೆಗೂ ಅವಳ ಸ್ವಾಮಿಗೂ ಚಿರವಿಚ್ಛೇದ ಉಂಟುಮಾಡುವುದೊಂದೇ ಉದ್ದೇಶ (ಕಪಾಕುಂ. ೯೨). [ ಚಿರ + ವಿಚ್ಛೇದ ]

**ಚಿರವಿಲ್ವ** (ನಾ). ಚಿರಬಿಲ್ವ: "ಕರಂಜಕಾ" (ಪಂಡಿತ). [ ಸಂ. ]

**ಚಿರಶಾಂತಿ** (ನಾ). ಶಾಶ್ವತವಾದ ನೆಮ್ಮದಿ : ವಿಶ್ವವು ಜೀನರಿಗಮೃತವು ಅಮೃತವು ಚಿರಶಾಂತಿ ಸಂನ್ಯಾಸಿಗಳಿಗೆ (ಇಂಚಾಪ. ೭೩-೫೩); ಮತ್ತೆ ಹಿಂದಿರುಗಲಾರದ ಆ ದೇವದೇವನ ರಾಜ್ಯದಲ್ಲಿ ಚಿರಶಾಂತಿಯನ್ನರಸುತ್ತಾ ತೆರಳಿದ್ದಳು (ಕುಸುಸಂ. ೩೦೨). [ ಚಿರ + ಶಾಂತಿ ]

**ಚಿರಸೂತೆ** (ನಾ). ಬಹುಕಾಲವಾದ ಮೇಲೆ ಕರು ಹಾಕಿದ ಹಸು: "ಚಿರಸೂತಾ, ಬಷ್ಕಯಣೀ – ೨ – ಬಹುಕಾಲಕ್ಕೆ ಈಯುಲಾದ ಆಕಳಿಗೂ ಈಯದಲಾದರೂ ಬಹುಕಾಲ ಹೆರಿಗೆಯಿಲ್ಲದೇ ನಿಂತ ಆಕಳಿಗೂ, ಬಹುಕಾಲಕ್ಕೆ ೧ ಸಾರಿ ಈಯುವ ಆಕಳಿಗೂ, ಹೆಸರುಗಳು, ಕಡೆಗಂದಿನ ಆಕಳು" (ಸಿದ್ಧಾಂತಿ. ೨೫೩). [ ಸಂ. ಚಿರಸೂತಾ ]

**ಚಿರಸ್ಥಾಯಿ** (ನಾ). ಬಹಳ ಕಾಲ ತಾಳುವ ಸ್ವಭಾವವುಳ್ಳದು ; ದೀರ್ಘಕಾಲ ಉಳಿಯುವಂತಹುದು : ಬಾಳೆ, ಶುಂಠಿ ಮುಂತಾದ ಸಸ್ಯಗಳು ಬಹುಕಾಲ ಬದುಕುವವು, ಇವುಗಳು ಚಿರಸ್ಥಾಯಿ (Perennials) ಪೈರುಗಳು (ಸಸ್ಯಶಾ. ೨೪); ದೇಶಚರಿತ್ರೆಯಲ್ಲಿ ಮಾತೆಯ ಸ್ವಾತಂತ್ರ್ಯಕ್ಕಾಗಿ ಹೋರಾಡಿದನೆಂದು ನಿನ್ನ ಹೆಸರು ಚಿರಸ್ಥಾಯಿಯಾಗಿ ನಿಲ್ಲಲಿ(ಹಿಂಕಿರು. ೨೪). [ ಸಂ. ಚಿರಸ್ಥಾಯಿನ್ ]

**ಚಿರಸ್ಥಾಯಿಸು** (ಕ್ರಿ). ಸದಾಕಾಲದಲ್ಲೂ ನೆಲಸುವಂತೆ ಮಾಡು : ನಿನ್ನ ಹೆಸರಂ ಜಗದಿ ನಿನ್ನಿಂ ಚಿರಸ್ಥಾಯಿಸುವೆನೆಂಬ ಪಂಥಕೇಂ ಮಣ್ಣೂಡಿಸಲೆ? (ಹೆಪ್ಪಿರ. ೨೬-೫೪). [ ಚಿರಸ್ಥಾಯಿ + – ಇಸು₃ ]

**ಚಿರಸ್ಮರಣೀಯ** (ನಾ). ಸದಾಕಾಲ ನೆನಸಿಕೊಳ್ಳುವಂತಹುದು : ಗುಪ್ತರ ಸೇವೆ ಚಿರಸ್ಮರಣೀಯ (ಶುಕ್ನಾರ. ೧೦೬ ಟೀಕೆ). [ ಚಿರ + ಸ್ಮರಣೀಯ ]

**ಚಿರಾತೀತ** (ಗು). ಬಹಳ ಹಿಂದೆ ಕಳೆದುಹೋದ. [ ಚಿರ + ಅತೀತ ]

**ಚಿರಾಯತ** 'ಕಿರಿಯಾತು' ನೋ.

**ಚಿರಾಯಿ** (ನಾ). ಹೊದಿಸುವ ಬಟ್ಟೆ (?) : ಚಂದ್ರನೋಪಾದಿಯಲ್ಲಿ ಬಿಳುಪಾಗಿ ಮನೋವೇಗವುಳ್ಳ ಮಹಾಶ್ವಪಙಗಳಂ ಕಟ್ಟಿ ಚಿನ್ನದ ಚಿರಾಯಿಗಳಿಂದ ಮುಚ್ಚಲ್ಪಟ್ಟಂಥಾಪ್ಪಾಗಿ (ಶಿವದ. ೩೯-೪). [ <ಚೀರ₂ ]

**ಚಿರಾಯಿತ** 'ಕಿರಿಯಾತು' ನೋ.

**ಚಿರಾಯು** (ನಾ). ೧. ದೀರ್ಘಾಯುಸ್ಸು: ನಿರ್ಮಳತೆ ಚಿರಾಯು ವೈರಿಪುರ ಶೂನ್ಯತೆ . . . ವಿಮುಕ್ತಿಯೆಂಬಿವಂ ಪಡೆವಂ (ರಾಜಶೇ. ೩-೧೧೧). ೨. ದೀರ್ಘಾಯುಸ್ಸುಳ್ಳವನು : ಸೂಸದೆ ಸೈತುಮೆಯ್ದೆ ಪಕ್ಷವುಮಪರಪ್ರದೇಶಮುಮುಗಲ್ದಿರೆ ವಾಜಿ ಚಿರಾಯು ನಿಶ್ಚಯಂ(ಅಶ್ವಶಾಸ್ತ್ರ. ೧೧-೭೫). ೩. ಕಾಗೆ: "ಕಾಕಂ ಚಿರಾಯು . . . ಕರಟಮೆನೆ ಕಾಗೆ" (ಮಂಗರಾ. ೩೦-೩). [ ಸಂ. ಚಿರಾಯುಸ್ ]

**ಚಿರಾಯುಷ್ಮತಿ** (ನಾ). ಬಹುಕಾಲ ಬದುಕುವ ಹೆಂಗಸು : ನೀನು ಚಿರಾಯುಷ್ಮತಿಯಾಗಿರು, ನನಗೆ ಪ್ರಾಣದಾನವನ್ನು ಮಾಡಿದೆ (ಕಪಾಕುಂ. ೧೨೧). [ಸಂ. ಚಿರಾಯುಷ್ಮತೀ ]

**ಚಿರಾಯುಷ್ಯ** (ನಾ). ಬಹಳಕಾಲ ಬದುಕುವಿಕೆ ; ದೀರ್ಘಾಯುಷ್ಯ : ಶುಭಮಸ್ತು ಶೋಭನಮಸ್ತು . . . ಚಿರಾಯುಷ್ಯಮಸ್ತು(ಮುದತಿ. ೧-೨ ಅಡಿಟಿ). [ ಚಿರ + ಆಯುಷ್ಯ ]

**ಚಿರಾಸಾಣಿ** (ನಾ). ಒಂದು ಬಗೆಯ ಓಮ ; ಖುರಾಸಾನಿ: ಲವಂಗ, ಚಿರಾಸಾಣಿ, ಓಮ, ವಾದಕ್ಕಿ, ಚವ್ಯ, ಚಿತ್ರಮೂಲ . . . ಚೂರ್ಣವ ಮಾಡಿ ತೆಗೆದುಕೊಳ್ಳುವುದು (ವಿಮ್ನವಿ. ೩೯). [ <ಖುರಾಸಾನಿ ]

**ಚಿರಿ** (ನಾ). ಒಂದು ಅನುಕರಣ ಶಬ್ದ. 'ಚಿರಿಗುಟ್ಟು'. ಪರಾ.

**ಚಿರಿಗಾವುಂಡ** (ನಾ). ಒಬ್ಬಾತನ ಹೆಸರು : ಬಿಂನವತ್ತಳೆಯ ಪ[ದ್ಮ] [ರ]ಸನುಂ ಅಲ್ಲಿಯ ಹಿರಿಯಕೇರಿಯ ಚಿರಿಗಾವುಂಡನುಂ ತಂಬರಸಾಂಯಿಗಾವುಂಡನುಂ (ಸೌಇಇ. XI-i, ೩೦-೩೬ ; 1005). [ ಚಿರಿ₁ + ಗಾವುಂಡ (<ಗಾವುಂಡ) ]

**ಚಿರಿಗುಟ್ಟು** (ಕ್ರಿ). ಚಿರ್ರೆಂದು ಶಬ್ದಮಾಡು : ಕರುಳುಗಳನು ಹಿರಿಹಿರಿದು ಅಸ್ಥಿಗಳನು ಭರದಿ ಬಿಸುಟು ರಕ್ತವನು ಚಿರಿಗುಟ್ಟಿ ಹೀರುವ ಪುಂಡರೀಕನ ಕಂಡು (ಜ್ಞಾನಚಿ. ೨೩-೯).

ಚಿರಿಚಿರಿಗುಟ್ಟಿಸು=ಚಿರಿಚಿರಿ ಎಂದು ಕಿರುಚುವ ಹಾಗೆ ಮಾಡು,- ಕೂಗಿ ಕೊಳ್ಳುವಂತೆ ಮಾಡು : ಮರದ ಮಾಂಗಾಯ್ಮಂಗನನು ಬಲು ಚಿರಿಚಿರಿಗುಟ್ಟಿಸದಿರೆ ನಾನು (ಪಲಾಂಡು. ೭). [ ಚಿರಿ + ಕುಟ್ಟು$_1$ ]

**ಚಿರಿಚು** (ಕ್ರಿ). ನಗು : ಉಕ್ಕಿಬರುವ ನಗುವನ್ನು ಅದುಮಿ ನಗು ; ಚಿರಿಚು (Titter. ಇಂಕನಿ). [ ದೇ.॥ ತಮಿ. ಮಲ. ಚಿರಿ ]

**ಚಿರಿಟು** 'ಸುರುಂಟು' ನೋ.

**ಚಿರಿವೇರು** 'ಚಿಱುವೇರು' ನೋ.

**ಚಿರು** 'ಚಿಱು' ನೋ.

**ಚಿರುಕುಟ** (ನಾ). ಚಿಂದಿ : ಹರುಕು ಬಟ್ಟೆ: ಚಿರುಕುಟ [ಪಾಠಾಂ. ಚಿರಕುಟ] ಮನುಟ್ಟು ಕಯ್ಯೊಳ್ ತಿರಿದುಣುತಂ ದೆಸೆಗೆ ನಗುತುಮಾಡುತ್ತಿಪ್ಪಾ ಮರುಳ್ (ಸಮಪ. ೧೩-೩೩).

[ ? ./ಮರಾ. ಚಿರಕುಟ, ಚಿರಕೂಟ, ಚಿರಗುಟ, ಚಿರಗೂಟ, ಚೀರಕುಟ ]

**ಚಿರುಗುಳ್ಳ** 'ಚಿಱುಗುಳ್ಳ' ನೋ.

**ಚಿರುಟು** 'ಸುರುಂಟು' ನೋ.

**ಚಿರುಪಿ** (ನಾ). ಒಂದು ಊರಿನ ಹೆಸರು : ಚಿರುಪಿಯುಂ ಚಿನ್ನಕುಣ್ಚೆಯುಂ ಚಿಱಿಯವೊಟಲುಂ ವುಳುವಟ್ಟು ನಾಲ್ಕೂರುಮಿಟ್ಟು ನಡೆದ ಕಲ್ಲಿಗೊಡಂಗೆ ಯೊಡ್ಡಿನ ಕಟಿಗೆ (ಸೌಇಇ. IX-i, ೨೬-೧೦ ; 950). [ ? ]

**ಚಿರೊಟು** 'ಚುರುಟು' ನೋ.

**ಚಿರೋಟಿ** (ನಾ). ಮೈದಾಹಿಟ್ಟು, ತುಪ್ಪ, ಸಕ್ಕರೆಗಳನ್ನು ಕೂಡಿಸಿ ಕರಿದು ಮಾಡುವ ಒಂದು ಬಗೆಯ ಸಿಹಿ ಭಕ್ಷ್ಯ : ಮೈಸೂರಿನಿಂದಲೇ ತಯಾರು ಮಾಡಿ ತಂದಿದ್ದ ಚಿರೋಟಿಗಳನ್ನೂ ಹುರಿಗಾಳನ್ನೂ ಶಾರದಮ್ಮನವರು ಎಲ್ಲರಿಗೂ ಹಂಚಿದರು (ಮೂಲಾನ. ೧೩೩).

[ ←ಮರಾ. ಚಿರೋಟೀ, ಚಿರೋಟಾ ]

**ಚಿರ್ಚ** 'ಚಿರತೆ$_1$' ನೋ.

**ಚಿರ್ಚಿರಿಲ್** (ನಾ). ಒಂದು ಅನುಕರಣ ಶಬ್ದ : ಇಳಾಮಂಡಲಂ ಚಿಱ್ಚಿರಿಲ್ಲೆಂದೊಡೆಗುಂ (ಸೌಇಇ. XI-ii, ೧೨೬-೧೪ ; 1050).

**ಚಿರ್ಚು** 'ಚಿರತೆ$_1$' ನೋ.

**ಚಿರ್ಪುಳಿ** (ನಾ). ಒಂದು ಊರಿನ ಹೆಸರು ; P ವಂದನಪಲ್ಲಿ ತಾಲ್ಲೂಕಿಗೆ ಸೇರಿರುವ ಈಗಿನ ಚಿಪ್ಪಿಲಿ ಎಂಬ ಊರು : ಬಾಣರರ್ಸ ಇತ್ತ ಕೆಯುಂ ಕಱ್ಚಿಯುಂ ನಾಲ್ವತ್ತು ಪುಣಿಸೆ ಇದಕ್ಕೆ ಉತ್ತರ ಸಾಕ್ಷಿ ಕಣ್ಣಾಗ × × × ಯಿರು ಚಿರ್ಪ್ಪುಳಿ × × × ಸಾಕ್ಷಿ ಪಡೆದೋರ್ (ಸೌಇಇ. IX-I, ೦-೫ ; ?).

[ ? ]

**ಚಿರ್ಭಟ** (ನಾ). ಒಂದು ಬಗೆಯ ಸೌತೆ ; ಮೆಕ್ಕೆಗಿಡ ಮತ್ತು ಅದರ ಕಾಯಿ : "ಉರ್ವಾರುಃ, ಚಿರ್ಭಟಃ-ಈ ೨ ಮೆಕ್ಕೆ" (ಹಲಾಯು ೩೫-೫೬).

[ ಸಂ. ]

**ಚಿರ್ಯಾತ** 'ಕಿರಿಯಾತು' ನೋ.

**ಚಿಲಕ** 'ಚಿಲುಕ' ನೋ.

**ಚಿಲಕಡಿ** (ನಾ). ಒಂದು ಬಗೆಯ ಮರ : ಚಿಲಕಧೂಪ, ಚಿಲಕಡಿ, . . . ಧೂಪ (ವೈಜಿಗಿ. ೧೩-೩೩೭). [ ? ]

**ಚಿಲಕತ್ತು** 'ಚಿಲಖತ್ತು' ನೋ.

**ಚಿಲಕಧೂಪ** (ನಾ).=ಚಿಲಕಡಿ : ಚಿಲಕಧೂಪ, ಚಿಲಕಡಿ, ಗುಗ್ಗುಳಧೂಪ, ಮಡ್ಡಿಮರ, ಮಾದಿ, ಚಿತ್ರ, ಧೂಪ (ವೈಜಿಗಿ. ೧೩-೩೩೭). [ ? ]

**ಚಿಲಕಿ$_1$** 'ಚಿಲಿಕೆ$_1$' ನೋ.

**ಚಿಲಕಿ$_2$** 'ಚಿಲಿಕ್ಕೆ$_2$' ನೋ.

**ಚಿಲಕು** (ನಾ). (ಉಕ) ಗಂಡಸರಿಗೆ ಉಂಟಾಗುವ ಒಂದು ಬಗೆಯ ಮೂತ್ರರೋಗ : (೬). [ ? ]

**ಚಿಲಕುರುಳಿ, ಚಿನಕುರುಳಿ, ಚಿನುಕುರುಳಿ** (ನಾ). ೧. ಹುರುಳಿ, ಕಡಲೆ ಮುಂತಾದ ಧಾನ್ಯಗಳನ್ನು ಹುರಿದು ಖಾರ ಹಾಕಿ ಮಾಡಿದ ಒಂದು ಖಾದ್ಯ ವಿಶೇಷ: ಹುರಿಗಾಳು: ಚಿಲಕುರುಳಿ ಮಾರೋಳಿ ತಿಲಕಬೊಟ್ಟೀನ ಕರಿಚಲುವೆ (ಹಳ್ಳಿಯ. ೪೫). **ಚಿನಕುರುಳಿ** : ೧. ನನ್ನ ಸ್ನೇಹಿತ ಊರಿಂದ ತಂದಿದ್ದ ಚಿನಕುರುಳಿ ಬಹಳ ಸೊಗಸಾಗಿತ್ತು (ರೂಢಿ). ೨. ಒಂದು ಬಗೆಯ ಪಟಾಕಿ; ಮದ್ದಿನ ಚಟಾಕಿ: ಪಟಾಕಿ, ಚಿನಕುರುಳಿ, ಹೂಬಾಣ, ಹೂವಿನ ಕುಂಡ (ಡಂಡಮ. ೬೨-೧). ೩. (ಅಲಂ) ಹಾಸ್ಯ; ಜೋಕು: ಈ ವರ್ಷದ ದೀಪಾವಳಿ ಸಂಚಿಕೆಯಲ್ಲಿ ಚಿನಕುರುಳಿ ಸೊಗಸಾಗಿತ್ತು (ರೂಢಿ). **ಚಿನುಕುರುಳಿ** : ೧. ಚಿನುಕುರುಳಿ ಬಹಳ ಚೆನ್ನಾಗಿದೆ (ರೂಢಿ).

[ ಚಿಲಕು ? + ಹುರುಳಿ ]

**ಚಿಲಕೂಲಿ** 'ಚಿಲುಕೂಲಿ' ನೋ.

**ಚಿಲಕೆ** 'ಚಿಲಿಕೆ$_1$' ನೋ.

**ಚಿಲಖತ್ತು, ಚಿಲಕತ್ತು** (ನಾ). ಯುದ್ಧದಲ್ಲಿ ಶರೀರ ರಕ್ಷಣೆಗಾಗಿ ಹಾಕಿಕೊಳ್ಳುವ ಕವಚ ; ಉಕ್ಕಿನ ಕವಚ ; ತನುತ್ರಾಣ ; ಸಮಂಗ : ಅವನು ಪೋಷಾಕಿನಲ್ಲಿ ಯಾವಾಗಲೂ ಚಿಲಖತ್ತನ್ನುಪಯೋಗಿಸುತ್ತಿದ್ದನು (ಇಂಗ್ಲಇ. ೧೧೦); ಬೇರೆ ಬೇರೆ ಬಗೆಯ ಹಳೆಯ ಆಯುಧಗಳನ್ನೂ ಚಿಲಖತ್ತುಗಳನ್ನೂ ಸಂಗ್ರಹಿಸಿ ಅಲ್ಲಿಡಲಾಗಿದ್ದಿತು (ರತ್ನಗೋ. ೩). **ಚಿಲಕತ್ತು** : ಚಿಲಕತ್ತು ಒರೆಗತ್ತಿ ಎತ್ತಿ ದಂಡಿನ ಮುಂದಿ (ಲೋಕಗೀ. ೨೦೨); ಉನ್ನೀಸಳು ಗಂಡನ ಚಿಲಕತ್ತು ಕಳೆದು ಉಪಚರಿಸುವಳು (ನೂರಜ. ೧೭).

[ ←ಮರಾ. ಚಿಲಖತ್, ಚಿಲಕತ್; ಪಾರ. ಚಿಹಿಲ್ಕದ್ ]

**ಚಿಲಣ** 'ಚೀರಣ' ನೋ.

**ಚಿಲಣಗೆಲಸ** 'ಚೀರಣಗೆಲಸ' ನೋ.

**ಚಿಲವಾನ್** 'ಚಿಲುವಾನ' ನೋ.

**ಚಿಲಿ** (ಕ್ರಿ). ಹಲ್ಲುಬಿಡು : ಕಿಸಿ : ಕರ್ಮೊಗದೆಡೆಯ ಪಲ್ಗಳಂ ಬೆಳ್ಪನೆಯು ಚಿಲಿವ ಘೋರಕಿ ಬೆದರಿ (ಶ್ರೀರಾಮಾ. ೧೧೪-೧೨೭). 'ಕಿರ್ಚು$_2$' ಪರಾ. [?]

**ಚಿಲಿಕಿ** 'ಚಿಲಿಕ್ಕೆ$_2$' ನೋ.

**ಚಿಲಿಕೀರೆ** 'ಚಿಲುಕೀರೆ' ನೋ.

**ಚಿಲಿಕೆ$_1$, ಚಿಲಕಿ$_1$, ಚಿಲಕೆ, ಚಿಲುಕೆ, ಚೀಲಿಕೆ** (ನಾ). ಒಂದು ಬಗೆಯ ಸೊಪ್ಪು : "ಚಿಲಿಕೆ ಸ್ವಸ್ತಿಕೆಯುಕ್ಕು" (ಮಂಗರಾ. ೪೪-೪೭) ; ಸುಗ್ಗೆಯ ಕಾಯ ತೊಂಡೆಯ ಕಾಯ ಚಿಲಿಕೆಯ . . . ಮೇಲೋಗರವುಣೆಯಗ್ಗದಾ ರೋಗ್ಯವು ಪಥ್ಯ (ಸಾಳ್ವಸಾಂ. ೭). **ಚಿಲಕಿ$_1$** : ಸೊಪ್ಪುಗಳು : ಅಗಸೆ, ಬಳಿಸೂಲಿ . . . ದಂಟು, ಹರಿವೆ, ಚಿಲಕಿ, ದಗ್ಗಳಿ, ಕೆಸವೆ (ನಮ್ಮನು. ೩೩೭). **ಚಿಲಕೆ** : "ಮೃದುಪತ್ರೀ—ಚಕ್ಕವತ್ತ, ಚಿಲಕೆ" (ಒಷಧಿ. ೧೨೮). **ಚಿಲುಕೆ** : ಮತ್ತೆ ಕೆಲವಕ್ಕೆ ಬದನೆಯ ಬಜ್ಜಿ ಕೆಲವಕ್ಕೆ ಕತ್ತರಿಸಿದೆಳೆಕೀರೆ ಚಿಲುಕಿ [ಪಾಠಾಂ. ಚಗತೆ]ನರುವಲು ಚಕ್ಕವತ್ತ ಮೊದಲಾದ ಸೊಪ್ಪಂ ತುಪ್ಪದೊಳಗೆ ಚೆನ್ನಾಗಿ ತಾಳಿಸಿ (ಸೂಪಶಾ. ೪-೨೦). **ಚೀಲಿಕೆ** : "ಚಿಲ್ಲಿಕಾ—ಚೀಲಿಕೆ" (ಒಷಧಿ. ೫೭). [ ದೇ.॥ ತೆಲು. ಚಿಲುಕ, ಚಿಲ್ಕ./ಸಂ. ಚಿಲ್ಲಿಕಾ ]

**ಚಿಲಿಕ್ಕೆ, ಚಿಲಕ್ಕಿ, ಚಿಲಿಕೆ** (ನಾ). ೧. (ಉಕ) ಚಾವಣಿಯನ್ನು ಹಾಕುವಾಗ ಬಿದಿರಿಗೆ ಬದಲಾಗಿ ಹಾಕುವ ಸಣ್ಣ ಗಳು ; ಸಣ್ಣ ಮರದ ಪಟ್ಟಿ : ರಿಪೀಸು : ಬಡವರಿದ್ದವರು ಜಂತೆಗಳ ಮೇಲೆ ಚಿಲಿಕೆಗಳನ್ನು ಹಾಕಿ ಅವುಗಳ ಮೇಲೆ ಯಾವುದಾದರೂ ಒಂದು ಗಿಡದ ಎಲೆಗಳನ್ನು ಹರವಿ ಮೇಲಮುದ್ದಿಯ ಹಾಕುವರು (ಮುಂಬಯಿ. ೪-೧೧೭). ೨. ಚಟ್ಟ ; "ಸಿದಿಗೆ" (ಜಾನಕೋ. ೫೭). **ಚಿಲಕ್ಕಿ** : ೧. ಗಂಡಸಮಗ ಗಜಭೀಮ ಹುಟ್ಟಿದರ ಚಿಲಕಿ ಚಿತ್ರರ ನಗತಾವ (ಗರತಿ. ೬೯). **ಚಿಲಿಕೆ** : ೧. ಬಿರಿ ಎಲುಗಳು ಜಂತಿಗಳು ಬೆರಳೆಲುಗಳೇ ಚಿಲಿಕಿ ಇಂತೀ ಗೃಹಕ್ಕೆ ಮಾಂಸದ ಮೇಲುಮುನ್ನೆಗಳು ರಕ್ತದ ಸಾರಣೆಗಳ (ವಚಶಾ. I, ೩೫೦-೫೮). [ ? ]

**ಚಿಲಿಕೆನೆವಾಲು** (ನಾ). ಚೆನ್ನಾಗಿ ಕಾಯಿಸಿ ಕೆನೆಗೂಡಿದ ಹಾಲು : ಇನಿದೊಸರ್ವ ತನಿವಾವಿನೊಳ್ಪಣ್ಣಾ ರಸದಿ ಚಿಲಿಕೆನೆವಾಲನೆಱೆದು ಸಿರದಚ್ಚ ವುಡಿಯನ್ನುದುರಿಸಿ(ಕವಿಚ. III, ೨೦೧ ಪ್ರಭಾವತೀ ಪರಿಣಯ). 'ಚಿಲುಪಾಲು' ಪರಾ. [ <ಚಿಲು₁ + ಕೆನೆವಾಲು(<ಕೆನೆವಾಲ್) ]

**ಚಿಲಿಚಿಮ, ಚಿಳಿಚಿಮ** (ನಾ). ಒಂದು ಬಗೆಯ ಸಣ್ಣ ಮೀನು ; ಜಂಬು ಮೀನು : "ನಲವಿಣಾನ ಚಿಲ[ಲಿ]ಚಿಮ ಎಂದೊಡೆ ಸಿಸಿಲು, ಚಿಳಿಯ ಮೀನೆಂದು ಎಂಬರು" (ನಾಚಿರಾ.೩). **ಚಿಳಿಚಿಮ:** "ನಳಮೀನಃ, ಚಿಳಿಚಿಮಃ– ಈ ೨ ಕಿಱುಮೀನ್" (ಹಲಾಯು. ೧೦೮-೩೭); "ಚಿಳಿಚಿಮವೆನಲು ನಳಮೀನ ವೆನೆ ಕಿಱುಮೀನ ಪೆಸರೆನಿಕ್ಕು " (ಮಂಗರಾ. ೧೨೧-೭): ವಿಸ್ಫುರತ್ಕೈನದೊಳಂ ಚಿಳಚ್ಚಿಳಿಚಿಮದೊಳಂ . . . ಅತಿಮನೋಹರಮಾದ ಯಮುನಾಹ್ರದ ಪರಿಸರಪ್ರದೇಶದೊಳಕ್ರೂರಂ ನಿಜವರೂಥಮಂ ನಿಲಿಸಿ (ಜಗವಿ. ೫-೧೦ ೨ವ); ಪ್ರಟನೆಗೆದು ಮಗುಟುಟುವ ಚಿಳಿಚಿಮಾನೀಕದಿಂ (ಉದ್ಭಟ. ೩-೫೪).
[ ಸಂ. ]

**ಚಿಲಿಪಾಲು** 'ಚಿಲುಪಾಲ್' ನೋ.

**ಚಿಲಿಪಿಲಿ** (ನಾ). ಹಕ್ಕಿಗಳು ಗುಂಪಾಗಿ ಮಾಡುವ ಧ್ವನಿಯ ಅನುಕರಣ: "ಪಕ್ಕಿಗಳುಲಿಗಕ್ಕು ನಾಮ ಚಿಲಿಪಿಲಿಯೆನುತುಂ" (ಕವಿಕಂ. ೬೩); ಚಿಲಿಪಿಲಿ ಹಾಡಿಗೆ ಗುಬ್ಬಿಯ ಥಕ ಥೋಂ ಧಿಕ್ಕಿಟ್ಟ (ಮಾಂದಳಿ. ೪೩-೧) : ಅಲ್ಲೊಂದು ಇಲ್ಲೊಂದು ಹಕ್ಕಿಗಳ ಚಿಲಿಪಿಲಿ ಕೂಗು ಅವನ ಕಿವಿಗೆ ಕಚಕುಳಿಯಾಡಿಸಿ ದಂತಾಯಿತು (ತೀವೋಜ. ೧೦).

**ಚಿಲಿಪಿಲಿಗುಟ್ಟು** (ಕ್ರಿ). ಚಿಲಿಪಿಲಿ ಎಂದು ಧ್ವನಿಮಾಡು : ಚಿಲಿಪಿಲಿಗುಟ್ಟ ಸುಣ್ಗೊದಳ್ಗಳಿಂ ಕಿವಿಗಿಂಪನೊಡರ್ಚೆ (ದಶಕು. ೧-೫೭) ; ಹಕ್ಕಿಗಳೆಲ್ಲಾ ಸಂತೋಷದಿಂದ ಚಿಲಿಪಿಲಿಗುಟ್ಟಿ ಕೂಗುತ್ತಾ ಪಾರಾಡುತ್ತಿದ್ದವು (ಕಳಹು.೨); ಇತರ ಹಂಸಪಕ್ಷಿಗಳು . . . ಚಿಲಿಪಿಲಿಗುಟ್ಟುತ್ತಾ ಹಾರಿಹೋದವು (ಹಂಕಿರು. ೩೭). [ ಚಿಲಿಪಿಲಿ + ಕುಟ್ಟು₁ ]

**ಚಿಲಿಪಿಲಿಗುಡು**(ಕ್ರಿ).(ಆಲಂ) ಹಕ್ಕಿಯು ಚಿಲಿಪಿಲಿಗುಟ್ಟುವಂತೆ ಸಂತೋಷ ದಿಂದ ಕೂಡಿರು,–ಆನಂದದಿಂದಿರು : ಮನಸ್ಸು ಸಂತೋಷದಿಂದ ಚಿಲಿಪಿಲಿಗುಡುತ್ತಿದ್ದ ದಿನ (ರಂಗವ. ೧೨೪).
[ ಚಿಲಿಪಿಲಿ + ಕುಡು₁(<ಕೊಡು₁) ]

**ಚಿಲಿಪಿಲಿಹಕ್ಕಿ** (ನಾ). ಒಂದು ಬಗೆಯ ಹಕ್ಕಿ ; ಕೊಟ್ಟು : " ಚಾಪಃ = ಚಿಲಿಪಿಲಿಹಕ್ಕಿ " (ಕಾಶಕ್ಕ. ೧೫೭). 'ಚಿಲಿಮಿಲಿಗ'ಪರಾ.
[ ಚಿಲಿಪಿಲಿ + ಹಕ್ಕಿ₁(<ಪಕ್ಕಿ₁) ]

**ಚಿಲಿಮಿಲಿ** (ನಾ). ಹಕ್ಕಿಗಳು ಗುಂಪಾಗಿ ಮಾಡುವ ಧ್ವನಿಯ ಅನುಕರಣ: "ಚಿಲಿಮಿಲಿಯೆಂದು ಪಕ್ಕಿಗಳುಲುಹು " (ಕಶಸಾ. ೬-೧೫ ) ; ಸಮಸ್ತಧಾತ್ರಿ ಯುಮನಾಳಿಪೆವೆಂದುಲಿವಂತೆ ಪಕ್ಕಿಗಳ್ ಚಿಲಿಮಿಲಿಯೆಂಬ ಪೊಟ್ಟಱೊಳೆ ಬಂದುಬಿದ್ದೊಡ್ಡಿದನಂತಕಾತ್ಮಜಂ (ಪಂಪಭಾ. ೧೧-೩೩) ; ಚಿಲಿಮಿಲಿ ಎಂದೋದುವ ಗಿಳಿಗಳಿರಾ ನೀವು ಕಾಣಿರೇ ನೀವು ಕಾಣಿರೇ (ಮಹಾದೇ. ಬ. ೩೩-೬೩).

**ಚಿಲಿಮಿಲಿಗ, ಚಿಲುಮಿಲಿಗ** (ನಾ). ಚಿಲಿಮಿಲಿ ಎಂದು ಶಬ್ದ ಮಾಡುವ ಒಂದು ಬಗೆಯ ಹಕ್ಕಿ ; ಕೊಟ್ಟು ; ಚಾಷ : ಗೌಜು ಪಾರಿವ ನಿರಿಲೆ ಸಾಳುವ ಚಿಲಿಮಿಲಿಗ ಚಂಬೋತ . . . ಗರಿಗ ಮೊದಲಾದಖಿಳ ಖಗಕುಲ ಬಿದ್ದುದುರಿಯೊಳಗೆ (ಕುಮ್ಮಾಅ. ೨೦-೫೩) ; ವಲಿಯ ಭಾರದ್ವಾಜ ಪಿಕ ಪಿಂಗಲಿ ನಿಶಾಟಧ್ವಾಂಕ್ಷ ಚಾತಕಿ ಚಿಲಿಮಿಲಿಗ ಜಾಣ್ಣಕ್ಕಿ . . . ಮಡಗೊಳಲೆ ಮುಖ್ಯವಿಹಂಗವಿವೆ ವೈದೇಹಿ ನೋಡೆಂದ (ತೊರರಾ. ೩-೧-೩೩). **ಚಿಲುಮಿಲಿಗ :** ಹರಡೆ ಚಿಲುಮಿಲಿಗನು ಚಿಲುವೆ ಗಿಜುಗಿರಳೆ ಕಮ್ಮರನಸಗ . . . ಪಕ್ಕಿಗಳವಱೊಳೊಪ್ಪಿದವು (ಸಾಳ್ವಭಾ. ೫-೨೦).
[ ಚಿಲಿಮಿಲಿ + – ಗ₂ ]

**ಚಿಲಿಮಿಲಿಸು** (ಕ್ರಿ). ಚಿಲಿಮಿಲಿ ಎಂದು ಧ್ವನಿಮಾಡು: ಬಳಸಿ ಚಿಲಿಮಿಲಿಪ ವಿಹಗಂಗಳ ಕಳಕಳದೊಡನೆ ತೊಡರ್ದು . . . ತೀಡಿತ್ತು ಸುಪ್ರಭಾತ ಸಮೀರಂ (ಕುಸುಮಾ. ೮-೭೦) ; ಬಳಸಿ ಚಿಲಿಮಿಲಿಪ ವಿಹಗಂಗಳ ಕಳಕಳ ದೊಡನೆ ತೋರ್ದು ಸರಸೀಜಳಮಂ ವಳಿಗೊಳಿಸಿ ಕುಮುದ ಮುಖಮಂ ಪೆಳಱಿಸಿ ತೀಡಿತ್ತು ಸುಪ್ರಭಾತ ಸಮೀರಂ (ಶಾಂತೀಶ್ವ. ೧೧-೯೫).
[ ಚಿಲಿಮಿಲಿ + – ಇಸು₃ ]

**ಚಿಲಿಮ್ಮೆ₁** 'ಚಿಲುಮ್ಮೆ₁' ನೋ.

**ಚಿಲಿಮ್ಮೆ₂** 'ಚಿಲುಮ್ಮೆ₂' ನೋ.

**ಚಿಲಿವಾಲು** 'ಚಿಲುಂಪಾಲ್' ನೋ.

**ಚಿಲು₁** (ಕ್ರಿ). ೧. ಅನ್ನದಂತೆ ಚೆನ್ನಾಗಿ ಬೇಯು. ೨. ಚೆನ್ನಾಗಿ ಕುದಿ,– ಕಾಯು. 'ಚಿಲುಪಾಲ್' ಪರಾ. [ ದೇ.॥ ತಮಿ. ಚಿಲು ]

**ಚಿಲು₂** (ನಾ). (?) : " ಗೋಧಾಸ್ತನ್ಯಃ–ಚಿಲು " (ಒಷಧಿ. ೫೦). [ ? ]

**ಚಿಲುಕ, ಚಿಲಕ, ಚಿಲುಕು₁** (ನಾ). ೧. ಕದವನ್ನು ಭದ್ರಪಡಿಸುವುದಕ್ಕಾಗಿ ಉಪಯೋಗಿಸುವ ಕೊಂಡಿ,–ಸರಪಣಿ : ಕದವ ಮುಚ್ಚಿದಳಿದಕೋ ಚಿಲುಕ ಅಲ್ಲಾಡುತಿದೆ (ಪುರಂದ. ೨-೯೬ ಅನುಪಲ್ಲವಿ). ೨. ಬೇಟೆಯಲ್ಲಿ ಉಪಯೋಗಿಸುವ, ತುದಿಯಲ್ಲಿ ಮುಳ್ಳಿನಂತೆ ಮೊನೆಯಿರುವ ಒಂದು ಉಪಕರಣ; ಈಟಿ; ಬರ್ಜಿ (?) : ತಡಿಕೆ ತಳಿಯು ಅಂಟಿನ ಕಣೆ ಜಾಳುವ ಹಿಡಿದ ದೀಹವು ಪಾಚಿ ಸಿಡಿಯು ಹೊಡೆದೆತ್ತುವ ಮೊಲ ಎಸೆವ ಚಿಲುಕಗಳು ಬಿಡುಗಣ್ಣ ಬೇಡರೊದಗಿತು (ಹರಿಸಾಂ. ೨-೨). **ಚಿಲಕ:** ೧. ಅತ್ತೇಮನೇಲಿ ಹೇಗಿರುವೆ ಮಗಳೇ ಅಂದ್ರು ಚಿಲಕಕ್ಕೆ ಮೊಳಕ್ಕೆ ತಗುಲಿದ ಹಾಗೆ ಅಂದ್ಲು (ಹುಟ್ಟುಹ. ೧೦೩). **ಚಿಲುಕು₁ :** ೨. ಮದನನ ನನೆಯಂಬು ಮುನಿಹೃದಯಮಂ ನಡವೆನುತ್ತೆ ಚಿಲುಕಿನ ದೊಡ್ಡ ಮೊನೆಯಂಬ ನಾಗಿಸಿದನೋ ಯೆನಲ್ . . . ಹೊಂಗೇದಗೆಗಳೊಪ್ಪಿದುವು ತರತರದೊಳ್ಕ (ಚಿಬಪು. ೪೫-೧೮). [ ದೇ.॥ ತಮಿ. ಮಲ. ಚಿಲುಕ್ಕು ; ತುಳು. ಚಿಲ್ಕ್; ತೆಲು. ಚಿಲಕ, ಚಿಲುಕು, ಚಿಲುಕೆ ]

**ಚಿಲುಕವರೆ** (ನಾ). ನೀರಿನಲ್ಲಿ ನೆನಸಿ ಸಿಪ್ಪೆ ತೆಗೆದ ಅವರೆಕಾಳು ಮತ್ತು ಅದರಿಂದ ಮಾಡಿದ ಒಂದು ಬಗೆಯ ಮೇಲೋಗರ : ಇಂದು ನಮ್ಮ ಮನೆಯಲ್ಲಿ ಚಿಲುಕವರೆ ಮಾಡಿದ್ದರು (ರೂಢಿ). 'ಚಿದಕವರೆ' ಪರಾ.
[ ಚಿಲುಕು₂ + ಅವರೆ₁ ]

**ಚಿಲುಕಾಯಿ** (ನಾ). ಗಿಳಿ (?) : ಯಾಕತ್ತೆ ನನ್ನ ಗೋಪೀದೇವಿ ಕಂದಯ್ಯ ಗೋಪುರದಲ್ಲಾಡೊ ಚಿಲುಕಾಯಿ ಚಿಂತಾಮಣಿ ಹಸುಳೆ ಬಂದಾಡೊ ತೊಡೆ ಮೇಲೆ (ಹಳ್ಳಿಯ. ೮೯). [ ?./ತೆಲು. ಚಿಲುಕ, ಚಿಲ್ಕ ]

**ಚಿಲುಕಿಸು** (ಕ್ರಿ). ಕಾಳಿನ ಮೇಲಿರುವ ಸಿಪ್ಪೆ ತೆಗೆ. – ಸಿಪ್ಪೆ ಬಿಡಿಸು : ಚಿಲುಕಿಸಿದ ಅವರೆಕಾಳು ಬಹುರುಚಿ (ರೂಢಿ).
[ ಚಿಲುಕು₂ + – ಇಸು₃ ]

**ಚಿಲುಕೀರೆ, ಚಿಲಿಕೀರೆ** (ನಾ). ಒಂದು ಬಗೆಯ ಸೊಪ್ಪು : "ಶೋಧಿನೀ– ಚಿಲುಕೀರೆ " (ಒಷಧಿ. ೧೭೨) ; ಚಿಲುಕೀರೆ ಸೊಪ್ಪು ಸಿಹಿಪಾಲೆ ಸೊಪ್ಪು ಚಕ್ರವರ್ತಿ ಪುಳಂಪುರುಚಿ ಜಾಂಗಲಮಾಂಸ . . . ಯಿಷ್ಟು ಪಥ್ಯ ಕರವಹುದು (ವಿಷಚಿ. ೧೩-೩). **ಚಿಲಿಕೀರೆ :** ಚಿಲಿಕೀರೆಯ ಸೊಪ್ಪಿನ ರಸದಲ್ಲಿ ಒಂದು ಜಾವ ಮರ್ದಿಸಿ ಸಾಸಿವೆ ಪ್ರಮಾಣ ಗುಳಿಗೆಯಂ ಮಾಡಿ ಸಮಜ್ವರಕ್ಕೆ ಜೀರಿಗೆ ಸಕ್ಕರೆಯಲ್ಲಿ ಕೊಡುವುದು (ವಿವ್ಯವಿ. ೩೭); ಚಕ್ರವರ್ತಿಯ ಸೊಪ್ಪು, ಚಿಲಿಕೀರೆ ಸೊಪ್ಪು ಇವುಗಳೆಲ್ಲವೂ ಜ್ವರದವರಿಗೆ ಪಥ್ಯದ್ರವ್ಯಗಳು (ಸಕಪ್ರ. ೧೦೨). [ ←ತೆಲು. ಚಿಲುಕಕೂರ ]

**ಚಿಲುಕು₁** 'ಚಿಲುಕ' ನೋ.

**ಚಿಲುಕು₂** (ನಾ). ಸಿಪ್ಪೆ ; ಪೊರೆ. 'ಚಿಲುಕಿಸು', 'ಚಿದಕು₂' ಪರಾ.
[ ? ]

**ಚಿಲುಕೂಲಿ, ಚಿಲಕೂಲಿ** (ನಾ). ಒಂದು ಬಗೆಯ ಹಕ್ಕಿ : ಪೆರ್ಬಕ್ಕಿ ಹೆಂಗುರು ಕಾಕಂ ಚಿಲುಕೂಲಿ ರತ್ನಖಗಮಿರ್ಕುಂ ತದ್ವನಾಗೌಘದೊಳ್ (ರಾಜಶೇ. ೫-೩೯) ; ಪಾರಾವತಂ ಪರಪುಟ್ಟಂ ಚಿಲುಕೂಲಿ ಚಾತಕಮ ವಿರ್ಕುಂ (ಯಾದವ. ೪-೫೩) ; ಗರುಡಂ ಶರಾರಿ ಚಿಲುಕೂಲಿ ಪಿಕಳಂ ಬಕಂ (ಕುಮಾಪು. ೪-೧೯೮). **ಚಿಲಕೂಲಿ :** ಅಂಚೆಯ ಚೆಂಬೋತನ ಚಿಲಕೂಲಿಯ ಕೊಂಚೆಯ ಗಿಳಿ ಕೊಳರ್ವಕ್ಕಿಯ ಪುರುಳಿಯ (ಹಮ್ಮಿರ. ೪-೧೨ ರಗಳೆ). [?]

**ಚಿಲುಕೆ** 'ಚಿಲಿಕ್ಕೆ$_1$' ನೋ.

**ಚಿಲುತಲಿ** (ನಾ). ಒಂದು ಬಗೆಯ ಆಯುಧ : ಸಂಣ ಚಂದ್ರಾಯುಧಾ ಚಿಲುತಲಿ ಮೊದಲಾದಾ ಬತ್ತೀಶಾಯುಧಾ (ಎಕ. XVI, ಗುಬ್ಬಿ. ೭೪-೩೩ ; ಸು. 1776). [ ? ]

**ಚಿಲುಪಾಲ್, ಚಿನಿಪಾಲು, ಚಿನಿವಾಲ್, ಚಿನಿವಾಲು, ಚಿಲಿಪಾಲು, ಚಿಲಿವಾಲು, ಚಿಲುಪಾಲು, ಚಿಲುಹಾಲು** (ನಾ). ನೀರು ಇಂಗುವಂತೆ ಚೆನ್ನಾಗಿ ಕಾಯಿಸಿದ ಹಾಲು ; ಕೆನೆಹಾಲು : "ಕಾಯೆ ಬತ್ತಿದ ಹಾಲು ಚಿಲು[ಪಾಠಾಂ. ಚಿರ]ಪಾಲೆನಿಕ್ಕು" (ಮಂಗರಾ. ೭೪-೨) ; ಸಗ್ಗದಮರ್ದಿನ ಕೊಳಂ ಮೇಲ್ವಾಯ್ವು ಮಿಸುಪ ಚಿಲುಪಾಲ್ಗೆನೆಗಳಂ ನೆಟಿದಾರೆಯಿಟ್ಟಪೋ (ವೀಶೈಪು. ೩-೯-೩೪). **ಚಿನಿಪಾಲು :** ಇನಿದಾದ ಚಿನಿಪಾಲು ಪೀರ್ವರಸಂಚೆ ಹುಳಿಗಂಗೆಯ ಕುಡಿವುದೇ (ಸರ್ವವ. ೧೯೫-೯೦೦) ; ಕಾಸಿ ಚಿನಿಪಾಲಂ ಕೊಡುವವಳು ನಿಮಗೆ ಕೊಡಗೂಸು (ಬಸವಪು. ೯-೩೮) ; ಸಕ್ಕರೆಯ ಜೇನ ಸವಿಗಿಮ್ಮಿಗಿಲು ಕೆನೆಗಟ್ಟೆ ವುಕ್ಕುಕ್ಕಿ ಕಾಯೆ ಚಿನಿಪಾಲ ರುಚಿಗಿಂದಧಿಕ (ನವಮೋ. ೧-೨) ; ಸಕ್ಕರೆ ಚಿನಿಪಾಲು ತುಪ್ಪವ ಯಿಕ್ಕೊಡನೀರ್ವರು ಸವಿದು (ಕರಿಕ. ೬೮-೩). **ಚಿನಿವಾಲ್ :** ಚಿನಿವಾಲ್ಗೆನೆ ಸದ್ಘೃತಂಗಲಸಿ ದಂದದೊಳೆನ್ನ ಕೃತಿರಸಂ ನಾಡೆ ಸವಿಗೊಳಿಸುವುದು (ನಂದಿಮಾ. ೧-೩೦). **ಚಿನಿವಾಲು :** "ಲಿಂಗಮೂರ್ತಿ ಇನ್ನೊಬ್ಬರಿಗೆ ಶಿವ ಕಾರುಣ್ಯ" ಎಂಬ ಆ ಚಿನಿವಾಲನ್ನು ಕೊಡಲು ಯತ್ನಿಸುವವನೇ ಹೊರತು ಹುಳಿಯನ್ನು ಕೊಡನು (ಕರ್ನಾಕ. ೧೨೦) **ಚಿಲಿಪಾಲು :** ಶಿವಮೃಡನಾಮ ಶಿವಜ್ಞಾನ ವೆಂಬ ಚಿಲಿಪಾಲನಾರೋಗಿಸುವ ಪರಹಿತದಿಂದ (ರು ದ್ರ ಭಾ . ೯೨) ; ಚಿಲಿಪಾಲು ಸಕ್ಕರೆಯು ಸುಲಿದ ಬಾಳೆಯ ಹಣ್ಣ ಕಲಸಿ (ಗುರುಬೋ. ೪೧); ಚಿಲಿಪಾಲಿನೊಳಗೆ ಶರ್ಕರೆವೆರದು ಪರಿಮಳಂ ಕಲಿತಮೆಂದೆನಿಸುತಿರಲೀಂಟಿ ನಾಲಗೆದಣಿದು ಸುಲಭದಿಂ ನೆನೆದಪುದೆ ದೇವ (ವೆಂಕಾರಾ. ೩-೧-೨) ; ಶರ್ಕರೆವೆರಸಿ ಚಿಲಿಪಾಲೀವ ಸಿರಿಯೆನಗಹುದೆಯೆಂದು (ಜಿನಭಾ. ೩೦-೯). **ಚಿಲಿವಾಲು :** ತುಪ್ಪ ಸಕ್ಕರೆ ಚಿಲಿವಾಲ ಸವಿವಪೋಲು ವೊಪ್ಪುಕಥೆಯ ಪೇಳುವೆನು (ರಾಮವಿ. ಅನುಬಂಧ ೩.೨೦-೬). **ಚಿಲುಪಾಲು :** ರಸವೊಸರ್ವ ಮುಪ್ಪಳಮಂ ಚಿಲುಪಾಲ ತಿರುಳ ಕರಣೆಗಳುಮಂ . . . ಒಂದುಗೂಡಿ (ನಂಬಿರ. ೦೦-೩೫) ; ಚಿಲುಪಾಲಿನೊಳು ವಿಷಂ ತವರಾಜನೊಳು ಕೈಪೆ (ಭಾವಚಿಂ. ೯-೩); ಗುಟ್ಟಡರದೆ ಕಾದ್ದ ಚಿಲುಪಾಲು ಮಕ್ಷಿಕೋಚ್ಛಿಷ್ಟವಿಲ್ಲದ ಜೇನುತುಪ್ಪ (ಮೋಹತ. ೨೩-೧) ; ಚಿಲುಪಾಲು ತಂಬಾಲು ಕೆನೆವೆರಸಿದ ಪಾಲು (ಕಂಸವಿ. ೮-೯೦). **ಚಿಲುಹಾಲು :** ಬಟ್ಟಹಾಲು, ಚಿಲುಹಾಲು, ಕೆನೆಹಾಲು, ಎಟ್ಟೆಹಾಲು, ತನಿಹಾಲು ಮುಂತಾದ ತರತರದ ಹಾಲು ಗಳನ್ನು ಬಟ್ಟಲು ಬಟ್ಟಲು ತುಂಬಿ ತಂದು ಎಡೆ ಮಾಡಿದಳು(ಮಾಮಲ್ಲಿ. ೫೪).

[ ಚಿಲು$_1$ + ಪಾಲ್$_1$ ]

**ಚಿಲುಪಾಲು** 'ಚಿಲುಪಾಲ್' ನೋ.

**ಚಿಲುಮಿಲಿಗ** 'ಚಿಲಿಮಿಲಿಗ' ನೋ.

**ಚಿಲುಮುರಿ** (ನಾ). ಗೋಧಿಯ ಹಿಟ್ಟಿನಿಂದ ಮಾಡಿ, ತುಪ್ಪದಲ್ಲಿ ಕರಿದ ಒಂದು ಬಗೆಯ ಭಕ್ಷ್ಯ : ನೆಱ ಸಣ್ಣ ಗೋದುವೆಯ ಹಿಟ್ಟ ಸಿಹಿವಾಲೊಳಗೆ ನುಱುಗುವಂದದಿ ಕಲಸಿ . . . ತುಪ್ಪದೊಳಗಡಲು ಚಿಲುಮುರಿಯಾದುದು (ಸೂಪಶಾ. ೦-೩೩). [ ? ]

**ಚಿಲುಮೆ$_1$, ಚಲಮೆ, ಚಲುಮೆ, ಚಿಲಿಮೆ$_1$** (ನಾ). ೧. ನೀರು ಉಕ್ಕುವ ಸ್ಥಳ ; ಬುಗ್ಗೆ ; ತಲಪರಿಗೆ ; ಒರತೆ ; ಊಟೆ : ಕಲ್ಲ ಪೊರಡಿಯೊಳಗೆ ಚಿಲುಮೆಯುಗ್ಗವಣೆಯುಂಟೆ ಅಯ್ಯಾ (ಆದವ. ೧೩-೨೮): ನಿತ್ಯ ಚಿಲುಮೆಯ ತೋಡುವಾತಂಗೆ ಉಚ್ಚೆಯ ಬಚ್ಚಲ ತೋಡಲಾಗದು (ಶಿವಮಂ. ೩೯) ; ಬಱತಿರ್ದ ಚಿಲುಮೆಯ ನೀರನಿತ್ತು ಜಂಗಮಕೆ (ಚಬಪು. ೫೭-೬). ೨. ಕಾರಂಜಿ: ಅದರ ಮುಂಭಾಗದಲ್ಲಿ ನೀರಿನ ಚಿಲುಮೆ (Fountain) ಯೊಂದನ್ನು ಇಟ್ಟಿದ್ದರು (ಕಲಾಸಾ. ೩೭). **ಚಲಮೆ :** ೧.ಮಳಲಿನ ಮಱೆಯ ನೀರ ಬಳಸದೆಸಲೆ ಪೃಥ್ವಿಯಲ್ಲಿ ನೆಲ ಚಲಮೆಯಂ ಕಂಡು (ಏಲಶ್ರೇ. ೧೯); ಕಲ್ಲ ಹಳ್ಳದೊಳುಂಟೆ ಚಲಮೆ ಕಾಣ್ಬುದೆ ಗೂಗೆ ರವಿಯ (ವೀಶೈಪು.೪-೬-೫೨); ಹರಿಸದಿಂದಾ ಮಳಲ ಬಗಿದು ಚಲಮೆಯ ತೆಗೆವರೆಬರು(ಸಿದ್ಧೇಪು. ೧೯-೮). **ಚಲುಮೆ :** ೧. ಬಹು ಜಲಮಂ ಬಿಟ್ಟು ಚ[ಪಾಠಾಂ. ಚಿ]ಲುಮೆಯಂ ತೆಗೆದರೆ ಅದು ನೆಲಶುದ್ಧ ಸೌಕರ್ಯವಲ್ಲದೆ ಅವು ಶೀಲವಲ್ಲ (ಮಡಿವಾ. ೧೪-೨೩); ಕೂಪಕಾಃ, ವಿದಾರಕಾಃ – ೨ ಚಲುಮೆಗಳಾಗಿ ತೋಡಲ್ಪಟ್ಟ ಮರಳು ಹಳ್ಳ ಮುಂತಾದುವುಗಳು ನೀರೂರಿ ಬರುವ ಹಳ್ಳಗಳು (ಸಿದ್ಧಾಂತಿ. ೭೧). **ಚಿಲಿಮೆ$_1$ :** ೨. ನಗರದ ಕೇಂದ್ರ ಸ್ಥಳಗಳಲ್ಲಿ ನೀರಿನ ಚಿಲಿಮೆಗಳನ್ನು ನಿರ್ಮಿಸಿದ್ದಾರೆ (ರೂಢಿ).

[ ದೇ.॥ ತೆಲು. ಚೆಲಮ ; ಕುವಿ. ಸಲ್ಮ ]

**ಚಿಲುಮೆ$_2$, ಚಿಲಿಮೆ$_2$** (ನಾ). ತಂಬಾಕು ಸೇದಲು ಉಪಯೋಗಿಸುವ ಮಣ್ಣಿನ ಕೊಳವಿ.–ನಳಿಕೆ : ಚಿಲುಮೆ ದೊರೆಯುವುದು, ಎಷ್ಟು ಹುಡುಕಿದರೂ ಕಡ್ಡಿಪೆಟ್ಟಿಗೆ ದೊರಯಲೊಲ್ಲದು (ಕಮ್ಮಟಿ. ೪) ; ಕೈಯಲ್ಲಿ ಚಿಲುಮೆ ಯನ್ನು ಹಿಡಿದುಕೊಂಡು ಲಗುಬಗೆಯಿಂದ ಅವಳ ಬೆನ್ನು ಹತ್ತಿ ಹೋಗುತ್ತ ಅಂದ (ಅಶೋಕ. ೧೦). **ಚಿಲಿಮೆ$_2$ :** ತಂಬಾಕವೇ ಇಲ್ಲ, ಚಿಲಿಮೆಯಲ್ಲಿಂದ ಬರಬೇಕು (ಕುರಿಹಿಂ. ೭೧).

[ ←ಪಾರ. ಹಿಂ. ಚಿಲಮ್ ; ಮರಾ. ಚಿಲಮ್, ಚಿಲಿಮಿ, ಚಿಲೀಮ್ ]

**ಚಿಲುವಾನ, ಚಿಲವಾನ್, ಚಿಲುವಾನು** (ನಾ). ೧. ಪೂರ್ಣವಾದ ಹಣದ ಭಾಗ ; ಚಿಲ್ಲರೆ ಹಣ : ಚಿಲುವಾಂಣ ಬಿನುಗುಗಳಿಗೆ ನಾನಾ ಜಾತಿಯ ವೊಕ್ಕಲುಗಳಿಗೆ ವರುಷ ೧ ಕೆ (ಸೌಇಇ. IX-ii, ೫೧೬-೬; 1525). ೨. ಚಿಲ್ಲರೆ ; ಸಣ್ಣ ; ಅಲ್ಪ : ಅರೆವೊದಲಹ ಚಿಲುವಾನಂ ಬರೆ ಲೆಕ್ಕದ ಕಡೆಯೊಳಗಲ ನೀಳನ ಸಂಖ್ಯಿಕ್ಕಿರದೆ ಪರಸ್ಪರದಿಂದಾ (ವ್ಯವಹಾ. ೯ ಕ್ಷೇತ್ರಗಣಿತ) ; ಯಿವರೆಲ್ಲರಿಗೆ ಸಲುವ ಚಿಲುವಾನ ಕೊಡಗಿಗಳು (ಎಕ. IX, ನೆಲಮಂ. ೪೧-೧೩ ; 1545) ; ಚಿಪ್ಪಿಗನಂ ಪಿಡಿದಾರ್ಜಿಸಿದರ್ಥದ ಚಿಲುವಾನ ದೊಳಿನ್ನೇನಹುದು (ಭಕ್ತಿಸ. IV, ೧೨). **ಚಿಲವಾನ್:** (೩). **ಚಿಲುವಾನು:** ೨. ತಮ್ಮ ರಾಜ್ಯದಲ್ಲಿ ನಿಡುಂಬರೆ ಕಟ್ಟುವ ಕೆಲಸದಲ್ಲಿ ಮುನ್ನೂರು ಚಿಲುವಾನು ಆಳು ಉಂಟಪ್ಪೆ(ರಾಜೇಂದ್ರ. ೭೬).

[ ?./ತಮಿ. ಚಿಲುವಾಣ, ಚಿಲ್ಲಾಣ, ಚಿಲ್ವಾಣ ; ಮಲ. ಚಿಲ್ಲಾನ; ತುಳು. ಚಿಲುವಾನ, ಚಿಲ್ವಾನ ; ತೆಲು. ಚಿಲುವಾನ, ಚಿಲುವಾಯನ. /ಮರಾ. ಚಿಲವಣಾ, ಚಿಲವನಾ, ಚಿಲವಾನ್, ಚಿಲವಾಣ್ ]

**ಚಿಲುವಾನಪೈರು** (ನಾ). ಅವರೆ, ಹುರುಳಿ, ಕಡಲೆ, ಕೊತ್ತುಂಬರಿ ಮುಂತಾದ ಚಿಲ್ಲರೆ ಧಾನ್ಯದ ಬೆಳೆ ; ಚಿಲ್ಲರೆ ಪೈರು (?) : ಸೊಪ್ಪಿನ ತೋಟ ಚಿಲುವಾನಪೈರು ಉಪಗ್ರಾಮಗಳ ಹೆಚ್ಚು ಹುಟ್ಟುವಳಿ ಕೆರೆಗಳ ಹೆಚ್ಚು ಹುಟ್ಟುವಳಿ ಮುಂತಾದ ಸಕಲ ಸ್ವಾಮ್ಯಗಳು (ಎಕ. III, ತಿರುಮ, ೬೩-೧೩೭೦ ; 1748). [ ಚಿಲುವಾನ + ಪೈರು (<ಪಯಿರ್) ]

**ಚಿಲುವಾನಸುಂಕ** (ನಾ). ಚಿಲ್ಲರೆ ಸುಂಕ ; ಸಣ್ಣ ಪುಟ್ಟ ಬಾಬಿನ ತೆರಿಗೆ : ತಳವಾಱಿಕೆ ಆಳಿವಾಱನ್ಯಾಯಸಭೆಯ ಸಂಖೆಯ ಚಿಲುವಾನಸುಂಕ ಸೋಡಿಗೆ ಇವು ಮೊದಲು (ಎಕ. V, ಹಾಸನ. ೨-೧೮ ; 1563).

[ ಚಿಲುವಾನ + ಸುಂಕ ]

**ಚಿಲುಪಾನು** 'ಚಿಲುಪಾನ' ನೋ.

**ಚಿಲುಹಾಲು** 'ಚಿಲುಪಾಲ್' ನೋ.

**ಚಿಲೈತ** 'ಚೀಲೈತ' ನೋ.

**ಚಿಲ್ಕರಿವೆ** 'ಚಿಲ್ಕುಹರಿವೆ' ನೋ.

**ಚಿಲ್ಕುಹರಿವೆ, ಚಿಲ್ಕರಿವೆ** (ನಾ). ಒಂದು ಬಗೆಯ ಸೊಪ್ಪು ; ಕಿರುಕು ಸಾಲೆ : ಹರಿವೆಸೊಪ್ಪು, ಚಿಲ್ಕುಹರಿವೆಸೊಪ್ಪುಗಳಲ್ಲಿ ಎರಡು ವಿಧಗಳಿವೆ (ತರಪ. ೧೭). **ಚಿಲ್ಕರಿವೆ:** ಹರಿವೇ ಸೊಪ್ಪು, ದಂಟು ಸೊಪ್ಪು, ಚಿಲ್ಕರಿವೇ ಸೊಪ್ಪು (ಮೃಜಿಗಿ. ೬-೯೨). [ ಚಿಲ್ಕು ? + ಹರಿವೆ ]

**ಚಿಲ್ಪ** (ನಾ). ೧. ಸಣ್ಣವನು ; ಚಿಕ್ಕವನು : ಈ ಚಿಲ್ಪ ಈಸಲ ಮೊದಲ ಬಹುಮಾನ ಪಡೆದಿದ್ದಾನೆ (ರೂಢಿ). ೨. ಕುಳ್ಳಾದ ಎತ್ತು; ಗಿಡ್ಡ ಎತ್ತು: ನೇಗಿಲಿಗೆ ಹೂಡಿರುವ ಚಿಲ್ಪಗಳು ಒಳ್ಳೆ ಬಲಿಷ್ಠವಾಗಿವೆ (ರೂಢಿ). (ಗು). ೩. ಸಣ್ಣದಾದ ; ಚಿಕ್ಕದಾದ : ಈ ಚಿಲ್ಪಹುಡುಗ ಬಹಳ ಬುದ್ಧಿವಂತ (ರೂಢಿ). [ ? ]

**ಚಿಲ್ಪಾರಿ** 'ಚಿಲ್ಪೇರಿ' ನೋ.

**ಚಿಲ್ಪೇರಿ, ಚಿಲ್ಪಾರಿ, ಚುಲ್ಪಾರಿ** (ನಾ). ಸಣ್ಣವನು; ಚಿಕ್ಕವನು: ನಿಮ್ಮಂಥ ಚಿಲ್ಪೇರಿಗಳಿಗೆಲ್ಲ ರಾಜಕೀಯಕ್ಕೆ ತಲೆಹಾಕದೆ ನಿಮ್ಮಷ್ಟಕ್ಕೆ ನೀವಿರ ಬಾರದೇನ್ರೋ (ಸ್ವಾಮಿಸ್ಮೃ. ೧೨೪). **ಚಿಲ್ಪಾರಿ:** ಆ ಚಿಲ್ಪಾರಿ ಬಹಳ ಚೇಷ್ಟೆ ಮಾಡುತ್ತಾನೆ (ರೂಢಿ). **ಚುಲ್ಪಾರಿ :** ಒಬ್ಬ ಚುಲ್ಪಾರಿಯನ್ನು ಎತ್ತಿ ಒಳಕ್ಕೆ ಬಿಡುತ್ತಿದ್ದೆವು (ಪರೀಕ್ಷೆ. ೫೨). [ <ಚಿಲ್ಪ ]

**ಚಿಲ್ಮಿಷ** (ನಾ). ಮೋಸ ; ವಂಚನೆ : ಅವನೇನೋ ಒಳ್ಳೆಯವನೇ, ಅವನ ಹೆಂಡತಿ ಬಲು ಚಿಲ್ಮಿಷದವಳು (ಅದೂಟ. ೧೧೨). [ ←ತೆಲು. ಚಿಲಿವಿಸ./ಸಂ. ಕಿಲ್ಬಿಷ ]

**ಚಿಲ್ಲ$_1$, ಚಿಲಿ$_1$, ಚಳ್ಳೆ$_2$, ಚಿಲ್ಲು$_1$** (ನಾ). ಒಂದು ಬಗೆಯ ಗಿಡ ಮತ್ತು ಅದರ ಬೀಜ ; ಕತಕ. P ಕದಡಿದ ನೀರನ್ನು ಶುದ್ಧ ಮಾಡಲು ಉಪಯೋಗಿಸುವ ಬೀಜ : ತದಕಿನ ತಾಳ ತೆಂಗಿನ ತಳಂಕಿನ ತುಂಬುರ ಚಿಲ್ಲ ಬೆಲ್ಲವತ್ತದ ಬಿಳಿಯತ್ತಿಯಿಪ್ಪೆಯ ಮರಂಗಳ (ಲೀಲಾವ. ೬-೨೭); ಚಿಲ್ಲ ಚೆನ್ನಗೆ ತೇಗು ತುಂಬುರವರಗಳಿಂ ನಿಲ್ಲದೆ ಮೆಱೆದುದಾ ವಿಪಿನ (ಕುರಾಸಾಂ. ೨೭-೫೫) ; ಚಿಲ್ಲ ನೆಲ್ಲಿಯು ಹೊಂಗೆ ನೇಱಿಲು . . . ಸೂರ ಮಾರ್ಗವ ತಡೆದಿಹುವು (ಕಂಸವಿ. ೧೮-೩೭). **ಚಿಲಿ$_1$ :** (೬). **ಚಳ್ಳೆ$_2$ :** ಚಳೆ ಚುಜ್ಜಾಲು . . . ಮೊದಲಾದ ಗಗನಮಂ ತುಡುಕುವ ವೃಕ್ಷಂಗಳ್ (ಸೌಗಂಧಿ. ೫೮-೭). **ಚಿಲ್ಲು$_1$ :** "ಕತಕಂ ಚಿಲ್ಲು" (ಮಂಗರಾ. ೪೨-೩೯) ; ಬೆಲ್ಲವತ್ತ ವರವಮಾದಲ ವಂಬಟೆ ಚಿಲ್ಲು ಚಿಳ್ಳೆಗಾಯ್ [ ಪಾಠಾಂ. ಚಿಳ್ಳ ಚಿಲ್ಲಕಾಯ್ ] (ಸೂಕ್ತಿಸು. ೧೧-೮೭) ; (ನಳಚಂ. ೪೬೨ ನೋ) ; ಮರಗಳು ; ಹೆಸವ . . . ಚಿಲ್ಲು, ಹೂವರಸಿ, ಬೆಪ್ಪಾಲೆ, ಹಾಲೆ (ನಮ್ಮನು. ೨೩೬). [ ದೇ.II ತಮಿ. ತೆಲು. ಚಿಲ್ಲ ]

**ಚಿಲ್ಲ$_2$, ಚಿಲ್ಲು$_2$** (ನಾ). ರಾಟೆಯಲ್ಲಿ ಕದಿರನ್ನು ಜೋಡಿಸಲು ಇರುವ ಕಿವಿಯಂತಹ ಭಾಗ ; ಕದಿರನ್ನು ಜೋಡಿಸುವ ಮರದ ಅಥವಾ ಚರ್ಮದ ಕಿವಿ: ಚಿಲ್ಲ ಹಮ್ಮಿಗಿ, ಕಟ್ಟಿ, ಇವೆಲ್ಲವನ್ನು ಮಾಡಿಸಿಕೊಡುತ್ತಾನೆ (ಕನ್ನಸು. I, ೩೬೭). **ಚಿಲ್ಲು$_2$ :** ಮನಿಯಾನ ಕೋಣವ ಕಡಿಸಿ ಚಿಲ್ಲು ಮಾಡಿಸಿ ಕೊಟ್ಟಾಪ (ಮಲ್ಲಿಗೆ. ೯೭).

**ಚಿಲ್ಲ$_3$** 'ಚುಲ್ಲ$_1$' ನೋ.

**ಚಿಲ್ಲ$_4$** (ನಾ). ೧. ರೋಗದಿಂದ ನೀರು ಸುರಿಯುತ್ತಿರುವ ಕಣ್ಣುಳ್ಳವನು; ಸೋರುಗಣ್ಣ. ೨. ಗುಂಡುಮುಳುಕನ ಹಕ್ಕಿ ; ಮುಂಡುಮುಳುಕನ ಹಕ್ಕಿ : "ಆತಾಪೀ, ಶಕುನಿಃ, ಚಿಲ್ಲಃ – ಈ ೩ ಗುಂಡುಮುಟುಕ (ನಹಕ್ಕಿ)" (ಹಲಾಯು. ೪೨-೯೭): "ಚಿಲ್ಲಮಾತಪಪಕ್ಷಿಯೆನೆ ಮುಂಡುಮುಟುಕನಕ್ಕುಂ" (ಮಂಗರಾ ೫೧-೫). [ ಸಂ. ]

**ಚಿಲ್ಲಗೊಟ್ಟೆ** (ನಾ) .=ಚಿಲ್ಲಬಿತ್ತು: ನೆಲ್ಲಿಯ ಸಟ್ಟು ಬಾಳಮುಸಿತಾಂಜನವೊಳ್ಪಿಹ ಮುಸ್ತೆಯಿಪ್ಪೆ ಕೇಡಿಲ್ಲದ ಚಿಲ್ಲಗೊಟ್ಟೆ ಪೊಸಪೀರೆಯ ಬಿತ್ತಿನೊಳಾದ ಬೂದಿಯಂ ನಿಲ್ಲದೆ ಬಾವಿಯೊಳ್ ಕಲಸಲ್ . . . ಬಾವಿಗಳ ನೀರಮೃ ತೋಪಮಮಂ (ಅಟ್ಟಮು. ೧೧-೬೩). [ ಚಿಲ್ಲ$_1$+ಗೊಟ್ಟೆ$_1$ (<ಕೊಟ್ಟೆ$_1$) ]

**ಚಿಲ್ಲತನ** (ನಾ). ಕ್ಷುಲ್ಲಕತನ ; ನೀಚತನ : ಚಿಲ್ಲವೇ ಹೇಳಕಟಯನ್ನೀ ಚಿಲ್ಲತನವೆಂದಿಂಗೆ ಮಾಣ್ಬುದು (ಬಸಪು. ೪೫-೪೦). [ ಚಿಲ್ಲ$_3$ (<ಚುಲ್ಲ$_1$) + – ತನ ]

**ಚಿಲ್ಲಫಲ** (ನಾ).=ಚಿಲ್ಲಬಿತ್ತು: ಚ(ಚಿ)[ಪಾಠಾಂ. ಛಿ]ಲ್ಲಫಲದಿಂದೆ ನೀರ್ಕದಡೆಲ್ಲಂ ತಿಳಿ (ಕಿಡು) ವಂತೆ ತಿಳಿಗುಮುದಱಿಂ ಧರೆಯೊಳ್ (ಜಮದ. ೧೨-೪೬). [ ಚಿಲ್ಲ$_1$ + ಫಲ ]

**ಚಿಲ್ಲಬಿತ್ತು** (ನಾ). ಚಿಲ್ಲದ ಬೀಜ: "ವಾರಿಪ್ರಸಾದನಃ–ಚಿಲ್ಲಬಿತ್ತು" (ಒಷಧಿ. ೧೫೨). [ ಚಿಲ್ಲ$_1$ + ಬಿತ್ತು$_2$ (<ಬಿಟ್ಟು) ]

**ಚಿಲ್ಲಬೀಜ** (ನಾ) .=ಚಿಲ್ಲಬಿತ್ತು: "ಕಾಂಸ್ಯಂ-ಕಂಚು, ಚಿಲ್ಲಬೀಜ" (ಒಷಧಿ. ೨೮). [ ಚಿಲ್ಲ$_1$ + ಬೀಜ ]

**ಚಿಲ್ಲರೆ** (ಗು). ೧. ಸಣ್ಣ ; ಕ್ಷುದ್ರವಾದ ; ಅಲ್ಪವಾದ ; ಸಾಮಾನ್ಯವಾದ : ಎಲ್ಲಾ ದೇವರ ಗಂಡ ಅವ ಚಿಲ್ಲರೆ ದೈವದ ಮಿಂಡ (ಪುರಂದ. ೧-೬೭-೮): ಇತರೆ ಚಿಲ್ಲರೆ ಬಾಬುಗಳನ್ನೆಲ್ಲಾ ನಿರ್ವಹಿಸಬೇಕು (ಗ್ರಾಮಾಕ. ೨); "ಚಿಲ್ಲರೆ ಮಂದಿ" ಎಂದಳು ಇನ್ನೊಬ್ಬಳು (ಸಾಪೂಲೀ. ೨೪೬). (ನಾ). ೨. ಒಂದು ಪೂರ್ಣ ನಾಣ್ಯದ ಅಂಶ,–ಭಾಗ ; ಸಣ್ಣ ಪುಟ್ಟ ನಾಣ್ಯ: ಸಮಯಕೆ ದೊರೆಯುವ ರೂಪಾಯಿ ಚಿಲ್ಲರೆ ನೂರರ ಚೆಕ್ಕಿಗೆ ಮಿಗಿಲು (ಚಂದ್ರವೀ. ೧೪೯-೯೩) ; ಎಂಟಾಣೆಯ ಪಾವಲಿಯೊಂದನ್ನಿತ್ತೆ ಅವನ ಕೈಗೆ, 'ಚಿಲ್ಲರೆ ಇಲ್ಲವಲ್ಲೋ' ಎಂದು (ರೂಪಸಂ. ೮).

**ಚಿಲ್ಲರೆಯಂಗಡಿ**=ನಿತ್ಯೋಪಯೋಗದ ವಸ್ತುಗಳನ್ನು ಸಣ್ಣ ಪ್ರಮಾಣದಲ್ಲಿ ಮಾರುವ ಅಂಗಡಿ; ಸಣ್ಣ ಅಂಗಡಿ; ಕಿರುಕುಳ ಅಂಗಡಿ(ಉಕ): ನನ್ನ ತಮ್ಮ ಚಿಲ್ಲರೆಯಂಗಡಿ ಇಟ್ಟಿದ್ದಾನೆ (ರೂಢಿ). **ಚಿಲ್ಲರೆವ್ಯಾಪಾರಿ** = ನಿತ್ಯೋಪಯೋಗಿ ವಸ್ತುಗಳನ್ನು ಸಣ್ಣಪ್ರಮಾಣದಲ್ಲಿ ವ್ಯಾಪಾರ ಮಾಡುವವನು: ನಾನೊಬ್ಬ ಚಿಲ್ಲರೆ ವ್ಯಾಪಾರಿ (ಮೂರುದಾ. ೧೩೪). [ ?./ತಮಿ. ಚಿಲ್ಲಱೈ ; ಮಲ. ಚಿಲ್ಲಱ ; ತುಳು. ಚಿಲ್ಲರೆ ; ತೆಲು. ಚಿಲ್ಲರ./ಹಿಂ. ಚಿಲ್ಲರ್ ; ಮರಾ. ಚಿಲ್ಲರ್, ಚಿಲ್ಹರ್, ಚಿಲ್ಲೇರ್. / ಪ್ರಾ. ಛಿಲ್ಲರ ]

**ಚಿಲ್ಲರೆಕರ್ಚು** (ನಾ). (ಲೆಕ್ಕಕ್ಕೆ ಸಿಕ್ಕದ) ಸಣ್ಣಪುಟ್ಟ ವೆಚ್ಚ : ಚಿಲ್ಲರೆ ಕರ್ಚಿಗಾಗಿ . . . ರೂಪಾಯಿಗಳನ್ನು ಕೊಡಲು ಕಾರ್ಯಕಾರಿಸಮಿತಿಯು ನಿರ್ಧರಿಸಿದೆ (ಹುಚ್ಚುಹು. ೮೭). [ಚಿಲ್ಲರೆ + ಕರ್ಚು$_4$ ]

**ಚಿಲ್ಲರೆಕೆಲಸ** (ನಾ). ಮುಖ್ಯವಲ್ಲದ ಕೆಲಸ ; ಸಣ್ಣಪುಟ್ಟ ಕೆಲಸ : ಚಿಲ್ಲರೆ ಕೆಲಸಕ್ಕೆ ಆಳು ಇಟ್ಟುಕೊಳ್ಳಲಾಗಿದೆ (ರೂಢಿ). [ ಚಿಲ್ಲರೆ + ಕೆಲಸ ]

**ಚಿಲ್ಲರೆಜನ** (ನಾ). ಸಣ್ಣಪುಟ್ಟ ಜನ ; ಸಾಮಾನ್ಯ ಜನ : ಮಣ್ಣಿನ ಬಟ್ಟಲುಗಳಲ್ಲಿ ಮಿಠಾಯಿ ಕೊಡುತ್ತಾರೆ ಚಿಲ್ಲರೆಜನಕ್ಕೆ (ಸಾಹೇಬ್. ೩೮೧ ಅಡಿಟಿ). [ ಚಿಲ್ಲರೆ + ಜನ ]

**ಚಿಲ್ಲರೆಧಾನ್ಯ** (ನಾ). ಮುಖ್ಯವಲ್ಲದ ಕಾಳು ಕಡ್ಡಿ ; ಹುರುಳಿ, ಅವರೆ ಮೊದಲಾದ ಧಾನ್ಯಗಳು ; ಅಕ್ಕಡಿಕಾಳು : ವರ್ಷಕ್ಕೆ ಒಂದೆರಡು ಪಲ್ಲ ಚಿಲ್ಲರೆಧಾನ್ಯವೂ ಬರುವುದುಂಟು (ರೂಢಿ). [ ಚಿಲ್ಲರೆ + ಧಾನ್ಯ ]

**ಚಿಲ್ಲರೆಮಾತು** (ನಾ). ಅಪ್ರಧಾನವಾದ ಮಾತು; ಸಣ್ಣಪುಟ್ಟ ಮಾತು : ಸುಮ್ಮನೆ ಯಾಕಯ್ಯಾ ಈ ಚಿಲ್ಲರೆಮಾತನ್ನೆಲ್ಲಾ ಕಟ್ಟಿಕೊಂಡು ಕುಣಿಯುವುದು (ರೂಢಿ). [ ಚಿಲ್ಲರೆ + ಮಾತು$_1$ ]

**ಚಿಲ್ಲರೆವೆಚ್ಚ** (ನಾ). = ಚಿಲ್ಲರೆಕರ್ಚು : "ಚಿಲ್ಲರೆ ವೆಚ್ಚ; ಸಾದಿಲ್ವಾರು" (Contingency. ಪತ್ರಿನಿ. ೨೪). [ ಚಿಲ್ಲರೆ + ವೆಚ್ಚ ]

**ಚಿಲ್ಲರೆಸಾಮಾನು**(ನಾ). ಸಣ್ಣಪುಟ್ಟ ಸಾಮಾನು: ಈ ಚಿಲ್ಲರ ಸಾಮಾನುಗಳಿಗೆ ಸಂಬಳದಲ್ಲಿ ಅರ್ಧ ಖರ್ಚಾಗುತ್ತದೆ (ರೂಢಿ). [ ಚಿಲ್ಲರೆ + ಸಾಮಾನು ]

**ಚಿಲ್ಲಹರಿ** (ನಾ). ಜ್ಞಾನಪ್ರವಾಹ,-ಪರಂಪರೆ; ಚಿದ್ಭಾವತರಂಗ: ಪರವಶೀಭಾವದಿಂದರೆವಿರಿದ ಕಣ್ಗಳಿಂ ಪರಮ ಚಿಲ್ಲಹರಿ ತಲೆಗೇರಿದುನ್ಮತ್ತದಿಂ ಯೋಗೀಂದ್ರರುರೆ ಮೆರೆದರು (ಏಕೋಪು. ೪-೩೫).
[ ಸಂ. (ಚಿತ್ + ಲಹರಿ) ]

**ಚಿಲ್ಲಳೆ** 'ಚಿಲ್ಲೆಳೆ' ನೋ.

**ಚಿಲ್ಲಾಣ** (ನಾ). ೧. ಸಣ್ಣಕತ್ತಿ ; ಕಠಾರಿ. ೨. ಬಳುಕುವ ಕತ್ತಿ : (ಕ). 'ಚೀಲಣ' ಪರಾ. [ ←ತೆಲು. ಚಿಲ್ಲಾಣ, ಚಿಲ್ಲಾಡ ]

**ಚಿಲ್ಲಿಕ** (ನಾ). ಒಂದು ಬಗೆಯ ಸಸ್ಯ : "ಶ್ವಾಸನಃ – ಚಿಲ್ಲಿಕ, ನಾಯ ಚಿಲಕ" (ಓಷಧಿ. ೦೬೪). [ <ಚಿಲಿಕೆ₁ ? ]

**ಚಿಲ್ಲು₁** 'ಚಿಲ್ಲ₁' ನೋ.

**ಚಿಲ್ಲು₂** 'ಚಿಲ್ಲ₂' ನೋ.

**ಚಿಲ್ಲು₃** (ನಾ). ಬಂದೂಕಿನಿಂದ ಹೊಡೆದಾಗ ಹಾರುವ ಗುಂಡಂ; ಚರೆ: ಕಾಲಿಗೆ ಗುಂಡು ತಾಗಿ ಇಬ್ಬರು ಉರುಳಿದರು. ಒಂದು ಚಿಲ್ಲು ಬಂದು ನನ್ನ ತೊಡೆಯನ್ನು ಕೊರೆಯಿತು (ಧೂಮಮ. ೯೦). [ ? ]

**ಚಿಲ್ಲುಕಭಟಾರ** (ನಾ). ಒಬ್ಬಾತನ ಹೆಸರು : ಉತ್ತರಾಯಣ ಸಂಕ್ರಾನ್ತಿಯೊಳ್ವಕ್ಕಾಣಿಭಟಾರರ ಶಿಷ್ಯರ್ ಚಿಲ್ಲುಕಭಟಾರರ ಕಾಲಂ ಕರ್ಚ್ಚಿ ಕೊಟ್ಟ ಮರ್ಯಾದೆಯೊಳಗೆ (ಎಕ. XII, ಶಿರಾ. ೨೮-೪೦; 943).
[ ಚಿಲ್ಲುಕ₀ + ಭಟಾರ ]

**ಚಿಲ್ಲುಗುಂಡು**(ನಾ). ಬಂದೂಕಿನಿಂದ ಸಿಡಿಯುವ ಗುಂಡು; ಸಿಡಿಗುಂಡು: ಎರಡೆರಡು ಚಿಲ್ಲುಗುಂಡು ಗುರಿ ಇಡಿಸಿದಲ್ಲಿ ಚನ್ನವೀರ, ಅಕ್ಕಸಾಲೆ ನಂಜು, ಇವರಿಬ್ಬರೂ ಗುರಿಗೆ ಇಟ್ಟದ್ದು ತಗಲಿತು (ರಾಜೇಂದ್ರ. ೦೧೬).
[ ಚಿಲ್ಲು₃ + ಗುಂಡು ]

**ಚಿಲ್ಲೆ, ಚಿಳ್ಳೆ₂** (ನಾ). ನೀಚಳಾದ ಹೆಂಗಸು; ಕೆಟ್ಟ ನಡತೆಯುಳ್ಳವಳು: ಕುಪಿತಮತಿಗಳು ಖುಲ್ಲೆಯರು ಕಳ್ಳೆಯರು ಚಿಲ್ಲೆ[ಪಾಠಾಂ. ಳ್ಳೆ]ಯರು (ಬಸಪು. ೪೦-೫೪). **ಚಿಳ್ಳೆ₂**: ಕಳ್ಳೆಯರ್ ಚಿಳ್ಳೆಯರ್ ಶಾಂತರಂ ಯೆಣಿಸದಪ ರಾಧೆಯರ್ (ಪತಿಲ. ೨-೫೪). [ ಚಿಲ್ಲ₃ (< ಚುಲ್ಲ₁) + – ಎ₂ ]

**ಚಿಲ್ಲೆಳೆ, ಚಿಲ್ಲಳೆ** (ನಾ). ಒಂದು ಬಗೆಯ ಮರ: ಒಕ್ಕುಳವಪ್ಪ ಚಿಲ್ಲೆಳೆಯ [ಪಾಠಾಂ. ಚಿಲ್ಲಳೆಯ, ಚೆಲ್ಲೆಳೆಯ, ಚಿಳ್ಳೆಲೆಯ]ಕಾಯ್ಗಳೊಳಿಕ್ಕಿ ಸುರೇಂದ್ರ ಶಾಪೆಯಂ ಚಕ್ಕನೆ ಕೂಡಿರಲ್ (ಖಮದ. ೬-೨೬). **ಚಿಲ್ಲಳೆ**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ? ]

**ಚಿವ** 'ಸಿವ' ನೋ.

**ಚಿವಟು** 'ಚಿವುಂಟು' ನೋ.

**ಚಿವಡಾ, ಚಿವುಡಾ, ಚುಡುವ, ಚೂಡಾ** (ನಾ). ಹುರಿದು, ಒಗ್ಗರಣೆ ಹಾಕಿದ ಅವಲಕ್ಕಿ; ಕಾರದ ಅವಲಕ್ಕಿ: ಹೊರಗೆ ಒಬ್ಬ 'ಮಹಾರಾಜರು' ಚಹಾದ ತಪ್ಪೇಲಿಯನ್ನೂ, ಚಿವಡಾದ ರಾಶಿಯನ್ನೂ ಇಟ್ಟುಕೊಂಡು ಕುಳಿತು, ಶಿಷ್ಯರಾಗಬಂದ ಉಮೇದುವಾರರಿಗೆ ಅನುಗ್ರಹಿಸುತ್ತಿದ್ದರು (ಪೂರ್ವರಂ. ೩). **ಚಿವುಡಾ**: (ಚಿವುಡಾ) ಕಾರದ ಅವಲಕ್ಕಿ ಇವೆಲ್ಲ ರಾಜಸ ಆಹಾರದಲ್ಲಿ ಬರುವವು (ಬೃಹಜೀ. ೦೩೨). **ಚುಡುವ**: ಚಹ ಚುಡುವ ಭಕ್ಷಣವು ಗೃಹಸ್ಥನ ಲಕ್ಷಣವು (ಶಿಭ್ರಮ. ೩೦). **ಚೂಡಾ**: ಚಾಹಾದ ಜೋಡಿ ಚೂಡಾಧಾಂಗ ನೀ ನನಗಂದಾಂವಾ (ಸಖೀಗೀ. ೯೨-೦೫) : ಅಲ್ಲಿಯ ಕೆಲಸಗಾರರು ಉಪ್ಪಿಟ್ಟು, ದೋಸೆ, ಸಿರಾ, ಇಡ್ಲಿ, ಚೂಡಾ ಮುಂತಾಗಿ ತಮ್ಮ ನಿತ್ಯದ ನಾಮಾವಳಿಯ ಪಠಣಕ್ಕಾರಂಭಿಸಿರುವರು (ತುಬ್ಬಣ್ಣ. ೮). [ ←ಮರಾ. ಚಿವಡಾ. / ಪ್ರಾ. ಚಿವಿಟ್ಟ, ಚಿಮಿಢ,ಚಿವಿಟ್ಟ, ಚಿವಿಡ./ಸಂ. ಚಿಪಿಟ, ಚಿಪ್ಪುಟ ]

**ಚಿವರು₁** 'ಸಿವುಱು₁' ನೋ.

**ಚಿವರು₂** 'ಸಿವುಱು₂' ನೋ.

**ಚಿವರುಗಾಯ** 'ಚಿವುರುಗಾಯ' ನೋ.

**ಚಿವಲ್ಲಿಕೆ** (ನಾ). ಒಂದು ಬಗೆಯ ವನಸ್ಪತಿ: "ಉಚ್ಚಲ್ಲಿಕಾ–ಚಿವಲ್ಲಿಕೆ ?" (ಓಷಧಿ. ೧೬). [ ? ]

**ಚಿವಾನಿಕಳನಿ** 'ಚಿವಾನಿಕಟನಿ' ನೋ.

**ಚಿವಾನಿಕಟನಿ, ಚಿವಾನಿಕಳನಿ**(ನಾ). ಒಂದು ಗದ್ದೆಯ ಹೆಸರು: ವಾಳ್ಗಟ್ಟು ಚಿವಾನಿಕಟನಿ (ಎಕ. XVI, ತುಮಕೂ. ೯೯-೬ ; ?). **ಚಿವಾನಿಕಳನಿ**: ಇದರ್ಕೆ ಚಿವಾನಿಕಳನಿ ವಾಳ್ಗಟ್ಟುಕೊಟ್ಟೊದು (ಎಕ. XVI, ತುಮಕೂ. ೮೬-೫ ; ?).
[ ಚಿವಾನಿ₀ + ಕಟನಿ ]

**ಚಿವಿ** (ಕ್ರಿ). ಕೆರೆದುಕೊಳ್ಳು ; ತುರಿಸು : "ಕೆರೆ, ತುರಿಸು, ತಿಕ್ಕು, ಚಿವಿ. ಚಿವುಟು, ಚಿವುರು, ಚಿಗುಟು" (ಕಂನುಹು. ೮೨). [ ? ]

**ಚಿವಿಕೆ** (ನಾ). ಒಂದು ಬಗೆಯ ಗಿಡ : "ಗ್ರುಂಥಿಲಾ ವಾರಿಷ" (ಪಂಡಿತ).
[ ? ]

**ಚಿವು** (ನಾ). ಒಂದು ಅನುಕರಣ ಧ್ವನಿ; ಹಕ್ಕಿಗಳ ಚಿಲಿಪಿಲಿ: 'ಚಿವುಗುಡು' ಪರಾ.

ಚಿವುಚಿವು (ದ್ವಿರುಕ್ತಿ): ಹೂವಿನ ಗಿಡದ ಸಾಲೊಳಗೆ ಚಿವುಚಿವು ಅನ್ನುತ್ತ . . . ಹಾರಾಡುವ ಹಕ್ಕಿ ನೋಡು (ಮುಂಬಯಿ. ೨-೧೧).

**ಚಿವುಂಟು**, ಚಿಗುಂಟು, ಚಿಮುಟು. ಚಿವಟು, ಚಿವುಟು₂, ಚಿವುಡು. ಚೂಟು₁, ಜಿಗಟು₁, ಜಿಗುಟು₁ (ಕ್ರಿ). ೧. ಉಗುರುಗಳಿಂದ ಚರ್ಮವನ್ನು ಹಿಂಡು,–ಅದುಮು,–ಒತ್ತು : ಕೂಸಂ ಚಿವುಂಟುವೈ ತೊಟ್ಟಿಲಂ ತೂಗುವೈ (ನಂಬಿರ. ೧೫-೧೪೦). ೨. ಉಗುರಿನಿಂದ ಕತ್ತರಿಸು,–ಕೀಳು : ಕಾಲಕಂಧರ ಬೊಮ್ಮನೇಕಶಿರಸ್ಸನಾ ನಖರಾಗ್ರದಿಂ ಸಾಲೋಳೊಂದನದಂ ಚಿವುಂಟಲಜಂ ತದಾಮೃತನಾದನೇ (ಹಾಲಾಸ್ಯ. ೨-೧೬-೫). **ಚಿಗುಟು**: ಚಿಗುಟುವುದು, ಕಾರಣವಿಲ್ಲದೆ ಕೆಣಕಿ ಜಗಳಕ್ಕೆ ಕರೆಯುವುದು (ಕಳಹು.೧೦). **ಚಿಮುಟು**: ೧. ಅವನ ತೋಳನ್ನು ಗಟ್ಟಿಯಾಗಿ ಚಿಮುಟಿ . . . ಎಂದ (ದೇವಹಂ. ೧೪೩). **ಚಿವಟು**: ೧. ಚಿವಟುವುದೂ, ಚಿವರುವುದೂ ನಡೆಯಿತು (ಕುರಿಹಿಂ. ೭೭). **ಚಿವುಟು₂**: ೧. ಸವರಣಾ ತಲೆಗಳನರಿದು ವೈಷ್ಣವರ ಘೋಣಾಗ್ರುಂಗಳಂ ಮಿಗೆ ಚಿವುಟಿ ಬೌದ್ಧರುಗಳ ಮದೋದ್ಧತಿಯಂಬ ಕಾನನನೆ ಸವಱಿ (ಬಸಪು. ೫೨-೧೦); ಶೈಲೆ . . . ಮಮತೆಯಿಂದ ಕೆನ್ನೆಗೆ ಮೆಲ್ಲನೆ ಚಿವುಟಿ, ಅಲ್ಲಿಂದ ಪಾರಾಗಿ ಸ್ನಾನಕ್ಕಾಗಿ ಹೊರಟು ಹೋದಳು (ತೀವೋಡ. ೧೬) : ಅವನ ಹೃದಯದಲ್ಲಿ ಚಿಂತೆಯು ಚಿವುಟಿದಂತಾಗುತ್ತಿದ್ದಿತು (ಪ್ರಣಸ. ೭೧). ೨. ರಾಕ್ಷಸರ ಹುಡುಗರು . . . ಚಿಗುರುಗಳಂ ಚಿವುಟಿ (ಸೌಗಂಧಿ.೪೧೯–೯): ಕರುಳುವಳ್ಳಿಯ ಕುಡಿಯ ಚಿವುಟಿ ಸೊನೆಗರಸುತಿಹೆ ಇಂಥ ಹಾಲುಳ್ಳ ಹಾಡು (ಅರಳು. ೩೫೯–೧೧). **ಚಿವುಡು**: ೨. "ಚಿವುಡು–ನಖಚ್ಛೇದೇ" (ಶಮಧಾ). **ಚೂಟು₁**: ೧. "ನಮ್ಮನ್ನು ಚೂಟಿದರೆ ನಮಗೆ ನೋವಾಗುತ್ತದೆ; ಅದರಂತೆ ಪರರಿಗೆ" ಎಂಬ ಮಾತನ್ನು ನಾವು ಮನಸ್ಸಿನಲ್ಲಿಡಬೇಕು (ಭಾರಸಂ. ೨). **ಜಿಗಟು₁**: ೧. ಅಮ್ಮ, ನೋಡಮ್ಮ ಇವಳನ್ನ! ಜಿಗಟತಾಳೆ (ಖಳಜೀ. ೦೬೯). **ಜಿಗುಟು₁**: ೧. ಅವನ ತೋಳಿನ ಚರ್ಮ ಎದ್ದು ಬರುವಂತೆ ಜಿಗುಟುತ್ತಿದ್ದರು (ಮಸಕೂ. ೦೩). ೨. ಶೂಲಿ ತಾ ಮಗನ ತಲೆ ಜಿಗುಟಿ ಹರಿಯೇಕೆ ಪಾಲಿಸದೆ ಹೋದ (ಸರ್ವಜ್ಞ. ೨೦೫). [ ದೇ.॥ ತಮಿ. ಚಿಮಿಣ್ಣು ; ಮಲ. ಚೀಣ್ಣು ]

**ಚಿವುಕಳಿ** (ನಾ). ಖಡ್ಗಯುದ್ಧದಲ್ಲಿ ಒಂದು ವರಸೆ: ಭ್ರಮಣದಲ್ಲಿ ಹಿಮ್ಮಡಿಗಳಿಂದ ಒಂದು ಬಾರಿ ಯರಡು ಪಥಳವ ತಾಡಿಸುವುದು ಆವುದು ಉಂಟು ಆದು ಬಲ್ಲವರಿಂದ ಚಿವುಕಳಿ ಎಂದು ನುಡಿಯಲ್ಪಡುವುದು (ಖಡ್ಗಟೀ. ೪-೩೦).
[ ? ]

**ಚಿವುಕುಲಿ** 'ಚಿನುಕುಲಿ' ನೋ.

**ಚಿವುಗಣ್ಣು** (ನಾ). ೧. ಅರೆಗಣ್ಣು ; ಕಿರುಗಣ್ಣು : ಅವನ ಆ ಚಿವುಗಣ್ಣುಗಳು ಅಗಲವಾದುವು (ಜೀನಬಾ. ೩೩೨). ೨. ಸಣ್ಣದಾಗಿಸಿದ ಕಣ್ಣು : ದೂರದಲ್ಲಿ ಬರುತ್ತಿದ್ದ ಬಸ್ಸನ್ನು ಚಿವುಗಣ್ಣಿನಿಂದ ನೋಡಿದಳು (ರೂ೭).
[ ಚಿವು$_0$ + ಕಣ್ಣು (<ಕಣ್) ]

**ಚಿವುಗುಡು** (ಕ್ರಿ). ಚಿವುಚಿವು ಎಂದು ಧ್ವನಿಮಾಡು ; ಚಿಲಿಪಿಲಿಗುಂಟ್ಟು : ಕಣ್ಣ ಮುಚ್ಚಿಕೊಳ್ಳುತಾವು ಚಿಕ್ಕಿ ಚಿವುಗುಡುತಾವ ಹಕ್ಕಿ (ಹಾಡುಪಾ. ೪೧-೨).
[ ಚಿವು + ಕುಡು$_1$ (<ಕೊಡು$_1$) ]

**ಚಿವುಟು$_1$** 'ಚಿವುಂಟು' ನೋ.

**ಚಿವುಟು$_2$** 'ಚಿವುಂಟು' ನೋ.

**ಚಿವುಡಾ** 'ಚಿವಡಾ' ನೋ.

**ಚಿವುಡಿಕೆ** (ನಾ). ಜಿಗುಟಿ ಹಾಕುವಿಕೆ ; ಉಗುರಿನಿಂದ ಕತ್ತರಿಸುವಿಕೆ : ಪೊಡಮಡಿಕೆ, ತಲೆವಡಿಚಿವುಕೆ, ಡಿಕೆ (ಶಬ್ದಾನು. ೫೭೦ ಪ್ರಯೋ).
[ ಚಿವುಡು (<ಚಿವುಂಟು) + – ಇಕೆ ]

**ಚಿವುಡು** 'ಚಿವುಂಟು' ನೋ.

**ಚಿವುರು$_1$** 'ಸಿವುಱು$_1$' ನೋ.

**ಚಿವುರು$_2$** 'ಸಿವುಱು$_2$' ನೋ.

**ಚಿವುರುಗಾಯ, ಚಿವರುಗಾಯ** (ನಾ). ಉಗುರು ಮುಳ್ಳು ಮೊದಲಾದುವುಗಳಿಂದಾದ ಗಾಯ ; ಪರಚುವುದರಿಂದಾದ ಗಾಯ : ಗಲ್ಲದ ಮೇಲೆ ಚಿವುರುಗಾಯದ ಕಲೆಗಳಿದ್ದವು (ನಿರಾಥ. ೭೦). **ಚಿವರುಗಾಯ:** ನನಗೆ ಚಿವರುಗಾಯಗಳಾಗಿದ್ದವು (ಮೇದಿಮ. ೧೧೪).
[ ಚಿವುರು$_1$ (<ಸಿವುಱು$_1$) + ಗಾಯ ]

**ಚಿವ್ವು** 'ಚೀವು' ನೋ.

**ಚಿಹಣ, ಜೀಹಣ** (ನಾ). ಮೇಳಗಾತಿ (?) : ಗಿಳಿಗಳೋದುಗ್ಗಡಣೆ ಕೋಕಿಲರವಂ ಕಹಳೆ ಘಳವಿಡಿದ ಪಲಸು ಮದ್ದಳೆ[ಯು] ಮೊರೆವಳಿಕುಲಂ ಬಳಸಿ ತಾರ್ಕ್ಯಪ ಚಿಹಣ[ಪಾಠಾಂ. ಚಹಣ, ಚಿಂಹಣಿತೆ, ತಿಹಣ]ಯುರು . . . ನವಿಲು ನರ್ತನಂಗೈವವಂತಾ ವನದೊಳು (ಸೋಮಚ.೨-೮೦); (ಹದಶಾ.೩-೩೬ ನೋ); "ಹಿಮ್ಮೇಳ" (ಸೋಮಚ. ಕೋಶ). **ಜೇಹಣ:** ಲಲ್ಲೆಗೂಡುವ ಜೇಹಣಿಯ [ಪಾಠಾಂ. ಜೇವಣಗೆಯರ] ಸಂಗೀತದ ಸಂದಣಿಯೊಳ್ ಪುಷ್ಪಾಂಜಲಿಯ ಸಮಯದೊಳ್ (ಮಲುರ. ಹ. ೧೬೯-೧೧). [ ? ]

**ಚಿಹ್ನ** (ನಾ). ಗುರುತು ; ಲಕ್ಷಣ ; ಲಾಂಛನ : ಎಸೆದೊಪ್ಪಿರ್ದ ವಿಮಾನವಮಾಲೆ ಖಚರಾನೀಕಕ್ಕೆ ಚಿಹ್ನಂಗಳ್ (ಶಾಂತಿಪು. ೫-೩೮); ಗುರುಶಿಷ್ಯ ಸಂಬಂಧವಾದುದಕ್ಕೆ ಇದು ಚಿಹ್ನ (ಬಸವ. ೯೭೮) ; ಮಹೋತ್ಪಲೋತ್ಪಳನಿಮೇಷೋನ್ಮೇಷ ಚಿಹ್ನಂಗಳಿಂ ಗಡ ಬೆಳ್ದಿಂಗಳಿದೆಂಬುದೇ ಪೊಗಟ್ಟಿನೂರ್ಜಶ್ರೀಯು ಬೆಳ್ದಿಂಗಳಂ (ಜಗವಿ. ೪-೭೪). [ ಸಂ. ]

**ಚಿಹ್ನೆ** (ನಾ). = ಚಿಹ್ನ : ಇತರರಿಂದ ಅವನನ್ನು ಪ್ರತ್ಯೇಕಿಸುವ ಚಿಹ್ನೆಗಳೂ ಹೌದು (ಶೂನ್ಯಳು. ೧೨೫). [ ಸಂ. ಚಿಹ್ನ ]

**ಚಿಳಕ** (ನಾ). ಸಮೂಹ ; ಮಂಡಲ (?) : ಇಳೆಯಿಂತೀರೇಳು ಲೋಕಂಗಳೊಳವತಿಶಯಂ ಚೆಲ್ವಿನಿಂ . . . ಕುಳಾದ್ರೀಂದ್ರದಿಂದಂ ಬಳಸಿರ್ದಾ ಮೇರುವೇಳುಂ ಗ್ರಹದ ಚಿಳಕವೇಳುಂ ಯತಿಖ್ಯಾತಿಯೇಳುಂ . . . ತಂನೊಳೊಪ್ಪಲು (ಕಇ. IV, ೧-೮ ; 1204). [ ? ]

**ಚಿಳಿಚಿಟಿಲ್** (ನಾ). ಒಂದು ಅನುಕರಣ ಶಬ್ದ : ಅಗಶಿಖರಂ ಚಿಳಿಚಿಟಿಲೆನೆ [ಪಾಠಾಂ. ಛಿಳಿಛಟಿಲೆನೆ]ಮಿಗೆ ಸಿಡಿದುದು (ರಾಜಶೇ. ೫-೩೭).

**ಚಿಳಿಚಿಮ** 'ಚಿಲಿಚಿಮ' ನೋ.

**ಚಿಳಿಚಿಳಿ** (ನಾ). ಒಂದು ಅನುಕರಣ ಶಬ್ದ : ಚಿಳಿಚಿಳಿ [ಪಾಠಾಂ. ಛಿಳಿಛಿಳಿ] ಧ್ವನಿ ಛಟಛಟತ್ಕೃತಿ ಘುಳುಘುಳುಸ್ವನ (ತೊರರಾ. ೫-೮-೬೨).

**ಚಿಳಿಲ್** (ನಾ). ಒಂದು ಅನುಕರಣ ಶಬ್ದ : ಬೀಸುವ ಬಿಱುಗಾಳಿ ಕೊಳ್ವ ಮುಟ್ಟಿ ಪೊಯ್ವ ಸಿಡಿಲ್ ಚಿಳಿಲೆಂಬ ಮಿಂಚು (ಶಮದ. ೧೮೩ ಪ್ರಯೋ).

**ಚಿಳಿಬರಸು**(ನಾ). ಒಬ್ಬಾತನ ಹೆಸರು(?) : ಸಿಪನದ ರಾಜನ ಮಗನಣುಗನ್ ಚಿಳಿಬರಸು ಮಾಡಿಸಿದೊನ್ (ಸೌಇ. IX-1, ೨೨-೧೪ ; ೯೭೩).
[ ? + ಅರಸು$_2$ (<ಅರಸ$_1$) ]

**ಚಿಳ್ಕೀಳ್** (ನಾ). ಒಂದು ಅನುಕರಣ ಶಬ್ದ : ಪಂದಲೆಗಳನೆರ್ದೆಯಂ ಮೆಟ್ಟಿ ಚಿಳ್ಕೀಳೆನಲ್ ಬೆಟ್ಟುಕುಱುವನ್ನಂ ಕಿಟ್ಟು ಕಿಟ್ಟಪ್ಪಳಿಸಿ (ಶೃಂಗಾರ. ೧-೭೦).

**ಚಿಳ್ಳ** 'ಚುಲ್ಲ$_1$' ನೋ.

**ಚಿಳ್ಳನೆ**(ಅ). ತಟ್ಟನೆ; ಕೂಡಲೆ: ಉಗುರೊತ್ತಲು ನೀರಿನ ಸೆಲೆ ಚಿಳ್ಳನೆ ಮೇಲ್ ಚಿಮ್ಮುವ ಸಿರಿನೆಲವೆ (ಹೂಹಾದಿ. ೫೦-೧೧).
[ ಚಿಳ್ಳ$_0$ + – ಅನೆ$_1$ ]

**ಚಿಳ್ಳು** (ನಾ). ಒಂದು ಬಗೆಯ ಮರ : "ಕೋವಿದಾರಃ – ಕಂಚಿವಾಳ. ಚಿಳ್ಳು, ಹೇರಾಚ ?" (ಒಷಧಿ. ೪೧). [ ? ]

**ಚಿಳ್ಳೆ$_1$** 'ಚಿನ್ನಿ$_1$' ನೋ.

**ಚಿಳ್ಳೆ$_2$** 'ಚಿಲ್ಲೆ' ನೋ.

**ಚಿಳ್ಳೆ$_3$** (ನಾ). ಸಣ್ಣದಂ; ಪುಟ್ಟದು; ಮರಿ : "ಕರು, ಕುನ್ನಿ, ಮರಿ, ಚಿಳ್ಳೆ, ಚಿಣ್ಣ, ಪಿಳ್ಳೆ, ಕಂದ . . . ಹುಡುಗ" (ಕಂಪುಹು. ೯೦).
**ಚಿಳ್ಳೆಪಿಳ್ಳೆ** = **ಚಿಳ್ಳೆ$_3$** : ಎಲ್ಲರ ಮನೇಲೂ ಚಿಳ್ಳೆಪಿಳ್ಳೆಗಳೇ ಇರೋದು (ಮರಳಿ. ೯೮). [ ? ]

**ಚಿಳ್ಳೆಕೀತ** (ನಾ). ಕೀಟಲೆಮಾಡುವ ಒಂದು ಬಗೆಯ ಬೆಂತರ,–ಅತಿಮಾನುಷವ್ಯಕ್ತಿ : Robin good fellow ಎಂಬ ಪಿಳ್ಳೆಯಕ್ಷ, ಚಿಳ್ಳೆಕೀತ (Puck. ೫೦೩೭). 'ಕಿಳ್ಳಿಕೇತ' ಪರಾ. [ ಚಿಳ್ಳೆ$_3$ + ಕೀತ$_2$ ]

**ಚಿಳ್ಳೆಪಿಳ್ಳೆರಾಯ** 'ಚೆಲ್ವಪಿಳ್ಳೆರಾಯ' ನೋ.

**ಚಿಱಿಯಪೊಟಲು** (ನಾ). ಒಂದು ಊರಿನ ಹೆಸರು : ಚಿರುಪಿಯು ಚಿನ್ನಕುಣ್ಯೆಯು ಚಿಱಿಯಪೊಟಲು ವುಳುವಟ್ಟು ನಾಲ್ಕೂರುಮಿಟ್ಟು ನಡೆದ ಕೆಲ್ಲಿಗೊಡಂಗೆಯೊಡ್ಡಿನ ಕೆಟಗೆ (ಸೌಇ. IX-I, ೨೬-೦೦ ; 950).
[ ಚಿಱಿ$_0$ + ಪೊಟಲು (<ಪೊಟಲ್) ]

**ಚಿಱು, ಚಿರು** (ನಾ). ಕಿಱಿದು ಎಂಬುದಕ್ಕೆ ಸಮಾಸದಲ್ಲಿ ಬರುವ ಸಂಕ್ಷಿಪ್ತರೂಪ: ಚಿಱುನನೆ ಚಿಲ್ಲರಲ್ದ ಕಳಿಪೂವಳಿವೂ . . . ಕೀಡೆ ಕರ್ದುಂಕಿದ ಪೂ(ತ್ರಿಪುವಿ. ೪೨-೬). 'ಚಿಱುಗುಳ್ಳ' ಪರಾ. **ಚಿರು :** 'ಚಿರಂಗುಳ್ಳ' ಪರಾ. [ <ಕಿಱು$_2$ ]

**ಚಿಱುಗುಳ್ಳ, ಚಿರುಗುಳ್ಳ** (ನಾ). ಒಂದು ಬಗೆಯ ಮರ : ಇಪ್ಪೆವಕುಳಂ ಕರಿಯವೀಳೆ ಚಿಱುಗುಳ್ಳಂ . . . ಮೊದಲಾದುತ್ತುಲ್ಲ ತರುಸಂತತಿಗಳಿಂದೆಸೆವುದುಚ್ಚಳಿತ ನಿರ್ಝರ ವಿಪುಂಜತತಿ ರಂಜಿಸುವ ಬಿಂಜಂ (ಉದ್ಭಟ. ೨-೪೨).
**ಚಿರುಗುಳ್ಳ :** "ನಿದಿಗ್ಧಿಕಾ, ಸ್ಪೃಶ್ರೀ . . . ರಾಷ್ಟ್ರಿಕಾ–೧೦ ಹೆಗ್ಗುಳ್ಳದ ಹೆಸರುಗಳು ಮುಳ್ಳುಳ್ಳ ಚಿರುಗುಳ್ಳ" (ಸಿದ್ಧಾಂತಿ. ೦೦೬).
[ ಚಿಱು + ಗುಳ್ಳ ? ]

**ಚಿಱುಬಾಳೆ** (ನಾ). ಒಂದು ಬಗೆಯ ಬಾಳೆ : ನಂದನಾದ್ಯಾರಾಮಂಗಳೊಳು . . . ಚಿಱುಬಾಳೆ . . . ಸಾರ್ವರ್ತುಕಮಾದ ಫಲಂಗಳುಳ್ಳ ತರುನಿಕರಂಗಳುಂ (ವಿವೇಕ. ೨೦೦). [ ಚಿಱು + ಬಾಳೆ$_1$(<ಬಾೞೆ) ]

**ಚಿಱುವೇರು, ಚಿರಿವೇರು** (ನಾ). ಕೆಂಪುಬಣ್ಣವನ್ನು ಒದಗಿಸಿಕೊಡುವ ಒಂದು ಬಗೆಯ ಬೇರು,–ಮೂಲಿಕೆ : ಚಿಱುವೇರಿನ ಬಣ್ಣಂ ಮಿಗೆ ಪಱಿಯಲ್ಕಂಬರವ ಬಿಡದುಮಾ ತೆಱದಿಂದ ತಾಂ ತುಱುಗಿರ್ಪ ನೇಹ ವಾತನು ಮಱವನ್ನಂ ಬಿಡದು ಮೈದೊಱದುಮಾಯಾಸಂ (ಕವಿಜಿ. ೪-೨೪).
**ಚಿರಿವೇರು :** ಚಿರಿವೇರು, ಛಾಯಾವೇರು (ಮೃಡಿಗಿ. ೫೭-೦೦೫೫). 'ಚಾಯಬೇರು' ಪರಾ. [ ←ತೆಲು. ಚಿಱುವೇರು, ಚಿರುವೇರು ]

**ಚಿಟಿಯು** (ನಾ). ಒಬ್ಬಾತನ ಹೆಸರು : ಮಾರಾನ್ತ ರಿಪುಬಲದೊಳ್ತಾಗಿ × × × ಜೀದು ಸರ್ಗ್ಗಸ್ತನಾದಂ ಚಿಟಿಯುಂ (ಎಕ. X, ಮುಳುಬಾ. ೮೬-೩; ಸು. 767 ?). [ ? ]

**ಚೀಕಟಿಕೆ** (ನಾ). ಒಂದು ಬಗೆಯ ಗಿಡ : ವಿರೇಕಕ್ಕೆ:-ನುಗ್ಗೆಯ ಸೊಪ್ಪು, ಹರುವೆ ಸೊಪ್ಪು . . . ಚೀಕಟಿಕೆ, ತ್ರಿಫಲೆ ಇವು ಪ್ರತ್ಯೇಕವು ಒಂದೊಂದು ತೂಕ (ವಿವ್ಯವಿ. ೧೪೩). [ ? ]

**ಚೀಕರಿ** 'ಸೀಕರಿ' ನೋ.

**ಚೀಕರಿವೋಗು** 'ಸೀಕರಿವೋಗು' ನೋ.

**ಚೀಕಲು** 'ಸೀಕಲು' ನೋ.

**ಚೀಕಾತು** (ನಾ). ಅಜಿಗಿಜಿಯಾದುದು; ಮುದ್ದೆ: ತುಳಿದರು ಕೇರಿದರು ಕೆಡಹಿದರು ಸತ್ವದಿ ಚೀರಿದರು ಚೀಕಾತು ಮಾ ಡಿ ದ ರ ರ್ಧ ನಿ ಮಿ ಷ ದ ಲಿ (ಕೋಗಯ. ೩೩-೪೮). [ ←ಹಿಂ. ಮರಾ. ಚಿಕಾಟ್ ]

**ಚೀಕು₁** 'ಸೀಕು₁' ನೋ.

**ಚೀಕು₂** 'ಸೀಕು₂' ನೋ.

**ಚೀಕೊಳುವೆ** 'ಚೀಕೊರ್ಟಾವಿ' ನೋ.

**ಚೀಜು, ಚೀಸ್, ಚೀಸು** (ನಾ). [ಸಂಗೀತ] ಹಾಡು ; ಸಂಗೀತಕೃತಿ : ನಿನ್ನಿನ ಚೀಜು ರುಚಿ ಹತ್ತಲಿಲ್ಲೋ ಭರಮಾ (ರಕ್ತಧ್ವ. ೩೦೧). **ಚೀಸ್ :** ರೋಷನ್ . . . ಹಿತವಾಗಿ ಒಂದು ಚೀಸ್ ಹಾಡಿದಳು (ರೂಪಸ. ೪೯). **ಚೀಸು :** ಮಾರವದಲ್ಲಿ ಒಂದು ಚೀಸು, ಬೇಹಾಗ್, ಶಹನಗಳಲ್ಲಿ ಎರಡು ದೇವರ ನಾಮುಗಳನ್ನು ಹಾಡಿದಳು (ರೂಪಸ. ೨೨೩).
[ ←ಪಾರ. ಹಿಂ. ಮರಾ. ಚೀಜ್ ]

**ಚೀಟಾಡು** (ಕ್ರಿ). ಇಸ್ಪೀಟು ಆಟವನ್ನು ಆಡು ; ಗಂಜೀಪು ಆಡು : ಬೇಸರದಿ ಕುಳಿತಿರಲು, ರಾಯರೆ, ಏಕೆ, ತುಸ ಹೊತ್ತು ಚೀಟಾಡಬಾರದೇ ಎನ್ನುವರು (ನವರಾ. IV, ೨೦-೧೧). [ ಚೀಟು₂ + ಆಡು₁ ]

**ಚೀಟಾಳು** (ನಾ). ಸಣ್ಣ ಆಳು, – ಸೇವಕ : ಆಟಾಳಿಗೊಂದು ಚೀಟಾಳು (ಗಾದ). [ ಚೀಟು₃(<ಚಿಟ್ಟು₁) +ಆಳು₃(<ಆಳ್₃) ]

**ಚೀಟಿ₁, ಚೀಟು₁** (ನಾ). ನಾನಾ ಬಣ್ಣಗಳ ಚಿತ್ರದ ನಮೂನೆಯನ್ನೊಳಗೊಂಡ ಹತ್ತಿಯ ಬಟ್ಟೆ ; ಬಣ್ಣದ ಚಿತ್ರಗಳ ಬಟ್ಟೆ: ಜಂಗಮ ದೇವರ ಜಂಗಿನ ಪಠವು ಲಿಂಗ ಧರಿಸೋ ಕಾವೀ ವಲ್ಲಿ ಜೋಗಿಗಳ್ ಹೊದೆವೋ ಚೀಟೀದಟ್ಟಿ (ನಾಪದ. ೧೯೨) ; ಲಾಂಗ್‌ಕ್ಲಾತ್, ಚೀಟಿ, ವಾಯಿಲ್, ಮಸ್ಲಿನ್, ಮಲ್ ಇವನ್ನು ಸಾದಾ ನೇಯ್ಗೆ ಉಪಯೋಗಿಸಿ ನೇಯುವರು (ಗೃಹವಿ. ೭೩). **ಚೀಟು₁ :** (ಮುಂಬಯಿ. ಕಿ. ೫-೨೯೭).
[ ?. / ತಮಿ. ಮಲ. ಚೀಟ್ಟ; ತೆಲು. ಚೀಟಿ./ಹಿಂ. ಛೀಂಟ್, ಛೀಟ್ ; ಮರಾ. ಚೀಟ್, ಛೀಟ್./ಇಂ. Chintz ]

**ಚೀಟಿ₂** 'ಚೀಟು₂' ನೋ.

**ಚೀಟಿಬಟ್ಟೆ** (ನಾ). = ಚೀಟಿ₁ : ಬಣ್ಣ ಬಣ್ಣಗಳ ಚಿತ್ರದ ನಮೂನೆಗಳಿಂದ ಬಣ್ಣ ಕಚ್ಚುವಂತೆ ಛಾಪಿಸಿ ಸಾ., ಗಾಜುಮೆರಗು ಕೊಟ್ಟು ತಯಾರಿಸಿದ ಹತ್ತಿಯ ದಾರದ ಬಟ್ಟೆ(ಯು) ಚೀಟಿಬಟ್ಟೆ(ಯು) (Chintz. ಇಂಕನಿ).
[ ಚೀಟಿ₁ + ಬಟ್ಟೆ₂ ]

**ಚೀಟು₁** 'ಚೀಟಿ₁' ನೋ.

**ಚೀಟು₂, ಚೀಟಿ₂** (ನಾ). ೧. (ಬರೆಹವಿರುವ) ಸಣ್ಣ ಕಾಗದ ; ಪತ್ರ: ಪಂಚಾಕ್ಷರಿಯ ಮಂತ್ರವೇ ಮಹಾಘನವೆಂದು ಸಂಚಿಕೆಯ ಚೀಟಿನಿಂ ಬರೆದದು ತೂಗಿ ಮೆಚಿ್ಚವಂ (ಚಬಪು. ೬೨-೭೭); ಕಂದಾಯದ ಚೀಟು ಬರೆಸಿ . . . ಹರಹರ ರೈತರಿಗೂ ಚೀಟಿಗಳು ಕೊಡುವರು (ಮಹಾವಂ. II, ೬೦). ೨. ಆಜ್ಞಾಪತ್ರ ; ಅಪ್ಪಣೆ ಚೀಟಿ : ಕೈಯೊಳಗಣ ಹೊಚಿ್ಚಯ ಬಿಟ್ಟು ತೋಜು ಕೆಡದಿಹರೆ ಜಗದೊಡೆಯನ ಚೀಟ ಕೊಳ್ಳಿ ಬಂಕೇಶ್ವರಲಿಂಗದಾ (ಸುಂಕಬಂ.೨) ; ಕಾಲನ ಚೀಟುಗಳು ಕವಿವಂತೆ ಕವಿದವು ಪರಿ ಶರವ್ರಾತ (ನಿಘಾಗ. ೧೦-೬೫-೨೭) ; ಗುರುಸುತಂ ಯಮನವರ ಚೀಟುಗಳ್ ಕವಿವಂತೆ ಕವಿಸಿದಂ ಕರ್ಗಣೆಯ ವೈರಿಗಳ ನಾಯಕರಿಗೆ (ತುರಂಗ. ೬೪-೫). ೩. ಭೀತಿ, ರೋಗ ಮೊದಲಾದ ಉಪದ್ರವಗಳ ಪರಿಹಾರಕ್ಕಾಗಿ ಉಪಯೋಗಿಸುವ ಯಂತ್ರಗಳನ್ನು ಬರೆಯುವ ತಾಳೆಗರಿ, ತಗಡು ಮೊದಲಾದುವು:ಯಾ ಮಂತ್ರವಂ ನೂರೆಂಟು ಬಾರಿ ವಿಧಿಯಿಂದ ಜಪವಂ ಮಾಡಿ ಚೀಟನಲ್ಲಿ ಬರದು ಉದ್ಯಾನ ಮಧ್ಯದಲ್ಲಿ ಹೂಳಲು ಸಮಸ್ತವಾದ ದುಷ್ಟ ಜಂತುಗಳು ನಾಶವನ್ನೈದುವವು (ಸೌಗಂಧಿ. ೪೨೮-೧೭) ; ಭಟ್ಟರು . . . ಮೂರು ಮಕ್ಕಳಿಗೂ ಚೀಟುಗಳನ್ನು ಕಟ್ಟಿ, ಮಂತ್ರೋದಕವನ್ನು ಪ್ರೋಕ್ಷಣೆ ಮಾಡಿದರು (ಪಂಜಪಂ. ೪೦) ; ಆಚಾರ್ರು . . . ಚೀಟು ಕಟ್ಟುವ, ದಾಟು ತೆಗೆಯುವ ಅಥವಾ ಅನ್ನ ತೆಗೆದುಹಾಕುವ ನೆಪದಲ್ಲಿ ಬುಂಡೇದಾಸನ ಪಡಖಾನೆ ಕಡೆಗೆ ಹೋಗಿ ಬರುತ್ತಿದ್ದರು (ನನ್ನೂರು. ೧೮೯). ೪. ಅಂಚೆಯ ಚೀಟಿ ; ಸ್ಟಾಂಪು : ಈ ದುಷ್ಟನು . . . ತನ್ನ ಮನೆಯೊಳಗಿನ ವೀರಾಗ್ರಣಿಗಳನ್ನೂ . . . ಅಜ್ಜಿಗಳನ್ನೂ ವಿಲಾಯತಿ ಚೀಟುಗಳಂತೆ ಅಗ್ಗವಾಗಿ ಮಾರಿಬಿಟ್ಟನು (ಮೋಹಿನೀ. ೧೩೨). ೫. ದಾಖಲೆಪತ್ರ ; ರಿಕಾರ್ಡು : ಶ್ರೀನರಸಿಂಹ ಭಾರತೀವೊಡೆಯರ ದಿವ್ಯನಾಮುದಲ್ಲಿ ಮುದ್ರೆ ಚೀಟು ತಾಂಭ್ರ ಶಾಸನ (ಎಕ. VIII, ತೀರ್ಥಹ. ೧೫೩-೧೧ ; ಸು. 1480) ; ಧರಣಿಪತಿಗಳು ತೆರುವ ಕಪ್ಪಕಾಣಿಕೆಯ ಮುಡುಪು ಬೊಕ್ಕಸ ಚೀಟು . . . ಬಿಡದೆ ಕೇಳಿದನು (ಶರಲೀ. ೧೬೨-೭). ೬. ಇಸ್ಪೀಟು ; ಗಂಜೀಪು : ಸಂತೆಗೆ ಚೀಟು, ಮುಂಗೈಗೆ ಬಳೆ (ಗಾದ). 'ಚೀಟಾಡು' ಪರಾ. **ಚೀಟಿ₂ :** ೧. ಕಡೆಯ ಸಂಬಳಕೆಲ್ಲ ಮುಕುತಿಸಾಧನವನ್ನು ಕೊಡುವಂತೆ ತಿರುಗದ ಚೀಟಿ ಬರಿಸಿಕೊಟ್ಟ (ಪುರಂದ. ೨-೧೫-೪) ; ಪೆಸರ ಬರೆದೊಂದು ಚೀಟಿಯೊಳಿರಿಸಿ (ಕೊಟ್ಟೂರುಬ. ೯-೫೯) ; ಸಾಯುವಾಗ ಒಂದು ಚೀಟಿ ಬರೆದು ಕೊಟ್ಟಿದ್ದಾನೆ, ಎಂದು ಆ ಚೀಟಿಯನ್ನು ಕೊಟ್ಟನು (ಬತ್ತೀಪು. ೨೪) : ರಾಯರ ಚೀಟಿಯು ಬಂದಿತ್ತು (ರಾಯಕ. ೩೭). ೭. ಔಷಧಿಸೀಸೆ ಮೊದಲಾದುವುಗಳ ಮೇಲೆ ಗುರುತಿಸಲು ಅಂಟಿಸುವ ಸಣ್ಣ ಕಾಗದ ; ಗುರುತಿನ ಚೀಟಿ : ಪ್ರತಿಯೊಂದು ಪಾತ್ರೆಯ ಮೇಲೂ ಆ ಪಾತ್ರೆಯಲ್ಲಿರುವ ಸಾಮಾನಿನ ಚೀಟಿ ಅಂಟಿಸಿದರೆ . . . ತೆಗೆದುಕೊಳ್ಳಲು ಸುಲಭವಾಗುವುದು (ಅಡುಸಾ. ೫೨). ೮. ಹಣದ ಕಂತಿನ ರೂಪದಲ್ಲಿ ನಡೆಸುವ ವ್ಯವಹಾರ: ನಮ್ಮ ಕಚೇರಿಯಲ್ಲಿ ಒಂದು ಚೀಟಿ ಆರಂಭಿಸಿದ್ದೇವೆ (ರೂಢಿ). ೯. ಪ್ರಯಾಣದಲ್ಲಿ ಕೊಂಡುಕೊಳ್ಳುವ ಟಿಕೇಟು : ಬಸ್ಸಿನಲ್ಲಿ ಚೀಟಿ ತೆಗೆದುಕೊಳ್ಳದೆ ಪ್ರಯಾಣ ಮಾಡಬಾರದು(ರೂಢಿ). ೧೦. (ಉಕ) ಔಷಧಿಯ ಪುಡಿ, ಮಾತ್ರೆ ಮೊದಲಾದುವನ್ನು ಕಟ್ಟಿದ ಕಾಗದದ ಚಿಕ್ಕ ಪುಡಿಕೆ.

**ಚೀಟಿಬರು**= ೧. ಚೀಟಿಯ ಹಣ ಕೈಸೇರು: ಈ ತಿಂಗಳು ನನಗೆ ಚೀಟಿ ಬಂತು (ರೂಢಿ). ೨. (ಆಲಂ) ಸಾವು ಬರು : ಇನ್ನೇನು ಹುಷಾರಾದರು ಎಂದುಕೊಳ್ಳುವಷ್ಟರಲ್ಲಿಯೇ ಚೀಟಿ ಬಂದು ಬಿಟ್ಟಿತು (ರೂಢಿ).
[ ?./ತಮಿ. ಮಲ. ಚೀಟ್ಟು ; ತುಳು. ಚೀಟ್, ಚೀಟಿ ; ತೆಲು. ಚೀಟಿ./ ಇಂ. Chit ]

**ಚೀಟು₃** 'ಚಿಟ್ಟು₁' ನೋ.

**ಚೀಡೆ** (ನಾ). ಎಣ್ಣೆ ಅಥವಾ ತುಪ್ಪದಲ್ಲಿ ಕರಿದ ಗೋಲಿಯಾಕಾರದ ಸಿಹಿತಿಂಡಿ : (+).
[ ದೇ.॥ ತಮಿ. ಚೀಟೈ ; ಮಲ. ಚೀಡ ; ತೆಲು. ಚೀಡೆ ]

**ಚೀಡೆಹುಳು** (ನಾ). ಸಣ್ಣಹುಳು ; ಕ್ರಿಮಿ : ನಿಜವಾಗಿ ನಮ್ಮ ದೇಹಾತ್ಮಗಳನ್ನು ತಿಂದುಹಾಕಿದ, ತಿನ್ನುತ್ತಿರುವ ಚೀಡೆಹುಳು ಉಪೇಕ್ಷೆ(ಸಾಹಿಜೀ. ೮೫). 'ಕೀಡೆ' ಪರಾ. [ ಚೀಡೆ₀ (<ಕೀಡೆ) + ಹುಳು₂ (<ಪುಟು₁) ]

**ಚೀಣ** (ನಾ). = ಚೀನ₁. [ <ಸಂ. ಚೀನ ]

ಚೀಣಾಂಬರ (ನಾ). = ಚೀನಾಂಬರ : ಪಟುಪಟಾವಳಿ ಚೀಣಿ ಚೀಣಾಂಬರ ನ್ಯಾಯ ವ್ಯವಹಾರ ಭರವರಾಗಿಯುಂ (ಎಕ. XVI, ಗುಬ್ಬಿ. ೭೪-೪೬ ; ?).
[ <ಸಂ. ಚೀನಾಂಬರ ]

ಚೀಣಾಕಾಗದ (ನಾ). (ಹಿಂದೆ) ಚೀನಾದೇಶದಿಂದ ಬರುತ್ತಿದ್ದ ಕಾಗದ ; ಬಿಳಿಕಾಗದ: ಬಿಳಿಯ ಕಾಗದಕ್ಕೆ ಚೀಣಾಕಾಗದವೆಂದು ಹೆಸರು(ಗುಣಸಾ. ೪).
[ <ಚೀಣ + ಕಾಗದ ]

ಚೀಣಿಕಾಯಿ 'ಚೀನಿಕಾಯಿ' ನೋ.

ಚೀತ್ಕರಣ (ನಾ). = ಚೀತ್ಕಾರ ೧. 'ಚೀತ್ಕರಿಸು$_1$' ಪರಾ. [ ಸಂ. ]

ಚೀತ್ಕರಣೆ (ನಾ) = ಚೀತ್ಕಾರ ೨ : ಉರುರಭಸವಳ್ಳಿಱಿಯೆ ರಥ ಚೀತ್ಕರಣೆ ರಥಪಯಹೇಷಿತದ ನಿಷ್ಠುರನಿನಾದದಲೌಕಿ ಹೊಕ್ಕನು ಶಲ್ಯನಾಹವವ (ಕುವ್ಯಾಶ. ೩-೨೫). [ ಸಂ. ಚೀತ್ಕರಣ ]

ಚೀತ್ಕರಿಸು$_1$ (ಕ್ರಿ). (ಭಯ, ದುಃಖ ಮೊದಲಾದುವುಗಳಿಂದ) ಗಟ್ಟಿಯಾಗಿ ಅರಚು ; ಆರ್ತನಾದ ಮಾಡು ; ಕೂಗು : "ಅಯ್ಯೋ" ಎಂದು ಚೀತ್ಕರಿಸಿದಳು (ಕಾವೇರಿ. ೨೦೫). [ ಚೀತ್ಕರಣ + – ಇಸು$_3$ ]

ಚೀತ್ಕರಿಸು$_2$ 'ಸೀತ್ಕರಿಸು' ನೋ.

ಚೀತ್ಕಾರ (ನಾ). ೧. ಗಟ್ಟಿಯಾಗಿ ಅರಚುವ ಶಬ್ದ ; ಆರ್ತನಾದ : ಈ ಚೀತ್ಕಾರಗಳಿಂದ ಆ ಮಹಾಧೀರನ ಎದೆಯೂ ಜರ್ಜರಿಸಿತು(ಶಾಂತಲಾ. ೭೩); ಚೀತ್ಕಾರ ಕೇಳಿದಾಗ ಮನೆಯ ಪರಿಸ್ಥಿತಿಯೇ ಬದಲಾಗಿ ಹೋಯ್ತು (ಪದ್ಮಸ. ೧೮೩). ೨. ರಥವು ಚಲಿಸುವಾಗ ಉಂಟಾಗುವ ಧ್ವನಿ : ರಥಾಂಗ ರಥಚೀತ್ಕಾರಂ ಶಿಖೀಮುಖ ಝೇಂಕಾರಂ . . . ಬಳೆದಾಗಸಮಂ ಮುಸುಂಕೆ (ಗಿರಿಕ. ೮-೮ ವ) ; ಘುಳುಘುಳಿಪ ಚೀತ್ಕಾರ ಕೋಳಾಹಳದ ಸೂತನ ರೇಖೆಯಲಿ ಭಟಕುಲಲಲಾಮನ ತೇರು ಬಂದುದು (ಕುವ್ಯಾದ್ರೋ. ೪-೫೦).
[ ಸಂ. ]

ಚೀತ್ಕೃತಿ (ನಾ). = ಚೀತ್ಕಾರ ೧ : ವಿಹಗ ಸಮುತ್ಕರಚೀತ್ಕೃತಿ ತೀವಿ ವಿಪಿನದೊಳ್ಪಿಡದೆಸೆಗುಂ (ರಾಜಶೇ. ೫-೬೨). ೨. = ಚೀತ್ಕಾರ ೨ : ತುರಗ ಗರ್ಜನೆ ರಥದ ಚೀತ್ಕೃತಿ ವರಧನುಷ್ಟಂಕಾರ (ಕುವ್ಯಾವಿ. ೬-೬೩) : ಧೂಳಿಯುಂ ಮೇಣ್ ಚಕ್ರಚೀತ್ಕೃತಿಯುಮಂ ತವಿಸಿ, ಪಿಂದೋಡಿದರ್ (ಶ್ರೀರಾಮಾ. ೯೩-೪೨೭). [ ಸಂ. ]

ಚೀನ$_1$(ನಾ). ೧. ಒಂದು ದೇಶದ ಹೆಸರು : ನೀರರುಹವದನೆ ಸುಕುಮಾರೆ ಮಧುರಪ್ರಿಯೆ ವಿಚಾರವಿದೆಯುವಳೆ ಚೀನದ ಮಾನಿನಿ (ಜನವ. ೬-೩೮) : ಇಂಥ ಸುದ್ದಿಯನ್ನು ಚೀನದಲ್ಲಿ ದೊರಕಿಸುವುದು ಕಠಿನವಾದ್ದರಿಂದ ಈ ವರದಿ ಬಹಳ ವಿರಳವಾಗಿದೆ (ಚೀನಬಾ. ೩೯೫) : ಚೀನಾಕ್ಕೆ ಪಶ್ಚಿಮದಲ್ಲಿ ಮಧ್ಯ ಏಷ್ಯದ ಎತ್ತರವಾದ ಪ್ರಸ್ಥಭೂಮಿಗಳಿವೆ (ಭೂವಿವ. ೪೧೮). ೨. ಚೀನಾ ದೇಶದಲ್ಲಿ ತಯಾರಾದ ರೇಷ್ಮೆ,–ರೇಷ್ಮೆಯ ಬಟ್ಟೆ : ಸೌಧಾಳಿಯೊಳ್ಗುಡಿಯಾಯ್ತು ಚೀನದ ಸುಯ್ಯತಾಣದ ಪಟ್ಟೆ (ಪಂಪಭಾ. ೧೪-೧೫) : ನಾಳೆ ವಿನೋದದಿಂದೊಡನಿರ್ವರುಂ ಮುತ್ತಿನಾಭರಣಂಗಳಂ ನೆಱೆ ತೊಟ್ಟು ಚೀನಮನುಟ್ಟು (ಧರ್ಮಾಮೃ. ೩-೩೬) : ಪಸುರ್ಮಡಿಯ ಬೆಳ್ಳಿಪಟ್ಟೆಯ ಚಿನ್ನದಾರ ಹೊಂಬಿಸಿಲ [ ಚೀ ] ನಂ [ಪಾಠಾಂ. ಲಂಜಿನಂ, ಲಚಿಹ್ನಂ ಲಜೀವಂ,] (ಸಿದ್ಧರಾ. ೮-೫೭). ೩. ಒಂದು ಬಗೆಯ ಜಿಂಕೆ : "ಚೀನಃ–ಹಕ್ಕೀಬಣ್ಣವಾಗಿ ೩೦ ಅಂಗುಲದುದ್ದವಿರುವ ದುಪ್ಪೀ ಹೆಸರು" (ಸಿದ್ಧಾಂತಿ. ೧೩೬). [ ಸಂ. ]

ಚೀನ$_2$ (ನಾ). ಒಂದು ಬಗೆಯ ವಾದ್ಯ : ಯುದ್ಧಸಮಯದಲ್ಲಿ ಬಳಸುತ್ತಿದ್ದ ವಾದ್ಯಗಳೂ ಹಲವಾರು : ಭೇರಿ, ಕೊಂಬು, ಚೀನ, ಢಕ್ಕೆ . . . ಶಂಖವಾಸ, ಇತ್ಯಾದಿ (ನಂಜುಂಡ. ೧೩೦). [ ? ]

ಚೀನಕ (ನಾ). = ಚೀನಿಕರ್ಪೂರ : "ಚೀನಕಃ– ಚೀನಿಕರ್ಪೂರ"(ಓಷಧಿ. ೫೭).
[ ಸಂ. ]

ಚೀನಗರ್ಪೂರ (ನಾ). ಚೀನಾ ದೇಶದಿಂದ ಬರುವ ಕರ್ಪೂರ ; ಪಚ್ಚ ಕರ್ಪೂರ (?) : "ಕ್ರು(ಕೃ) ?ತ್ರಿಮಃ – ಅಟ್ಟುಪ್ಪು, ಚೀನಗರ್ಪೂರ, ಕರ್ಕಸ್ಸೈಲ" (ಓಷಧಿ. ೩೮). 'ಚೀನಿಕರ್ಪೂರ' ಪರಾ.
[ ಚೀನ$_1$ + ಕರ್ಪೂರ (<ಕಪ್ಪುರ) ]

ಚೀನಚೀಳ (ನಾ). = ಚೀನಾಂಬರ: ಪೂತೆಲವಕ್ಕೆ ಪೌರವನಭೂರುಹವೊಪ್ಪುವ ಮುಳ್ಳಿಗುಚ್ಚಳಕ್ಕೀತನ ಚೀನಚೀಳವರುಣೋಪಲಭಿತ್ತಿಗೆ . . . ದೊರೆಯಾಗಿ ತೋಱಿದತ್ತು . . . ರಕ್ತಸೇಕದಿಂ (ಚಂದ್ರಪು. ೬-೩೭).
[ ಚೀನ$_1$ + ಚೀಳ ( = ಚೇಲ$_1$) ]

ಚೀನವಸನ (ನಾ). = ಚೀನಾಂಬರ : ಬರೆ ತೆಗೆದಪ್ಪ ಚೀನವಸನಾಂಚಲಮಂ ನಸು ನೂಂಕಿ (ರಾಜಶೇ. ೪-೬೬) : ಪಿಂದೆಸೆಗೋಡುವುದು ಬಳಕಿಗೈದದ ಮನವೇನೆಂದಪೆನೊ ಪವನನಿದಿರೊಳ್ ತಂದ ಪತಾಕಿಕೆಯ ಚೀನವಸನವಿದೆಂಬೊಲ್ (ಶಾಕುಂತ. ೧೮-೩೪). [ ಚೀನ$_1$ + ವಸನ ]

ಚೀನಾಂಬರ (ನಾ). ಚೀನಾದೇಶದಲ್ಲಿ ತಯಾರು ಮಾಡಿದ ಬಟ್ಟೆ,– ವಸ್ತ್ರ,–ರೇಷ್ಮೆವಸ್ತ್ರ : ರುದ್ರಾಕ್ಷಿಯ ಧರಿಸಿ ಮಿಸುಪ ಚೀನಾಂಬರ ದುಡಿಗೆಯನೆಲ್ಲ ತ್ಯಜಿಸುತೆಳಗಾವಿಯನುಟ್ಟು (ಮೋಳಿಪು. ೫-೫) : ಕಳೆದು ತಣ್ಣನಸ ವಸ್ತ್ರಗಳ ಚೀನಾಂಬರಗಳನುಟ್ಟು ಸತಿಯರೊಪ್ಪಿದರು (ಕಂಸವಿ. ೨೫-೧೩೪) : ಹಾಲ್ನೊರೆಯಂತೆ ಶುಭ್ರವಾದ ಚೀನಾಂಬರಗಳನ್ನುಡಿಸಿ, ಅಷ್ಟೇ ಶುಭ್ರವಾದ ವಕ್ಷವಸ್ತ್ರವನ್ನು ಲಘುವಾಗಿ ಬಿಗಿದರು (ಶಾಂತಲಾ. ೧೦೪).
[ ಚೀನ$_1$ + ಅಂಬರ ]

ಚೀನಾಂಶುಕ (ನಾ). = ಚೀನಾಂಬರ : ವಿಚಿತ್ರ ಚೀನಾಂಶುಕರುಚಿರಂಗಳುಂ . . . ಉತ್ಪಳಖೇಟಮುಂ ಪುಗುವಾಗಳ್ (ಆದಿಪು. ೪-೫೮ ವ) : ಚಾರು ಚೀನಾಂಶುಕ ವಿತಾನ ಶೋಭಾ ಸನಾಥದೊಳ್ . . . ಸುಖಸುಪ್ತನಾಗಿ (ವರ್ಧಮಾ.೫-೨ವ); ರೇಷ್ಮೆಯನ್ನು ಭಾರತದಲ್ಲಿ 'ಚೀನಾಂಶುಕ' ಎನ್ನುತ್ತಿದ್ದರು (ಶಿಲ್ಪನಾ. ೫೭). [ ಚೀನ$_1$ + ಅಂಶುಕ ]

ಚೀನಾಕ (ನಾ). ತರಕಾರಿಯಾಗಿ ಉಪಯೋಗಿಸುವ ಒಂದು ಬಗೆಯ ಸೊಪ್ಪು : ಚೀನಾಕ (ಸವತೀ ಜಾತಿ) ಚಿರ್ಭಟ ಇವು ಕಫವಾತಕರ (ಅಷ್ಟಾಂಗ. ೧೩೭-೮೦). [ ಸಂ. ]

ಚೀನಾಬಿಳೀಮರ (ನಾ). ಒಂದು ಬಗೆಯ ಮರ : ಚೀನಾಬಿಳೀಮರ, ಪುನಾಲಿ, ಹಂದಿಬಳ್ಳಿ (ಮೈಜಿಗಿ. ೨೯-೫೭೯). [ ಚೀನಾ$_0$ + ಬಿಳಿ + ಮರ$_1$ ]

ಚೀನಾರು (ನಾ). ಒಂದು ಬಗೆಯ ಮರ : ಭವ್ಯ ಚೀನಾರುಗಳು ಚಾಚಿವೆ ತೋಳು, ಹಾಕುತ ರಿಂಗಣ (ಚಿಂತನ. ೪೮-೧೫).
[ ←ಪಾರ. ಚೀನಾರ್ ; ಹಿಂ. ಚಿನಾರ್ ]

ಚೀನಾಲಿ 'ಛಿನಾಲಿ' ನೋ.

ಚೀನಾಸೋಂಪು (ನಾ). ಒಂದು ಬಗೆಯ ವನಸ್ಪತಿ : ಮರಾಟಿಮೊಗ್ಗು. ಚೀನಾಸೋಂಪು (ಮೈಜಿಗಿ. ೪೫-೮೯೦). [ ಚೀನಾ$_0$ + ಸೋಂಪು ]

ಚೀನಿ (ನಾ). ೧. ಚೀನಾದೇಶದಿಂದ ಬಂದುದು ; ಚೀನಾದೇಶದಲ್ಲಿ ಉತ್ಪನ್ನವಾದುದು. ೨. ಪಚ್ಚಕರ್ಪೂರ ; ಹಿಮವಾಲುಕ : "ಪ್ರಾಲೇಯಮೆನಲು ಘನಸಾರಮೆನೆ ಪಚ್ಚೆ ಹಿಮವಾಳುಕಂ ಚೀನಿ" (ಮಂಗರಾ. ೯೯-೨೨). ೩. ರೇಷ್ಮೆ ಬಟ್ಟೆ : ಮಗಮಗಿಪರಲ ಮುಡಿದು ಚಂದನಂಬೊರೆದು ಚೀನಿಗಳ ಪೊದೆದು (ಪದ್ಮರಾ. ೮-೨೭) : ಎಳದಳಿರ ಪೊದಕೆಯಿಂ ಚೀನಿ ಚೀನಾಂಬರಂಗಳ ಮೇಲುಕಟ್ಟಿನಿಂ . . . ರಾಜಗೃಹದೊಳೊಪ್ಪಿದುದು ಚಪ್ಪರವತುಳ ವಿಸ್ತರದಲಿ (ಸೌಂದಪು. ೪-೨೦) : ಚೀನಿ ದುಕೂಲ ಜಲ್ಲಿ ಕರ್ನೆ ವಿಕರ್ನೆಗಳ್ಪಾನು ಮಂಡಲದಂತೆ ಸೆಯಲು (ಶಾಂತೀಶ. ೧-೪೪) ೪. ಒಂದು ಬಗೆಯ ಸಕ್ಕರೆ ; ಬೂರಾಸಕ್ಕರೆ. ೫. ಒಂದು ಬಗೆಯ ಕಬ್ಬು : ಚೀನಿಯ ಕಬ್ಬು ಸಾಮಾನ್ಯವಾಗಿ ತೆಳ್ಳಗಿರುತ್ತದೆ (ರೂಢಿ). [ <ಸಂ. ಚೀನೀಯ ]

**ಚೀನಿಕರ್ಪೂರ** (ನಾ). ಪಚ್ಚಕರ್ಪೂರ; ಹಿಮವಾಲುಕ : ಕರತಿಗೆ ತಗಚಿಯ ಬೀಜ ಬಾವಂಜಿಯ ಬೀಜ . . . ಚೀನಿಕರ್ಪೂರ ಇವೆಲ್ಲವಂ ತವ್ಮೊಳು ಸರಿಯಾಗಿ ಕೊಂಡು (ವಿವ್ಯವಿ. ೯೨). [ ಚೀನಿ + ಕರ್ಪೂರ ]

**ಚೀನಿಕಾಯಿ, ಚೀಣಿಕಾಯಿ** (ನಾ). ಸಕ್ಕರೆಗುಂಬಳಕಾಯಿ ; ಸಿಹಿ ಕುಂಬಳಕಾಯಿ: ಚಾವಡಿಯ ಮಾಡಿಗೆ ತಾಗಿರುವ ಅಡ್ಡಕೋಲಿನಲ್ಲಿ ಸೌತೆ, ಕುಂಬಳ, ಚೀನಿಕಾಯಿ ಮೊದಲಾದುವುಗಳು ತೂಗುತ್ತಿದ್ದುವು (ಜಿಗುಬ. ೨೪). **ಚೀಣಿಕಾಯಿ :** ಚೀಣಿಕಾಯಟ್ಟವಳ್ಯಾರವ್ಮಾ ಚೀಣೀಕಟ್ಟೀ ಪುಟ್ಟವೆಂಕವ್ಮಾ (ನಾಪದ. ೨೦೩). [ ಚೀನಿ + ಕಾಯಿ₄ (<ಕಾಯ್₄) ]

**ಚೀನಿಕೊಳವೆ** (ನಾ). ದುರ್ಬೀನು; ದೂರದರ್ಶಕಯಂತ್ರ: ಸಿದ್ದೇಶ್ವರನ ಗದ್ದಿಗೆ ಮೇಲೆ ಹೋಗಿ, ಚೀನಿಕೊಳವೆ ಹಾಕಿ ನೋಡಿದಲ್ಲಿ, ಒಂದು ತಂಬಾದರೂ ಕಾಣುವುದಿಲ್ಲಾ (ರಾಜೇಂದ್ರ. ೯೨).

[ ಚೀನಿ ? + ಕೊಳವೆ (<ಕೊಟವಿ) ]

**ಚೀನೀಯ** (ನಾ). ಚೀನಾದೇಶದಲ್ಲಿ ಹುಟ್ಟಿದವನು ; ಚೀನಾದೇಶದ ಪ್ರಜೆ : ಹಿಂದೂದೇಶದವರಲ್ಲದ ಆಸ್ಯಾಖಂಡದ ವಂಶೀಯರು . . . ಅರಬರು, ಬೆಲುಚಿಯರು, ಚೀನೀಯರು, ಮೊಗಲರು (ತುಳುನಾ. ೧೭೪).

[ ಸಂ. ]

**ಚೀನೋತ್ತರೀಯ** (ನಾ). ಹೊದೆಯುವ ರೇಷ್ಮೆಯ ವಸ್ತ್ರ,-ಮುಗುಟ : ಮತ್ತಮತಿಸಂಭ್ರಮಸ್ಖಲಿತ ಚಿತ್ರಚೀನೋತ್ತರೀಯಮಂ ಮಱೆದು (ಮಲ್ಲಿಪು. ೯-೨೦). [ಚೀನ₁ + ಉತ್ತರೀಯ ]

**ಚೀಪು₁** 'ಸೀಪು₁' ನೋ.

**ಚೀಪು₂, ಚಿಪ್ಪು₂, ಚೂಪು₂** (ನಾ). ೧. ಬೆಣೆಯಾಗಿ ಉಪಯೋಗಿಸುವ ಕಲ್ಲಿನ ಅಥವಾ ಮರದ ಚೂರು,-ತುಂಡು: (+). (ಗಂ). ೨. ಮೊನಚಾದ ; ಚೂಪಾದ ; ಹರಿತವಾದ. 'ಚೀಪುಗಲ್ಲು' ಪರಾ. **ಚಿಪ್ಪು₂ :** ೧. 'ಚಿಪ್ಪುಕುಂಟೆ' ಪರಾ. **ಚೂಪು₂ :** ೨. ಕೋಡು . . . ಚೂಪಾದ ತುದಿಯುಳ್ಳದ್ದು ಇರುತ್ತದೆ (ಮುಂಬಯಿ. ೪-೪೭): ಹರಿಯ ಕಿರೀಟದ ಚೂಪು ಕುಡಿ ಎಡವೀಯೆ (ಮುಕ್ತಕಂ. ೨೦-೭).

[ ದೇ.॥ ತಮಿ. ಮಲ. ಚಿಮ್ಪು ; ತುಳು. ಚೀಪು ; ತೆಲು. ಚಿಂಪಿ ]

**ಚೀಪು₃** 'ಸೀಪಿ' ನೋ.

**ಚೀಪುಗಲ್ಲು** (ನಾ). ಮೊನಚಾದ ತೆಳ್ಳನೆಯ ಕಲ್ಲು;ಚೂಪುಗಲ್ಲು: ಇವುಗಳ ಅವಶೇಷಗಳೂ ಅವರು ಬಳಸುತ್ತಿದ್ದ ಚೀಪುಗಲ್ಲುಗಳ ಆಯುಧಗಳೂ ಹಿಂದೂಸ್ಥಾನದ ದಕ್ಷಿಣ ಭಾಗದಲ್ಲಿ ಹೇರಳವಾಗಿ ದೊರೆತಿವೆ (ಹಿಂದೂಇ. ೪).

[ ಚೀಪು₂ + ಕಲ್ಲು (<ಕಲ್₃) ]

**ಚೀಪುತೊಟ್ಟು** (ನಾ). ಸಣ್ಣಮಕ್ಕಳಿಗೆ ಚೀಪುವುದಕ್ಕಾಗಿ ಕೊಡುವ ಮೊಲೆಯ ತೊಟ್ಟಿನಾಕಾರದ ಸಾಧನ : ಕೂಸಿಗೆ ಚೀಪುವುದಕ್ಕಾಗಿ ಕೊಡುವ ಕೃತಕ ಮೊಲೆತೊಟ್ಟು ; ಚೀಪುತೊಟ್ಟು (Comforter. ಇಂಕನಿ).

[ಚೀಪು₁ (<ಸೀಪು₁) + ತೊಟ್ಟು₄ ]

**ಚೀಪೆಟ್ಟು** (ನಾ).=ಚೀಮಾರಿ: ಯಾವುದೋ ಒಂದು ನೆಪ ಸಿಕ್ಕಿದರೆ ಸಾಕು; ಕೆಲಸವನ್ನು ಬಿಟ್ಟುಬಿಡುವೆ ಎಂದು ಚೀಪೆಟ್ಟು ಹಾಕಿದೆ (ಲಕ್ಷ್ಮೀಪ್ರ. ೪೪).

[ <ಚೀಃ + ಪೆಟ್ಟು₂ ]

**ಚೀಮಾರಿ** (ನಾ). ಎದುರಿಗೆ ಮಾಡುವ ಅವಮಾನ,-ತೆಗಳಿಕೆ; ತಿರಸ್ಕಾರ: ಅಪ್ಪನ ಹತ್ತಿರ ಹೋಗು. ಚೀಮಾರಿ ಆಗುವುದು (ರೂಢಿ). 'ಛೀಮಾರಿ' ಪರಾ.

ಚೀಮಾರಿಮಾಡು=ಅವಮಾನಿಸು; ಛೀ ಎನ್ನು; ಧಿಕ್ಕರಿಸು : ಅವಳು ಆ ಕ್ಲಬ್ಬಿನ ಶಾಂತ ವಾತಾವರಣದ ಮೇಲೂ ಧಾಳಿಯಿಟ್ಟು ಅಲ್ಲಿದ್ದವರೆಲ್ಲರನ್ನೂ ಚೀಮಾರಿ ಮಾಡಿದಳು (ಯೋಧಪು. ೭೪).

[ <ಚೀಃ + ಮಾರಿ ? ]

**ಚೀಮೆ** (ನಾ). ಇರುವೆ : ಹಗಲಗತ್ತಲೆಯಂತೆ ಯಿಹ ಕಾಪಿಗರು ಮೇಲಡಿ ಚೀಮೆ ಕೂರದ ಬಗೆಯ ಮುಚ್ಚಿರ್ದಲ್ಲಿ ಬಂತೀ ಕೋಡಗೆಂದೆಲ್ಲಾ (ಜಿರಾಮೂ. ೨೦೭-೬೨). [ ←ತೆಲು. ಚೀಮ ]

**ಚೀರ₁** 'ಚೀಲ' ನೋ.

**ಚೀರ₂**(ನಾ).೧. ಮರದ ತೊಗಟೆ. ೨. ನಾರುಬಟ್ಟೆ: ವಲ್ಕಲ: ಭಾರ್ಯಾನುಜನಃ ಸಹಿತಡವಿಗೆ ನಡೆದನಾ ರಾಮ ಚೀರಾದಿಗಳ ಧರಿಸಿ (ಅರಾಮಾ. ೭-೫೦). ೩. ಹರುಕುಬಟ್ಟೆ ; ಚಿಂದಿ. ೪. ಗೆರೆ ; ರೇಖೆ. ೫. ಬಟ್ಟೆ; ವಸ್ತ್ರ: ಚಿನ್ನಗೆಯಿಕದ ಚೀರಕ್ಕೆ ದೂಸಿಗವಸರಕ್ಕೆ ಹತ್ತಿವಸರಕ್ಕೆ ಮಣಿಗಾಜಿವಸರಕ್ಕೆ ಗಂಧವಣವಸರಕ್ಕೆ ಗಂಧವಣಿಗರಂಗಡಿಗೆ . . . ಬೇಱವೇಱ ಬರಿಸದೞ ಹಿರಿಯರಾಗವೊಂದು (ಎಇ. XIII, ೨೧-೫೨; 1204); ಕೃಷ್ಣನ ಚೀರದಂತ್ಯವ ಪಿಡಿದು ಸದನಕೆ ಕರೆದು ಪದಕೆಜಗೆ (ಅಕ್ರೂಚ. ೬-೫೫). ೬. ಒಂದು ಬಗೆಯ ಹಾರ ; ನಾಲ್ಕು ಎಳೆಗಳ ಮುತ್ತಿನ ಹಾರ ; ಗೋಸ್ತನ : ಕರಮೆಸೆವ ಚೆನ್ನಗುಳ್ಳೆಯ ಚೀರದಿಂದೊಪ್ಪೆ (ಬಸರ. ೯-೧೦೦). ೭. [ಬೌದ್ಧ] ಸಂನ್ಯಾಸಿಯ ವಸ್ತ್ರ ; ಕಾವಿಯ ಬಟ್ಟೆ : (+). [ ಸಂ. ]

**ಚೀರಗಟ್ಟು** (ಕ್ರಿ). ಬಟ್ಟೆಯಿಂದ ಬಿಗಿದು ಕಟ್ಟು : ಚೀರಗಟ್ಟಿದ ಹಡಪ ಹಲ್ಲಣ ಹಿಂದೆ ಹಾರಮುಪ್ಪಂದದಿ ಹಾಕಿ ಭೋರೆನೆ ಬರುತಿರ್ದರು ಒಂಟಿ ರಾವುತರು (ಶ್ರೀಪಾಲ. ೧೩-೯೩). [ ಚೀರ₂ + ಕಟ್ಟು₁ ]

**ಚೀರಟೆ** (ನಾ). ಒಂದು ಬಗೆಯ ಹಕ್ಕಿ : ಚೀರಟೆ ಹಕ್ಕಿಗಳ ಚೀರುದನಿಯ ಲಾಲಿ (ಅನಾಥ. ೫). [ ? ]

**ಚೀರಣ, ಚಿರಣೆ, ಚಿಲಣ, ಚೀರಣೆ, ಚೀರ್ಣ, ಚೀಲಣ, ಚೀಲಣೆ** (ನಾ). ೧. ಲೋಹವನ್ನು ಕತ್ತರಿಸಲು ಬಳಸುವ ಚಿಕ್ಕ ಉಳಿ; ಅಪು; ಚಾಣ: ಹೊನ್ನು ಹೆಣ್ಣು ಮಣ್ಣೆಂಬ ಮೂಱು ಸಂಕಲೆಯ ಕೀಲ ಜ್ಞಾನಚೀರಣದಿಂದ ತಡೆಗಡಿದು (ಘನವ. ೭೩). ೨. ಉಳಿಯಿಂದ ಮಾಡಿರುವ ಕೆತ್ತನೆಯ ಕೆಲಸ: ಚೀರಣದುಡಿದಾರ ಮೇಖಲೆ ಮಂಜೀರ ಹಾರಗಳನ್ನು ಕೊಟ್ಟು ನೊಲಿದು (ಕುರಾಸಾಂ. ೪೧-೩೭) ; ಭೂರಿವೆಳಗಿನ ವಜ್ರಪಂಕ್ತಿಯ ಚೀರಣದ ಘೊಲೆಗಳ ರಭಸದಿ ತೋಱುವತಿಸಿಂಗರದ ಚಾಮಿಾಕರದ ಕಲಶಗಳ (ಅಂಬಿಕಾ. ೮-೫೭). **ಚಿರಣೆ:** ೧. 'ಚಿರಣೆಗೆಲಸ' ಪರಾ. **ಚಿಲಣ:** ೧. 'ಚಿಲಣಗೆಲಸ' ಪರಾ. **ಚೀರಣೆ:** ೧. 'ಚೀರಣೆಗೆಲಸ' ಪರಾ. **ಚೀರ್ಣ:** ೧. "ವೃಶ್ಚನಃ, ಪತ್ರಪರಶುಃ–ಚೀರ್ಣದ ಪೆಸರು ಅಗಸಾಲಿಗನ ಕೊರಮುಟ್ಟು" (ಸಿದ್ಧಾಂತಿ. ೨೭೦). **ಚೀಲಣ :** ೧. ಆಲಿಕಲುಗಳ ಕಡಿವಡುಕ್ಕಿನ ಚೀಲಣದ ಹಂಗೇಕೆ (ಕುವ್ಯಾದ್ರೋ. ೧೦-೩೧). 'ಚೀಲಣಿಸು' ಪರಾ. **ಚೀಲಣೆ:** ೨. 'ಚೀಲಣೆಗೆಯ್' ಪರಾ. [ ದೇ.॥ ತೆಲು. ಚೀರಣ, ಚೀರ್ಣ ]

**ಚೀರಣಗೆಲಸ, ಚಿರಣೆಗೆಲಸ, ಚಿಲಣಗೆಲಸ, ಚೀರಣೆಗೆಲಸ** (ನಾ). ಉಳಿಯಿಂದ ಮಾಡಿದ ಕೆತ್ತನೆಯ ಕೆಲಸ : ತಾರೇಶನಂ ನಗುವ ಲೋವೆ ಚೀರಣಗೆಲಸ ಚಾರುವೇದಿಕೆಗಳಿಂದ (ಮರುಚ. ೬-೬). **ಚಿರಣೆಗೆಲಸ:** ಸಣ್ಣ ಚಿರಣೆಗೆಲಸಗಳಿಂದ ಸೊಬಗಾಂತ ಬಣ್ಣದ ಚಾವಡಿಯಿಹುದು (ಗೋಮಟೇ. ೧-೧೩೭). **ಚಿಲಣಗೆಲಸ :** ಚಿತ್ರದ ಶಾಲೆ ಚಿಲಣಗೆಲಸದ ಪೊಸ ಮುತ್ತಿನ ಚಾವಡಿವಿಡಿದು ನಿತ್ಯದಾನವನೀವ ಮಂಡಪವದಱೊಳು ಬಿತ್ತರದಿಂದೊಪ್ಪುತಿಹುದು (ಅಂಜಚ. ೩-೩೪). **ಚೀರಣೆಗೆಲಸ :** ರನ್ನದ ಚೀರಣೆಗೆಲಸದಿಂ ಸೊಬಗಾಂತ ಚಿನ್ನದ ಕಳಸಂದಿಂದೆಸೆವ (ಗೋಮಟೇ. ೫-೩೭).

[ ಚೀರಣ + ಕೆಲಸ ]

**ಚೀರಣೆ** 'ಚೀರಣ' ನೋ.

**ಚೀರಣೆಗೆಲಸ** 'ಚೀರಣಗೆಲಸ' ನೋ.

**ಚೀರಲ** (ನಾ). (ಉಕ) ಬಿರುಕು : ಹೊಲವು ತಗ್ಗು ತೆವರಾಗಿ ಹಳ್ಳನಾಲಿಕೊರಿ ಚೀರಲಗಳು ಇದ್ದರೆ ಅಂಥ ಹೊಲಗಳ ಬೆಳೆಯು ಹೊಲದಲ್ಲೆಲ್ಲ ಒಂದೇ ಸಮನಾಗಿ ಬೆಳೆಯುವದಿಲ್ಲ (ಕೃಷಿಪ್ರ. ೩೭). [ ←ಮರಾ. ಚೀರ್ ]

**ಚೆಂದಳಿರ್ಗೈ** (ನಾ). ಕೆಂಪು ಚಿಗುರಿನಂತಿರುವ ಕೈ; ಅಂಗೈ: ಚೆಂದಳಿರ್ಗೈಯ ಕುಮಾರಿಯ ರೂಪನದೇನಂ ಬಣ್ಣಿಪೆನು (ಜಯಕಾ. ೩-೬೨) ; ಸುದತಿಯರಧಿ ನಾಯಕಿಯ ನುಣ್ದೊಳ್ಗಳಗ್ರದೊಳು ಚೆಂದಳಿರ್ಗೈಯ್ಗಳೆಸೆದವು (ತ್ರಿಭುತಿ. ೭೦-೫೩). [ ಚೆಂದಳಿರ್ + ಕೈ$_2$ (<ಕೆಯ್$_2$) ]

**ಚೆಂದಳಿರ್ದೊಂಗಲ್** (ನಾ). ಕೆಂಪಾದ ಚಿಗುರುಗಳ ಗೊಂಚಲು,-ಗುಂಪು : ಚೆಂದಳಿರ್ದೊಂಗಲಿಂ ಮಿಸುಪಶೋಕೆ ಫಲಾವಳಿ ತೀವಿ ತೋರ್ಪ ಮಾಕಂದಂ . . . ಒಪ್ಪಿರೆ ನಂದನವಲ್ಲಿ ರಂಜಿಕುಂ (ಶಬಶಂ. ೨-೪೧). [ ಚೆಂದಳಿರ್ + ತೊಂಗಲ್ ]

**ಚೆಂದಳಿರ್ವಾಸು** (ನಾ). ಕೆಂಪು ಚಿಗುರಿನಿಂದ ಮಾಡಿದ ಹಾಸಿಗೆ : ಚೆಂದಳಿರ್ವಾಸಿನೊಳತ್ತಮಿತ್ತ ಚೆಲ್ವಿಂಗೆಡೆಯಾಗಿ ಸೂಸಿದರಲಂ ನಱುದಂಬುಲಮುಂ . . . ದೇವದಂಪತಿಯ ಕೂಟಮನೇಂ ಪಿಸುಣಾಡ ಲಾರ್ತುವೋ! (ಶಬಶಂ. ೧-೫೦). [ ಚೆಂದಳಿರ್ + ಪಾಸು$_2$ ]

**ಚೆಂದಾವರೆ** (ನಾ), ಕೆಂಪಾದ ತಾವರೆ ; ಕೆಂದಾವರೆ "ರಕ್ತೋತ್ಪಲಂ-ಚೆಂದಾವರೆ" (ಓಪಧಿ. ೧೩೫) [ ಚೆಂ$_1$ + ತಾವರೆ (<ತಾಮರೆ) ]

**ಚೆಂದಿರ** (ನಾ). ಚಂದ್ರ : ಚೆಂದಿರಗೆಱಗಿ ದೇವಾಂಗದೆಳೆದೆಗೆದು ಮಧುವ ನೊಲವಿಂದೆ ಮನ್ನಿಸಿ (ಪದ್ಮರಾ. ೮-೯೩) ; ಇಂದ್ರಿಯದ ಆಶೆಗಳ ಬಂಧಿಸದೆ ಕೊಂದವನು ಸುಂದರನು ಅಕ್ಕು ಸುಖಿಯಕ್ಕು ಲೋಕಕ್ಕೆ ಚೆಂದಿರನು ಅಕ್ಕು (ಸರ್ವಜ್ಞ. ೫೪೩). [ <ಸಂ. ಚಂದಿರ ]

**ಚೆಂದಿರುಳು** (ನಾ). ಉತ್ತಮವಾದ ತಿರುಳು ; ಚೆನ್ನಾದ ಸಾರ : ಪೆರುಮಾಳನ ಕೆಂದಾವರೆ ಬೆಳಕಿನ ಚೆಂದಿರುಳೇ ಬಾಳಿನ ತಿರುಕೋಡೊಳಗಿನ ಬಲು ಅರಿವಿನ ಅರುಳೇ (ಅರಳು. ೨೨೫-೯). [ ಚೆಂ$_2$ + ತಿರುಳು (<ತಿರುಳ್) ]

**ಚೆಂದುಗೋಳಿ** (ನಾ). ಒಂದು ಸ್ಥಳದ ಹೆಸರು (?) : ವಿಕ್ರಮಾದಿತ್ಯ ಭಟರಕ × × × ಚೆನ್ದುಗೋಳಿ ವಳಿಯರಾದಿಲಿ × × ಳಿಗಳ್ಗೆ ಕೊಟ್ಟ ಭೂಮಿ ವಿವರ (ಎಕ. VIII, ಸಾಗರ. ೯೩-೩ : ಸು. 680 ?). [ ? ]

**ಚೆಂದುಟಿ, ಚಂದುಟಿ** (ನಾ). ಕೆಂಪಗಿರುವ ತುಟಿ ; ಕೆಂದುಟಿ : ಅವಳ ಚೆಂದುಟಿಯುಂ ಪೊಸ ತೊಂಡೆವಣ್ಣದೊಂದಚ್ಚರಿಯಲ್ಲಿ ಪುಟ್ಟಿತೆನುತ (ಉದ್ಭಟ. ೬-೭೪) : ಅವಳು ಚೆಂದುಟಿಗಳಲ್ಲಿ ಬೆಳ್ನಗೆಯನ್ನು ಅರಳಿಸಿ ಆನಂದದ ನಿರ್ಝರಿಯನ್ನು ಹರಿಸಿದಳು (ಎರಸಿ. ೧೭). **ಚಂದುಟಿ :** ತಳಿರ್ಗೊಯ್ವ ಎಳೆಯಳ ಚ[ಪಾಠಾಂ ಚೆ]ಂದುಟಿದಳಿರಂ ತಳಿರ್ಗೆತ್ತು ಕರ್ದುಂಕಿದುದು ಪಿಕಂ (ರಾಜಶೇ. ೦೦-೫೪). [ ಚೆಂ$_1$ + ತುಟಿ$_2$ ]

**ಚೆಂದುಡಿಗೆ** (ನಾ). ಕೆಂಪುಬಣ್ಣದ ಬಟ್ಟೆ,-ಉಡಿಗೆ: ಚೆಂಗದಿರನು ಚೆಂಬಿಸಿಲ ಚೆಂದುಡಿಗೆಯನ್ನು ವಿಂಧ್ಯೆಯ ಗಿರಿಶಿಖರಗಳಿಗೆ ತೊಡಿಸುತ್ತಿದ್ದಾನೆ (ಮಹಸ. ೧). [ ಚೆಂ$_1$ + ತುಡಿಗೆ ( <ತೊಡುಗೆ) ]

**ಚೆಂದುಳ್ಳಿ** 'ಚಂದೊಳ್ಳೆ' ನೋ.

**ಚೆಂದುಳ್ಳೆ** 'ಚಂದೊಳ್ಳೆ' ನೋ.

**ಚೆಂದೆಂಗಾಯ್** (ನಾ). = ಚೆಂದೆಂಗು : ಎಸೆವ ಚೆಂದೆಂಗಾಯ್ಗಳೊಂದೊಂದ ನೊಡೆಯೊತ್ತಲೊಸರಿ ಸೋರ್ವೆಳನೀರ್ಗಳರ್ಘ್ಯಂಗಳಾಗೆ ರಂಜಿಸುವ ಬನ ದೇವಿ (ಜೈಮಿಭಾ. ೩-೨೭). [ ಚೆಂ$_1$ + ತೆಂಗಾಯ್ ]

**ಚೆಂದೆಂಗು, ಚಂದೆಂಗು** (ನಾ). ಕೆಂಪು ಬಣ್ಣದ ತೆಂಗು ಮತ್ತು ಅದರ ಕಾಯಿ: ಕಾಯ್ಗುಡಿಗಲಂ ಪೇೞರ್ದ ಚೆಂದೆಂಗು ಕಟ್ಟಲಿಸುತ್ತಿರ್ಪಲೆವಳ್ಳಿ . . . ಎಸೆಗುಂ (ಆದಿಪು. ೧-೬೭) ; ಭೂಲತಾಂಗಿ ತೆಗೆದೆತ್ತಿಟ್ಟ ರಸರತ್ನವೋ ಎನಿಸಿ ಫಲಿತ ಚೆಂದೆಂಗೆಸೆದುವು (ಹಚಕಾ. ೩-೨೮) ; ಒಪ್ಪುವ ಚೆಂದೆಂಗಲ್ಲದೆ ಮಾವಲ್ಲದೆ ಕೌಂಗಲ್ಲದೆ ಗಿಡುಮರಗಳೆಂಬುವಿಲ್ಲಾ ನಾಡೊಳ್ (ಕಬ್ಬಿಕಾ. ೨೧): ಮೇಘರಾಜನ ಬರವನೆ ಪಾರ್ವ ಚೆಂದೆಂಗುಗಳ ಪಂತಿಗಳ್ (ರಾಮಾಶ್ವ. ೮-೨೨). **ಚಂದೆಂಗು :** (ಶ). [ ಚೆಂ$_1$ + ತೆಂಗು$_3$ ]

**ಚೆಂದೊಂಗಲ್** (ನಾ). ಕೆಂಪಾದ ಗೊಂಚಲು ; ಚಿಗುರಿನ ಗೊಂಚಲು : ಅಗ್ನಿ ನೀಡಿದನಲ್ತೆ ತನ್ನಂಗಳದ ಮರದ ಮಾಂದಳಿರ ಚೆಂದೊಂಗಲಂ ? (ಶ್ರೀರಾಮಾ. ೪೮-೫೫೧). [ ಚೆಂ$_1$ + ತೊಂಗಲ್ ]

**ಚೆಂದೊರಳೆ** (ನಾ). ಕೆಂಪಾದ ಗುಲ್ಮ,-ಪ್ಲೀಹ : ಕರುಳ ಪೂಗೊಂಚಲು ಖಂಡದ ಕಳಿಕೆ ಬಂಧುರದೆಲು ಶಾಖೆಗಳಾಗೆ ಒರಿದು ಚೆಂದೊರಳೆದಳಿರ ಕಬಂಧದ್ರುಮ ಮೆಱೆದುವು ಖಡ್ಗಚೈತ್ರದಲಿ (ಕಂಸವಿ. ೧೫-೫೦). [ ಚೆಂ$_1$ + ತೊರಳೆ$_1$ ]

**ಚೆಂದೊಳ್ಳೆ** 'ಚಂದೊಳ್ಳೆ' ನೋ.

**ಚೆಂದ್ರಕಾಳಿ** 'ಚಂದ್ರಕಾಳಿ' ನೋ.

**ಚೆಂಬಕ** 'ಚಂಬಕ' ನೋ.

**ಚೆಂಬಕವೞಿ** 'ಚಂಬಕವೞಿ' ನೋ.

**ಚೆಂಬಟ್ಟೆ** (ನಾ). ಕೆಂಪು ಬಟ್ಟೆ,-ವಸ್ತ್ರ : ಬಾಲೆಯುರದೊಳೊಂದಿದ ಪೊಸ ಬೆಮರ್ಮುತ್ತು ಬೀಳಲುಳಿದ ಚೆಂಬಟ್ಟೆಯ ನೂಲಂತೆ ಕಂಗೆಸೆದುದು ತೋರಮೊಲೆಗಳ ಮೇಲೆ ರಂಜಿಪ ನೀಲ ನಖರೇಖೆ (ತ್ರಿಭುತಿ. ೧೩-೬೪). [ ಚೆಂ$_1$ + ಬಟ್ಟೆ$_2$ ]

**ಚೆಂಬಡಿ** (ನಾ). ಒಂದು ಪ್ರದೇಶದ ಹೆಸರು (?) : ಅನ್ತೆ ತೆ[ಂ]ಕ ಅತ್ತಿಯೋಡು ಪಳ್ಳಂ[ಬೆ]× ಗಾಲು ಬೆಮ್ಬಡಿ (ಎಇ. X, ೬೭-೯೪; 9ನೆಯ ಶತ). [ ? ]

**ಚೆಂಬಣ್ಣ** (ನಾ). ೧. ಕೆಂಪುಬಣ್ಣ : ಚೆಂಬಣ್ಣ ಮಾಂದಳಿರಸುಗೆ ಪುನ್ನಾಗ ದಾಳಿಂಬ ತ್ರಿಪರ್ಣ ಪುಷ್ಪಗಳು . . . ಬನದಿ ರಂಜಿಸಿತು (ಮೋಹತ. ೪-೪೯): ಬಾಯ್ದೆಱೆಬವಳದ ಚೆಂಬಣ್ಣಮಿಂತು ಬನ್ನಂಬಡಿಕುಂ (ಚಕವಿ. ೬-೬೩). ೨. ಕೆಂಪುಬಣ್ಣದ ವಸ್ತ್ರ,-ಬಟ್ಟೆ : ಕುಂಭಾಂಡ ಮಂತ್ರಿಶೇಖರ ಮುಖ್ಯ ದೈತ್ಯರ್ಗೆ ಚೆಂಬಣ್ಣವನುಡಿಸಿದನು (ಮೋಹತ. ೩೫-೪). [ ಚೆಂ$_1$+ಬಣ್ಣ ]

**ಚೆಂಬಣ್ಣು** (ನಾ). ಕೆಂಪಾದ ಹಣ್ಣು ; ಪಕ್ವವಾದ ಹಣ್ಣು : ಚೆಂಬಣ್ಣು ಗಾಯ್ಗಳಂ ತೊಡವಿಟ್ಟು ಹೂವಿಟ್ಟು ಕುಣಿಯುವಳ್ (ಕಾಲೂರ. ೧೨೦-೨೫೧). [ ಚೆಂ$_1$ + ಪಣ್ಣು$_3$ (<ಪಣ್$_3$) ]

**ಚೆಂಬದುವ** (ನಾ). ಕೆಂಪು ಕಮಲ : ಅದಱ ಮೊದಲ್ ಸುವರ್ಣಘಟಿತಂ . . . ಚೆಂಬದು(?)ವದ ಘಂಟಿಕಾಪಟಕಮಂ ತಳೆದಿಂತೊಗೆದಿರ್ಪುದು (ಶಾಂತೀಶ್ವ. ೧೬-೩೨). [ ಚೆಂ$_1$ + ಪದುವ (<ಪದುಮ) ]

**ಚೆಂಬರಣೆ** (ನಾ). ಕೆಂಪು ಭರಣೆ : ಏಂ ಬೞಿದೆ ಪರಪುವೈ ಪಲವುಂ ಬರಣೆಯನಿರಿಸು ಕೆಲಕೆ ನೆಲೆವೆಲೆವೇೞಾ ಪೊಂಬರಣೆಗಳೆರಡರ್ಕಂ ಚೆಂಬರಣೆಗಮಿನಿತೞಿಂದೆ ತಣಿದಪೆವೀಗಳ್ (ಚಕವಿ. ೬-೫೦). [ ಚೆಂ$_1$ + ಬರಣೆ ]

**ಚೆಂಬರಿಗೆ** (ನಾ). ಚೆನ್ನಾದ ಗುರಾಣಿ : ಕಚಂ ಸಾರಮೆನಿಪ್ಪ ಚೆಂಬರಿಗೆಯಂ ನಳಿತೋಳಸಿಯಂ ಸಮಂತು ಪೋಲ್ತಾ ರಮಣೀನಿಕಾಯದಿನನಂಗನ ನಚ್ಚಿನ ದಿವ್ಯಶಸ್ತ್ರ ಭಂಡಾರದ ಗೇಹಮಂ ನೆೞೆಯೆ ಪೋಲ್ತುದು ಭೂವನಿ ತೇಶನೋಲಗಂ (ಧರ್ಮಾಮೃ. ೪-೧೪೧). [ಚೆಂ$_2$ + ಪರಿಗೆ$_3$ ]

**ಚೆಂಬವಳ** (ನಾ). ಕೆಂಪು ಹವಳ : ಕರ್ಮಣಿಸರದೊಳ್ ಚೆಂಬವಳಮಂ ಕೋದಂತಿರೆ . . . ತಿರುಳ್ಗನ್ನಡದೊಳೆ ಕತೆಯನುಸಿರ್ವೆಂ (ರಾಮಾಶ್ವ. ೬-೧೫) ; ನಡುವಿನಿಂದ ಜಗ್ಗುತ್ತಿದ್ದ ಚೆಂಬವಳದ ಒರೆಯನ್ನು ನಡುಪಟ್ಟಿಯ ಸಮೇತ ಕಳಚಿ (ಸವತಿ. ೪೮). [ ಚೆಂ$_1$ + ಪವಳ ]

**ಚೆಂಬಳದಿ** (ನಾ). ಕೆಂಪು ಮಿಶ್ರಿತವಾದ ಹಳದಿಯ ಬಣ್ಣ : ಬಿರುಕು ದೋದೆರ್ದೊಳ್ಕಿದುದು ಪೊನಲ್ ಚೆಂಬಳದಿಯಾ ಮತಂಗನ ಪೆಸರ ಮಡುವಿನೊಳ್ ನೀರು ಓಕುಳಿಯಾಯ್ತು (ಶ್ರೀರಾಮಾ. ೨೮೫-೬). [ ಚೆಂ$_1$+ಪಳದಿ ]

**ಚೆಂಬಾನ್** (ನಾ). ಕೆಂಪಾದ ಆಕಾಶ : ಚೆಂಬಾನ ಕುಂಬಿಡುವ ಬೆಟ್ಟಗಳ ಸಾಲು (ಕಾಲೂರ. ೨೫-೧೨). [ ಚೆಂ$_1$ + ಬಾನ್$_3$ ]

**ಚೆಂಬಾಯ್** (ನಾ). ಕೆಂಪಾಗಿರುವ ಬಾಯಿ: ಆ ಸತಿಗೆಡ್ಡಂಬಡೆದವು ನಗೆ ಮೊಗವಾಸುರವಡಗಿದ ಚೆಂಬಾಯ್ ನಱುಸುಯ್ ಸೂಸುವ ನಾಸಿಕ (ಉದ್ಭದೇ. ೨-೫೬); ಚೆಂಬಾಯ್ದೆನನೀಂಟುತ್ತುಂ (ಚಕವಿ. ೬-೨೫೩). [ ಚೆಂ$_1$ + ಬಾಯ್ ]

**ಚೆಂಬಾಯ್ದೆಱೆ**(ನಾ). ೧. ಕೆಂಪನೆಯ ತುಟಿ. ೨. ಕೆಂಬಣ್ಣ ಬಳಿದ ಬಾಗಿಲು. ೧, ೨: ಕಾಣದೆ ಚೆಂಬಾಯ್ದೆಱೆಯಂ ಮಾಣಿನ್ನೀ ಪರಿಯ ಮನದ ಬಱುಸಂದೆಯಮಂ (ಚಕವಿ. ೬-೬೨). [ ಚೆಂ$_1$ + ಬಾಯ್ದೆಱೆ ]

**ಚೆಂಬಾವುಗೆ** (ನಾ). ಕೆಂಪಾದ ಪಾದುಕೆ,-ಹಾವುಗೆ: ಲಾಲಿತ ಚೆಂಬಾವುಗೆ ಮೆಟ್ಟಿ . . . ಸಲೀಲೆಯಿಂದೆದ್ದಳಾ ಕುವರಿ (ಮೋಹತ. ೨೮-೬). [ ಚೆಂ$_1$ + ಪಾವುಗೆ ]

**ಚೆಂಬಾವುಡೆ** (ನಾ). ಕೆಂಪು ಬಣ್ಣದ ವಸ್ತ್ರ: ಚೆಂಬಾವುಡೆಯುಡಿವಸನವು ತೋಯ್ದು . . . ಮೆಱೆಯೆ ಪೀತಾಂಬರ ನೋಡಿ ಹಿಗ್ಗಿದನು (ಮೋಹತ. ೧೪-೫೮). [ ಚೆಂ$_1$ + ಪಾವುಡೆ (<ಪಾವುಡ) ]

**ಚೆಂಬಾೞೆ** (ನಾ). ಬಾಳೆಯಲ್ಲಿ ಒಂದು ಬಗೆ; ಕೆಂಪುಬಾಳೆ; ಚಂದ್ರಬಾಳೆ: ಪಣ್ತ ಪೊಂಬಾೞೆಯ ಚೆಂಬಾೞೆಯ ರಂಗಃಬಾೞೆಯ ತೋಂಟದಿನೊಳಗೊಳಗೆ ಬಾಂಬಟ್ಟೆಗರ್ ಪೊಟಲ ಸೊಬಗಂ ನಿರುಕಿಸಲ್ಕೆಂದು (ರಾಮಾಶ್ವ. ೦೦೧-೨೯). [ಚೆಂ$_1$ + ಬಾೞೆ ]

**ಚೆಂಬಿಸಿಲ್, ಚೆಂಬಿಸಿಲು** (ನಾ). ಕೆಂಪು ಬಣ್ಣದ ಬಿಸಿಲು: ಕೆಂದಾವರೆ ಚೆಂಬಿಸಿಲಿಂದೊಂದುವ ತೆಱದಿಂದೆ ನಿನ್ನ ಮೃದುಪದಯುಗಮೆಂದಂದಿನ ಪೊಲಲಕ್ತಕ ರಸದಿಂದಂ ಪೇೞೊಂದಿತಿಲ್ಲಿದೇನಿಂದುಮುಖೀ (ಕಾದಂಪೂ. ೩೩೨); ಪೊಸರನ್ನದ ಲೋಲಾಂಶು ಪುರಗೋಪುರಗಳ ಮೇಲೆ ಚೆಂಬಿಸಿಲಂತೆ ಚಂದ್ರಿಕೆಯಂತೆ ತಮಾಲದಂತೆಸೆದವು (ತ್ರಿಘುತಿ. ೨-೨೫): ಇನಬಿಂಬ ಕಂದಿ ಚೆಂಬಿಸಿಲಿಪ್ಪು ಮಾಸೆ ಮಾರ್ದನಿಗೊಟ್ಟುವೆಂಟುದಿಕ್ಕುಗಳು (ಭರತ. ೫೧-೧೧೬). **ಚೆಂಬಿಸಿಲು**: ಹೂಬಿಸಿಲು ಹೊಂಬಿಸಿಲು ಚೆಂಬಿಸಿಲು ಚುಂಬಿಸಲು ಎದೆಯನ್ನೆ ತುಂಬಿಸಲು ಬಿಂಬಿಸುತಿರೆ (ಭಾವಜೀ. ೨೧-೪೦೫). 'ಕೆಂಬಿಸಿಲ್' ಪರಾ. [ ಚೆಂ$_1$ + ಬಿಸಿಲ್ ]

**ಚೆಂಬಿಸಿಲ** (ನಾ). ಕೆಂಪಾದ ಬೆಳಕಿನಿಂದ ಕೂಡಿದವನು; ಸೂರ್ಯ: ಚೆಂಬಿಸಿಲನಂ ಪಾಲ್ಗಡಲನುರುಮದಗಜಮಂ . . . ಕನಸಿನೊಳು ನಿಟ್ಟಿಸಿದಳಾ ಬೆಳಗಪ್ಪ ಜಾವದೊಳ್ (ಸಾಳ್ವಭಾ. ೩-೩೮). [ ಚೆಂಬಿಸಿಲ್$_1$ + – ಅ$_7$ ]

**ಚೆಂಬಿಸಿಲು** 'ಚೆಂಬಿಸಿಲ್' ನೋ.

**ಚೆಂಬು$_1$, ಚಂಬು, ಚೊಂಬು** (ನಾ). ೧. ತಾಮ್ರ ಮೊದಲಾದ ಲೋಹಗಳಿಂದ ಮಾಡಿದ ಬಾಯಿ ಕಿರಿದಾಗಿರುವ ಗುಂಡನೆಯ ಪಾತ್ರೆ; ತಂಬಿಗೆ: ಸಾದಿನ ಭರಣಿ ವನ್ನೀರ ಚೆಂಬುಗಳು . . . ತೈಲದ ಕುಪ್ಪಿಗೆಗಳಾ ಗೃಹದೊಳು ಬಿಡಿಬಿಡಿಯಾಗಿಹವು (ಅಂಜಚ. ೩-೧೦೬); ಪನ್ನೀರ ಚೆಂಬು ಗಂಧೋದಕ ಹೊಜೆ . . . ತಲೆಗಿಂಬಿನೊಳ್ ತಂದಿರಿಸಿದರು (ಮೋಹತ. ೨೬-೩೫). ೨. ಗೋಪುರದ ಕಲಶ: ಯಿಂ ಹೊಸ ಮಹಾದೇವರ ಚೆಂಬಿನ ಒಡಲು ಹೊನ್ನಕಳಶಕೆ ಮಾಡಿದ ಧರ್ಮ (ಸೌಇಇ. IX-ii, ೪೫೦-೨೨; 1444); ಬೆಂಮಣ ಭಂಡಾರಿಯ ಮೊಂಮಗಳ ಮಗಳು ಸಂಕಂಮಮೊದಲಿತಿ ಮಹಾದೇವರ ಚೆಂಬಿನ ಕೆಲಸಕ್ಕೆ ಕೊಟ್ಟ ದೊಡವರಹ (ಸೌಇಇ. IX-ii, ೪೭೯-೧೯; 1510). ೩. ತಾಮ್ರ: 'ಚೆಂಬು' ಅಂದರೆ ತಾಮ್ರ ಮತ್ತು ತಾಮ್ರದ ಪಾತ್ರೆ (ಸಂಶೋಧ. ೮೮). 'ಚೆಂಬುಕಂಟಿಗ' ಪರಾ. **ಚಂಬು**: ೧. ಹೊನ್ನ ತಂಬಿಗೆ ಗಿಂಡಿ ಪನ್ನೀರ ಚಂಬಿನಲಿ ಪೂರ್ಣ ಜಲವ ಕೊಂಡು (ಕಂನವಿ. ೫-೫೫); ಹಸಿರು ಪೇಯದಿಂದ ತುಂಬಿದ ಕಟ್ಟಿಗೆಯ ಚಂಬನ್ನು ನಮಗೆ ಕೊಟ್ಟು ಕುಡಿಯ ಹೇಳಿದರು (ಮೀದಿಮ. ೧೧೨); ಅಂಬು ಬಿಡಲಿಕ್ಕೆ ತಿಳಿಯದೇ ಇದ್ದರೆ ಚಂಬು ಮುಣುಗಿಸ ತಿಳಿಯದೇ (ಗಾದೆ). **ಚೊಂಬು**: ೧. ಚಂದ್ರಕಾಂತಶಿಲೆಯ ಚೊಂಬುಗಳ ಬಾಯಿ ಕಟ್ಟಿ (ಸೌಗಂಧಿ. ೨೧೫-೧೦). ಚಂಬಿನವೂಳಿಗ=ನೀರನ್ನು ತಂದು ಕೊಡುವ ಊಳಿಗ: ದೇವರಾಜ. ಒಡೆಯರ್‍ಯ್ಯನವರ ಚವ್ಬಿನ ವೂಳಿಗದ ಚಲುವವ್ವೆಯವರ ಕುಮಾರರಾದ ದೊಡ್ಡದೇವೈಯ್ಯನವರು (ಎಕ. III ಶ್ರೀರಂಗ. ೧೪-೯೬ : 1080). [ ದೇ.II ತಮಿ. ಚೆಮ್ಬು; ಮಲ. ತುಳು. ಚೆಂಬು; ಕೊಡ. ಚೆಂಬೀ; ತೆಲು. ಚೆಂಬು ]

**ಚೆಂಬು$_2$** (ನಾ). ಸೋರೆಯ ಜಾತಿಗೆ ಸೇರಿದ ಒಂದು ಬಗೆಯ ಬಳ್ಳಿ: "ತುಂಬಃ-ಚೆಂಬು, ಸೋರೆ, ತುಂಬೆ" (ಒಷಧಿ. ೭೧). [<ಸಂ. ತುಂಬ]

**ಚೆಂಬುಕ** 'ಚಂಬಕ' ನೋ.

**ಚೆಂಬುಕುಟಿಗ, ಚಂಬುಕುಟ್ಟಿಗ, ಚಂಬುಕುಟ್ಟಿಗ** (ನಾ). ತಾಮ್ರದ ಕೆಲಸ ಮಾಡುವವನು; ತಾಮ್ರಕಾರ: "ತಾಮ್ರಕುಟ್ಟಕ" (ನಾಚಿರಾ. ೩). **ಚಂಬುಕುಟ್ಟಿಗ**: "ಶೌಲ್ಬಿಕಃ, ತಾಮ್ರಕುಟ್ಟಕಃ-೨ ಚಂಬುಕುಟ್ಟಿಗನ ಪೆಸರುಗಳು" (ಸಿದ್ಧಾಂತಿ. ೨೬೭). **ಚಂಬುಕುಟ್ಟಿಗ**: ಚಂಬುಕುಟ್ಟಿಗನೊಬ್ಬನ ಲಯಬದ್ಧವಾದ ಸುತ್ತಿಗೆಯ ಏಟಿನಂತೆ ಕೇಳಿಸುತ್ತದೆ (ಜೋಮದು. ೨). [ ಚೆಂಬು$_1$ + – ಕುಟಿಗ$_1$ ]

**ಚೆಂಬುಗೆಂಪು** (ನಾ). ತಾಮ್ರದ ಬಣ್ಣ; ಕೆಂಬಣ್ಣ: ನಿಜಬಿಂಬಂ ಚೆಂಬುಗೆಂಪೇಱೆ . . . ಸಾರ್ದಂ ದಿನನಾಥನಸ್ತಗಿರಿಮಸ್ತಪ್ರಸ್ತರ ಪ್ರಾಂತಮಂ (ಅನಂಪು. ೩-೬೬). [ ಚೆಂಬು$_1$ + ಕೆಂಪು$_1$ ]

**ಚೆಂಬುಡಿ** (ನಾ). ಕೆಂಪುಹುಡಿ,-ದೂಳು: ಭೂರಮೆಯ ಸಸಿಂಧೂರ ಸೀಮಂತ ರೇಖೆಯಂತೆ ಚೆಂಬುಡಿ ತಳ್ತು ಕಂಗೊಳಿಪ ಘಂಟಾಪಥದ ಪರಿಸರದಲ್ಲಿ (ರಾಜಶೇ. ೨-೨೦ ವ). [ ಚೆಂ$_1$ + ಪುಡಿ ]

**ಚೆಂಬುರುಳ್** (ನಾ). ಸೊಗಸಾದ ಅರ್ಥ; ಪರಮಸತ್ವ: ಹುಟ್ಟೆಂಬ ಹೆಡ್ಡತನ ಹರಿಯೆ ಹಿರಿದೆಂಬ ಚೆಂಬುರುಳ ಕಾಣುವುದೆ ಅಱಿವು (ಕುಱಳ್. ೧-೩೬-೮). [ ಚೆಂ$_2$ + ಪುರುಳ್ ]

**ಚೆಂಬುಳುಕಾಯಿ** (ನಾ). ಒಂದು ಬಗೆಯ ಮರ: ದೇವದಾರಿ, ಗಂಧಗಿರಿ, ಗ್ಯಾದಾರಿ, ಚೆಂಬುಳುಕಾಯಿ (ಮೃಜಿಗಿ. ೩೫-೬೮೩). [ ? ]

**ಚೆಂಬೂ** (ನಾ). ಕೆಂಪು ಬಣ್ಣದ ಹೂ: ಇಳಾತಳದ ತಾರಗೆಯಂತುಪಹಾರಮಾದ ಚೆಂಬೂಗಳಳುಂಬಮಾಗೆ ನಯನೋತ್ಸವಮಾದುದು ತತ್ಪುರೋತ್ಸವಂ (ಚಂದ್ರಪು. ೩-೯೬). [ ಚೆಂ$_1$ + ಪೂ$_2$ ]

**ಚೆಂಬೂತ** 'ಚೆಂಬೋತ' ನೋ.

**ಚೆಂಬೆಣ್ಣೆಗರುಗ** (ನಾ). ಗರುಗದಲ್ಲಿ ಒಂದು ಬಗೆ: "ಬಲಾ, ವಾಟ್ಯಾಲಕಃ ಈ ೨ ಚೆಂಬೆಣ್ಣೆಗರುಗ" (ನಾಚಿರಾ. ೧೧೦). [ ಚೆಂ$_1$ + ಬೆಣ್ಣೆಗರುಗ ]

**ಚೆಂಬೆರಲ್** (ನಾ). ಕೆಂಪನೆಯ ಬೆರಳು: ಸರ್ವಪುರುಷಾರ್ಥಕ್ಕಂ ನಿಧಿಸ್ಥಾನಮಿಾ ಪದಮೆಂಬಂತಿರೆ ಚೆಂಬೆರಲ್ಗಡಿಗಳಂ ಕೀಱ್ಮಾಡಿ ಸಸ್ನೇಹಹಸ್ತದ ಶೇಷಾದ್ರಿಯೆ ಮುನ್ನಮಪ್ಪೆಡೆಗಳೊಳ್ ಪಾದಾಬ್ಜಮಂ ತೋಱುವೈ (ವಸ್ತುವಂ. ೧೨-೮೮). 'ಕೆಂಬೆರಲ್' ಪರಾ. [ ಚೆಂ$_1$ + ಬೆರಲ್ ]

**ಚೆಂಬೆಲರ್** (ನಾ). ದಕ್ಷಿಣದ ಗಾಳಿ; ತೆಂಗಾಳಿ: ವನಲಕ್ಷ್ಮಿಯ ನರ್ತಕಿಯಂತೆ ಚೆಲ್ವನಾಳ್ದುದು ಫಲಭಾರಕುಂಬುಲತೆ ಚೆಂಬೆಲರ್ಪೊಯ್ಲಿನ ಲೋಲವೃತ್ತಿಯಿಂ (ಶಾಂತೀಶ್ವ. ೧೦-೮೯). [ ᑭ ಇದು 'ತೆಂಬೆಲರ್' ಎಂಬುದರ ಅಪಲಿಖಿತವಿರಬಹುದು. ]

**ಚೆಂಬೆಳಕು** 'ಚೆಂಬೆಳಗು' ನೋ.

**ಚೆಂಬೆಳಗು, ಚೆಂಬೆಳಕು** (ನಾ). ಕೆಂಪುಬಣ್ಣದ ಕಾಂತಿ,-ಪ್ರಭೆ,-ಪ್ರಕಾಶ: ಪಡುಗಡಲ ತಡಿಯ ಯೆಡೆಯೊಳಿಡಿದ ವಿದ್ರುಮಲತೆಯ ಕುಡಿಯ ನಿಡುಚೆಂಬೆಳಗೊ (ನಂದಿಮಾ. ೧೮-೧೮). **ಚೆಂಬೆಳಕು**: ಅಂಬುಜಸಖಂ ಬಂದನಂಬರದಲಿ ತುಂಬಿದ್ದ ಬಲು ಕತ್ತಲೆಂಬ ಕಂಬಳಿ ಕಳಚಿ, ಚೆಂಬೆಳಕು ಹಾಸಿ ನಿಂದುಪ್ಪವಡಿಸಿ (ಕಎಪು. ೨೬-೪). 'ಕೆಂಬೆಳಗು' ಪರಾ. [ ಚೆಂ$_1$ + ಬೆಳಗು$_2$ ]

**ಚೆಂಬೊಂಗಟ್ಟು** (ನಾ). ಚಿನ್ನದಿಂದ ಮಾಡಿದ ಕಟ್ಟು,–ಚೌಕಟ್ಟು : ಭಟಶ್ರೇಣಿಯ ಚೆಂಬೊಂಗಟ್ಟು ತಳ್ತಡ್ಡಣದ ಪೊಳೆಪು ಕೆಂದೂಳಿಯಿಂದೊಂದಿ ಕೆಂಬಟ್ಟೆಯ ಮೇಲ್ಗಟ್ಟಾದುದು (ಅನಂಪು. ೧೩-೭೪).
[ ಚೆಂಬೊನ್ + ಕಟ್ಟು$_2$ ]

**ಚೆಂಬೊಂಗಳಸ** (ನಾ). ಚಿನ್ನದ ಕಲಶ : ಒಪ್ಪಂಬೆತ್ತ ಚೆಂಬೊಂಗಳಸದೆಳವಿಸಿಲ್ ಸಂತತಂ ವ್ಯೋಮಗಂಗಾಬ್ಜದ ಪೆರ್ಚಂ ಮಾಡೆ (ಜಗವಿ. ೯-೯೫); ಚೆಂಬೊಂಗಳ ಸಙ್ಗಳಿಂ ಹರಿಹರ ಶ್ರೀಗೇಹಮಂ ಕೂಡೆ ಮಾಡಿಸಿದಂ (ಎಕ. XI, ದಾವಣ. ೨೫-೭೨ : 1224). [ ಚೆಂಬೊನ್ + ಕಳಸ$_1$(=ಕಲಸ) ]

**ಚೆಂಬೊಗರ್** (ನಾ). ಕೆಂಪು ಬಣ್ಣದ ಕಾಂತಿ : ಬಂದುಗೆಪೂವಿನ ಪರಾಗಮಂ ಕಳಚಿ ಪೊರಳ್ದು ಚೆಂಬೊಗರನಾಂತು . . . ಚರಿಸುವಂ ಮೆಲ್ಲಮೆಲ್ಲನೆ ಮಂದಮಾರುತಂ (ನಂದಿಮಾ. ೩-೨೬) ; ಚೆಂಬೊಗರಿಂ ರಂಗೇರಿಹ ಜಲದಾಬ್ಜಮುಖಿ ತುಸ ತುಟಿತೆರೆದು ಶಿಶುಚಂದ್ರನ ನಗೆ ನಗುವಳು(ಗಣೇಶ. ೩೦-೨). 'ಕೆಂಬೊಗರ್' ಪರಾ. [ ಚೆಂ$_1$ + ಪೊಗರ್ ]

**ಚೆಂಬೊನ್, ಚಂಬೊನ್, ಚೆಂಬೊನ್ನು** (ನಾ). ೧. ಚಿನ್ನ ; ಬಂಗಾರ ; ಅಪರಂಜಿ : "ಸೊನ್ನೆ, ಕಸವರಂ, ಚೆಂಬೊನ್, ಮಿಸುನಿ–ಈ ೪ ಸುವರ್ಣಂ" (ಕಶಸಾ. ೫-೬೧) ; ಚೆಂಬೊನ್ನ ತಳಿಗೆಗಳೊಳ್ ತೆಕ್ಕನೆ ತೀವಿದ ಬಿಡು ಮುತ್ತಿನ ಸೇಸೆಗಳುಂ ಬೆರಸು ಮಹತ್ತರ ದೇವಿಯರ್ ಬಂದು ಪೊಡೆಮಟ್ಟು (ಆದಿಪು. ೨-೬೭ ವ) ; ಚೆಂಬೊನ್ನ ದೋಣಿಗಳೊಳಮಳಂಕರಿಸಿದ ಪಳುಕಿನ ಪಟ್ಟವಣಿಗೆಗಳೊಳಂ (ಕಾದಂಪೂ. ೭೦) : ಚೆಂಬೊನ್ನ ಘಟಂಗಳಿನ ಮೃತಾಂಬುಧಿಯಂಬುಗಳನಾಂತು (ಪಾರ್ಶ್ವಪು. ೧೪-೮೪). ೨. ತಾಮ್ರ : ನಲ್ ಸಮೆದ ಚೆಂಬೊನ್ನ ಕೊಡಮೆತ್ತಿ ಮೂಱು ತಣಿಯೆಱೆದು ಮುಡಿಗೆಯ್ದಳಾ ಪೆಣಕೆ (ಅಂತಿಗೊ. ೨೦-೪೧೬). ೩. ಚಿನ್ನದ ನಾಣ್ಯ : ಚೆಂಬೊಂಗಳನೋರಂತಿರೆ ಬೇಡಿಕೊಳ್ವೆನೆನ್ನಾರ್ಪನಿತಂ (ಧರ್ಮಾಮೃ. ೧-೧೩೭) ; ತುಂಬುರನ ಕಯ್ಯಿಂದ ಹತ್ತೆಂಟು ಸಾವಿರದ ಚೆಂಬೊನ್ನ ಜಾಳಿಗೆಯ ಕುಡಲೆಂದು ತರಿಸೆ (ಸಾಂದಪು. ೧೫-೪೬). **ಚಂಬೊನ್** : ೨. ಚಂಬೊನ್ನ ತಾಳಕಿನ್ನರಿಗಳನಾಂತು ನಿತಂಬಿನಿಯರುಗಳೆಯ್ದಿದರು (ಜೀವಂಸಾಂ. ೧೦-೩೯). **ಚೆಂಬೊನ್ನು** : ೧. "ಚೆಂಬೊನ್ನೆನಲು ಸುವರ್ಣಂ" (ಕಶರ. ೩೭) ; ನಿನ್ನ ಕೃಪಾರಸದಿಂದ್ಯೆಸೆಯಾನು ಕರ್ಬೊನ್ನು ಚೆಂಬೊನ್ನಾದಂತೆ . . . ಭಾಗ್ಯೋನ್ನತಿಯೊಡಗೂಡಿಹೆನು (ಹದಿಬ. ೧-೩೫).
[ ಚೆಂ$_1$ + ಪೊನ್./ತಮಿ. ಚೆಮ್ಪೊನ್ ]

**ಚೆಂಬೊನ್ನು** 'ಚೆಂಬೊನ್' ನೋ.

**ಚೆಂಬೊಳೆಪು** (ನಾ).=ಚೆಂಬೊಗರ್ : ಪೊಳೆವ ಪಳಿಕಿನ ಜಪಸರಂ ಕುಸುಮಮಾಗೆ ಚೆಂಬೊಳೆಪಾಂತ ಜಡೆಗಳೆಳದಳಿರ್ದೊಂಗಲಾಗೆ . . . ಮುನಿಕುಲಮೊಪ್ಪಿತಾ ಮಹಾಕಾನನದೊಳು(ನಂದಿಮಾ. ೨-೨೪). [ ಚೆಂ$_1$ + ಪೊಳೆಪು ]

**ಚೆಂಬೋತ, ಚಂಬೋತ, ಚೆಂಬೂತ** (ನಾ). ಒಂದು ಬಗೆಯ ಕೆಂಪು ಬಣ್ಣದ ಪಕ್ಷಿ ; ಕೆಂಪು ಕಾಗೆ ; ಸಂಬಾರಗಾಗೆ : "ಧೂಮ್ರಚ್ಛದಂ ಚೆಂಬೋತ[ಪಾಠಾಂ. ಕೆಂಚೋತ] ಮೆಂದೆನಿಕ್ಕುಂ" (ಮಂಗರಾ. ೫೨-೧೧) ; ಅಂಚೆಯ ಚೆಂಬೋತನ ಚಿಲಕೂಲಿಯ ಕೊಂಚೆಯ(ಹಮ್ಮೀರ. ೪-೧೨ ರಗಳೆ) : **ಚಂಬೋತ**: ಸಾಳುವ ಚಿಲಿಮಿಲಿಗ ಚಂ[ಪಾಠಾಂ. ಚೆಂ]ಬೋತ ಮಿಾನ್ಬುಲಿಗ . . . ಮೊದಲಾದಖಿಳ ಖಗಕುಲ ಬಿದ್ದುದುರಿಯೊಳಗೆ (ಕುವ್ಯಾಅ. ೨೦-೫೩); ಮರಕುಟಿಗ ಚಂಬೋತ ಶುಕ . . . ಸರಟ ಸಾರ ಸಮೂಹ ಮೇಳಗಳಿತ್ತಲಿವೆ (ತೊರರಾ. ೩-೧-೩೨). **ಚೆಂಬೂತ** : ಪಿಕ್ಕಳಿಕ ಚೆಂಬೂ[ಪಾಠಾಂ. ಬೋ]ತ ಗೀಜಗ . . . ಕೆಂಡವಕ್ಕಿಗಳವೆಱೊಳೊಪ್ಪಿದುದು (ಸಾಳ್ವಭಾ. ೫-೨೨) ; ಕಾಗೆ ಪಿಕನಂ ಚೆಂಬೂತ ಮಯೂರನಂ . . . ಮೆಚ್ಚದೊಡದೇಂ ಭಂಗಗಳೇ ಧಾತ್ರಿಯೊಳ್ (ನೀತಿಸಾ. ೬೦೨). 'ಕೆಂಬೋತ' ಪರಾ.
[ ದೇ.॥ ತಮಿ. ಮಲ. ಚೆಮ್ಪೋತ್ತು ]

**ಚೆಕ್** 'ಚೆಕ್ಕು$_2$' ನೋ.

**ಚೆಕ್ಕಂದ** 'ಚಕ್ಕಂದ' ನೋ.

**ಚೆಕ್ಕನೆ** (ಅ). ಥಟ್ಟನೆ ; ಬೇಗನೆ ; ಕೂಡಲೆ : "ಭೋಂಕನೆ ಚಿಕ್ಕನೆ . . . ಚೆಚ್ಚರ ಬೆಚ್ಚರಮುಂ ಕೂಡಿರೆ ತವ್ವೊಳೊದವುಗುಂ ಶೀಘ್ರಾರ್ಥಂ"(ಶಮದ. ೩೦೫); ಉರೋಭಾಗಮಂ ಪಾದದಿಂ ಪೋಗೊದೆಯುತ್ತುಂ ಕೋಟ್ಕಳಂ ಚೆಕ್ಕನೆ ಕಿಱಿ (ಜಗವಿ. ೬-೫೫) : ಕೊಳದೊಳು ಕಾಲಂ ತೊಳೆಯಲಪ್ಪಿಗೆಯಲ್ಲಿರ್ದ ನಕ್ರಂ ಚೆಕ್ಕನೆ ಚರಣಮಂ ಪಿಡಿಯೆ (ಪುಣ್ಯಾಸ್ರ. ೬-೧೪ ವ) : ಕಣ್ಬಟ್ಟು. ಚೆಕ್ಕನೆದ್ದು ಹೊರಟು ಹೋಗುವನು (ಬಟ್ಟಅ. ೨೨-೧೧). **ಚೆಕ್ಕಚೆಕ್ಕನೆ** (ದ್ವಿರುಕ್ತಿ) : ಪಟ್ಟವನು ಚೆಕ್ಕಚೆಕ್ಕನೆ[ಪಾಠಾಂ. ಚಕ್ಕಚಕ್ಕನೆ] ಕಟ್ಟಿಯವರವರಕ್ಕಱಿನ ಖಾಂಡಕ್ಕವರ ಪೆಸರಿಕ್ಕೆ (ಮದೇಪು. ೫-೬೬).
[ ದೇ.॥ ತಮಿ.ಚಿಕ್ಕೆನ್ ; ಮಲ. ಚಿಕ್ಕೆನ್ನು. ಚಿಕ್ಕನೇ : ತುಳು. ಚಕ್ಕ ]

**ಚೆಕ್ಕವತ್ತ** 'ಚಕ್ಕವತ್ತಿ' ನೋ.

**ಚೆಕ್ಕಿತ** (ನಾ). ಸ್ಪಷ್ಟ, ನಿರ್ದಿಷ್ಟ : ಚೆಕ್ಕಿತಹ ಮಾರ್ಗದೊಳು ಬಹು ಜನ್ಮಕ್ಕೆ ಸಾಧನವಹ ಭವಂಗಳನೊಕ್ಕಲಿಕ್ಕುವ ಭೇದವನು ಕೃಪೆಯಿಂದಲೆನ್ನೊಳಗೆ ಮಿಕ್ಕು ಬೆರಸಲ್ಬೇಕೆನುತ ಮೈಯಿಕ್ಕಿ ಬಿನ್ನೈಸಿದರೆ ಶಿಷ್ಯಂಗಕ್ಕಱಿಂ ಬೆಸಸಿದನು ಸದ್ಗುರುನಾಥನುಚಿತದಲಿ (ಸದ್ಗುರು. ೧-೧೩); ಮಾತಿನಲ್ಲಿ ಮತ್ತು ನಡವಳಿಕೆಯಲ್ಲಿ ಚೆಕ್ಕಿತವಾಗಿದ್ದರೆ ಜೀವನದಲ್ಲಿ ಕಷ್ಟಗಳು ಬರುವುದಿಲ್ಲ (ರೂಢಿ). [ <ಖಚಿತ ? ]

**ಚೆಕ್ಕಿಸು** (ಕ್ರಿ). ಹಿಂದಕ್ಕೆ ಅಟ್ಟು : ಹಿಮ್ಮೆಟ್ಟಿಸು : ಅದರಿಂದೆ ಕೈಗಾಯ್ದನಲ್ಲದೊಡೆ ನಿಲಿಸಿ ಬಾಜಿಯಲಿ ಚೆಕ್ಕಿಸದೆ ಬಿಡೆ (ವಂಕಾರಾ. ೬-೧೦-೪೨).
[ ಚೆಕ್ಕು$_0$ + – ಇಸು$_3$ ]

**ಚೆಕ್ಕು$_1$** 'ಸೆಕ್ಕೆ$_1$' ನೋ.

**ಚೆಕ್ಕು$_2$, ಚೆಕ್$_2$, ಚಕ್ಕು$_3$, ಚೆಕ್** (ನಾ). ೧. ಚೌಕುಳಿ ಬಟ್ಟೆ ; ಚೌಕುಳಿ ಆಕೃತಿಯಾಗಿ ನೆಯ್ದ ಅಥವಾ ಅಚ್ಚೊತ್ತಿದ ಬಟ್ಟೆ : ಚೌಕುಳಿಬಟ್ಟೆ, ಪಪ್ಪಳಿಬಟ್ಟೆ ; ಚೆಕ್ಕು ಬಟ್ಟೆ (Check. ಇಂಗ್ಲಿ). **ಚೆಕ್$_2$** : ೨. ತಾಳೆ ನೋಡುವುದು ; ಸರಿ ನೋಡುವುದು : ಲೆಕ್ಕ ಚೆಕ್‌ಮಾಡಿ ಆಮೇಲೆ ಹಣ ಕೊಡು (ರೂಢಿ). **ಚಕ್ಕು$_3$** : ೧. ಚಕ್ಕು ಸೀರೆ ಈಗಿನ ಹೊಸ ಫ್ಯಾಶನ್ನು (ರೂಢಿ). **ಚೆಕ್** : ೨. ಅವರು 'ಚೆಕ್' ಮಾಡಿದ ಬಳಿಕ . . . ರಾತ್ರಿ ಎಂಟರ ವರೆಗೆ ಕೆಲಸ (ನಾಪೋಲೀ. ೮೬). [←ಇಂ. Check ]

**ಚೆಕ್ಕು$_3$, ಚಕ್ಕು$_4$** (ನಾ). ಬ್ಯಾಂಕುಗಳಿಂದ ಹಣ ಪಡೆಯಲು ಕೊಡುವ ಆದೇಶಪತ್ರ ; ದರ್ಶನಿ ಹುಂಡಿ ; ಧನಾದೇಶ : ಆರು ಸಾವಿರದ ಇನ್ನೂರೈವತ್ತು ರೂಪಾಯಿಗಳಿಗೆ ರಂಗಾಚಾರಿಯ ರುಜು ಇದ್ದ ಒಂದು ಚೆಕ್ಕು ಇತ್ತು (ಇಬದು. ೧೩೭) : ಸಮಯಕ್ಕೆ ದೊರೆಯುವ ರೂಪಾಯಿ ಚಿಲ್ಲರೆ ನೂರರ ಚೆಕ್ಕಿಗೆ ಮಿಗಿಲು (ಚಂದ್ರವೀ. ೧೪೯-೯೩). **ಚಕ್ಕು$_4$** : ಈಗ ತಾನೇ ನನಗೆ ಒಂದು ಸಾವಿರ ರೂಪಾಯಿಗೆ ಚಕ್ಕು ಬಂದಿದೆ (ರೂಢಿ). 'ಚಕ್ಕು ಹುಂಡಿ' ಪರಾ. [ ←ಇಂ. Cheque ]

**ಚೆಕ್ಕುದಱಿ, ಚಕ್ಕುದಱಿ** (ಕ್ರಿ). ಚೂರಾಗುವಂತೆ ಕಡಿ ; ಚೆಕ್ಕೆಯಾಗುವಂತೆ ಕತ್ತರಿಸು : ವೀರರಂ ತಡೆಗಡಿದ ನೆತ್ತರ ಕಡಲ್ಕಟ್ಟೆ ಚೆಕ್ಕುದಱಿದಂತಾಗೆ ತಳ್ತ ಕೂರಾಳ್ಗಳಂ . . . ಬಗಿದು (ಇಹರ. ದೇ. ೪೨-೫). **ಚಕ್ಕುದಱಿ** : ಕೂರಸಿಯೆಸಕಕ್ಕೆ ಚಕ್ಕುದಱಿಯಲುಱಿ ಯಾವವನೆಂದೆನುತ್ತೆ ಗರ್ಜಿಸಿ ಜಡಿದೆಟ್ದನಾ ಯಮಸೂನು ಕರಾಗ್ರದ ಖಡ್ಗಧೇನುವಂ (ಮಹಾನೇ. ೭-೧೫). [ ಚೆಕ್ಕು$_1$(<ಸೆಕ್ಕೆ$_1$) + ತಱಿ$_1$ ]

**ಚೆಕ್ಕುಲಗುಲಿ** 'ಚಕ್ಕುಲಗುಳಿ' ನೋ.

**ಚೆಕ್ಕುಲಿ** 'ಚಕ್ಕುಲಿ' ನೋ.

**ಚೆಕ್ಕೆ** 'ಸೆಕ್ಕೆ$_1$' ನೋ.

**ಚೆಕ್ಕೆವತ್ತ** 'ಚಕ್ಕವತ್ತಿ' ನೋ.

**ಚಿಗಳ್, ಚಗಳು** (ನಾ). ಉತ್ಪನ್ನ ; ಫಸಲು (?) : ಪಗಲಾದಿತ್ಯಂ ಮಕರಂಬುಗುವೊಡೆ ಕರಮೊಳ್ಳಿತಾಗಿ ಜೋಳಂ ಬೆಳೆಗುಂ ನೆಗಟ್ವಂದಿರುಳುಂ ಪೊಕ್ಕೊಡೆ ಚಿಗಳಗಣಿತಮಲ್ಲಿ ಜೋಳನಾಡೆಯೆಂದಂ ಬಿಟ್ಟಂ (ಜಟ್ಮಮ. ೯-೨೦೪). **ಚಗಳು** : ಆ ಯೆರಡುತೋಟದ ಒಳಗುಳ ಹಲಸು ಮಣಸು ಮಾವು ಚೆಳುವೊಟೆಯ ಮೊದಲಾಗಿ ಯೇನು ಉಳಂಥಾ ಬೆಳೆಯ ಚಗಳ ನೆಲ್ಲವನು ಆಗು ಮಾಡಿಕೊಂಡು (ಎಕ. VIII, ತೀರ್ಥಹ. ೩೨-೪೬ ; 1418 ?).

[ ? ]

**ಚಿಗಿಚಿ** (ನಾ). ನುಗ್ಗೆಮರ ; "ಶೋಭಾಂಜನ" (ಪಂಡಿತ).

[ ?./ಮರಾ. ಶೇಗಟ, ಶೇಗವಾ ]

**ಚಿಗತಳಿ** 'ಚಗತಿಳಿ' ನೋ.

**ಚಿಚ್ಚರ** 'ಚಚ್ಚರ' ನೋ.

**ಚಿಚ್ಚರಂ** 'ಚಚ್ಚರಂ' ನೋ.

**ಚಿಚ್ಚರಿಕೆ** (ನಾ). ಚಳಕ; ನೈಪುಣ್ಯ ; ಕೌಶಲ ; ವೇಗ : ಮೆಯ್ ಮೆಯ್ ಚಲದಿಂ ಮುಟ್ಟಿ ಪೊಣರ್ದು ತಳ್ತಿಱಿವು[ರ್ಕಿಂ] ಕೆಯ್ ಚಿಚ್ಚರಿಕೆಯ ಚಲದಿಂ ಕೆಯ್ ಚಳಿವಿನಮಿಱಿದರೆರಡು ಬಲದೊಳಮದಟರ್ (ಪಂಪಭಾ. ೧೩-೩೪).

[ ಚಿಚ್ಚರ(<ಚಚ್ಚರ) + – ಇಕೆ ]

**ಚಿಚ್ಚರಿಗ** 'ಚಚ್ಚರಿಗ' ನೋ.

**ಚಿಚ್ಚರಿತ** (ನಾ). ಜಾಗರೂಕನಾದವನು ; ಜಾಗೃತನಾದವನು : ಪೊಚ್ಚ ಪೊಸಗಂಪನೀಯುತುಮಚ್ಚಿಗೊಳಿಪ್ಪಮಲಧೂಪಮಂ ಶಾಂತಂಗಂ ಚಿಚ್ಚರಿತ ನರ್ಬಿಸುತ್ತುಂ ಸಚ್ಚಿನ್ಮಾದವಾಂತು ರಂಜಿಸಿದಂ (ಉದ್ಭಟ. ೧೧-೩೮).

[ <ಚಿಚ್ಚರ ]

**ಚಿಚ್ಚರಿಸು** (ಕ್ರಿ). ಎಚ್ಚರಿಕೆಯಿಂದಿರು ; ಜಾಗ್ರುತೆಗೊಳ್ಳು : ಪನ್ನಗರಾಜನ ನೊತ್ತಿ ಕಟ್ಟಿ ಚಿಚ್ಚರಿಸಿ ಕರಾಗ್ರದೊಳ್ ನಿಱಿಪೆನೋ ಪಿಡಿದೇಱುವೆನೋ ಸುರೇಭಮಂ (ಧರ್ಮಾಮೃ. ೯-೧೮೨). [ಚಿಚ್ಚರ (<ಚಚ್ಚರ) + – ಇಸು$_3$]

**ಚಿಚ್ಚರು** 'ಚಚ್ಚರ' ನೋ.

**ಚಿಚ್ಚು$_1$** 'ಚಚ್ಚು$_1$' ನೋ.

**ಚಿಚ್ಚು$_2$** 'ಚರ್ಚ$_1$' ನೋ.

**ಚಿಜಕರ** (ನಾ). ಒಂದು ಬಗೆಯ ಜೋಳ : ಈ ಜಿಲ್ಲೆಯಲ್ಲಿ ಪೊಟ್ಟಿಗೆ ೧೮ ಪ್ರಕಾರದ ಜೋಳ ಬೆಳೆಯುವದು . . . ಅವುಗಳ ಹೆಸರುಗಳು – ಮೂರ ತಿಂಗಳ ಜೋಳ . . . ಚಿಜಕರ, ಕಾಗಿಜೋಳ (ಕಭಾಗ. ೨೮೧). [ ? ]

**ಚಿಜ್ಜ** 'ಛಜ್ಜ' ನೋ.

**ಚಿಜ್ಜೆ$_1$** 'ಸೆಜ್ಜೆ$_1$' ನೋ.

**ಚಿಜ್ಜೆ$_2$** 'ಸೆಜ್ಜೆ$_2$' ನೋ.

**ಚಿಜ್ಜೆ$_3$** (ನಾ). ಒಂದಂ ಬಗೆಯ ವಾದ್ಯ (?) : ಚಿಜ್ಜೆದನಿ ಕೇಳಿ ಎದ್ದು ಮಜ್ಜಣ ಮಾಡು ರುದ್ರಾಕ್ಷಿ ತೊಟ್ಟು ಮಡಿಯುಟ್ಟು ಸಿದ್ಧರ ಊಳಿಗದ ಶಿವಗುಡಿಗೆ ನೀನು ಹೋಗಮ್ಮ (ಶರಚ. ೨೦). [ ? ]

**ಚಿಟಿಗೆ** (ನಾ). ಒಂದು ಬಗೆಯ ಆದಾಯ (?) : ಅರಮನೆಗೆ ತೆಱುವ ಸಂಬಳ ಸರತಿ ಕುಡಿಕೆ ಚಿಟಿಗೆ ಅಧಿಕಾರಿ ಸೇನಬೋವರ ಸಂಬಳ ಎಲ್ಲವನು ಬಿಟ್ಟೆಲೂ (ಎಕ. III, ಮಳವ. ೬೭-೫ ; 1550 ?). [ <ಚಟ್ಟಿಗೆ ? ]

**ಚಿಟ್ಟಿ$_1$** 'ಚರಟ' ನೋ.

**ಚಿಟ್ಟಿ$_2$** 'ಚಟ್ಟಿ$_3$' ನೋ.

**ಚಿಟ್ಟಿಬೆಳಗು** (ಕ್ರಿ). ಚರ್ಮವನ್ನು ಸುಲಿ; ಹಿಂಸೆಮಾಡು : ಅವರು ಚಿಟ್ಟಿ ಬೆಳಗದಿದ್ದರೂ ಅವರು ಬಿಡುವ ಎಚ್ಚರಿಕೆಯ ಹುಸಿಗುಂಡಿಗೇ ತಮ್ಮಾಜಿ ಗತಪ್ರಾಣನಾಗುತ್ತಿದ್ದ (ದೀಪಹ. I, ೩೮).

[ ಚಿಟ್ಟಿ$_1$ (<ಚರಟ) + ಬೆಳಗು$_1$ ]

**ಚಿಟ್ಟಿ$_1$** 'ಚಟ್ಟಿ$_1$' ನೋ.

**ಚಿಟ್ಟಿ$_2$** 'ಛಟ್ಟಿ' ನೋ.

**ಚಿಟ್ಟಿ$_3$** (ನಾ) ಒಂದಂ ಬಗೆಯ ಪಕ್ಷಿ : "ಟಿಟ್ಟಿಭಾಃ, ಕ್ಷುದ್ರ ಪಕ್ಷಿಣಃ – ಈ ೨ ಚಿಟ್ಟಿ [ಪಾಠಾಂ. ಚಿಟ್ಟಿ]" (ಹಲಾಯು. ೪೨-೯೯). [ ? ]

**ಚಿಟ್ಟಿಗೆ** (ನಾ). ತೊತ್ತು ; ದಾಸಿ : ಚಿಟ್ಟಿಗೆಯ ಮಗ ಮಲ್ಲನಂ ಕರೆದು ನೊಸಲಲ್ಲಿ ಕಟ್ಟುಗ್ರವಾಗಿ ರಾಜಿಪ ಅಗ್ನಿನೇತ್ರವನು . . . ತೋಱಿಸಲ್ಕೆ (ಪ್ರೌಢರಾ. ೧೪-೩೮). [ <ಸಂ. ಚೇಟಿಕಾ ]

**ಚಿಟ್ಟಿಸು** (ಕ್ರಿ). ಚೇಷ್ಟಿಸು ; ಕೆಲಸ ಮಾಡು: ತ್ರಿಜಗವನೆತ್ತುವ ವೀರ್ಯಂ ನಿಜವಾಗಿಹುದವರ್ಗೆ ಚಿಟ್ಟಿಸದೆ ತೆಪ್ಪನಿಹಂ ತ್ರಿಜಗದ ಸುಖಕಧಿಕ ಸುಖಂ ನಿಜವಾಗಿಹುದೆಂತುಟೆಂತು ನುಡಿಯಲಸಕ್ಕಂ (ತ್ರಿಲೋಕ. ೧೦೬).

[ <ಚೇಷ್ಟಿಸು ]

**ಚಿಟ್ಟೆಱಿ** 'ಚಟ್ಟೆಱಿ' ನೋ.

**ಚಿಟ್ಟು$_1$** 'ಚಟ್ಟು$_1$' ನೋ.

**ಚಿಟ್ಟು$_2$** 'ಚಟ್ಟು$_2$' ನೋ.

**ಚಿಟ್ಟು$_3$** 'ಚಟ್ಟು$_5$' ನೋ.

**ಚಿಡಿಯಕ್ಕ** (ನಾ). ಒಬ್ಬಾಕೆಯ ಹೆಸರು : ಗೋವಿನ್ದ ಮಾಧವರಸರ್ ಕೂಡಲೂರಾ ಮೂವತ್ತುಮಾಳೆ ಚಿಡಿಯಕ್ಕಂ ಪೊಯ್ದು ಮಣ್ಣು ಇಕ್ಕಣ್ಣಾಗಂ (ಎಕ. XII, ಮಧುಗಿ. ೫೦-೫ ; ಸು. 950 ?).

[ ಚಿಡಿ$_0$ + ಅಕ್ಕ$_1$ ]

**ಚಿಡ್ಡಿ** 'ಚಡ್ಡಿ$_1$' ನೋ.

**ಚಿಣತಿ** (ನಾ). ಹಿಮ್ಮೇಳದ ವ್ಯಕ್ತಿ (?) : ಇನ್ನಾಡುವೆ ಜಂಗಮ ಬಹುರೂಪ . . . ಇಲ್ಲೆನ್ನೋ ಮದ್ದಳಿಗ ಒಲ್ಲೆ ಎನ್ನೋ ಕಹಳೆಕಾಱ ಬಿಂದವ ಹರಿದು ನಿಂದು ಹಾಡಿರೋ ಚಿಣತಿಯರಿರಾ (ಸರ್ವವ. ೪೮-೨೫೫) 'ಚಿಹಣಿ' ಪರಾ.

[ ? ]

**ಚಿಣ್ಣವೂರ್** (ನಾ). ಒಂದು ಊರಿನ ಹೆಸರು : ಅವರಾಳ್ಚಿಣ್ಣವೂರೊಳ ಎಱಿವಮ್ಮನಾಸನ್ದಿ ಆಳೆ (ಎಕ. VI, ಕಡೂರು. ೧೪೫-೪ ; ಸು. 750).

[ ಚಿಣ್ಣ ? + ಊರ್ ]

**ಚಿದರಿಸು** 'ಕೆದಱಿಸು' ನೋ.

**ಚಿದಱು** 'ಕೆದಱ್$_1$' ನೋ.

**ಚಿದುಕ** (ನಾ). ಒಂದು ಬಗೆಯ ಮರ (?) : ಬೆಟ್ಟ ಕಿಬ್ಬಿಯಲ್ಲಿ ಚಿದುಕದ ತಾಳಲ್ಲಿ ಈಶಾನ್ಯ ಮುಖವಾಗಿ ನಟ್ಟ ಕಲ್ಲು ೧ (ಎಕ. XIV, ನಂಜನ. ೨೯೫ ಪುಟ. ೧೫೦-೩೩ ; 1716). [ ? ]

**ಚಿದುರು$_1$** 'ಕೆದಱ್'$_1$ ನೋ.

**ಚಿದುರು$_2$** 'ಚದುರ್' ನೋ.

**ಚಿದುಱಿಸು** 'ಕೆದಱಿಸು' ನೋ.

**ಚಿದುಱು** 'ಕೆದಱ್$_1$' ನೋ.

**ಚಿನ್ನ, ಚನ್ನ$_1$** (ನಾ). ೧. ಸುಂದರನಾದವನು ; ಚೆಲುವನಾದವನು : ಪೊನ್ನುಳ್ಳವನೆ ಕುಲೀನಂ ಚಿನ್ನಂ ಕಲಿ ಸತ್ಯವಾದಿಯೆನಿಸುಗುಂ (ಕಾವ್ಯಾವ. ೮೦); ಚಲದಭಿರಾಮನಣ್ಮನ ತವಮ್ಮನೆ ಚಿನ್ನರ ಚಕ್ರವರ್ತ್ತಿ (ಎಕ. VIII, ಸೊರಬ. ೨೭೭-೪೨ ; ಸು. 1165) ; ಎನ್ನಾನಂದಸುಧಾಬ್ಧಿವರ್ಧನ ಕಳಾಸಂಪನ್ನನಂ ಚಿನ್ನನಂ . . . ಕಂಡೆಂ (ಪಂಪಾಶ. ೩೫) : ಚೆಲುವರ ಚೆಲ್ವ ಚಿನ್ನಿಗರ ಚಿನ್ನ ಸುವೀರರ ವೀರ (ಅಪಶ. ೧೨೨). ೨. ಶೂರ; ಪರಾಕ್ರಮಿ: ಚಿನ್ನರನಡಿಗೊತ್ತಿ ಮಂಡಳಿಕರಂ ಬೆಸಕೆಯ್ಸಿ (ಪಂಪಭಾ. ೬-೧೮). 'ಚಿನ್ನ ಪೊಂಗ' ಪರಾ. ೩. ಒಳ್ಳೆಯದು : ತಾನು ಒಬ್ಬ ತಳವಾರನಾಗಿದ್ದರೆ ಎಷ್ಟು ಚಿನ್ನ (ಧರ್ಮಸಾ. ೬೩). ೪. ಚೆಲುವು; ಸೌಂದರ್ಯ; ಸೊಗಸು: ಬಿಸುಗದಿರಳಿದಹಿಮಕಿರಣನಂತೆ ನೋಳ್ಪರ ಕಣ್ಗೆ ಚಿನ್ನಬಸವಂ ಚಿನ್ನಮಂ ತಳೆದನು (ಚಿಬಪು. ೫-೪೨). ೫. ಅಂದವಾದಂದು ; ಮನೋಹರ

ವಾದಂದು : ಭೃಂಗಕೋಕಿಳ ಕೀರಪ್ರಿಯ ಚೂತರಾಜ ತರುಗಳ್ ನಿನ್ನಂತೆ ಚೆನ್ನಂಗಳೇ (ಆದಿಪು. ೧೦-೯೮). (ಗು). ೬. ಅಂದವಾದ ; ಚೆಲುವಾದ : ಧರಣೀನಾಥನ ಚೆನ್ನ ಪೊನ್ನ ಕರುವಮಾಡಂ ಮಾಳ್ಪುದಾಶ್ಚರ್ಯಮಂ (ಧಾಥಪು. ೪-೩೨). 'ಚೆನ್ನಪೂ' ಪರಾ. ಚೆನ್ನ₁: (ಕ). [ ಚೆನ್ನ + – ಅ₇ ]

**ಚೆನ್ನಂಗಿ, ಚನ್ನಂಗ, ಚೆನ್ನಂಗಿ₁, ಚೆನ್ನಗೆ₁, ಚೌನಂಗಿ** (ನಾ). ಒಂದು ಬಗೆಯ ಮರ : "ಚೆನ್ನಂಗಿ ಚಲಿಯಕ್ಕಂ" (ಮಂಗರಾ. ೩೭-೧೯) ; ಹಲಸಾಲಂ ತಡಸಾಸು . . . ಚೆನ್ನಂಗಿ ಬೊಬ್ಬುಲಿ (ಪಾರ್ಶ್ವಪು. ೧೨-೩೮) ; ಕರುವಿಡಿದಿರ್ಪಾ ಚೆನ್ನಂಗಿಯ ತರು ಡಾಣೆಗೆ (ಶಮದ. ೬೨ ಪ್ರಯೋ) ; ಚೆನ್ನಂಗಿ ಬನ್ನಿ ಹೊನ್ನೆಯ ತರುಗಳ್ (ಹಮ್ಮಿ.ರ. ೪-೬೯) ; ತೇಗ ಚೆನ್ನಂಗಿ ಬನ್ನಿ ಪಾದ್ರಿಯು . . . ಮೆರೆದವರನ್ನಾದಿ (ಗೋಹಾಡು. ೪). **ಚೆನ್ನಂಗ** : (ಕ). **ಚೆನ್ನಂಗಿ₁** : ಹೂಲಿ ಮಾಲಿನಿ ಬನ್ನಿ ಹೊನ್ನೆ ಚನ್ನಂಗಿ [ಪಾಠಾಂ. ಸೊಗಡಗಿಲು] (ಸೋಮಚ. ೩-೨) ; ಹೊನ್ನೆ ಹೊನ್ನಯ್ಯಗಳ ಮಗನಂ ಮನ್ನಿಸಾ ಚ[ಪಾಠಾಂ. ಚೆ]ನ್ನಂಗಿಯೇ ಆ ಚೆನ್ನಯ್ಯಂಗೊಲಿದಭವನೆಂದಿಗೆ ಚೆನ್ನಮಾಡುವನು (ಬಸಪು. ೪೫-೩೭) ; ಚನ್ನಂಗಿ (ಬೊಂದಾರ) . . . ಇಮಾರತಿಗೆ ಮೇಲಾದದ್ದು (ಕಥಾಗಿ. ೩೯). **ಚೆನ್ನಗೆ₁** : ಎಲವದ ಬೇಲ ಚೆನ್ನಗೆಯ ಪೊನ್ನೆಯ ಕಮ್ಮರದ (ಲೀಲಾವ. ೬-೨೭). **ಚೌನಂಗಿ**: ಮರಗಳು: ಹೆಸವ, ಹೆಬ್ಬಲಸು . . . ಗೊರವಿ, ಹೆಣ್ಣುಗೊರವಿ, ಚೌನಂಗಿ, ಮಡ್ಡಿ (ನಮ್ಮನು. ೨೩೭). [ ದೇ.II ತೆಲು. ಚೆನ್ನಂಗಿ, ಚೆನಂಗಿ ]

**ಚೆನ್ನಂಗಿಬಿದಿರು, ಚನ್ನಂಗಿಬಿದಿರು** (ನಾ). ಒಂದು ಬಗೆಯ ಬಿದಿರು : ಅಣ್ಣ ತಮ್ಮರು ಕೂಡಿ ನಿನ್ನೆ ಗುಡ್ಡವನೇರಿ ಚೆನ್ನಂಗಿಬಿದಿರ ಕಡಿದಾರ (ಕನ್ನಜಾ. ೧೮). **ಚನ್ನಂಗಿಬಿದಿರು** : ಅಣ್ಣ ತಮ್ಮ ಕೂಡಿ ನಿನ್ನೆ ಗುಡ್ಡಾ ಏರಿ ಚನ್ನಂಗಿಬಿದಿರ ಕಡಿದಾರೊ (ಹಳ್ಳಿಯ. ೩೧).

[ ಚೆನ್ನಂಗಿ₀ + ಬಿದಿರು₂ (<ಬಿದಿರ್₂) ]

**ಚೆನ್ನಕ್ಷಿ** (ನಾ). ಒಳ್ಳೆಯ ಕಣ್ಣು ; ದೋಷರಹಿತವಾದ ಕಣ್ಣು : ನಿನ್ನ ನಯನದೊಳೆನ್ನ ಚೆನ್ನಕ್ಷಿಯನಮರ್ಚುವೆನು (ಬಸಪು. ೧೮-೭೧).

[ ಚೆನ್ನ + ಅಕ್ಷಿ ]

**ಚೆನ್ನಗಂಡ** (ನಾ). ಸುಂದರನಾದ ವೀರ ; ಚೆಲುವನಾದ ಸಾಹಸಿ : ಮಿಡುಬುಣ್ಮಿ ಪುಷ್ಪಕೃತ ಶೇಖರದಂತಿರೆ ಕೊಂಡು ಪೋದರಚ್ಚರಸಿಯರಣ್ಮಿ ಸತ್ತ ಭಟರಂ ಕೊನೆವಿಾಸೆಯ ಚೆನ್ನಗಂಡರಂ (ಗದಾಯು. ೪-೨೨).

[ ಚೆನ್ನ + ಗಂಡ₁ ]

**ಚೆನ್ನಗೆ₁** 'ಚೆನ್ನಂಗಿ' ನೋ.

**ಚೆನ್ನಗೆ₂** (ನಾ). (ಕರಾ) ಬಾಯಿಕಟ್ಟಿರುವ ಚೀಲದಲ್ಲಿರುವ ಧಾನ್ಯವನ್ನು ಪರೀಕ್ಷಿಸುವುದಕ್ಕಾಗಿ ಸ್ವಲ್ಪ ಹೊರಗೆ ತೆಗೆದುಕೊಳ್ಳಲು ಸಂದಿಯಲ್ಲಿ ಚೂಪಾಗಿದ್ದು ಕೊಳವೆಯಂತಿರುವ ಕಬ್ಬಿಣದ ಸಾಧನ ; ಸಕ್ಕರೆ ಗುತ್ತಿ : ಅಕ್ಕಿ ಪರೀಕ್ಷಿಸಲು ಚೆನ್ನಗೆ ಸಾಲದೆ (ರೂಢಿ). [ ? ]

**ಚೆನ್ನಡಿ, ಚನ್ನಡಿ** (ನಾ). ೧. ಚೆಲುವಾದ ಪಾದ ; ಮನೋಹರವಾದ ಪಾದ : ತಾವರೆಗಳಡಿಯ ಥಳಥಳಿಪ ಚೆನ್ನಡಿಗಳಸಿಯಡಿಯ ಲಲಿತಾಂಗಿಯರ್ (ಜಬಪು. ೩೭-೪೦) ; ಎನ್ನ ಜನ್ಮಕ್ಕೆ ಸಾಫಲ್ಯಮಾದುದು ನಿನ್ನ ಚೆನ್ನಡಿಯೂಳಿಗದಿಂದ (ಹದಿಬ. ೧-೩೯) ; ಚೆನ್ನಡಿ ಬಿಣ್ಪೊಡೆ ಬಡನಡು (ಚಳವಿ. ೩-೯೦). ೨. ಮೇಲಾದ ಪಾದ ; ಶ್ರೇಷ್ಠವಾದ ಪಾದ : ಸನ್ನುತ ಕವಿ ಪಂಪರಾಜನು ಮೊದಲರ ಚೆನ್ನಡಿಗಳಿಗೆಬಗುವೆನು (ಅಂಜಜ. ೧-೬೯). ೩. ಚೆನ್ನಾದ ಅಡಿಭಾಗ,– ತಳಭಾಗ : ಗೂಳಿಯ ಪಂದಿಯ ಪೊನ್ನ ಬೀರಸಂಕಲೆಯ ತೊಳಪ್ಪ ಕನ್ನಡಿಯ ಚೆನ್ನಡಿಯಡ್ಡಣ ವೆಡ್ಡಮಾಗೆ ಮೂದಲಿಸಿ ಪೊಡರ್ಪು ಪೆರ್ಚಿ ಕಿಲರುರ್ಕುಡಿಗಳ್ ತಱಿಸಂದು ಕಾದಿದರ್ (ಕಬ್ಬಿಕಾ. ೨೭೨). **ಚನ್ನಡಿ**: ೨. ಸನ್ನುತ ಚತುರ್ವಿಂಶತಿ ಜಿನರಾಜರ ಚನ್ನಡಿಗಳಿಗೆಬಗುವೆನು (ತ್ರಿಪುಸಾಂ. ೧-೬). [ ಚೆನ್ನ + ಅಡಿ₁ ]

**ಚೆನ್ನನಾಯಿ** (ನಾ). (ಕರಾ) ಒಂದು ಬಗೆಯ ಕಾಡುನಾಯಿ ; ಹುಲಿಯನ್ನು ಹೆದರಿಸುವ ಒಂದು ಬಗೆಯ ನಾಯಿ.

[ ←ತುಳು. ಚೆನ್ನನಾಯಿ=ತೋಳ ]

**ಚೆನ್ನನೆ** (ಅ). ಅಂದವಾಗಿ ; ಮನೋಹರವಾಗಿ : ಸುರಹೊನ್ನೆಯ ಚೆನ್ನನಪ್ಪರಲನೊತ್ತರದೆ ಸುತ್ತಿ ತೆತ್ತಿಸಿದ ಕೈರವದ ಕರ್ಣಪೂರಂಗಳುಮಂ (ಜಗವಿ. ೬-೧೬ ವ).

**ಚೆನ್ನಚೆನ್ನನೆ (ದ್ವಿರುಕ್ತಿ)** : ಸನ್ನ ತೆಱವುಗೊಡಿ ಸಾಗಿ ಮೆಲ್ಲಗೆಯುಂದು ಚೆನ್ನಚೆನ್ನನೆ ಸೊಲ್ಲಿಸಿದರು (ಭರಕ. ೮-೯೫). [ ಚೆನ್ನ + – ಅನೆ₁ ]

**ಚೆನ್ನಪೂ** (ನಾ). ಅಂದವಾದ ಹೂವು : ವಿಾರ್ಪ ಕುರುಳ್ಗಳೊಳ್ ತೊಡರ್ದು ದೇಸಿಯನಾವಗವಿಾವ ಚೆನ್ನಪೂಗಳನವನೊಯ್ಯನೋಸರಿಸುತುಂ (ಪಂಪಭಾ. ೨-೧೭) ; ತೊಳಗುವ ಚೆನ್ನಪೂಗಳಲಕಾವಳಿಯೊಳ್ಪುಟುಗಲ್ (ಕಾದಂಪೂ. ೭೩೪). [ ಚೆನ್ನ + ಪೂ₂ ]

**ಚೆನ್ನಪೊಂಗ** (ನಾ). ೧. ಸುಂದರನಾದ ವೀರ; ಚೆಲುವನಾದ ಪರಾಕ್ರಮಿ: ಕೊಂಡು ಪೋದರಚ್ಚರಸೆಯರಣ್ಮಿ ಬಟ್ಟ ಭಟರಂ ಕೊನೆವಿಾಸೆಯ ಚೆನ್ನಪೊಂಗರಂ (ಕಾವ್ಯಾವ. ೮೩೪); ಕವಿ ಪಂಡಿತರೋದುವ ಕೊಂಕು ಚೆನ್ನಪೊಂಗರ ಕುಡಿಮುಂಜೆಜಿಂಗು ನಿಡುಬಯ್ಸಾಳೆ ಬಾರ್ತೆಯ (ಅನಂಪು. ೮-೪೯) ; ಮಾಧವಂ . . . ಗಾಡಿಯಿಂ ಬರ್ಪ ಚೆನ್ನಪೊಂಗನಂ ಕೈಗೊಟ್ಟು ಕೂಡಿವಂದೋಲಗದ ಸಾಲೆಯಂ ಪುಗಿಸಿ (ರಾಮಾಶ್ವ. ೩೭-೦೩). ೨. ಉತ್ತಮನಾದ ವೀರ ; ಶ್ರೇಷ್ಠನಾದ ಕಲಿ : "ಚೆನ್ನಪೊಂಗಂ–ವೀರಂ" (ಶಮದ. ಪರಿ. ೨) ; ಕುರುಬಲದೊಳ್ ಕರಂ ನೆಗಟ್ದ ಬೀರರ ಚೆನ್ನರ ಸಂದ ಚೆನ್ನಪೊಂಗರ ತಲೆ ತಾಟ ಪಣ್ ಕೆದಱಿದಂತೆ ನಿರಂತರಮಾಜಿರಂಗದೊಳ್ ಪರೆದಿರೆ (ಪಂಪಭಾ. ೮-೧೧೬). [ ಚೆನ್ನ + ಪೊಂಗ ]

**ಚೆನ್ನಭಕ್ತಿ, ಚನ್ನಭಕ್ತಿ** (ನಾ). ಉತ್ತಮವಾದ ಭಕ್ತಿ : ಅಥವಂ ನಗುತ್ತಾ ನಿಂಬಿಯಕ್ಕನ ಚೆ[ಪಾಠಾಂ. ಚ]ನ್ನಭಕ್ತಿಗೆ ಮೆಚ್ಚಿಯಾರೋಗಿಸಿ ಮುದಂಬೆತ್ತು. (ಬಸಪು. ೨೪-೭೫). **ಚನ್ನಭಕ್ತಿ** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಚೆನ್ನ + ಭಕ್ತಿ ]

**ಚೆನ್ನಭಾಷಿತ** (ನಾ). ಸೊಗಸಾದ ಮಾತು ; ಉತ್ತಮವಾದ ಮಾತು ; ಸುಭಾಷಿತ : ವಂಶಾವಳಿಯುಮಂ ನಿಜಾವಳಿಯುಮನೊಳ್ಳಿತ್ತಾಗಿ ಪೇಟ್ದೀ ನಿನ್ನ ಚೆನ್ನಭಾಷಿತಮದೊಳ್ಳಿತ್ತಾದುದು (ಗದಾಯು. ೨-೮ ವ).

[ ಚೆನ್ನ + ಭಾಷಿತ ]

**ಚೆನ್ನಲರ್** (ನಾ). ಅಂದವಾದ ಹೂವು : ಅಮರರು ಚೆನ್ನಲರ್ಮಳೆಯ ಕಱಿದರು (ಭರಕ. ೧೭-೧೧೯). [ ಚೆನ್ನ + ಅಲರ್₂ ]

**ಚೆನ್ನಸರ** (ನಾ). ಚೆನ್ನಾಗಿರುವ ಕಂಠಹಾರ ; ಸುಂದರವಾದ ಹಾರ : ಲುಳಿದಾರ ಕಂಠಿ ಖಡೆಯ ಪೊಂಗಲು ಹೊನ್ನ ಬಳೆಯುತ್ತುರಿಗೆ ಚೆನ್ನಸರವಾಕಳಂಪು (ಕುರಾಸಾಂ. ೧೨-೨೩) ; ಹರಳೋಲೆ ಕಟ್ಟಾಣಿಮುತ್ತಿನ ವಂಟಿಯ ವಿಱುಗುವ ಚೆನ್ನಸರಗಳು (ಕಂನವಿ. ೯-೭೫). [ ಚೆನ್ನ + ಸರ₄ ]

**ಚೆನ್ನಸುಗೆ** (ನಾ). ಸುಂದರವಾದ ಅಶೋಕವೃಕ್ಷ : ಚೆನ್ನಸುಗೆಯ ನೆಟಲಡಿಯ ನುಣ್ಣಟಲೊಟ್ಟಲೊಳ್ ಕಂದಳಿರಿಂ ನಲ್ಸಾಸುಗೆಯ್ದು (ರಾಮಾಶ್ವ. ೩೦-೨೩). [ ಚೆನ್ನ + ಅಸುಗೆ ]

**ಚೆನ್ನಳಗ** (ನಾ). ಚೆಲುವಾದ ಹವಳದ ಬಣ್ಣದ ಕುದುರೆ : ಜನ್ನ ಜಿನ್ನಾರ ಚೆನ್ನಳಗ ಚೆಲುವ ಚೀರ ತನ್ನೀಲ ಭೈರ ಕಂಕರಿಗಂ ಸನ್ನುತ ಸಾಂಬ್ರಾಣಿಯನೇಱಿ ನೃಪಕುಲರನ್ನರಿಗಂದು ತೋಱಿದರು (ಅಂಜಜ. ೬-೮೩).

[ ಚೆನ್ನ + ಅಳಗ₁ ]

**ಚೆನ್ನಾಕಳ್** (ನಾ). ಉತ್ತಮವಾದ ಹಸು; ಒಳ್ಳೆಯ ಜಾತಿಯ ಗೋವು: ಖುತ್ವಿಜರೆಲ್ಲರ್ . . . ರನ್ನಮಂ ಪೊನ್ನ ಹೇಱಂ ಚೆನ್ನಾಕಳಂ ಪ್ರತಿಗ್ರಹಿಸಿ ತಾಮನಂ ಪರಸಿ ಬೀಟ್ಕೊಂಡರ್ (ರಾಮಾಶ್ವ. ೧೬೭-೦೩). [ಚೆನ್ನ+ಆಕಳ್]

**ಚೆನ್ನಾಟ** (ನಾ). ಲೀಲೆ : ವಿಲಾಸ : ವಿನೋದ : ಊಟವ ಮಾಡಿದು ವಧುಬಂಧುಗಳು ಚೆನ್ನಾಟದಿ ಕೃಷ್ಣ ಕೈದೊಳೆದು . . . ಕರ್ಪೂರಕೂಟ ವೀಟಿಕೆಯನು ಸವಿದು (ಮೋಹತ. ೧೪-೦೬). [ ಚೆನ್ನ + ಆಟ ]

**ಚೆನ್ನಿ, ಚನ್ನಿ** (ನಾ). ಚೆಲುವೆ ; ಸುಂದರಿ : ನಕ್ಕೊಮ್ಮೆ ಹೇಳ ಚೆನ್ನಿ ಆ ನಗಿ ಇತ್ತಿತ್ತ ಹೋಗೇತಿ ಎತ್ತೆತ್ತ (ಗರಿ. ೧೦೧-೫). **ಚನ್ನಿ** : "ಚನ್ನಿ=ಚೆಲ್ವೆ" (ಕಾಶಕ್ಕ. ೩೯) : ಚನ್ನಿಗೆ ನಾರಿಕುಲರನ್ನಿಗೆ ಭಾಗ್ಯಸಂಪನ್ನಿಗೆ ಸಗರಕುಲ ಪಾವನೆಗೆ (ತೀರ್ಥಮ. ೧೮). [ ಚೆನ್ನ + – ಇ$_2$ ]

**ಚೆನ್ನಿಕೆ** (ನಾ). ಚೆಲುವು ; ಸೌಂದರ್ಯ : ಕಲಿ[ತ]ನದುರ್ಕೆ ಜೌವನದ ಚೆನ್ನಿಕೆ ರೂಪಿನೊಳೊಲ್ಪೆ × ಳ್ದು ಪೂರ್ವ್ವಲೆದದಟಿರ್ದ್ದ ವೀರ್ಯ್ಯ ವಿರದಾಯದೊಱಿನ್ದು ಮನಕ್ಕೆ ಸಂಕೆಯನ್ನೊಲಗಿಸಿದಂ (ಸೌಇಇ. XI-i, ೪೧-೩೫; 969). [ ಚೆನ್ನು + – ಇಕೆ ]

**ಚೆನ್ನಿಗ, ಚನ್ನಿಗ** (ನಾ). ೧. ಚೆಲುವನಾದವನು; ಸುಂದರ; ಸ್ಫುರದ್ರೂಪಿ: ತಮ್ಮ ವಿಭೂತಿಯ ತಮ್ಮ ತಮ್ಮ ಚೆಲ್ವುಗಳ ವಿಲಾಸದುರ್ಮ್ಮೆಗಳೊಳಾವೆವ ಗಾಗಿಪೆವೆಂದು ಬಂದ ಚೆನ್ನಿಗರು ಮನಾಸೆಕಾಱರು ಮನೊಲ್ಲದೆ (ಪಂಪಭಾ. ೧-೧೦೬); ಕಡುಗೂರ್ಪ ಮಡದಿಯು ಮತ್ತೊಬ್ಬ ಚೆನ್ನಿಗ ಕೊಂಬ (ಬಸವ. ೪೦) ; ಧರೆಗೆ ಕಾಮನೆ ಚೆಲ್ವ ಕಾಮನಿಂದಾ ಚಕ್ರಧರನೆ ಚೆನ್ನಿಗ ನೆನಲೆಸೆದಾ (ಭರತ. ೫೧-೬೪). ೨. = ಚೆನ್ನಿಗರಾಯ : ನೆಱೆ ನಂಬಿದೆನು ಬೇಲೂರ ಚೆನ್ನಿಗನ (ಪುರಂದ.೧-೯೦-೩). **ಚನ್ನಿಗ**: ೧. ಚ[ಪಾಠಾ. ಚೆ]ನ್ನಿಗನು ಮಡಿದನು ಶಿವಶಿವಾ ಎನ್ನದೆ (ಬಸಪು. ೪೯-೧೦) ; ಬನ್ನಿರೈ ನೀವ್ ಘಟ್ಟ ಬೆಟ್ಟದ ಚನ್ನಿಗರು (ತೊರರಾ. ೬-೧೪-೨೯). [ ಚೆನ್ನು + – ಇಗ ]

**ಚೆನ್ನಿಗತನ, ಚನ್ನಿಗತನ** (ನಾ). ಚೆಲುವು; ಸೌಂದರ್ಯ: ಗಱು ಕಿಟ್ಟಿ ಕೀತ ಬಾವಲ ತೆಱದಿಂ ಬೀಭತ್ಸಮಪ್ಪೊಡಲ್ಗೆ ಕೆಲರ್ ಬೇಸಱುತುಂ ನೆನೆವರ್ ಮುನ್ನಿನ ಪೆಱರಂಗನೆಯರ್ಗೆ ಮೆಱೆವ ಚೆನ್ನಿಗತನಮಂ (ವರ್ಧಪು. ೧೧-೩೯). **ಚನ್ನಿಗತನ**: ಮನಂ ಪೆಱರಂಗನೆಯರ್ಗೆ ಮೆಱೆವ ಚನ್ನಿಗತನಮಂ (ಶ್ರಾವಕಾ. ೨೧-೮). [ ಚೆನ್ನಿಗ + – ತನ ]

**ಚೆನ್ನಿಗರಾಯ, ಚನ್ನಿಗರಾಯ** (ನಾ). ವಿಷ್ಣುವಿನ ಒಂದು ಮೂರ್ತಿ ; (ಬೇಲೂರಿನ) ಚನ್ನಕೇಶವ : ಕಂತುಪಿತನು ವೇಲಾಪುರದ ಚೆನ್ನಿಗರಾಯ ಎಂಥಾ ಗಾಡಿಗಾಱನೆ (ಪುರಂದ. ೧-೦೭೦ ಪಲ್ಲವಿ) : ಮದನನ ಹೆತ್ತವನು ವರಪುರದರಸ ಚೆನ್ನಿಗರಾಯ (ನಳಚ. ೨-೪೯) : ಮಂಗಳಂ ಬೇಲೂರು ಚೆ[ಪಾಠಾಂ. ಚ]ನ್ನಿಗರಾಯ ಕೇಶವಗೆ (ಹರಿಸಾ. ೧೧೦). **ಚನ್ನಿಗರಾಯ** : ಮೇಲಿನ 'ಹರಿಸಾ' ಪ್ರಯೋಗದ ಪಾಠಾಂತರವನ್ನು ನೋಡಿ.

[ ಚೆನ್ನಿಗ + ರಾಯ ]

**ಚೆನ್ನಿತು** 'ಚೆನ್ನಿತ್ತು' ನೋ.

**ಚೆನ್ನಿತ್ತು, ಚನ್ನತು, ಚೆನ್ನಿತು** (ಗು). ೧. ಸುಂದರವಾದ ; ರಮಣೀಯ ವಾದ : "ರಯುಃ, ರಯಣಂ, ರಯ್ಯಂ, ರಯಣೀಯಂ, ಈ ೪ ಚೆನ್ನಿತ್ತು" (ಕಾಶಕ್ಕ. ೧೧೦). **ಚನ್ನತು** : ೨. ಒಳ್ಳೆಯ ; ಚೆನ್ನಾದ : ಈ ಸುದಿನ ಚನ್ನತಾಹವವೀರರೆಂಬುದನ್ನರಿಯೆನಾ (ತುರಂಗ. ೬೬-೧೧). **ಚೆನ್ನಿತು** : ೩. ದಪ್ಪವಾದ ; ಪುಷ್ಟವಾದ : "ಮೇದಸ್–ನೆಣಂ: ಮೇದುರಂ-ಚೆನ್ನಿತು" (ಕಾಶಕ್ಕ. ೦೩೦). [ <ಚೆನ್ನು ]

**ಚೆನ್ನೀರ್** (ನಾ). ನೆತ್ತರು ; ಕೆನ್ನೀರು ; ರಕ್ತ : ಕರುಳುಗಳೊಕ್ಕು ಕಾಳಿಜ ಹಾಯ್ದು ನಿಡುಸರ ಹಱಿದು ಚೆನ್ನೀರ್ಗಳು ಹರಿದು (ಕಂನವಿ: ೧೪-೮೭). 'ಕೆನ್ನೀರ್$_1$' ಪರಾ. [ ಚೆಂ$_1$ + ನೀರ್$_1$ ]

**ನ್ನು, ಚನ್ನು** (ನಾ). ೧. ಅಂದ ; ಸೊಗಸು ; ಚೆಲುವು : ಸೂಳೆಯಂತೆ ಚೆನ್ನ ಮೆಱೆಯದೆ (ಧರ್ಮಾಮ್ಮ. ೫-೯೯) ; ಬಣ್ಣ ರೂಪವಹ ಚೆನ್ನುವ ಹರಿದಲ್ಲಿ ಅದನಲ್ಲಿಯೇ ಮಾಡಬಹುದು (ಮೋಳಿಮಾ. ೯೫-೩೭೬) : ಎನಗೆ ಹೊನ್ನುಂ ನೀನೆ ಎನಗೆ ಚೆನ್ನುಂ ನೀನೆ (ಅರಿರ. ಹ. ೧೨೩-೧೪); ಉಚ್ಚಾರಣೆಗೆ ಚೆನ್ನಲ್ಲವೆಂಬುದನ್ನು ಲಕ್ಷಿಸಿಯೇ . . . ಕನ್ನಡಕ್ಕೆ ಸಹಜವೆನಿಸುವಂತೆ ಅನುಸ್ವಾರವನ್ನಾಗಿ ಇಟ್ಟುಕೊಂಡರು (ಸಂಶೋಧ. ೫೦). ೨. ಸರಿಯಾಗಿರುವಿಕೆ; ನೇರ್ಪು: ಋಜುತೆ : ಚೆನ್ನೇವುದೋ ಸಚ್ಚರಿತಂ ಚೆನ್ನಲ್ಲದ ದೇಹಿಗೆ (ಸಮುಪ. ೬-೪೪) ; ಚೆನ್ನಿಂ ನಮಸ್ಕರಿಸಿ (ಪದ್ಮರಾ. ೭-೨೨). **ಚನ್ನು**: ೧. "ಚೆಲುವಿಕೆ" (ಜಾನಕೋ. ೫೫). ೩. ನೆಟ್ಟಗಿರುವುದು: ನೇರವಾಗಿರು ವುದು : ನಾಯ ಬಾಲ ಸೆಡೆಯಂ ಕಟ್ಟಲ್ಕೆ ಚ[ಪಾಠಾಂ. ಚೆ]ನ್ನಪ್ಪುದೆ (ಸೋಮೇಶ. ೪೭).

ಚನ್ನಹ = ಅಂದವಾದ ; ಚೆಲುವಾದ : ಚನ್ನಹ ಮಾಡವಂ ಬಿನ್ನಣದಿಂದಡರ್ದು (ಹಾಲಾಸ್ಯ. ೧-೧೬-೪೭). ಚೆನ್ನಾಗಿ, ಚನ್ನಾಗಿ = ಸೊಗಸಾಗಿ : ಸಂಪೂರ್ಣವಾಗಿ ; ಹದವಾಗಿ : ಚೆನ್ನಾಗಿ ತಿಳಿದು ಪಾಪಾನುರಾಗವಂ ಪತ್ತುವಿಟ್ಟು (ಧರ್ಮಾಮ್ಮ. ೨-೯೧) : ಮುನ್ನ ಬೆಸಸಿದ ಸದಾಚಾರಗಳುಂ ಚೆನ್ನಾಗಳವಟ್ಟುವು (ದೀಕ್ಷಾಬೋ. ೧೨೬-೮) ; ನಿನ್ನೊಡವುಟ್ಟಿದರಾದಿಯಾದವರೆಲ್ಲ ಚೆನ್ನಾಗಿರ್ದಪರೀಗ (ಅಂಜಚ. ೧೧-೧೫೫) ; ನಿಮ್ಮ ಊರು ಚೆನ್ನಾಗಿದೆ (ರಾಯಕ. ೮೧); ಜನ್ನಿಗೆಯ ಪಾಲಂ ತೆಗೆದು ಚ[ಪಾಠಾಂ. ಚೆ]ನ್ನಾಗಿ ಕಾಸಿದ ನಂತರದೊಳು (ಬಸಪು. ೧೪-೫) ; ಚ[ಪಾಠಾಂ. ಚೆ]ನ್ನಾಗಿ ನೀವನು ನಯದಿ ನೋಡಲು ರೋಗಿಯಾದವನುಂ ನಿರೋಗಿಯೆನಲ್ಕೆ ಬಾಳ್ವನಲಾ (ಬಸಪು. ೪೭-೬೫) ಚೆನ್ನಾಗು=ಅಂದವಾಗು; ಸೊಗಸಾಗು : ಅಯ್ಯಯ್ಯಾ ಚೆನ್ನಾದುದೆನೆ ಕನ್ನಡಿಗರು ರಯ್ಯಾ ಮಂಚಿದಿಯೆನೆ ತೆಲುಗ (ಭರತ. ೧-೭). ಚೆನ್ನಾದ ಕುಂಕುಮಗಾರಣೆಯಿಂದ ಸಂಪನ್ನತೆವಿಡಿದುದಾಸ್ಥಾನ (ಕಂನವಿ. ೮-೧೧). [ ದೇ.॥ ತೆಲು. ಚೆನ್ನು ]

**ಚೆನ್ನುಗೆಡು** (ಕ್ರಿ). ಅಂದಗೆಡು ; ಹಾಳಾಗು: ಕಣ್ಣಾವಗಾಲದ ಹೊಳೆಯಲ್ಲಿ ಮುಳುಗಿ ಚೆನ್ನುಗೆಟ್ಟರಯ್ಯಾ (ಮೋಳಿಮಾ. ೨೪೪-೭೯೫).

[ ಚೆನ್ನು + ಕೆಡು$_1$ ]

**ಚೆನ್ನುಡಿ** (ನಾ). ಒಳ್ಳೆಯ ಮಾತು ; ಸೂಕ್ತಿ : ನಿರಹಂಕಾರಕ್ಕೆ ಭಕ್ತಿಯೇ ಶೃಂಗಾರವೆಂಬ ತನ್ನ ಚೆನ್ನುಡಿಯಂತೆ ನಿರಹಂಕಾರದ ಮೂರ್ತಿಯಾಗಿ (ಶರಚ. ೪೧೮). [ ಚೆನ್ನ + ನುಡಿ$_2$ ]

**ಚೆನ್ನುಡೆ** (ನಾ). ಸೊಗಸಾದ ಉಡುಗೆ : ಚೆನ್ನುಡೆಯ ಹೊಂಬಣ್ಣದ ಬಿಚ್ಚು ಗೂದಲ . . . ಹೆಣ್ಣುಮಗು (ಪುನರು. ೪೪೦). [ ಚೆನ್ನ + ಉಡೆ$_2$ ]

**ಚೆನ್ನೆ$_1$, ಚನ್ನೆ** (ನಾ). ಚೆಲುವೆ ; ಸುಂದರಿ : ಚೆನ್ನೆ ಪೊನ್ನೆಯುರಲಂ ಕೊಯ್ದಾಳ್ (ಆದಿಪು. ೧೧-೧೦೨) ; ಪೆಱರಂ ತನ್ನಂತು ಬಗೆದು ಲೋಗರ ಚೆನ್ನೆಯರಂ ಬಯಸಲಾಗದಱಿವುಳ್ಳ ನರಂ (ಸಮುಪ. ೫-೬೨) ; ಕಜ್ಜಳದ ಕನ್ನಡಿಯು ಚೆನ್ನೆಯುರ್ವ್ವರಸು ಇಚ್ಚೆಗಾರ್ತಿ ನಡೆವಾಗಳ್ (ಶಬ್ದಿಕಾ. ೩೨೪). **ಚನ್ನೆ** : ಚ[ಪಾಠಾಂ. ಚೆ]ನ್ನೆಯ ಕಣ್ಮಲರೊಳ್ ಕಾಡಿಗೆಯ ನೆಟ್ಟಿದಳ್ ಮತ್ತೊರ್ವ್ವಳ್ (ಪಂರಾಮಾ. ೩-೮೫) ; ಪೊಗಳ್ಗಂ ಭೂಮಂಡಳಂ ಸಂತತಂ ಪಿರಿದುಂ ಮಾಳಲದೇವಿಯುಂ ಬಹುಕಳಾಸಂಪನ್ನೆಯುಂ ಚನ್ನೆಯುನ್ (ಕಇ. IV, ೧-೩೮; 1204); ವರಪತಿವ್ರತೆ ಚನ್ನೆಯರ ಗರುವೆನಿಸಿ ನಡೆದಳು (ಕುವ್ಯಾಅ. ಓರಿಇ. ೩೩-೨೦). [ ಚೆನ್ನ + – ಎ$_2$ ]

**ಚೆನ್ನೆ$_2$** (ನಾ).=ಚೆನ್ನಂಗಿ : ಅರಳೆಯಿಂದೆಕ್ಕೆಯಿಂ ಕಕ್ಕೆಯಿಂ . . . ಬನ್ನಿಯಿಂ ಚೆನ್ನೆಯಿಂ (ನಂದಿಮಾ. ೧೩-೧೨) ; ಎಲವಂ ಸಂಪಗೆ ಹೊನ್ನೆ ಚೆನ್ನೆ ಕವಳಂ ಕಾರಾಚವಾಚಂ ಪುಲಿಂಗಿಲ್ (ರಾಜಶೇ. ೫-೫೬). [ <ಚೆನ್ನಂಗಿ ]

**ಚೆನ್ನೆ$_3$** (ನಾ). (ಕರಾ) ಎರಡು ಸಾಲುಗಳಲ್ಲಿ ಏಳೇಳು ಗುಣಿಗಳನ್ನುಳ್ಳ ಮಣೆಯ ಮೇಲೆ ಕವಡೆ ಅಥವಾ ಹುಣಿಸೆಬೀಜಗಳಿಂದ ಆಡುವ ಒಂದು ಬಗೆಯ ಆಟ ; ಅಟ್ಟುಗುಳಿಮಣೆ ಆಟ : ಚೆನ್ನೆಯಾಡದ ಶತಮಾನವೇ ಕಳೆದುಹೋದಂತಿತ್ತು ನನಗೆ (ಷಳಮ. ೧೨); ಗೊಂಬೆಮದುವೆಯನ್ನೊಮ್ಮೆ ಮಾಡಿ, ಚೆನ್ನೆಯೆಕ್ಕಡಿಯೊಮ್ಮೆ ಹೂಡಿ (ಗಿಳಿವಿಂ. ೬೧-೧೪).

[ ←ತುಳು. ಚೆನ್ನೆ ]

**ಚೆನ್ನೆಕಾಯಿ** (ನಾ). ಚೆನ್ನೆ ಆಟದಲ್ಲಿ ಬಳಸುವ ಬೀಜ,-ಕಾಯಿ : ಚೆನ್ನೆ ಕಾಯಿಗಳು ನನ್ನ ಕೈಯಿಂದ ಮೆಲ್ಲಮೆಲ್ಲನೆ ನಡುಗಿ ನಡುಗಿ ಚೆನೆ ಗುಳಿಗೆ ಬೀಳುತ್ತಿದ್ದುವು (ಪಳಮ. ೧೨). [ ಚೆನ್ನೆ$_3$ + ಕಾಯಿ$_4$ (<ಕಾಯ್$_4$) ]

**ಚೆನ್ನೆಗ್ಗಿಲು, ಚನ್ನೆಗ್ಗಿಲು** (ನಾ). ಕೆಂಪು ನೆಗ್ಗಿಲುಗಿಡ ; ಕೆನ್ನೆಗ್ಗಿಲು : "ಕಟಿಪಿಪ್ಪಲಿ–ಚೆನ್ನೆಗ್ಗಿಲು, ಗಜಗಿಪ್ಪಲಿ" (ಓಷಧಿ. ೨೬) : ಬಿಳಿಕೊವ್ಮೆ ಬೇರನೂ ಚೆನ್ನೆಗ್ಗಿಲ ಬೇರನೂ ನೀರಲ್ಲಿ ಅರೆದು ಮುಖಕ್ಕೆ ಲೇಪಿಸಲು ಸ್ತ್ರೀಯರುಗಳ ಮುಖದ ಕರಿಬಂಗು ಶಮನವಹುದು (ವೈದ್ಯಸಾ. II, ೧೪೬). **ಚನ್ನೆಗ್ಗಿಲು**: ಕಡವದ ಬೇರು, ಚನ್ನೆಗ್ಗಿಲು, ಹಿಟ್ಟುಳುಕನ ಬೇರು ಇವಂ ಹಸುವಿನ ಹಾಲೊಳರೆದು . . . ಕೊಳ್ಳಲು ಕಲ್ಲುಕಟ್ಟು ಮೂತ್ರಕೃಚ್ಛ್ರ ಸಹ ಮಾಣ್ಗುಂ (ಸಕವೈ. ೩೭೯). [ ಚೆಂ$_1$ + ನೆಗ್ಗಿಲು (<ನೆಗ್ಗಿಲ್) ]

**ಚೆನ್ನೆನಪು** (ನಾ). ಸರಿಯಾದ ನೆನಪು : (+). [ ಚೆನ್ನ + ನೆನಪು ]

**ಚೆನ್ನೆಮಣೆ, ಚನ್ನೆಮಣೆ** (ನಾ). (ಕರಾ) ಚೆನ್ನೆ ಆಟವಾಡುವ ಮಣೆ ; ಅಟ್ಟುಗುಳಿಮಣೆ : ಆ ಚೆನ್ನೆಮಣೆ ಇಲ್ಲಿ ತಾ (ಪಳಮ. ೧೨). **ಚನ್ನೆಮಣೆ**: ಚನ್ನೆಮಣೆಗೆ ಹಾಲುವಾಣದ ಕಾಳು, ಪೆಟ್ಲಿಗೆ ಗಜ ಒದಗಿಸುತ್ತಿದ್ದವರು ರಾಗಜ್ಞ (ಪ್ರಶ್ನೆ. ೮೭). [ ಚೆನ್ನೆ$_3$ + ಮಣೆ ]

**ಚೆನ್ನೆಯ್ದಿಲ್, ಚನ್ನೆಯ್ದಿಲ್, ಚೆನ್ನೈದಿಲು, ಚೆನ್ನೈದಿಲ್, ಚೆನ್ನೈದಿಲೆ** (ನಾ). ಕೆಂಪು ನೈದಿಲೆ : ರಕ್ತೋತ್ಪಲ : "ಸೌಗಂಧಿಕಂ, ಕಲ್ಹಾರಂ– ಈ ೨ ಚೆನ್ನೆಯ್ದಿಲ್"(ಹಲಾಯು.೧೧೨–೫೯); ಅಲರ್ದ ಚೆನ್ನೆಯ್ದಿಲ್ಗಳೊಳ್ಗಂಪಿ ನಿಂಪನಲಂಪಿಂ ತೆಗೆದೊಟ್ಟಿಕೊಂಡು . . . ತೀಡಿತ್ತೊಂದು ಮಂದಾನಿಲಂ (ಕಾದಂಬ. ೪೨೮). **ಚನ್ನೆಯ್ದಿಲ್** : "ಅವಲೆಂದುಂ ಚಂಗಲವೆಯೆಂದುಂ ಚ[ಪಾಠಾಂ. ಚೆ]ನ್ನೆಯ್ದಿಲ್" (ಕಶಸಾ. ೯–೧೬೬). **ಚನ್ನೈದಿಲು** : ಒಂದು ಹೂ ಮಂದಾರವುತ್ಪಲ ಒಂದು ಚನ್ನೈದಿಲು [ಪಾಠಾಂ. ಚೆನ್ನೆಯ್ದಿಲು] ಬಕುಳ ಪೊಂದೊಂದು ಅರವಿಂದ (ಬಸವು. ೧೯–೬೫). **ಚೆನ್ನೈದಿಲ್**: ಚೆನ್ನೈದಿಲ ಕಂಪ ನೆಯ್ದಿಲಾರ್ಪುವೆ ಪೂಗಳ್ (ಆದಿಪು. ೧೧–೧೩೩); ಕೆಲರಂಭೋರುಹದಿಂ ಕೆಲರ್ ಸುರಗಿಯಿಂ ಚೆನ್ನೈದಿಲಿಂದಂ ಕೆಲರ್ . . . ಪೂಜಿಸಿ(ಧರ್ಮಾಮೃ. ೫–೨೩೨) ; ಚೆನ್ನೈದಿಲಲರ ಮಾಲೆ (ರೀವಣ. ೯೮–೪೩). **ಚೆನ್ನೈದಿಲೆ** : "ಚೆನ್ನೈದಿಲೆಯು ಚೆಂಗಲವೆಯುಮದೆನ್ನಲ್ ಸಲೆ ರಕ್ತೋತ್ಪಳಮಕ್ಕುಂ" (ಕವಿಕಂ. ೯೫). 'ಕೆನ್ನೆಯ್ದಿಲೆ' ಪರಾ. [ ಚೆಂ$_1$ + ನೆಯ್ದಿಲ್ ]

**ಚೆನ್ನೆಯ್ದಿಲ್ಗೊಳ, ಚೆನ್ನೈದಿಲ್ಗೊಳ** (ನಾ). ಕೆಂಪುನೈದಿಲೆಗಳನ್ನುಳ್ಳ ಕೊಳ : ಅಲರ್ದಂಭೋರುಹಷಂಡಮುಳ್ಳಲರ್ದ ಚೆನ್ನೆಯ್ದಿಲ್ಗೊಳಂ(ಆದಿಪು. ೧–೬೭). **ಚೆನ್ನೈದಿಲ್ಗೊಳ** : ಚೆನ್ನೈದಿಲ್ಗೊಳದವೊಲಾಯ್ತು ಸಂಜೆಗೆಂಪಿನಿಂ ಗಗನತಳಂ (ಕಾದಂಪೂ. ೫೧೧). [ ಚೆನ್ನೆಯ್ದಿಲ್ + ಕೊಳ$_2$ ]

**ಚೆನ್ನೇಸಜ್, ಚೆನ್ನೇಸಜು** (ನಾ). ಕೆಂಪು ಬಣ್ಣದ ಸೂರ್ಯ : ಚೆನ್ನೇಸಜ ಬಿಂಬಂ ಬಿಸುಪನುಳಿದು ಭೂವಿಗಾತಳಕಂಬರದಿಂದಿಳಿತರ್ಪಂದದಿಂ (ಜಯುಕಾ. ೩–೬೭). **ಚೆನ್ನೇಸಜು**: ಚೆನ್ನೇಸಜು ಮೂಡಗಡೆ ಬೆಳೆವಂದದಿ ಸನ್ನುತ [ತಿ]ವೆತ್ತು ಬೆಳೆದನು (ನೇಮಿಸಂ. ೫–೧೦೨). [ ಚೆಂ$_1$ + ನೇಸಜ್ ]

**ಚೆನ್ನೇಸಜು** 'ಚೆನ್ನೇಸಜ್' ನೋ.

**ಚೆನ್ನೈದಿಲ್** 'ಚೆನ್ನೆಯ್ದಿಲ್' ನೋ.

**ಚೆನ್ನೈದಿಲೆ** 'ಚೆನ್ನೆಯ್ದಿಲ್' ನೋ.

**ಚೆನ್ನೈದಿಲ್ಗೊಳ** 'ಚೆನ್ನೆಯ್ದಿಲ್ಗೊಳ' ನೋ.

**ಚೆನ್ನೊಪ್ಪು** (ಕ್ರಿ). ಚೆನ್ನಾಗಿ ಶೋಭಿಸು : ತಿರೆಯುಂ ಮುಟಿಬೆಳೆಗಳಿಂ ಚೆನ್ನೊಪ್ಪಿ ಬಟಿಗಾಲವುಂ ಕಾಣದಾಯ್ತು (ಅದ್ಭುತ. ೭–೨೧).
[ ಚೆನ್ನ + ಒಪ್ಪು$_1$ ]

**ಚೆನ್ನೌಡಲ** (ನಾ). ಒಂದು ಬಗೆಯ ಔಡಲ; ಕೆಂಪು ಹರಳಿನ ಗಿಡ: "ಉತ್ತಾನ(ಪತ)ಪತ್ರ – ಹೇರೌಡಲ, ಚೆನ್ನೌಡಲ" (ಓಷಧಿ. ೧೭).
ಚೆಂ$_1$ + ಔಡಲ (<ಅವುಡಲ) ]

**ಚೆಪ್ಪಗೊಡಲಿ** 'ಚಪ್ಪಗೊಡಲಿ' ನೋ.

**ಚೆಪ್ಪರಿ** 'ಚಪ್ಪರಿ' ನೋ.

**ಚೆಪ್ಪಲಿ** 'ಚಪ್ಪಲಿ' ನೋ.

**ಚೆಪ್ಪಾಳೆ** 'ಚಪ್ಪಳೆ' ನೋ.

**ಚೆಪ್ಪು** 'ಚೇಪ್ಪು$_3$' ನೋ.

**ಚೆಪ್ಪೆ** 'ಚಪ್ಪೆ$_1$' ನೋ.

**ಚೆಪ್ಪೆಜಾಡ್ಯ** 'ಚಪ್ಪೆಜಾಡ್ಯ' ನೋ.

**ಚೆಪ್ಪೆವಡೆ** (ಕ್ರಿ). ಚಪ್ಪಟೆಯಾಗು : ಪೊಡವಿಯ ಪೊತ್ತ ಫಣೀಂದ್ರನ ತಲೆ ಚೆಪ್ಪೆವಡೆದುದು (ನೇಮಿಸಂ. ೨೬–೧೦೫). [ ಚೆಪ್ಪೆ (<ಚಪ್ಪೆ$_1$) + ಪಡೆ$_1$ ]

**ಚೆಪ್ಪೋಡು** 'ಚಪ್ಪೋಡು' ನೋ.

**ಚೆಬ್ಬೆ** 'ಸಬ್ಬೆ' ನೋ.

**ಚೆಮ್ಮ** 'ಚಮ್ಮ' ನೋ.

**ಚೆಮ್ಮಣಿ** (ನಾ). ಕೆಂಪು ರತ್ನ ; ಮಾಣಿಕ್ಯ ; ಪದ್ಮರಾಗ : ಕಡಲೊಡೆಯನು ನಿಟ್ಟಿಪ ಚೆಮ್ಮಣಿಗಯ್ಯ ಪಿ[ಪಾಠಾಂ. ಚೆನ್ನಮಣಿಗನ್ನ, ಚನ್ನಮಣಿ ಗೈಪಿ]ಡಿಯೆನೆ . . . ಪಗಲಾಣ್ಮನೆಸದನು (ಸೊಬಸೊೞ. ೯–೭).
[ ಚೆಂ$_1$ + ಮಣಿ$_3$ ]

**ಚೆಮ್ಮಣಿಗೆ** 'ಚವ್ಮಾಳಿಗೆ' ನೋ.

**ಚೆಮ್ಮಣಿವಟ್ಟು, ಚಮ್ಮಣಿವಟ್ಟು** (ನಾ). ೧. ಬೈತಲೆಯ ಮಣಿ (?) : ಭಳಿರೆ ಜಡ ಜಾರಜಂಗುಳಿಯ ನಟ್ಟ ನಡುವಲೆಗಿಟ್ಟ ಚೆಮ್ಮಣಿವಟ್ಟೆ ಮುಟ್ಟದಿರೆನಲು ಬೆಜ್ಜರವಟ್ಟು ನಿಟ್ಟಿಸುತ್ತಿರಲು ತದ್ವಿಹಗಾಂಗನೆಯು ಮಗುಳೆ (ಮದೀಪು. ೬–೧೫). **ಚಮ್ಮಣಿವಟ್ಟು** : ೨. ಕುಂಕುಮದ ಬಟ್ಟು; ಕೆಂಪು ತಿಲಕ: ಕಮಳದಳನೇತ್ರೆ ಕಲಧೌತಗಾತ್ರೆ ರಮಣಿಯರ ನುಣ್ಣೊಸಲ್ಗ ಮರ್ದ ಚಮ್ಮಣಿವಟ್ಟೆ ಕುಮತಿಯೆಂದಿಟ್ಟಸದಿರೆನ್ನನೆಂದ (ಮದೀಪು. ೮–೧೩).
[ ಚೆಮ್ಮಣಿ + ಬಟ್ಟು$_1$ (<ಬಟ್ಟೆ$_1$) ]

**ಚೆಮ್ಮಾವುಗೆ** 'ಚಮ್ಮಾವುಗೆ' ನೋ.

**ಚೆಮ್ಮಾಳಿಗೆ** (ನಾ). ಚಂದವಾದ ಮಾಳಿಗೆ: ಹಣ್ಣಡಿಕ್ಕಾಸುಮಂಚ ಕುಶಲದ ತಲೆಗಿಂಬು ಚೆಮ್ಮಾಳಿಗೊಳಗೆ ತೆನೆಯಾದ ರಾಜನವ ನಿಮ್ಮ ರಾಯರು ಬಿತ್ತಿ ಬೆಳೆದರು (ನಾಪದ. ೭೫). [ ಚೆಂ$_2$ + ಮಾಳಿಗೆ ]

**ಚೆಮೂಗು** (ನಾ). (ಗಿಳಿಯ) ಕೆಂಪಾದ ಮೂಗು,–ಕೊಕ್ಕು : ದಾಳಿಂಬದೊಳ್ವಣ್ಣನೊಡೆದು ಚೆಮೂಗಿಟ್ಟು ಹೇಟಬಳಳವಡದ ಸಲ್ಲೀಲೆಯೊಳಗಳವಟ್ಟು (ಉದ್ಭಟ. ೩–೯೫). [ ಚೆಂ$_1$ + ಮೂಗು$_1$ ]

**ಚೆಮೊಗ** (ನಾ). ಕೆಂಪಾದ ಮುಖ : ಏದುತ್ತೇದುತ್ತ ಸೇದನೀರಲ್ಲಿ ಮಿಂದ ಚೆಮೊಗವನ್ನು ಚೇಲಾಂಚಲದಿಂದ ತೊಡೆದುಕೊಂಡು (ಮಂತ್ರಶ. ೬೪–೦೫).
[ ಚೆಂ$_1$ + ಮೊಗ ]

**ಚೆಯ್$_1$** 'ಚಯ್$_2$' ನೋ.

**ಚೆಯ್$_2$** 'ಸಯ್$_2$' ನೋ.

**ಚೆಯಿಪಲ್ಲ** (ನಾ). ಒಂದು ಮನೆತನದ ಹೆಸರು (?) : ಸುಸೌಖ್ಯಸಂಗಮಂ ಕೋಮಳಗಾತ್ರ ತಮ್ಮ ಮಲ್ಲಿರಾಯನು ಸ್ವರ್ಗಮನೆಯ್ದೆ ಚೆಯಿಪಲ್ಲದಾಮದೀಪಂ ಮದಶೋವಿಭ[ತಮ್ಮಂ]ಮನೆ ಸಂವರಿಸಿದು(ಕಇ. I, ೩೮–೯; 1408).
[.?]

**ಚೆಯ್ಗುಡು, ಚೈಗುಡು** (ಕ್ರಿ). ಲಲ್ಲೆಯಾಡು ; ಮುದ್ದಾಡು ; ಪಡೆಯದೆ ಬರ್ಕುಮೋ ಸುತನ ವಕ್ತ್ರಮನೀಕ್ಷಿಪ ಲಲ್ಲೆಗೆಯ್ದು ನಣ್ಪಿಡಿದನುರಾಗದಿಂ ನಗಿಸುವಳ್ಕಟೊಳೊಪ್ಪುವ ನೆತ್ತಿಯೊಡ್ಡಿ ಚೆಯ್ಗು[ಪಾಠಾಂ. ಚೈಗು]ಡುವ . . . ಸೈಪು ಸರೋರುಹೇಕ್ಷಣೆ (ವೃಷವಿ. ೨–೩೩). **ಚೈಗುಡು** : ಚೈಗುಡುವ ಪೆಣ್ಮಣಿಯ ಸೈಪಿಂಗೆ ತಿಳಿವಡೆಣೆಯುಂಟೆ (ಕಿರೀಟೀ. ೨–೨೮).
[ ಚೆಯ್$_1$ (<ಚಯ್$_2$) + ಕುಡು$_1$ (<ಕೊಡು$_1$) ]

**ಚೆಯ್ಮುಂಡಾಡು, ಚೈಮುಂಡಾಡು** (ಕ್ರಿ). ಮುಂದ್ದಾಡು ; ಲಲ್ಲೆಯಾಡು: (ಕ). **ಚೈಮುಂಡಾಡು** : ತೆಗೆದು ತಕ್ಕೈಸಿ ಬೋಳೈಸಿ ಚೈಮುಂಡಾಡಿ ಒಗುಮಿಗೆಯ ಸುಖಸುಧಾನಂದದೊಳಗೋಲಾಡಿ (ದೀಕ್ಷಾಬೋ. ೧೧೮–೬) ; ದಾ ಎನುತ ಚೈಮುಂಡಾಡಿ [ಪಾಠಾಂ. ಕೈಮುದ್ದಾಡಿ] ಮುಂದಲೆ ವಿಡಿದು ಕುಣಕುಣಿದಾಡಿ ಸೌಖ್ಯವನೀಯುತಿರ್ದಳು ಮಾಯೆ ಮೋಹಿನಿಗೆ (ಪ್ರಭುಲೀ. ೩–೨೯) ; ಒಸೆದು ಚೈಮುಂಡಾಡುತಾಲಿಂಗಿಸಿದಳನುರಾಗ ಪ್ರಪಂಚದ ಕೊಸರಿಕೆಯ ಕಳವಳದ ಮೈಮರವೆಯಲಿ ಮುಸ್ಸುಕವ (ತೊರರಾ. ೬–೧೨–೩೦). [ ಚೆಯ್$_1$ (<ಚೆಯ್$_2$) + ಮುಂಡಾಡು ]

**ಚೆಯ್ಯಾಕ** (ನಾ). ಒಂದು ಬಗೆಯ ತಾಳವಾದ್ಯ : ಚೆಯ್ಯಾಕಗಳು ಚೆಳ್ಳ್, ಚೆಯ್ ಎಂದು ಕುಟ್ಟುತ್ತಿರುವುವು (ಕನ್ನಜಾ. ೧೪). [ ? ]

**ಚೆಯ್ಯಾಟ** 'ಚಯ್ಯಾಟ' ನೋ.

**ಚೆಯ್ಯಾಡು** 'ಚಯ್ಯಾಡು' ನೋ.

**ಚೆರಗ** 'ಚರುಗ' ನೋ.

**ಚೆರಪು** 'ಸೆಱಪು' ನೋ.

**ಚೆರಿಗೆ** 'ಚರಿಗೆ$_1$' ನೋ.

**ಚೆರೆ** 'ಚರೆ' ನೋ.

**ಚೆರೆಮದ್ದು** (ನಾ). ಸಿಡಿಮದ್ದು ; ಚರೆ : ಅದರಲ್ಲಿ ತುಂಬಿಸುವುದು ಮಾತ್ರ ಚೆರೆಮದ್ದು (ಬಟ್ಮಜೀ. ೫೪). [ ಚೆರೆ (<ಚರೆ) + ಮದ್ದು$_1$ (<ಮರ್ದು) ]

**ಚೆಲ್, ಚೆಲು** (ಗು). ಚೆಲುವಾದ ; ಸುಂದರವಾದ. 'ಚೆಲ್ಗದಿರ್', 'ಚೆಲ್ವಡೆ' ಪರಾ. **ಚೆಲು** : ಹುಣ್ಣಿಮೆಯ ಶಶಿಯಂತೆ ಚೆಲು ಚೆಲುವೆಣ್ಣುಗಳು ಸಹ ಬಂದನೆಂದೀಕ್ಷಿಸಿತು ಪುರಜನವು (ಸಾಳ್ವಭಾ. ೧೮–೯೬). 'ಚೆಲು ಕಾಂತಿ' ಪರಾ. [ <ಚೆಲ್ವು$_1$ ]

**ಚೆಲಂಕು** 'ಚಲಂಕು' ನೋ.

**ಚೆಲಂಗು** 'ಚಲಂಕು' ನೋ.

**ಚೆಲದಿ** 'ಸೆಲಂದಿ' ನೋ.

**ಚೆಲಪಿಳೆರಾಯ** 'ಚೆಲ್ವಪಿಳ್ಳೆರಾಯ' ನೋ.

**ಚೆಲಬಾಗೆ** (ನಾ). ಒಂದು ಬಗೆಯ ಗಿಡ: ಚೆಲಬಾಗೆ, ಚೀಲ, ಎಲೆಸುಜ್ಜಲ ಬಾಗೆ (ವೃಜಿಗಿ. ೪–೬೩). [ ? ]

**ಚೆಲವೆ** 'ಚಲುವೆ$_3$' ನೋ.

**ಚೆಲು** 'ಚೆಲ್' ನೋ.

**ಚೆಲುಕಾಂತಿ** (ನಾ). ಅಂದವಾದ ಕಾಂತಿ,–ಶೋಭೆ: ಕಣ್ಣದಿರಿನ ಚೆಲು ಕಾಂತಿ ಚೆಲ್ಲುವ ಸೆರೆಗಣ್ಣು (ನಿಮ್ಮಾಚ್ಯ. ೫). [ ಚೆಲು (<ಚೆಲ್) + ಕಾಂತಿ ]

**ಚೆಲುಗಬ್ಬ** (ನಾ). ಸುಂದರವಾದ ಕಾವ್ಯ : 'ಕಾಲೂರ ಚೆಲುವೆ' ಒಂದು ಚೆಲುಗಬ್ಬ (ಕಾಲೂರ. ೧೦ ಹರಕೆ). [ ಚೆಲು (<ಚೆಲ್) + ಕಬ್ಬ$_1$ ]

**ಚೆಲುಬಿಸಿಲು** (ನಾ). ಅಂದವಾದ ಬಿಸಿಲು : ಬಂಗಾರದ ಚೆಲುಬಿಸಿಲ ಕಿರೀಟದ ಶೃಂಗಾರದ ತಲೆ ಎತ್ತುವವನು (ಕಿಎಪು. ೫–೩). [ ಚೆಲು (<ಚೆಲ್) + ಬಿಸಿಲು (<ಬಿಸಿಲ್) ]

**ಚೆಲುವ$_1$** 'ಚೆಲ್ವ' ನೋ.

**ಚೆಲುವ$_2$** (ನಾ). ಒಂದು ಬಗೆಯ ಪಕ್ಷಿ: ಹಲುಬುವ ಗೌಜು ಕರ್ಕಟ ಕಪ್ಪುರಸೆಟ್ಟಿ ಚೆಲುವ ಬೆಳವ ಕುಕ್ಕುಟಗ (ಮೋಹತ. ೭–೧೮). 'ಸಾಳುವ' ಪರಾ. [ ? ]

**ಚೆಲುವಳಿ, ಚಲುವಳಿ** (ಕ್ರಿ). ಅಂದಗೆಡು ; ವಿಕಾರವಾಗು : ಹೊರಟು ಪಾಂಡ್ಯನ ಚೆ [ಪಾಠಾಂ. ಚ]ಲುವಳಿದು ನೆಟಿ ಹೊರಟು ನೆಲೆಗೊಂಡಿದ್ದ ಬೆನ್ನಿನ ಹೊರಟು ಹೋಗಲು ಮಿಥ್ಯೆಯಾಯಿತು (ಬಸಪು. ೫೦–೩೦). **ಚಲುವಳಿ** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಚೆಲುವು (<ಚೆಲ್ವು$_1$) + ಅಳಿ$_1$ (<ಅೞ್$_1$) ]

**ಚೆಲುವಾನ್, ಚಲುವಾನ್** (ಕ್ರಿ). ಚೆಲುವನ್ನು ಹೊಂದು ; ಅಂದವನ್ನು ಪಡೆ: ಚೆಲುವಾಂತ ರಾಜಮಂದಿರಗಳೆಸೆದಿಹ ಕೇರಿಯಲಿ ಮಲ್ಲನೈತಂದು (ವಂಕಾರಾ. ೫–೩–೩೫). **ಚಲುವಾನ್** : ಮೋಹನದೆ ಇರ್ಪುದು ಕರ್ಣಾಟಕ ರಾಜ್ಯ ಚಲುವಾಂತುವೊಪ್ಪುವ ಸಕಲ ಸಂಭ್ರಮದೆ (ಕಂನವಿ. ೨–೧೦). [ ಚೆಲುವು (<ಚೆಲ್ವು$_1$) + ಆನ್$_1$ ]

**ಚೆಲುವಿಕೆ** 'ಚೆಲ್ವಿಕೆ' ನೋ.

**ಚೆಲುವು** 'ಚೆಲ್ವು$_1$' ನೋ.

**ಚೆಲುವುತನ** (ನಾ). ಅಂದಗಾರಿಕೆ ; ಸೊಗಸುತನ ; ಚೆಲ್ವಿಕೆ : ಚೆಲುವುತನವಿರ್ದೊಡೇನು ಬೆಲೆವೆಣ್ಗೆ (ರೇವಣ. ೬೬–೨೫). 'ಚೆಲ್ವತನ' ಪರಾ. [ ಚೆಲುವು (<ಚೆಲ್ವು$_1$) + – ತನ ]

**ಚೆಲುವೆ$_1$** 'ಚೆಲ್ವೆ' ನೋ.

**ಚೆಲುವೆ$_2$** 'ಚಲುವೆ$_3$' ನೋ.

**ಚೆಲುವೆಣ್ಣು** (ನಾ). ಸುಂದರಿ ; ಚೆಲುವೆ : ಅಣ್ಣುವಳಿಯದೆ ಬಣ್ಣಗುಂದದೆ ಹುಣ್ಣಿಮೆಯ ಶಶಿಯಂತೆ ಚೆಲು ಚೆಲುವೆಣ್ಣುಗಳು ಸಹ ಬಂದನೆಂದೀಕ್ಷಿಸಿತು ಪುರಜನವು (ಸಾಳ್ವಭಾ. ೦೮–೯೬). [ ಚೆಲು (<ಚೆಲ್) + ಪೆಣ್ಣು (<ಪೆಣ್) ]

**ಚೆಲ್ಗದಿರ್** (ನಾ). ಸುಂದರವಾದ ತೆನೆ : ಉಬ್ಬಿದೊಡಲೇಂ ಪೊಲಂ ಚೆಲ್ಗದಿರ್ ಪಾಲ್ ಪಡೆದು ತುಂಬಿ ಬೆಳೆದಿದೆ (ಕಾಲೂರ. ೪೦–೫೦). [ ಚೆಲ್ + ಕದಿರ್$_1$ ]

**ಚೆಲ್ನಡೆ** (ನಾ). (?): ಸೋರ್ಮುಡಿ ಪದಿರ್ಮುಡಿ ಸೋಗೆಗೆ ಪುರ್ವು ಕೊರ್ವು ಚೆಲ್ನಡೆಗೆ ನಖಂ ಮುಖಂ ಪತಿಗೆ ತೋಳ್ ಕರವಾಳ್ ಮದನಂಗೆ ಕಾಂತೆಯಾ (ಪುಷ್ಪಪು. ೯–೪೩). [ಈ ಇದು 'ಬಿಲ್ಲೆಡೆ' ಎಂಬುದರ ಅಪಲಿಖಿತವಿರಬಹುದು.] [ ಚೆಲ್ + ನಡೆ$_2$ ]

**ಚೆಲ್ಲ$_1$** 'ಚಲ್ಲ$_1$' ನೋ.

**ಚೆಲ್ಲ$_2$** 'ಸೆಳ್ಳ' ನೋ.

**ಚೆಲ್ಲಂಗೆಯ್** (ಕ್ರಿ). ಸರಸವಾಡು ; ವಿನೋದವಮಾಡು : ಕಳಮಾಳಿಯಸೆದುವಲ್ಲಲ್ಲಿ ಚೆಲ್ಲಂಗೆಯ್ಯುತ್ತುಂ ಕಾಯ್ದು ಪಲ್ಲವಿಯರಿಂ (ಪದ್ಮರಾ. ೮–೧೪). [ ಚೆಲ್ಲ$_1$ (<ಚಲ್ಲ$_1$) + ಕೆಯ್$_1$ ]

**ಚೆಲ್ಲಂದೋಱು** (ಕ್ರಿ). ವಿನೋದವನ್ನು ತೋರು ; ಸರಸವಾಡು: ಇಲ್ಲಿ ಪಲವುಂ ಚೆಲ್ಲಂದೋಱುವೆಂ ನಿಲ್ಲಿಂ (ಚಿಕವಿ. ೬–೦೩೩ ವ). [ ಚೆಲ್ಲ$_1$ (<ಚಲ್ಲ$_1$) + ತೋಱು ]

**ಚೆಲ್ಲಂಬೀಱು** (ಕ್ರಿ). ವಿಲಾಸವನ್ನು ಬೀರು ; ಒಯ್ಯಾರ ಮಾಡು: ಚೆಲ್ಲಂಬೀಱುವವೊಲಿರ್ದುವವಯವವನಿತುಂ (ಧರ್ಮಾಮೃ. ೦೩–೧೦೨). [ ಚೆಲ್ಲ$_1$ (<ಚಲ್ಲ$_1$) + ಬೀಱು ]

**ಚೆಲ್ಲಂಬೆರಸು** 'ಚಲ್ಲಂಬೆರಸು' ನೋ.

**ಚೆಲ್ಲಕಾತಿ** 'ಚಲ್ಲಗಾರ್ತಿ' ನೋ.

**ಚೆಲ್ಲಕೇತನ** (ನಾ). ಒಂದು ಬಿರುದು: ವಿಜಯಲಕ್ಷ್ಮೀನಿವಾಸಿತ ಚೆಲ್ಲಕೇತನ ಶ್ರೀಮತ್ ಬಂಕೆಯರಸ (ಕಇ. I, ೦೫–೫ ; ?). 'ಚೆಲ್ಲಧ್ವಜ' ಪರಾ. [ ಚೆಲ್ಲ$_0$ + ಕೇತನ ]

**ಚೆಲ್ಲಗಣ್** 'ಚಲ್ಲಗಣ್' ನೋ.

**ಚೆಲ್ಲಗಣ್ಪೊಣರ್** (ನಾ). ವಿಲಾಸವನ್ನು ಬೀರುವ ಕಣ್ಣುಗಳ ಜೊತೆ: ತನ್ನಯ ಚೆಲ್ಲಗಣ್ಪೊಣರ ಲೀಲೆಯನೇಟೆಪ ಬಾಳಿಮಾನ್ಗಳಂ (ಪುಷ್ಪಪು. ೯–೯೯). [ ಚೆಲ್ಲಗಣ್ (<ಚಲ್ಲಗಣ್) + ಪೊಣರ್$_2$ ]

**ಚೆಲ್ಲಗಾತಿ** 'ಚಲ್ಲಗಾರ್ತಿ' ನೋ.

**ಚೆಲ್ಲಗಾರ್ತಿ** 'ಚಲ್ಲಗಾರ್ತಿ' ನೋ.

**ಚೆಲ್ಲಣ** 'ಚಲ್ಲಣ' ನೋ.

**ಚಿಲ್ಲನೆ** (ಅ). ಶೀಘ್ರವಾಗಿ ; ಕೂಡಲೆ : ನೆಲ್ಲಿ ಬೆಳುಹೂಲಿಗಳ ಬೇರಿಲ್ಲಣ ಮುಳುಗೊಗ್ಗಿಯೆಂಬನಿತ್ತುಱ ಪುಡಿಯಂ ಚಿಲ್ಲನೆ ಮೂಗಿನೊಳೂಡಿದೊಡೆಲ್ಲಾ ಪಾವಿನ ವಿಷಕ್ಕೆ ತವಿಲದೆ ಸಾಲ್ಗುಂ(ಖಮದ. ೭-೫೩). [ಚಿಲ್$_0$ + – ಅನೆ$_1$]

**ಚಿಲ್ಲಪಯ್ಯ** (ನಾ). ಒಬ್ಬಾತನ ಹೆಸರು : ಇವರುಭಯ ಸನ್ಮಥದೊಳ್ ಬರದೊಂ ಚಿಲ್ಲಪಯ್ಯಂ (ಎಕ. XI, ಹೊಳಲ್ಕೆ. ೩೦-೧೫ ; 964). [ ಚಿಲ್ಲಪ$_0$ + ಅಯ್ಯ$_1$ ]

**ಚಿಲ್ಲಪಿಲ್ಲಿ** 'ಚಲ್ಲಾಪಿಲ್ಲಿ' ನೋ.

**ಚಿಲ್ಲವತ್ತ** 'ಚಲ್ಲವತ್ತ' ನೋ.

**ಚಿಲ್ಲವಾಡು** 'ಚಲ್ಲವಾಡು' ನೋ.

**ಚಿಲ್ಲವೆರು** (ಕ್ರಿ). ವಿಲಾಸವನ್ನು ಪಡೆ ; ಸರಸದಿಂದ ಕೂಡಿರು : ಚಿಲ್ಲವೆತ್ತೋರೆನೋಟಕ್ಕಡೆಯಾಗೇ ಕಾಂತಮಂ ಪೇಳ್ವವೊಲೆ ಜಿನುಗುತಿರ್ದಪ್ಪೆ ಕರ್ಣಾಂತದೊಳ್ (ಶಾಕುಂತ. ೧೧-೨೪). [ ಚಿಲ್ಲ$_1$ (<ಚಲ್ಲ$_1$) + ಪೆರು (<ಪೆಱು$_1$) ]

**ಚಿಲ್ಲವೊತ್ತ** 'ಚಲ್ಲವತ್ತ' ನೋ.

**ಚಿಲ್ಲಾಟ$_1$** 'ಚಲ್ಲಾಟ$_1$' ನೋ.

**ಚಿಲ್ಲಾಟ$_2$** 'ಚಲ್ಲಾಟ$_2$' ನೋ.

**ಚಿಲ್ಲಾಡಿಸು** (ಕ್ರಿ). ಚದರಿಸು : ಇರಲಿ ನೋಡುವೆ. ಚೆಂಗಾಳ್ವರನ್ನು ಚಿಲ್ಲಾಡಿಸುತ್ತೇನೆ ಎಂದರು (ಚೆಂಗಾಳ್ವ. ೨೫). [ ಚಿಲ್ಲಾಡು$_1$ (<ಚಲ್ಲಾಡು$_1$) + – ಇಸು$_3$ ]

**ಚಿಲ್ಲಾಡು$_1$** 'ಚಲ್ಲಾಡು$_1$' ನೋ.

**ಚಿಲ್ಲಾಡು$_2$** 'ಚಲ್ಲವಾಡು' ನೋ.

**ಚಿಲ್ಲಾಪಿಲ್ಲಿ** 'ಚಲ್ಲಾಪಿಲ್ಲಿ' ನೋ.

**ಚಿಲ್ಲಿ** 'ಚಲ್ಲಿ$_3$' ನೋ.

**ಚಿಲ್ಲಿಪಿಲ್ಲಿ** 'ಚಲ್ಲಾಪಿಲ್ಲಿ' ನೋ.

**ಚಿಲ್ಲಿಸು$_1$** 'ಚಲ್ಲಿಸು$_1$' ನೋ.

**ಚಿಲ್ಲಿಸು$_2$** 'ಚಲ್ಲಿಸು$_2$' ನೋ.

**ಚಿಲ್ಲು$_1$** 'ಚಲ್ಲು$_1$' ನೋ.

**ಚಿಲ್ಲು$_2$** 'ಚಲ್ಲ$_1$' ನೋ.

**ಚಿಲ್ಲುತನ** 'ಚಲ್ಲುತನ' ನೋ.

**ಚಿಲ್ಲುಮಲ್ಲಿ**(ನಾ). ಗಾಂಭೀರ್ಯವಿಲ್ಲದವಳು ; ಚೆಲ್ಲಗಾತಿ : ಈ ಹುಡುಗಿ ಶುದ್ಧ ಚಿಲ್ಲುಮಲ್ಲಿ (ನಿಂದನೆ. ೭೧). [ ಚಿಲ್ಲು$_2$ (<ಚಲ್ಲ$_1$) + ಮಲ್ಲಿ ]

**ಚಿಲ್ಲೆ, ಚಲ್ಲೆ$_1$** (ನಾ). ೧. ಉದ್ದ ; ನೀಳ : ದೀರ್ಘತೆ : "ಚಿ[ಪಾಠಾಂ. ಚ]ಲ್ಲೆಯನೆ ನಿಡಿದು" (ಶಬ್ದಮಂ. ೫೦). (ಗುಂ). ೨. ಉದ್ದವಾದ ; ದೀರ್ಘವಾದ. 'ಚಿಲ್ಲೆಗಣ್' ಪರಾ. ಚಲ್ಲೆ$_1$ : ೧. "ಚಲ್ಲೆಯೆನೆ ನಿಡಿದು" (ಕಬ್ಬಿಗ. ೫೦). 'ಚಲ್ಲೆಗಣ್' ಪರಾ.

**ಚಿಲ್ಲೆಗಣ್, ಚಲ್ಲೆಗಣ್** (ನಾ). ನೀಳವಾದ ಕಣ್ಣು ; ಅಗಲವಾದ ಕಣ್ಣು : ಬಂದರ್ ನಗೆಗಣ್ಗಳ ಚಿಲ್ಲೆಗಣ್ಗಳಲರ್ಗಣ್ಗಳ ನಿಡುಗಣ್ಗಳ ಬೆಡಂಗಿಯರ್ (ಜಗವಿ. ೪-೧೨೪) ; ಮಡದಿಯರ ಚಿಲ್ಲೆಗಣ್ಗಳಮಿಂಚಿನಂತಿರಲು (ನಂಬಿರ. ೧೫-೭೭); ನಲ್ಲರೂಪಿಲ್ಲೆಂದಡೀಕ್ಷಿಸು ಚಿಲ್ಲೆಗಂಗಳಿಂ (ಬಸವು. ೪೦-೦೪). ಚಲ್ಲೆಗಣ್ : ಚಲ್ಲೆಗಣ್ಣ ತುಱುಗೆಮೆಯ ವಿಶಾಲಗಂಡಸ್ಥಳದ . . . ವಾರನಾರೀಕದಂಬಂ (ಧರ್ಮಾಮೃ. ೮-೧೯೬) ; ಆತನ ಚಲ್ಲೆಗಣ್ಗಳಾತನ ಬಗೆಗೊಳ್ವ ಪದೊರ್ಡೆಗಳ್ (ಜಗವಿ. ೧೧-೧೫) ; ಶ್ರುತಿಯುವತಿ ಸೂಸುವ ಚಲ್ಲೆಗಂಗಳ ಮೊನೆಗೆ ವಿಾಸಲುಗುಡದ ಮೈಸಿರಿಯ (ಕುಮಾ.ಅ. ೪-೪೦). [ ಚಿಲ್ಲೆ + ಕಣ್ ]

**ಚಿಲ್ಲೆಗಾತಿ** 'ಚಲ್ಲಗಾರ್ತಿ' ನೋ.

**ಚಿಲ್ಲೆನೋಟ** 'ಚಲ್ಲೆನೋಟ' ನೋ.

**ಚಿಲ್ಲೆಯ** 'ಸೆಲ್ಲೆಹ' ನೋ.

**ಚಿಲ್ಲೆಹ** 'ಸೆಲ್ಲೆಹ' ನೋ.

**ಚಿಲ್ಲೆಹೋಗು** (ಕ್ರಿ.) ಚಲ್ಲಾಟಕ್ಕೆ ಹೋಗು (?) : ಚನ್ದ್ರವನದಲ್ಲಿ ಕೋಣಪ್ಪಜಟ್ಟಿಯೊಡನೆ ಚಿಲ್ಲೆಹೋಗಿಯಿದ್ದು ರಾತ್ರಿ ಕಾವಲಿದ್ದದ್ದಕ್ಕೆ (ಚಿಟ್ಟಿಅ. ೫೬-೧). [ <ಚಿಲ್ಲ$_1$ + ಹೋಗು$_1$ (<ಪೋಗು$_1$) ]

**ಚಿಲ್ವ, ಚಲುವ, ಚಲ್ವ, ಚೆಲುವ$_1$** (ನಾ). ೧. ಅಂದವಾದಂದು ; ಸುಂದರವಾದುದಂ; ಚೆನ್ನಾದುದಂ ; ಉತ್ತಮವಾದುದು : ಮತ್ತಾ ಪುರಂ ಚಿಲ್ವನಾಪುರಮಿಂಬಾಪುರವೊಳ್ಳಿತಾಪುರಂ (ಅನಂಪು. ೧-೧೨೦). ೨. ಅಂದ ; ಚೆಲುವು ; ಸೌಂದರ್ಯ : ಮೊದಲ ಪದಂ ನ್ಯೂನಾಕ್ಷರಂ . . . ಇದಱಿಂ ಛಂದೋಭಂಗಂ ಪದನಱಿದದನಿಂತು ಸಮಱಿ ಪೇೞ್ದೊಡೆ ಚಿಲ್ವಂ (ಕವಿರಾ. ೧-೯೨). ೩. ಸುಂದರನಾದವನು ; ಸ್ಫುರದ್ರೂಪಿ : ಚಿಲ್ವರ್ಕಳಭಿಜನರ್ಕಳ್ಗುಣಿಗಳ್ (ಕವಿರಾ. ೨-೨೬) ; ಪುಷ್ಪಸಂಕುಳದೊಳ್ ನೀನೇ ವಿಳಾಸಿಯ್ಯೆ ಮಿಡಿಗಳೊಳ್ ನೀಂ ಚಿಲ್ವನೈ (ಆದಿಪು. ೧೧-೯೮) ; ಕರ ಚಿಲ್ವ[ಪಾಠಾಂ. ಚೆಲುವ] ಶ್ರೀಶೈಲಚನ್ನಮಲ್ಲಿಕಾರ್ಜುನನ ಸಜ್ಜನ ಗಂಡನ ಮಾಡಿಕೊಂಬೆ (ಮಹಾದೇ. ಬ. ೧೪೪-೩೨೮). ೪. ಒಬ್ಬಾತನ ಹೆಸರು : ಇಷ್ಟಬ್ರಿತ್ಯನಪ್ಪ ಪೊಲೆಕ್ಕುಪ್ರಿಯ ಚಿಲ್ವ . . . ಚಿಲ್ವ ಸಂಪನ್ನ (ಎಇ. IX, ೨೦-೪ ; ). 800 **ಚಲುವ** : ೧. ನಿಮ್ಮ ಕರುಣವೇ ಕರ ಚಲುವ ಸಕಳೇಶ್ವರಯ್ಯ (ಸಮೂವ. ೫-೧೮) ; ಚ[ಪಾಠಾಂ. ಚೆ]ಲುವವಹ ಮೃದುತರ ವೆನಿಪ ಪರಿಮಳಿಪ ಪೊಸಖಂಡಂಗಳಂ ಸವಿಗೊಳುತ (ಬಸವು. ೦೮-೨೯). ೩. ಚಲುವ [ಪಾಠಾಂ. ಸುಜನ]ರುಚಿಗೆ ರೂಪಿನ ಮದಮಂ (ಸಮಹ. ೪-೦೦೮) ; ಸಾವಿಲ್ಲದ ಕೇಡಿಲ್ಲದ ಚ[ಪಾಠಾಂ. ಚೆ]ಲುವಂಗಾನೊಲಿದೆನವ್ವಾ (ಮಹಾದೇ. ಬ. ೧೨೨-೨೮೩). (ಗು). ೫. ಅಂದವಾದ ; ಸೊಗಸಾದ ; ಉತ್ತಮವಾದ : ಬೇಱೊಂದು ನಾತೊಡೆ ಚಲುವ ಚಂದನದ ಪಡಿ ಯೆನಿಸದಡೆ (ಬಸವು. ೨೭-೪) ; ಚಲುವ ವಧು ಕೇಳೆಲೆ ದುರಾತ್ಮಕರಳಿವರೇ ಯೆನ್ನನು (ಕುಮಾವಿ. ೭ರಿ೩. ೨-೩೧). **ಚಲ್ವ** : ೧. ಚ[ಪಾಠಾಂ. ಚೆ]ಲ್ವವಹ ಮೃದುವಪ್ಪ ಗಂಧಂ ನಿಲ್ವ . . . . ಬಿಲ್ವಪತ್ರಿಯನೆಯ್ದೆ ಕೊಯ್ದು (ಬಸವು. ೪೩-೨೬). ೩. ಚಲ್ವನೇ ಹರನಂ ಮೋಹಿಸಲಾಪ್ಪನೆಂತುವಧಿಕಂ ಶ್ರೀವಿಷ್ಣು ಭೂಪಾಳಕಂ (ಎಕ. V, ಬೇಲೂರು. ೫೮-೩೯; 1117). **ಚೆಲುವ$_1$** : ೧. ಪರಿಣಾಮದೊಳಗೆ ಮನದ ಪರಿಣಾಮವೆ ಚೆಲುವ ಸಂಗದೊಳಗೆ ಶರಣರ ಸಂಗವೆ ಚೆಲುವ (ಅವಚಂ. ೦೧೯-೫೩೮). ೩. ನೀಲೋತ್ಪಲನಿಭಾಂಗದ ಮುದ್ದುವದನದ ಚೆ[ಪಾಠಾಂ. ಚ]ಲುವ ದೇವರ ದೇವನೆಸೆದನು ಬಾಲ ಕೇಳಿಯಲಿ (ತೊರರಾ. ೦-೮-೮೦) ; ಚೆಲುವವರರಸನರ್ಚನಾದ್ರುಮ್ಮವೆರಸಿ ನಿರ್ಮಲಯೋಗಿಪಥಕ್ಕೈದಿದನು (ಭರತ. ೩-೭). ೫. ಪೂಸಿದ ವಿಭೂತಿ ಕಯ್ಯೊಳು ಪಾತ್ರೆಯೇಕ ಜಡೆ ಭಾಸುರದ ಪುಲಿದೊವಲು ಲಾಕುಳಂ ಚೆಲುವ ನಡೆ (ತಿರುರ. ದೇ. ೦೦-೧೦).

ಚೆಲುವಾನೆಗಳ್ಳ=ಒಳ್ಳೆಯ ಆನೆಗಳನ್ನು ಹಿಡಿಯುವವನು; ಒಂದು ಬಿರುದು : ಕೋಡೂಪ್ಪುರವರೇಶ್ವರಂ ಚೆಲುವಾನೆಗಳ್ಳಂ ವೈರಿ [ಹೃತ್ಶೆಲ್ಲಂ] (ಕಇಅ. ೧೨೬-೩೭-೯ ; 1107). [ ದೇ.॥ ತಮಿ. ಚೆಲ್ವ ; ತೆಲು. ಚೆಲುವ, ಚೆಲ್ವ ]

**ಚಿಲ್ವಕಾಱ** (ನಾ). ಅಂದಗಾರ ; ಚೆಲುವ ; ಸುಂದರ : ಚಿಲ್ವಕಂಗಳ ಚಿಲ್ವ ಕಾಱ ನೋಡ ಬಂದೆ ನಿನ್ನ ಬಳಿಸಾರ ಬಂದೆ (ಕನಕ. ೧೨೫ ಪಲ್ಲವಿ). [ ಚಿಲ್ವ + – ಕಾಱ ]

**ಚಿಲ್ವಡೆ** (ಕ್ರಿ). ೧. = ಚೆಲ್ವುವಡೆ : ತಳ್ವೊಡೆ ಕಡು ಚಿಲ್ವಡೆದುದು (ಅನಂಪು. ೬-೫). ೨. ಅಂದವನ್ನುಂಟು ಮಾಡು : ಕರಮ ಚಿಲ್ವಡೆದು ಸಿಂಗರಮಾಡಿ ವಾಮೇತರಹಸ್ತದೊಳು ಖಡ್ಗಮಿತ್ತ (ಶ್ರೀಪಾಲ. ೮-೩೮). [ ಚಿಲ್ + ಪಡೆ$_1$ ]

**ಚೆಲ್ವತನ, ಚಲುವತನ** (ನಾ). ಅಂದಗಾರಿಕೆ : ಸೊಗಸುಗಾರಿಕೆ ; ಚೆಲುವಿಕೆ : ಪುರುಷನ ಭಾವಂ, ಪುರುಷತನಂ, ಏವಂ ವೀರತನಂ, ಶೂರ ತನಂ, ಬಲ್ಲತನಂ, ಚೆಲ್ವತನಂ (ಶಬ್ದಾನು. ೪೩೦ ಪ್ರಯೋ). **ಚಲುವತನ :** ಚಲುವತನವನು ತೋಱಿ ರಾಮನನೊಲಿಸಲೈದಿದ ಶೂರ್ಪಣಖಿಯನು ಕಲಿ ಸುಮಿತ್ರಾಸೂನು ಹಿಡಿದಿಳುಹಿದನು ನಾಸಿಕವ (ತೊರರಾ. ೩-೪ ಸೂಚನೆ). [ ಚೆಲ್ವ + – ತನ ]

**ಚೆಲ್ವನೆ, ಚಲುವನೆ** (ಗು). ಸುಂದರವಾದ; ಸೊಗಸಾದ: ಪೊನ್ನೋಲೆಯುಂ ತೊಡಿಸಿ ಚೆಲ್ವನಪ್ಪ ಪೂವಮಾಲೆಯುಂ ಮುಡಿಯಿಸುತ್ತುಂ (ಧರ್ಮಾಮೃ. ೩-೯); ಚೆಲ್ವನಪ್ಪ ನವಹಾಟಕನಿರ್ಮಿತಮಪ್ಪ ಕೋಂಟೆ ಮುಟ್ಟಿರೆ ಮುಗಿಲಂ (ಚಂದ್ರಪು. ೧-೧೧೪). **ಚಲುವನೆ :** ಹಲವನಱಿದಿಂತೊರೆದುದಕೆ ಕರ ಚ[ಪಾಠಾಂ. ಚೆ]ಲುವನಾಯಿತ್ತು (ಬಸವ. ೫೧-೪೧). [ ಚೆಲ್ವು$_1$ + – ಅನೆ$_2$(< – ಅನೆಯ್$_2$) ]

**ಚೆಲ್ವಪಿಳ್ಳೆ** (ನಾ). ಮುದ್ದಾದ ಮಗು ; ಸುಂದರನಾದ ಬಾಲಕ ; ಬಾಲ ಕೃಷ್ಣ : ಡಿಳ್ಳಿಯೊಳೊಂದುಗೂಡಿರೆ ದೇವರು ಚೆಲ್ವಪಿಳ್ಳೆ, ಬಾರೆನೆ ನಿನ್ನ ಬೆಂಬಱಿಯ ಬರಲು (ಗೀತಗೋ. ೪೬). P ತಮಿಳಿನಲ್ಲಿ ಈ ಪದವನ್ನು ವಿಶೇಷವಾಗಿ ಸ್ಕಂದನಿಗೆ ಅನ್ವಯಿಸುತ್ತಾರೆ. [ ←ತಮಿ. ಚೆಲ್ವಪ್ಪಿಳ್ಳೈ ]

**ಚೆಲ್ವಪಿಳ್ಳೆರಾಯ, ಚೆಳ್ಳೆಪಿಳ್ಳೆರಾಯಂ, ಚೆಲಪಿಳೆರಾಯ** (ನಾ). (ಮೇಲುಕೋಟೆಯ) ಚೆಲುವರಾಯಸ್ವಾಮಿ : ಉಲ್ಲಾಸದಿಂ ಯಾದವಾದ್ರಿಗೈದಿಸಿ ಚೆಲ್ವಪಿಳ್ಳೆರಾಯಗೆ ನೀ ಪಿತನೆಂದೆನಿಸಿದೆ(ಗೀತಗೋ. ೪೬). **ಚೆಳ್ಳೆಪಿಳ್ಳೆರಾಯ:** ಮೇಲ್‌ಕೋಟೆಯಲ್ಲಿ ಕೃಷ್ಣನ (ಚೆಳ್ಳೆಪಿಳ್ಳೆರಾಯನ) ಗುಡಿಯನ್ನು ಕಟ್ಟಿಸಿ (ಮುಂಬಯಿ. ೬-೧೧೬). **ಚೆಲಪಿಳೆರಾಯ :** ಶ್ರೀ ಚೆಲಪಿಳೆರಾಯರಿಗೆ ನಿತ್ಯ ಸಂದಿ ತೆಪ್ಪ ತಿರುನಾಳು ಚೆಱಪು (ಎಕ. XIV, ಶ್ರೀರಂಗ. ೯೫-೨ : 1535). [ ಚೆಲ್ವಪಿಳ್ಳೆ + ರಾಯ ]

**ಚೆಲ್ವರಾಯ, ಚಲುವರಾಯಂ** (ನಾ). ೧. = ಚೆಲ್ವಪಿಳ್ಳೆರಾಯಂ : ಈ ಪರಿಯಲಿ ಮೇಲುಕೋಟೆ ಇಂದಿರೆವರ . . . ತಾಪತ್ರಯಗಳ ಬಿಡಿಸಿ ಚೆಲ್ವ ರಾಯ ಗೋಪಾಲ ಮೂರುತಿ ಪುರಂದರವಿಠಲ (ಪುರಂದ. ೨-೯-೩). **ಚಲುವರಾಯ :** ೧. ಮೇಲುಕೋಟೆಯ ಚಲುವರಾಯಸ್ವಾಮಿಯ ಗುಡಿ ಸೊಗಸಾಗಿದೆ (ರೂಢಿ). ೨. ಚೆಲುವರಲ್ಲಿ ಮಿಗಿಲಾದವನು ; "ಕುಮಾರ ರಾಮ" (ಜಾನಕೋ. ೫೫). [ ಚೆಲ್ವ + ರಾಯ ]

**ಚೆಲ್ವಿಕೆ, ಚಲುವಿಕೆ, ಚಲ್ವಿಕೆ, ಚೆಲುವಿಕೆ** (ನಾ). ಅಂದ; ಚೆಲುವು ; ಸೊಗಸು ; ಸೌಂದರ್ಯ : ಎಱೆದೀವುದುಮಜನೀಕೆಯ ನಳಿತೋಳಿಂ ಗೊಲ್ದು ತಮ್ಮ ಚೆಲ್ವಿಕೆಯುಂ ಕಂಡೆಳಲತೆಗಳ್ಪೂವುಗಳಂ ತಳೆದಿರ್ದುಂ ತಳೆಯ ದಿರ್ಪುವಾ ಫಲಿನತೆಯುಂ (ಧರ್ಮಾಮೃ. ೩-೧೫೩) ; ನೋಡು ಮೈಥಿಲಿ ವಿಶ್ವ ಕರ್ಮನು ಮಾಡಿಹುದ ಲಂಕಾತ್ರಿಕೂಟದ ಕೋಡುಗಲ್ಲಿನ ನಡುವೆ ಚೆಲ್ವಿಕೆ ಯಿಂದ ಮೆಱೆಯುವುದ (ಕಾಶಿರಾ. ೪೪-೧೬); ಅವನ ಚೆಲ್ವಿಕೆ ಗಂಡು ಪೆಣ್ಗಳ ಕಂಗಳ ಸೆಱೆವಿಡಿದಿಹುದು (ಭರಚ. ೧-೫೦). **ಚಲುವಿಕೆ :** ಆವಳಿವ ಳೂರ್ವಶಿಯೊ ರಂಭೆಯೊ ದೇವವಧುಗಳ ಸುಳಿವೊ ತಾನೆನಲಾವ ಚ[ಪಾಠಾಂ. ಚೆ]ಲುವಿಕೆ ಶಿವಶಿವಾಯೆಂದರಸ ಬೆಱಗಾದ (ಕುವ್ಯಾಅ. ೫-೧೧) ; ಚಲುವಿಕೆಗೆ ಹಿಮವಂತಸುತೆಗಗ್ಗಳೆ . . . ಏನಗ್ಗಳೆಯೊ ಶಿವಶಿವ ಸೀತೆ ರೂಪಿನೊಳು (ತೊರರಾ. ೩-೭-೧೮) ; ಚಕ್ರೇಶ ಚಲುವಿಕೆಯಾಗಿ ಪೂಜೆಯ ಮಾಳ್ಪೆನೆಂದು ತನ್ನೊಳಗಿಂತು ನೆನೆದನು (ಭರಚ. ೭೩-೨೪). **ಚಲ್ವಿಕೆ :** "ಚಲ್ವಿಕೆಯೆನಲ್ ಸೌಂದರ್ಯದೊಳು" (ಕಶರ. ೧೨೩). **ಚೆಲುವಿಕೆ :** ಮಿಸುನಿಗಳ ಗಂಟೆಯಿಂದೆಸೆವ ಚೆಲುವಿಕೆಯನವನೀಶ ನೋಡುತ ಬಂದನು ಹಚಕಾ. ೪-೪೧) ; ಮಡದಿಯೊರ್ವಳು ಬಾಗಿಲಲಿ . . . ಕಡು ಚೆಲುವಿಕೆಯ ಬೇಱಿದಳು (ಕಂನವಿ. ೬-೧೦೦). [ ಚೆಲ್ವು$_1$ + – ಇಕೆ ]

**ಚೆಲ್ವಿಕೆದಾಳು** (ಕ್ರಿ). ಸೌಂದರ್ಯವನ್ನು ಪಡೆ ; ಚೆಲುವಾಗು : ಸುಲೋಚನೆಯುಂ ಲಕ್ಷ್ಮೀಮತಿಯುಂ ಸಂಜನಿಯಿಸಿ ಪಿರಿದುಂ ಚೆಲ್ವಿಕೆ ದಾಳಿದರು (ಜಯಕಾ. ೩-೧೯). [ ಚೆಲ್ವಿಕೆ + ತಾಳು$_1$(<ತಾಳ್$_1$) ]

**ಚೆಲ್ವಿಡಿ** (ಕ್ರಿ). ಚೆಲುವಿನಿಂದ ಕೂಡಿರು; ಸೌಂದರ್ಯದಿಂದ ತುಂಬಿರು : ಪಳಂಚಲೆವ ಪಂಚಜಡೆ ನೊಸಲೊಳೊಡಂಬಡುವರಳೆಲೆಯಿವಱಿಂ ಚೆಲ್ವಿಡಿ ದಿರ್ದುದು ಬಾಳಕೇಳಿ ಧರ್ಮಾತ್ಮಜನಾ (ಪಂಪಭಾ. ೨-೪) ; ಚೆಲ್ವಿಡಿದ ಸರೋರುಹಾಂತರಕೆ ಮಾನಿತ ಮಾನಸರಾಜಹಂಸಿಯುಂ ನಡೆಯಿಸುವಂತೆ (ಶಾಂತಿಪು. ೫-೧೧೩) ; ಮೃಡನಾಗಳ್ ಗಿರಿಜೆಯ ಚೆಲ್ವಿಡಿದ ಮೊಗಂಗಂಡು (ಗಿರಿಕ. ೧೦-೯೨). [ ಚೆಲ್ವು$_1$ + ಇಡಿ$_2$ ]

**ಚೆಲ್ವು$_1$, ಚಲುವು, ಚಲ್ವು, ಚೆಲುವು** (ನಾ). ೧. ಅಂದ ; ಚಂದ ; ಸೊಗಸು ; ಸೌಂದರ್ಯ : "ಚೆ[ಪಾಠಾಂ. ಚ]ಲ್ವೆಂಬುದಂದವೆನಿಕ್ಕು" (ಕಬ್ಬಿಕೈ. ೩೧) ; ಚೆ[ಪಾಠಾಂ. ಚ]ಲ್ವ ಪಾಂಗಱಿಯ[ದ]ಂತಿದನಿಂತಿರೆ ಪೇೞ್ಗೆ ವಿಕಲ್ಪಮುಂ (ಕವಿರಾ. ೧-೧೩೫) ; ಚೆಲ್ವಿನಿಂ ದೇವಾಸುರರ್ಕಳಂ ಗೆಲ್ವ ರೂಪನೊಡೆಯುಂ (ವಡ್ಡಾರಾ. ೫೩-೧೪) ; ಕೊಂಕಿದ ಕೊಂಕು ತದ್ವಿಷಯ ಕಾಂತೆಯ ಪುರ್ವಿನ ಕೊಂಕಿನಂತೆ ಚೆಲ್ವಂ ಕುಡೆ (ಆದಿಪು. ೧-೬೧) ; ಇದಾರ ಪುಣ್ಯದ ಪುಂಜವಿದಾರ ಚೆಲ್ವಿನಂಕುರಂ(ನಂಬಿರ. ೨-೫೦). ೨. ಸುಂದರ ವಾದುದು ; ಮನೋಹರವಾದುದು : ಅಳಿ ಬರಿದಿರ್ದ ಜಾದಿಯೊಳೆ ಪಲ್ಮೊರೆಯುತ್ತಿರೆ . . . ಸಾರೆ ಚಕೋರಮಿಂದುಮಂಡಳಗಳಿತಾಮೃತಾಸವ ಮನುಂಡುಸಿರುತ್ತಿರೆ ಚೆಲ್ವು ಶಾರದಂ (ಪಂಪಭಾ. ೭-೭೦). **ಚಲುವು:** ೧. ಚ[ಪಾಠಾಂ. ಚೆ]ಲುವು ಮಿಗೆ ಪೂಜಾಪ್ರಬಂಧಗಳನಭಿನಯಿಸುವಂ (ಬಸವ. ೪೧-೨೨) ; ರಾಯನ ಚಲುವನೀಕ್ಷಿಸಿ ನಲಿದು ಕೊಂಡಾಡಿದರು ಮನ ವೊಲಿದು (ನಳಚ. ೩-೧೬). **ಚಲ್ವು :** ೧. ಕಂಪಿನ ಕಾರಾಗಾರವುಂ ಚ[ಪಾಠಾಂ. ಚೆ]ಲ್ವಿನ ಕುಲಗೃಹಮುಮಿರ್ಪಂತಿರ್ದ ವಸಂತಗೃಹಮಂ ಪೊಕ್ಕು (ಚಂದ್ರಪು. ೭-೯೫ ವ) ; ೨. ಮನ್ನೆಪೇಟದಿ ತೆಂಕ ನಿನ್ನ ದೇಗುಲ ಚಲ್ವು (ಎಕ. VIII, ನಗರ.೬೨-೪ ; ಸು. 800). **ಚೆಲುವು :** ೧. ಗಾನದೊಳು ವಿದ್ಯ ದೊಳು ಪ್ರಾಯದೊಳು ಚೆಲುವಿನೊಳು . . . ಪ್ರತಿಯಿಲ್ಲ(ಸಿದ್ಧರಾ. ೧-೨೪); ಲಲನೆಯೊಳು . . . ಚೆಲುವಿನೊಳು ದಶರಥಾತ್ಮಜನೊಳತಿ ಕಬ್ಬಿನೊಳು ಬಿಳುದಿನೊಳು ರಾಮವೆನಿಸಿಕ್ಕು(ಮಂಗರಾ. ೧೪೭-೪೦) ; ಉಸುರಿಲ್ಲದೊಡಲಿನ ಚೆಲುವಿನಂತಿರೆ ನಮ್ಮ ಬಲ (ಕುವ್ಯಾದ್ರೋ. ೯-೫೨). ೨. ಚೆಲುವೆನಿಸಿರ್ದೀ ಕುಸುಮಾವಳಿಯುಂ ಕೊಯ್ದು ವನಿಸುತೆಯ ಕರತಳರಾಗಂ ಬಳಸಿದುದೆಂಬಿನ ಮೆಸೆದುವು . . . ಪಲ್ಲವ ಪ್ರಕರಂಗಳ್ (ಕಾದಂಪೂ.೧೦೮).

**ಚೆಲ್ವಾಗು, ಚಲುವಾಗು** = ಸುಂದರವಾಗು; ಮನೋಹರವಾಗು : ತಂತಮ್ಮ ಠಾಣಾಂತರಂಗಳೊಳಿರ್ದಂಗಜತಂತ್ರದಂತೆಸೆವಿನಂ ಚೆಲ್ವಾದು ವಿಮ್ಮಾವುಗಳ್ (ಆದಿಪು. ೧೧-೯೬) : ಸಾಸನಮನ್ನಿದೆ ಚೆಲ್ವಾಗೆ ಸಾಮಿ ಯಣ್ಣಂ ಬರೆದೋಂ (ಸೌಇಇ. XI-i, ೪೧-೫೭ ; 969) : ಪೃಥುಳೋನ್ನತ ಕರಾಂಬುಜಯುಗಂ ಚ[ಪಾಠಾಂ. ಚೆ]ಲುವಾಯಿತಯ್ಯಂಗೆ(ಬಸವ. ೩೮-೪೧). [ ದೇ.॥ ತಮಿ. ಚೆಲ್ವು ; ತೆಲು. ಚೆಲುವು, ಚೆಲ್ವು ]

**ಚೆಲ್ವು$_2$** (ನಾ). ಒಂದು ಬಗೆಯ ಮರ : ಪಾವಕನ ಶರೀರದಂತಿರುಡಿ ಸುಂಕಿಗನಂತಿರೆ ಚೆಲ್ವು ಸಂದ ಲಾವಕನ ನಿಯೋಗದಂತೊಗೆದ ಬೊಬ್ಬುಲಿ ಪರ್ವಿದಟವ್ಯಮದ್ಭುತಂ (ಪುಣ್ಯಾಸ್ರ. ೧-೯೪). [ ? ]

**ಚೆಲ್ವುದೋಱು**(ಕ್ರಿ). ಅಂದವನ್ನು ಕಾಣಿಸು; ಸೊಗಸನ್ನುಂಟುಮಾಡು: ಆಮ್ರಭೂಷಿತಕಮನಾಮ್ರಪಕ್ವಫಳದೊಳ್ ಶುಕಕಾಮಿನಿ ಚೆಲ್ವುದೋಱಿ ದಳ್ (ಆದಿಪು. ೧೧-೯೯). [ ಚೆಲ್ವು$_1$ + ತೋಱು ]

**ಚೆಲ್ವುವಡೆ** (ಕ್ರಿ). ಅಂದವನ್ನು ಪಡೆ ; ಸುಂದರವಾಗು : ರಂಗ ನಿನ್ನಯ ಚೆಲ್ವುವಡೆದೊಳುದೊಡೆಯ ಬೆಡಂಗಿಯ ಬಗೆಯ ಬಣ್ಣಪೊಡೆ ಕಂಗಳಿಂ ಕೇಳ್ವಂಗರಿದು ಗಡ (ಶತಸಾಂ. ೧-೪). [ ಚೆಲ್ವು$_1$ + ಪಡೆ$_1$ ]

**ಚೆಲ್ವುವರಿ** (ಕ್ರಿ). ೧. ಅಂದವಾಗಿ ಓಡು,-ಮುಂದುವರಿ : ಇನ್ನಪ್ಪ ಚಕ್ರವರ್ತಿಗಳನ್ನೀ ಮಾರ್ಗದೊಳೆ ನಡೆಯಿಮೆಂದಱಿಪುವವೋಲ್ ತನ್ನ ರಥಾಂಗಾಹತಿಯಿಂ ಮುನ್ನಮೆ ನೀರ್ ತಳರೆ ಚೆಲ್ವುವರಿದತ್ತು ರಥಂ (ಆದಿಪು.೧೩-೭೪). ೨. ಚೆಲುವನ್ನು ಹರಡಂ,-ಸೂಸು : ಗುರುವಿಕೆಯಸಾಂತ ಸಾಂತಂಗಂ ಚೆಲ್ವುವರಿವ [ಪಾಠಾಂ. ಚೆಲ್ವರಿವಪ್ಪ] ಬಲ್ಲವ್ಮೆಗವೊಪ್ಪುವ ಲೆಕ್ಕಿಗರರಸನೊಗೆದನೆಸೆವಾಂಡಯ್ಯಂ (ಕಬ್ಬಿಕಾ. ೧೧). [ ಚೆಲ್ವು$_1$ + ಪರಿ$_2$ ]

**ಚೆಲ್ವುವೀಱು** (ಕ್ರಿ). ಅಂದವನ್ನು ಸೂಸಂ; ಸೊಗಸನ್ನು ಬೀರು: ನಿರವಧಿ ಸೌಷ್ಠವದಿಂ ತನ್ನಿರವಧಿಕಂ ಚೆಲ್ವುವೀಱೆ (ಜಗವಿ. ೧೦-೪೭)

[ ಚೆಲ್ವು$_1$ + ಬೀಱು ]

**ಚೆಲ್ವುವೆಱು, ಚಲುವೆಱು** (ಕ್ರಿ). ಅಂದವನ್ನು ಪಡೆ ; ಸುಂದರವಾಗು : ವಿನಯಮಾವೆಡೆಗಾವುದು ಚೆಲ್ವುವೆತ್ತು ರಂಜಿಸುಗುಮುದರ್ಕದಂ ಸಮಱೆ ನಿಚ್ಚಲುಮಾ ಬಿಯಮಾ ವಿನೋದಮಾ ಪಸದನಮಾ ವಿಳಾಸದೊಳೊಡಂಬಡೆ ಭೋಗಿಸಿದಂ ಗುಣಾರ್ಣವಂ (ಪಂಪಭಾ. ೧೪-೩೮) : ವೊಗಮಿಸೆ ಬಾರದಿರ್ದುಂ ಸೊಗಯಿಪ ತನ್ನುನಿಕುಮಾರವದನಾಬ್ಜಂ ದಿಟ್ಟಗೆ ಚೆಲ್ವುವೆತ್ತು ಮಱಿದುಂಬಿಗಳೆಱಗಿದ ಕನಕಕಮಲಮಂ ನೆನೆಯಿಸುಗುಂ (ಕಾದಂಪೂ. ೭೩೪). **ಚಲುವೆಱು** : ನೋಟಂ ನೋಟದೊಳು ಸಲೆ ಹೊಕ್ಕುಯಿಬ್ಬರ ಕಂಗಳೆರಡೆರಡಕ್ಕಜಂ ಮಿಗೆ ಏಕವಾಗಿಂತೆಯ್ದೆ ಚ[ಪಾಠಾಂ. ಚೆ]ಲುವೆತ್ತು (ಬಸವು. ೧೮-೮೩). [ ಚೆಲ್ವು$_1$ + ಪೆಱು$_1$ ]

**ಚೆಲ್ವೆ, ಚಲುವೆ$_1$, ಚಲ್ವೆ, ಚೆಲುವೆ$_1$** (ನಾ). ಸುಂದರಿ; ರೂಪವತಿ: ಅವರಿರ್ವರ್ಗಂ ಪ್ರಿಯನಂದನೆ ಗುಣಗಣಾಭರಣೆಯನಂತಮತಿಯೆಂಬಳ್ ಅತಿಚೆಲ್ವೆ (ಧರ್ಮಾಮೃ. ೩-೭) ; ಚೆಂದುಟಿಯ ಚೆಲ್ವೆ (ಉದ್ಭಟ. ೫-೫೩) ; ಮಂಡಾಲದೊಳು ಚೆಲ್ವೆ ಕೊರವಂಜೀ ನಿನ್ನ ಗಂಡನಿನ್ನೆಂತೋನೆ (ಕೃಪಿಡಿ. ೧೫೨). **ಚಲುವೆ$_1$**: ತಾನೇ ಚಲುವೆಯೆಂದು ಅವಳು ತಿಳಿದಿದ್ದಾಳೆ (ರಂಗರೋ. ೦೭೩). **ಚಲ್ವೆ**: ಇವನ ವಧು ಚಲ್ವೆ ರೂಪಿನೊಳ್ (ಸಮಪ. ೫-೨೮). **ಚೆಲುವೆ$_1$**: ಚಾರುಚರಣದಿಂದ ಚೆಲುವೆ ಗಂಗೆಯ ಪಡೆದ (ಪುರಂದ. ೧-೨೩೩-೨) ; ಚೆಲುವೆಗೆ ತಕ್ಕ ಸಿಂಗರವ ನಿರ್ಮಿಸಿ (ವೋಹತ. ೨೩-೫೩) ; ಚಿಗರಿಗಂಗಳ ಚೆಲುವೆ ಚಿದರಿ ನಿಂತಾಳ (ಸವೀಗೀ. ೧೧೦-೧). [ ಚೆಲ್ವು$_1$ + – ಎ$_2$ ]

**ಚೆಲ್ವೆಸೆ** (ಕ್ರಿ). ಚೆನ್ನಾಗಿ ಶೋಭಿಸು : ಕತ್ತುರಿಯ . . . ಸೊವಡೊಳ್ ಕಡುಸೊರ್ಕು ಸೊರ್ಕಿಗಾವರಿಸುವ ತುಂಬಿ ಚೆಲ್ವೆಸೆಯೆ ಕಣ್ಗೆಸೆದತ್ತು ಖಗೇಂದ್ರನೀಲಗಂ (ಆದಿಪು. ೨-೫) ; ತೊಳಪ್ಪ ಕನ್ನವುರಂ ಚೆಲ್ವೆಸೆದಿರೆ (ಕಾವ್ಯಾವ. ೪೯೦); (ಶಮದ. ೬೩ ಪ್ರಯೋ. ನೋ). [ ಚೆಲ್ವು$_1$ + ಎಸೆ$_2$ ]

**ಚೆಲ್ವೆಳವೆ** (ನಾ). ಅಂದವಾದ ಹೊಸಪ್ರಾಯ: ಚೆಲ್ವೆಳವೆ ಬಾವನ್ನದಿಂದೆದೆ ತುಂಬುತಿಹುದು (ಕಾಲೂರ. ೧೪೮-೩೨೪).

[ ಚೆಲ್ವು$_1$ + ಎಳವೆ (<ಎಳಮೆ$_1$) ]

**ಚೆಲ್ವೆಳಸು** (ನಾ). ಸೊಂಪಾಗಿ ಬೆಳೆದ ಬೆಳೆ : “ಪಿರಿದಾಗಿ ಬೆಳೆದ ಬೆಳೆಯೆಂದುಱೆ ಚೆಲ್ವೆಳಸೆನ್ನಲಕ್ಕು” (ಕವಿಕಂ. ೨೩೭). [ ಚೆಲ್ + ಬೆಳಸು$_2$ ]

**ಚೆಲ್ವೆಱು** (ಕ್ರಿ). = ಚೆಲ್ವುವೆಱು : ಮುತ್ತಿನಕ್ಷತೆಯಿಟ್ಟು ದೇವಿ ನೃಪನ ಚೆಲ್ವೆತ್ತು ನೋಡಲು ಕಣ್ಣಕಾಂತಿ ಬಿತ್ತರಿಸಿದುದು (ಶ್ರೀಪಾಲ. ೧೧-೧೧೦).

[ ಚೆಲ್ + ಪೆಱು$_1$ ]

**ಚೆಲ್ವೊಂದು** (ಕ್ರಿ). ಸೌಂದರ್ಯವು ಒಟ್ಟುಗೂಡು,-ಸೇರು : ಸುಡುವ್ಮೆಯ ಚೆಲ್ವೊಂದಿ ಬಿಡದಿರ್ದೊಡಂ ಬಾಡಿ (ಕಾಲೂರ. ೧೬೬-೩೭೦).

[ ಚೆಲ್ವು$_1$ + ಒಂದು$_1$ ]

**ಚೆಲ್ವೊಗೆ** (ಕ್ರಿ). ಚೆಲುವಾಗು; ಶೋಭಿಸಂ: ಚೆಲ್ವೊಗೆದ ಮಲ್ಲಿಗಾರ್ತಿಯನೆ ಸುತ್ತಿ ಬರ್ಪಾಕೆ (ಕಬ್ಬಿಕೈ. ೨೭). [ ಚೆಲ್ವು$_1$ + ಒಗೆ$_1$ ]

**ಚೆಲ್ವೊಡರಿಸು** (ಕ್ರಿ). ಚೆಲುವನ್ನುಂಟುಮಾಡಂ ; ಅಂದಗೊಳಿಸು : ಕಡುಗಾಡಿ ನಾಡೆಯುಂ ಕಣ್ಗೆಡಱೆ ಮನಂ ಬೆರ್ಚೆ ಸುತನ ಬರ್ಪಂದುಂ ಚೆಲ್ವೊಡರಿಸಿ ಬಲ್ವಿಡಿವಿಡಿದುದು ತೊಡರ್ದಳಿಪಿ ನೋಟ್ಪ ನೋಟಕರ್ಕಳ ಮನಮಂ (ಕಾವ್ಯಾವ. ೨೦೦) : ಸಮಂತೊಡನೆ ಮಹೇಶನಂ ಪ್ರಿಯದೊಳಪ್ಪಿದರ್ ಗಿರಿಜಾತೆಯಾಹ ಚೆಲ್ವೊಡರಿಸಿತಾಹ ದಂಪತಿಗಳಾಹ ಜಗತ್ಪ್ರಭುಗಳ್ ಸುಭಾಗ್ಯರೆನ್ನೊಡೆಯರೆನುತ್ತ ಕೆಯ್ಮುಗಿದು ಬಣ್ಣಿಸುತಿರ್ದಳತಿ ಪ್ರಮೋದದಿಂ (ಗಿರಿಕ. ೧೦-೦೦೩).

[ ಚೆಲ್ವು$_1$ + ಒಡರಿಸು ]

**ಚೆಲ್ವೊರೆ** (ಕ್ರಿ). ಸೊಗಸಿನಿಂದ ತುಂಬು ; ಸುಂದರವಾಗಿರು : ನೀಜನ ಚೆಲ್ವೊರೆದ ಸವಿದುಟಿಯನೊಲವಿಂ ಬರೆ ಪೀರ್ದುವು ನೋಡುವಿಟ್ಟೆ ಗಾರ್ತಿಯ ಕಣ್ಗಳ್ (ಕಬ್ಬಿಕಾ. ೩೨೪). [ ಚೆಲ್ + ಪೊರೆ$_3$ ]

**ಚೆಲ್ವೋಡು** (ಕ್ರಿ). ಸೌಂದರ್ಯ ಹೋಗು ; ಅಂದಗೆಡು : ಬಾಡದ ಬಾಸಿಗಮುಡೆ ಚೆಲ್ವೋಡದ ದಿವ್ಯಾಂಬರಂ ಮನಂಗೊಳೆ (ಆದಿಪು. ೬-೪೦).

[ ಚೆಲ್ವು$_1$ + ಓಡು$_1$ ]

**ಚೆವಕೊಳ್ಗಂಡ** (ನಾ). ಒಂದು ಬಿರುದು : ಮಹಾರಾಜನೊಳ್ಮಾದಿ ಸತ್ತ ಕೆಲ್ಲಗಾವುಣ್ಡ ಚಾವೊನ್ನಚೂಡಮಣಿ ಚೆವಕೊಳ್ಗಣ್ಡ ಸಮರೈಕಪಾತ್ರ (ಮೈಆರಿ. ೧೯೩೩,೩೭-೮ ; ಸು. 950). [ ? ]

**ಚೆವು, ಚವ$_1$, ಚವು$_2$, ಚೆವ್ವು, ಚೌವು** (ನಾ). ಮುತ್ತುರತ್ನಗಳನ್ನು ತೂಗುವ ಒಂದು ಬಗೆಯ ತೂಕದ ಪ್ರಮಾಣ,-ತೂಕಕಟ್ಟಳೆ : ಹವಳಕ್ಕೆ ಕಣಜುಗಟ್ಟಳೆ ಭುವನದೊಳಂ ಚೆವು ಅಡಹು ಮುತ್ತಿನ ಮಣಿಗಂ (ವ್ಯವಹಾ. ಅನು. ೧, ೩-೧೫). **ಚವ$_1$** : ಚವದ ಮೇಲೆ ಕಿಮ್ಮತ್ತು ಆಗತಕ್ಕ ಜೀನಸಗಳು . . . ೧೦೦ ದೋಕಡೆ . . . ೧ ಚವ ಮತ್ತು ಟಕ್ಕಾ (ಮುಂಬವ್ಯಾ. ೧೩೭). **ಚವು$_2$** : ಮುತ್ತಿನ ಚವು ಕತ್ತೆಗೆ ತಿಳಿದೀತೇ (ಗಾದೆ). **ಚೆವ್ವು** : ಮುತ್ತಿನ ಮಣಿಗಳಿಗೆ ತೂಕಕಟ್ಟಳೆ ಚೆವ್ವುಗಳೆಂದುಂಟು (ವ್ಯವಹಾ. ಅನುಬಂಧ. ೧, ೦-೪ ಟೀಕು ). **ಚೌವು** : ಚೌವ ಗುಣಿಸುವ ವಿವರಾ : ಮಣಿಯೇಸು ತೂಕವಿದೆಯೆಂಬದ ನೋಡಿಕೊಂಡು ಆ ತೂಕವನು ೪ ಪಾಲು ಮಾಡಿ . . . ಅದರಲಿ ಮಣಿ ಎಷ್ಟುಂಟು ಅಷ್ಟರಿಂ ಭಾಗಿಸಲು ಬಂದದ್ದು ಚೌವು (ಭಾಸ್ಕರ. ೭೮-೨).

[ ದೇ.॥ ತಮಿ. ಚೆವ್ವು; ತೆಲು. ಚವಿ. / ಮರಾ. ಚವ್ ]

**ಚೆವ್ವು** ‘ಚೆವು’ ನೋ.

**ಚೆವ್ವೆಣ್ಣೆ** (ನಾ). ಮಗು ಹುಟ್ಟಿದೊಡನೆ, ಜೇನುತುಪ್ಪದೊಂದಿಗೆ ಬೆರಸಿ ಚೀಪಿಸುವ ಹರಳೆಣ್ಣೆ,-ಕೈಯೆಣ್ಣೆ,-ಔಡಲೆಣ್ಣೆ : **ಚೆವ್ವೆಣ್ಣೆ** : ಚೆವ್ವು ತಮಿಳಿನಲ್ಲಿ ಕೆಂಪು ; ಮಗು ಹುಟ್ಟಿದೊಡನೆ ಕುಡಿಸುವ ಕೈಯೆಣ್ಣೆ (ನಮ್ಮನು. ೧೦೭). [ ←ತಮಿ. ಚೆವ್ವೆಣ್ಣೈ ]

**ಚೆಳಿ** (ನಾ). ಒಂದು ಕ್ಷುದ್ರದೇವತೆಯ ಹೆಸರು : ಮಾರಿ, ಮಸಣಿ, ಬಳಹರಿ, ಚೌಡಿ, ಚೆಳಿ ಇತ್ಯಾದಯೋಪಿ ಶಬ್ದಾಃ ಉಪಸಂಗ್ರಾಹ್ಯಾಃ (ಶಬ್ದಾನು. ೧೦೫ ವ್ಯಾಖ್ಯಾ). [ ? ]

**ಚೆಳ್ಳ** ‘ಸೆಳ್ಳ’ ನೋ.

**ಚೆಳ್ಳಕಾಯಿ** ‘ಚೆಳ್ಳೆಗಾಯ್’ ನೋ.

**ಚೆಳ್ಳಮರ** (ನಾ). ಒಂದು ಬಗೆಯ ಮರ; ಚಳ್ಳೆಮರ ; ಶ್ಲೇಷ್ಮಾತಕ : ತೆಂಕಣ (ಲು) ಪುತ್ತು ಚೆಳ್ಳ (ಚೇಳ) ಮರದಿಂ ಬಡಗಲ್ ಪ (ಪ್ಪಗಳಾ) ದವಾಱು ಕೆಯ್ಯನಾದಂ ಕುಟ್ಟಿಮಾಟ್ಟುದು (ಆಶ್ಮಿಮು. ೧೦-೨೩).

[ ಚೆಳ್ಳ (<ಸೆಳ್ಳ) + ಮರ$_1$ ]

**ಚೆಳ್ಳು$_1$** ‘ಸೆಳ್ಳ’ ನೋ.

**ಚೆಳ್ಳು$_2$** ‘ಸೆಳ್ಳು$_1$’ ನೋ.

**ಚೆಳ್ಳುಗುರ್** ‘ಸೆಳ್ಳುಗುರ್ ನೋ.

**ಚೆಳ್ಳುಗುರು** ‘ಸೆಳ್ಳುಗುರ್’ ನೋ.

**ಚೆಳ್ಳೆ** ‘ಸೆಳ್ಳ’ ನೋ.

**ಚೆಳ್ಳಿಗಾಯ್**, ಚಲ್ಲಗಾಯ್, ಚೆಳ್ಳಿಕಾಯಿ (ನಾ). ಉಪ್ಪಿನಕಾಯಿಗೆ ಉಪಯೋಗಿಸುವ ಚಳ್ಳೆಮರದ ಕಾಯಿ: ಗಾವಟಿ ಚೆಲ್ಲವತ್ತ ವರ ಮಾದಲವಂಬಟಿ ಚಿಲ್ಲು ಚೆಳ್ಳಿಗಾಯ್ [ಪಾಠಾಂ. ಚೆಳ್ಳಿ ಚಿಲ್ಲಕಾಯ್] ಮಾವಿನ ಕಾಯ್ಗಳೊಪ್ಪುವರಗಪ್ಪುರ ಮಾಗುಳಿಗಳ್ (ಸೂಕ್ತಿಸು. ೧೧-೪೭) : (ನಳದಂ. ೪೬೨ ನೋ). ಚಲ್ಲಗಾಯ್: ಪಿಪ್ಪಲಿ ಚ[ಪಾಠಾಂ. ಚೆ]ಲ್ಲಗಾಯ್ ಮಟಸು ಮಾಗುಳಿವೇವರ್ಗಳೆಯಲ್ಲವೇಲೆ . . . ಆದಿಯಾದುಪ್ಪಿನಕಾಯ್ಗಳಂ ಮಗಮಗಿಪ್ಪುವನಿಕ್ಕಿದನಬ್ಬಪತ್ರದೊಳ್ (ಲೀಲಾವ. ೫-೭೧). ಚೆಳ್ಳಿಕಾಯಿ: "ದ್ವಿಕುಕ್ಷಿತಃ–ಚೆಳ್ಳಿಕಾಯಿ" (ಒಷಧಿ. ೭೬). [ಚೆಳ್ಳಿ (<ಸೆಳ್ಳಿ)+ಕಾಯ್₄]

**ಚೆಱಪು** 'ಸೆಱಪು' ನೋ.

**ಚೇಗಿ** 'ಚೇಗೆ' ನೋ.

**ಚೇಗು₁** 'ತೇಗು₄' ನೋ.

**ಚೇಗು₂** (ನಾ). ೧. ಗಿಡಮರಗಳ ಮಧ್ಯದ ತಿರುಳು; ಕೆಚ್ಚು: "ಕೆಚ್ಚು ತಂತುವಾಯಕ್ರಿಯಾಯಾಂ (ನೇಯ್ಗೆಯ ಕೆಲಸ) ತರುಸಾರೇ ಚ (ಚೇಗು)" (ಶಮಧಾ): "ಸಾರಃ ಮಜ್ಜಾ – ೨ ಗಿಡದಲ್ಲಿರುವ ಚೇಗಿನ ಹೆಸರು: ಚೇಗು ಅಂದರೆ ಬಲಿತಿರುವಿಕೆ" (ಸಿದ್ಧಾಂತಿ. ೯೯). ೨. ಸಾರ; ಸತ್ತ್ವ; ಗಟ್ಟಿಯಾದುದು; ಸತ್ತ್ವಯುತವಾದುದು: ಕೂತದ್ದು ಕುಟ್ಟೆ, ಗೇದದ್ದು ಚೇಗು (ಗಾದೆ). 'ಚೇಗೇರು' ಪರಾ. ೩. ಪಾತ್ರೆಯ ತಳಕ್ಕೆ ಅಂಟಿಕೊಂಡಿರುವ ಕಪ್ಪುಮಸಿ: ಈ ಬಾಣಲೆಯ ತಳಕ್ಕೆ ಚೇಗು ಏರಿಬಿಟ್ಟಿದೆ. ಉಜ್ಜಲಿಕ್ಕೆ ಆಗುವುದಿಲ್ಲ (ರೂಢಿ). ೪. ಒಂದು ಬಗೆಯ ಹುಲ್ಲು (?): ಆ ವಿಶಾಲವಾದ ಹಣೆಯಂಚಿನ ಹುಬ್ಬುಗಳು ಚೇಗಿನಂತೆ ಬಳೆದು ಪುಷ್ಪವಾಗಿ ಇಳಿದುಬಿದ್ದು ಕಣ್ಣಿಗಡ್ಡವಾಗುತ್ತಿದ್ದ ಕಾರಣ . . . ಎತ್ತಿ ಕಟ್ಟಿರುತ್ತಿದ್ದನು (ಸವಿತಿ. ೫೨). 'ಚೇಗುಗಡ್ಡೆ' ಪರಾ.
[ದೇ.॥ ತಮಿ. ಚೇಗು, ಚೇಗ; ತೆಲು. ಚೇಗ, ಚೇವ]

**ಚೇಗು₃** 'ಚೇಗೆ' ನೋ.

**ಚೇಗುಗಡ್ಡೆ** (ನಾ). ಒಂದು ಬಗೆಯ ಮೂಲಿಕೆ: ಚೇಗುಗಡ್ಡೆ, ಅಚೂರ ಮುಳ್ಳು (ವೃಜಿಗಿ. ೭೭-೧೫೭೪). [ಚೇಗು₂ + ಗಡ್ಡೆ]

**ಚೇಗೆ**, ಚಾಗೆ, ಚೇಗಿ, ಚೇಗು₃, ಥೇಗಿ, ಥೇಗೆ (ನಾ). ಕೇಡು; ಭಂಗ; ನಷ್ಟ; ನಾಶ: ಆಗಿಗೆ ಮನಗೊಡದೆ ಚೇಗೆಗೆ ದುಃಖಿತನಾಗದೆ ಕಂಡ ಕಂಡವರಲ್ಲಿ ಬಂಡುಗೆಲಿಯದೆ (ಮೋಳಿಮಾ. ೧೧೯-೪೬೭); ಆಗುಮಾಡಿದ ಸುಕೃತವಂ ನೆಱೆ ಚೇಗೆಯಾಗಲು ಬಗೆದೆ ಶಿವಶಿವ (ಬಸಪು. ೨೪-೨೫); ಆಗುಹೋಗು ಚೇಗೆಗಳೆಂಬ ಕುಳಿ ತೆವರು ನೋಡಾ (ಸಿದ್ಧೇವ. ೧೮೧-೫೪೮): ಮಹೇಶ್ವರನ ತಿರುಪಿನೊಳುರು ಭುಜೋದ್ಭೂತ ವಾಯುವಿಂದೆ ಚೇಗೆಯಾದುವು [ಪಾಠಾಂ. ಜೋಗಿಯಾದಂ] ಚರಾಚರವು (ಚಿಬಪು. ೧೨-೨೦). 'ಆಗುಚೇಗೆ' ಪರಾ. ಚಾಗೆ: ಭಕ್ತಂಗೆ ಆಗೂ ಇಲ್ಲ ಚಾಗೆ[ಪಾಠಾಂ. ಚೇಗೆ]ಯೂ ಇಲ್ಲ (ವಚನವ.ಕ. ೬೩೩-೧೧೮೮). ಚೇಗಿ: 'ಆಗುಂಚೇಗಿ' ಪರಾ. ಚೇಗು₃: ತನಗೆ ಮುನಿವವರಿಗೆ ತಾ ಮುನಿಯಲೇಕಯ್ಯಾ ತನಗಾದ ಆಗೇನು ಅವರಿಗಾದ ಚೇಗೇನು (ಬಸವ. ೨೪೮). ಥೇಗಿ: ಈಗ ಬಹುವಿಧ ದುರ್ನಿಮಿತ್ತಗಳಾಗುತಿದೆ ನಿಜಪತಿಯನಿಂದೇಕಗಲಿದೆನೊ ತಾನು ಥೇಗಿಯಾಗದೆ ಬಿಡದು ಬಱೆದೇ ಹೋಗದೆನ್ನಯ ಬಯಕೆ (ಉತ್ತರಾ. ೨೯-೩೫). ಥೇಗೆ: ಆಗಿಗೆ ಮುಯ್ಯಾಂತು ಥೇಗೆಗೆ ಹಲುಬುತ್ತ ಸುಖದುಃಖವೆಂಬ ಉಭಯವ ಸರಿಗಾಣದೆ (ಏಲೇಶ್ವ. ೪೭): ಆಗಾವುದು ಬಿಡದಿದ್ದಡೆ ಥೇಗೆಯಾವುದು (ಕಲ್ಯಾಶಾಂ. ೪೯); ಆಗಿಗೆ ಮುಯ್ಯಾಂತು ಥೇ[ಪಾಠಾಂ. ಚೇ]ಗೆಗೆ ಮನಗುಂದುವವನಲ್ಲ (ಅಂಬಿವ. ೩೮೭-೧೧೫೩). 'ಆಗುಥೇಗೆ' ಪರಾ.

ಚೇಗೆಮಾಡು = ಕೆಡಿಸು; ಬಿಟ್ಟುಬಿಡು: ಸುವ್ರತವನು ಚೇಗೆಮಾಡದೆ ಪಲಕಾಲ ತಪಸುಗೆಯ್ದು ನೀಗಿದನಾ ಮುನಿ ತನುವ (ನೇಮಿಸಂ. ೭-೭೮). [<ಪ್ರಾ. ಥೇಅ./ಸಂ. ಭೇದ]

**ಚೇಗೇರು** (ಕ್ರಿ). ಸತ್ತ್ವ ಹೆಚ್ಚಾಗು; ಹುರಿಗೊಳ್ಳು: ಕಷ್ಟಗಳು ಹೆಚ್ಚಿದಷ್ಟೂ ಅವನ ಕೆಚ್ಚೆದೆಯು ಚೇಗೇರಿತು (ಪ್ರಮುಹ. ೪೦). [ಚೇಗು₂ + ಏರು₁ (<ಏಱು₁)]

**ಚೇಗೊಡತಿಸೊಪ್ಪು** (ನಾ). ಒಂದು ಬಗೆಯ ಸೊಪ್ಪು: ಆಡುಸೋಗೆ ಸೊಪ್ಪಿನ ರಸ, ಬಳ್ಳಿಸೊಂಡೆ ಕಷಾಯ . . . ಚೇಗೊಡತಿಸೊಪ್ಪಿನ ರಸ (ಸಕಪ್ವ. ೨೨೭). [ಚೇಗೊಡತಿ₀ + ಸೊಪ್ಪು₃]

**ಚೇಟ** (ನಾ). ಸೇವಕ; ಆಳು; ದಾಸ: "ಚೇಟಃ, ಭುಜಿಷ್ಯಃ, ಕಿಂಕರಃ– ಈ ೩ ಭಂಟರು" (ಹಲಾಯು. ೭೦-೨೦೦); ನಿಮ್ಮ ಚೇಟರು ಇಬ್ಬರೊಳಗೆ ಕಲಹ ಇದೆ (ದೇವಮು. ೧೧೧). [ಸಂ.]

**ಚೇಟಕ** (ನಾ). = ಚೇಟ. [ಸಂ.]

**ಚೇಟಿ** (ನಾ). ಹೆಣ್ಣಾಳು; ದಾಸಿ; ಸೇವಕಿ: "ಚೇಟೀ ಸಮಾಖ್ಯೆ ದಾಸಿದಲಕ್ಕುಂ" (ವಸ್ತುಕೋ. ೫೪-೧೨): ದ್ರೌಪದಿಯ ಕೆಲದೊಳಿರ್ದ ಸುಂದರ ಮಾಲೆಯೆಂಬ ಚೇಟಿ (ಪಂಪಭಾ. ೩-೫೩ ವ): ದಾಸೋಹವನಲರ್ಚುವ ಚೇಟಿ (ಬಸವು. ೭-೧೧); ಪಾಡಿನೊಳ್ಪಂ ಕೇಳ್ದು ಅಗಣಿತ ಚೇಟಿಯರ್ ನೆರೆದರ್ (ಅದ್ಭುತ. ೧೯-೧೫). [ಸಂ. ಚೇಟೀ]

**ಚೇಟಿಕೆ** (ನಾ). = ಚೇಟಿ: ಮುಂದೆ ಬಂದೇಱಿದ ಚೆನ ಗನ ಡಿಯ ಚೇಟಿಕೆ (ಪಂಪಭಾ. ೯-೧೦೦). [ಸಂ. ಚೇಟಿಕಾ]

**ಚೇಡಿ** 'ಚೇಡೆ' ನೋ.

**ಚೇಡಿಸು** 'ಥೇಡಿಸು' ನೋ.

**ಚೇಡುಬೀರ** (ನಾ). ಒಂದು ಬಗೆಯ ಗಿಡ: ಸಿತ್ತುಂಡೆ ಗಿಡ, ಸಿಡಿಗೋಲಿ, ಹನುಮಂತ ತೊಪ್ಪಲು, ಚೇಡುಬೀರ (ವೃಜಿಗಿ. ೨೧-೩೯೩). [?]

**ಚೇಡೆ**, ಚೇಡಿ (ನಾ). ೧. ಮಾಟ, ಮಂದ್ದು ಮುಂತಾದ ಕ್ಷುದ್ರ ಕರ್ಮಗಳ ಅಧಿದೇವತೆ; ಬೇತಾಳ: (ಶ). ಚೇಡಿ: ೨. ಮಾಟ; ಮಂತ್ರ; ಯಕ್ಷಿಣೀವಿದ್ಯೆ: ಸುಡುಗಾಡ ಸಿದ್ದನ ನಾಡಾವದು ಗೊತ್ತಿಲ್ಲ ಓಡಿಸಿ ಒಯ್ದಾನ ಹಸಗೂಸು ಅವನೆಂಥ ಚೇಡಿ ಬಲ್ಲವನಿರಬೇಕು (ಸಿದ್ಧಪು. ೪-೫೮). [←ಮರಾ. ಚೇಡಾ]

**ಚೇಣ**, ಚಾಣ, ಚಾನ (ನಾ). ಕಲ್ಲು ಮೊದಲಾದುವನ್ನು ಒಡೆಯುವ ಉಳಿ; ಟಂಕ: ಜಿನರ ನೆರವಿಯೆಂಬ ಚೇಣದಿಂ ದೇವಗತಿಯೆಂಬ ನಿಗಳಮು ಥೇದಿಸದೆ (ಧರ್ಮಾಮೃ. ೭-೯೭); ಉಕ್ಕಿನ ಘಟ್ಟಿಯ ಮೃತ್ತಿಕೆಯ ಚೇಣ ಕಡಿಯಿತ್ತು (ಬಿಬ್ಬಬಾ. ೬೦-೨೨೫): ಉಕ್ಕಿನ ಬಲು ಚೇಣವೂ ಸಿಡಿದ ಕುಡುಹುಗಳೊ (ಸೂಬಸೋ. ೭-೪೩). ಚಾಣ: ಅಱೆಯುಂ ಸೀಳುವೊಡಾನೆ ಮೆಟ್ಟಲಹುದೇ ಚಾಣಂಗಳಿಂದಲ್ಲವೇ (ಸೋಮೇಶ. ೭೬): ಕೇವಲ ಕಲ್ಲಾಗಿದ್ದ ಆದನ್ನು ಯಾವ ಚಾಣವು ಕಲೆಯ ನೆಲೆವನೆ ಮಾಡಲಿತ್ತೋ (ಬಾಬಲ. ೯೯). ಚಾನ: ದಾನವೆಂದರೆ ತಲೆಯ ಚಾನದಲಿ ಕಡಿದಂತೆ (ಸರ್ವಜ್ಞ. ೬೬೨): ಆ ಕಲ್ಲುಗಳನ್ನು ದೊಡ್ಡ ಸುತ್ತಿಗೆಯಿಂದ ಚಾನಗಳಿಂದ . . . ಒಡೆದು (ಕೃಷಿಪ್ರ. ೪೦). [ದೇ.॥ ತುಳು. ಚೇಣು, ಚೇನು; ತೆಲು. ಸೇನ]

**ಚೇಣಪಟ್ಟಸು** (ನಾ). ಜಟ್ಟಿಕಾಳಗದಲ್ಲಿ ಒಂದು ವರಸೆ: ಸಂದ ಕೊಕ್ಕಸ ಗುಂಡು ಗೋಣಿಯು ವಿಂದೆಪಟ್ಟಸು ಚೇಣಪಟ್ಟಸುವೆಂದೆನಿಪ ವಿಂದಾಣದಲಿ ಕಾದಿದರು ಜಟ್ಟಿಗಳೂ (ಸಾಳ್ವಭಾ. ೨೨-೬೨). [?]

**ಚೇಣಿ₁** (ನಾ). ೧. ನೀರಿನಲ್ಲಿ ಬೆಳೆಯುವ ಒಂದು ಬಗೆಯ ಗಟ್ಟಿಯಾದ ಹುಲ್ಲು: ಚೇಣೀಯ ಹುಲ್ಲು ತುಳಕೊಂಡು ಮಾದೇವ ಈದ್ದುಲಿಯ ಬೇಟಿ ಹೊರಟಾನೊ (ಹಳ್ಳಿಯು. ೩೦); ನದಿಯ ದಡದಲ್ಲಿದ್ದ ಚೇಣಿಯಲ್ಲಿ ಹಕ್ಕಿಗಳು ಕುಳಿತಿದ್ದವು (ಮಡಿಸ. ೫೦); ಚೇಣಿಯ ಚಾಪೆಗಳು ಸಾಲದುದರಿಂದ ಹಜಾರದ ಒಂದು ಕಡೆಗೆ . . . ಈಚಲು ಚಾಪೆಗಳನ್ನು ಹಾಸಿದ್ದರು (ಗರುಡಾ. ೬೨). ೨. ಒಂದು ಬಗೆಯ ಕಬ್ಬು. 'ಚೇಣಿಕಬ್ಬು' ಪರಾ. [?]

**ಚೇಣಿ₂** 'ಕೇಣಿ₃' ನೋ.

**ಚೇಣಿ₃** (ನಾ). (?) : ಹತ್ತೂಕಾಲೇಣಿ ಮುತ್ತಿನ ಚೇಣಿ ಮತ್ತಾರಿಗೆ ಹೂವ ಕುಯ್ವಾಯೊ ನೀನು (ಹಳ್ಳಿಬಾ. ೫೦). [ ? ]

**ಚೇಣಿಕಬ್ಬು** (ನಾ). ಒಂದು ಬಗೆಯ ಕಬ್ಬು: ರಸದಾಳಿ ಮತ್ತು ಪಟ್ಟಾಪಟ್ಟಿ ಮತ್ತು ಚೇಣಿಕಬ್ಬಲ್ಲದೆ ಈಚೆಗೆ ಅನೇಕ ತಳಿ ಕಬ್ಬುಗಳನ್ನು ಪ್ರಚಾರಕ್ಕೆ ತಂದಿರುತ್ತಾರೆ (ವ್ಯವಮ. ೫೦). [ ಚೇಣಿ₁ + ಕಬ್ಬು₂ (<ಕರ್ಬು₁) ]

**ಚೇಣಿಮಂದಲಿಗೆ** (ನಾ). ಚೇಣಿಹುಲ್ಲಿನಿಂದ ಮಾಡಿದ ಚಾಪೆ: ಒಳಗಿನಿಂದ ಒಂದು ಚೇಣಿಮಂದಲಿಗೆಯನ್ನು ತಂದು ಜಗುಲಿಯ ಮೇಲೆ ಹಾಕಿದಳು (ಡಂಗಾಳ್ಕೆ. ೪೮). [ ಚೇಣಿ₁ + ಮಂದಲಿಗೆ ]

**ಚೇತ** (ನಾ). ಮನಸ್ಸು ; ಚೇತಸ್ಸು : "ಮನಮಾಶಯಮಂತಃಕರಣ ನಾಮಮುಮದೆ ಚಿತ್ತಮಂತೆ ಚೇತಂ ಸ್ವಾಂತಂ ಮನದಿಡುವಟ್ಟಿಯೊಳೆ ವರ್ತಿಕುಂ" (ವಸ್ತುಕೋ. ೭೧-೨೫) ; ಸುಚರಿತ್ರತೆಯಿಂ ಸಮಸಂದ ಸೌಷ್ಠವಂ ಚೇತದೊಳುಣ್ಮೆ ಕನ್ನೆ ತಳೆದಳ್ ಕಿಲಿಕಿಂಚಿತಭಾವಚೇಷ್ಟೆಯಂ (ಚಂದ್ರಪು. ೫-೧೨೨) ; ಪ್ರಭುದೇವದೇವನನಿಶಂ ರಾಜರ್ಕಿ ಮಚ್ಚೇತದೊಳ್ (ಹರಿಶ್ಚ.ರ. ೧-೧೧). [ <ಸಂ. ಚೇತಸ್ ]

**ಚೇತಕಿ** (ನಾ). ಅಳಲೆಕಾಯಿ ; ಹರೀತಕಿ : "ಚೇತಕಿ ಶಿವೆ ಹೈಮವತಿ ಹರೀತಕಿ" (ವಸ್ತುಕೋ. ೩೫-೧೨). [ ಸಂ. ಚೇತಕೀ ]

**ಚೇತನ** (ಗು). ೧. ಇಂದ್ರಿಯಗ್ರಹಣಶಕ್ತಿಯುಳ್ಳ ; ಪ್ರಜ್ಞೆಯುಳ್ಳ. ೨. ಜೀವಂತವಾದ ; ಸಜೀವವಾದ . 'ಚೇತನ ಪ್ರತಿಮೆ' ಪರಾ. ೩. ಸ್ಪಷ್ಟವಾದ ; ಪ್ರಮುಖವಾದ ; ಉತ್ತಮವಾದ. (ನಾ). ೪. ಮನಸ್ಸು; ಬುದ್ಧಿ; ಪ್ರಜ್ಞೆ : ಅವನಾಡುವ ಮಾತುಗಳನ್ನು ಆ ನಿರ್ಮಲ ಚೇತನದಿಂದ ಹೊರಬರುವ ಅನುಭವಪೂರಿತ . . . ಮಾತುಗಳನ್ನು ಸುಮ್ಮನೆ ಆಲಿಸಬೇಕು (ಕುಸುಸಂ. ೧೦೦). ೫. ಆತ್ಮ ; ಜೀವ : "ಕ್ಷೇತ್ರಜ್ಞಂ ಚೇತನನಾತ್ಮಂ" (ವಸ್ತುಕೋ. ೧೮-೩) ; ಓ ನನ್ನ ಚೇತನ ಆಗು ನೀ ಅನಿಕೇತನ (ಅನಿಕೇ. ೬೦-೧). ೬. ಪರಮಾತ್ಮ: ವಿಶ್ವಮಂ ಸರ್ವತ್ರ ತುಂಬಿದಂತರ್ಯಾಮಿ ಚೇತನಂ ತಾ ಪ್ರೇಮಾತ್ಮವಾಗಿರ್ಪುದು (ಶ್ರೀರಾಮಾ. ೧೦-೨೪೯). ೭. ಚೈತನ್ಯವುಳ್ಳುದು; ಜೀವಿ; ಪ್ರಾಣಿ. ೮. ಚಟುವಟಿಕೆ; ಚೈತನ್ಯ. ೯. ಶಕ್ತಿ; ಸಾಮರ್ಥ್ಯ: ನಷ್ಟಹೊಂದಿದ ಮೆದುಳಿನ ಭಾಗದಿಂದ ಚೇತನವನ್ನು ಪಡೆಯುವ ದೇಹದ ಅಂಗಗಳು ನಿಸ್ತೇಜವಾಗಿ ನಿರುಪಯೋಗವಾಗಬಹುದು (ಮನೋಣಂ. ೧೧೦); ನಿಮ್ಮನ್ನು ಮಾತ್ರವಲ್ಲ ನಿಮ್ಮ ಹೆಂಡತಿ ಮಕ್ಕಳನ್ನು ಕೂಡಾ ಸಾಕುವಷ್ಟು ಚೇತನ ನನಗಿದೆ (ಭ್ರಮಾನ.೧೯೭). [ ಸಂ. ]

**ಚೇತನಂಗುಂದು, ಚೇತನಗುಂದು** (ಕ್ರಿ). ಶಕ್ತಿಗುಂದಂ ; ಚೈತನ್ಯ ಉಡುಗಂ : ಆರುಮರುಹಿನಿಂ ಚೇತನಂಗುಂದಿ ಭ್ರಮಣೆಯೊಳೊಂದಿ ಮಲಗುತ್ತೆ (ನವಪೋ. ೧೫-೬). **ಚೇತನಗುಂದು:** ಅಹಿನಾಥ ಮೂರ್ಛೆಯ ನಾಂತ ತಳಕೆ ಚೇತನಗುಂದಿ ದಿಗ್ದಂತಿ ಮಂಡಿಸಲಾಗ ಭೂತಲವೆಲ್ಲ ಕಂಪಿಸಿತು (ಪೋಹತ. ೩೮-೬೨). [ ಚೇತನ + ಕುಂದು₁ ]

**ಚೇತನಂಗೆಡು, ಚೇತನಗಿಡು** (ಕ್ರಿ). ಚೈತನ್ಯವಿಲ್ಲದಂತಾಗು; ಜಡವಾಗು; ಪ್ರಜ್ಞೆತಪ್ಪು ; ಶಕ್ತಿಗುಂದಂ : ನಿಂದಳಯ್ ಪ್ರಕೃತಿ ತಾಂ ಜನಕಜಾ ಹೃತ್ಕೃತಿಯೆನಲ್ ಪ್ರತಿಯೆನಲ್ ಚೇತನಂಗೆಟ್ಟು ! (ಶ್ರೀರಾಮಾ. ೨೪೪-೪೩೯). **ಚೇತನಗಿಡು :** ಚೇತನಗಿಡದೆ ಮುಚ್ಚಿಕನಾಗಿ ನಿಲ್ಲೆಂದಾತನ ಕರೆದು ಬೊಬ್ಬಿಟ್ಟಿದ (ಪೋಹತ. ೧೨-೮೩). [ ಚೇತನ + ಕೆಡು₁ ]

**ಚೇತನಂಬಡೆ, ಚೇತನವಡೆ** (ಕ್ರಿ). ಚೇತರಿಸಿಕೊಳ್ಳು ; ಚೈತನ್ಯವನ್ನು ಪಡೆ : ಆತನರಮನೆಪೊಗಲ್ ಬಸವನುಸಿರಾಡಿದುದು . . . ಸವಿಸಾಪಕೆ ಬರಲ್ ತನು ಚೇತನಂಬಡೆದುದು (ಚೆಬಪು. ೬-೨೭). **ಚೇತನವಡೆ:** ದನುಜನ ಮಾಯೆಯೊಂದಿನಿಸು ಬೇಗದಿನೊರ್ಮೆಯೆ ಮಾಯಮಾಗೆ ಚೇತನ[ಪಾಠಾಂ. ನೆ]ವಡೆದು (ಚಂದ್ರಪು. ೫-೬). [ ಚೇತನ + ಪಡೆ₁ ]

**ಚೇತನಗಿಡಿಸು** (ಕ್ರಿ). ಚೈತನ್ಯಗುಂದಿಸು ; ಶಕ್ತಿಗುಂದಿಸಂ : ಚೇತನಗಿಡಿಸಿ ಕೊಲ್ಲುತೆ ಕೊಂಡು ಪೋಪೆಮದೂತರ ನೋಡುತೆಯ್ದಿದಳ್ (ಪೋಹತ. ೨೯-೧೪). [ ಚೇತನ + ಕಿಡಿಸು (<ಕೆಡಿಸು) ]

**ಚೇತನಗಿಡು** 'ಚೇತನಂಗೆಡು' ನೋ.

**ಚೇತನಗುಂದು** 'ಚೇತನಂಗುಂದು' ನೋ.

**ಚೇತನತ್ವ** (ನಾ). ಚೈತನ್ಯ : ಆತ್ಮವಸ್ತುಗಳಿಗೆ ಚೇತನತ್ವ, ಜ್ಞಾತೃತ್ವ, ಕರ್ತೃತ್ವ, ಭೋಕ್ತೃತ್ವ ಮೊದಲಾದ ವ್ಯವಹಾರಗಳಿರುವುವು (ಹಿಂದಸಾ. ೨೩೯). [ ಸಂ. ]

**ಚೇತನದಪ್ಪು** (ಕ್ರಿ). ಚೈತನ್ಯ ಉಡುಗು ; ಮೈಮರೆ ; ಜಡವಾಗು : ಅಸಹಾಯರಾಗಿದ್ದ ಗಂಡಂದಿರನ್ನು ದ್ರೌಪದಿಯು ನೋಡುತ್ತ ಚೇತನದಪ್ಪಿದಂತಿರಲು (ವಚಭಾ. ೪೮). [ ಚೇತನ + ತಪ್ಪು₁ ]

**ಚೇತನದಾಯಕ** (ಗು). ೧. ಚೈತನ್ಯವನ್ನು ಕೊಡುವ ; ಉತ್ಸಾಹಕರವಾದ. (ನಾ). ೨. ಚೈತನ್ಯವನ್ನು ಕೊಡುವಂತಹುದು: ಇವು ಆಹಾರ ವಸ್ತುಗಳಲ್ಲ ; ಚೇತನದಾಯಕಗಳು (ಆಡುಶಾ. ೬೦). [ ಸಂ. ]

**ಚೇತನಧರ್ಮ** (ನಾ). ಚೈತನ್ಯವುಳ್ಳ ಅಥವಾ ಸಜೀವವಾದ ವಸ್ತುಗಳ ಗುಣ : ಅನುಗತಮಪ್ಪಂತಿರೆ ಚೇತನಧರ್ಮಂಗಳನಚೇತನಾರ್ಥಂಗಳೊಳಂ . . . ವಿವರ್ಣಿಪರರೆಬರ್ (ಕಾವ್ಯಾವ. ೯೩೨). [ ಚೇತನ + ಧರ್ಮ ]

**ಚೇತನಪ್ರತಿಮೆ** (ನಾ). ಸಜೀವವಾದ ಬೊಂಬೆ,-ಪ್ರತಿಮೆ : ಶ್ರೀತರುಣವಲ್ಲಭಗೆ ಜೀವರು ಚೇತನಪ್ರತಿಮೆಗಳು (ಹಸಾರ. ೨೪-೧೭). [ ಚೇತನ + ಪ್ರತಿಮೆ ]

**ಚೇತನಭಾವ** (ನಾ). ಚೈತನ್ಯವಿರುವಿಕೆ : ತನಮಿಕೆಯುಮೆಂಬಿವುಂ ಚೇತನಭಾವದೊಳಕ್ಕುಂ (ಕಾವ್ಯಾವ. ೩೪೩) ; ಪ್ರಕಟಂ ಚೇತನಭಾವದೊಳಿಕೆ ತನಮುಮೆಯಕ್ಕುಂ (ಶಮದ. ೨೦೦). [ ಚೇತನ + ಭಾವ₂ ]

**ಚೇತನವಡೆ** 'ಚೇತನಂಬಡೆ' ನೋ.

**ಚೇತನಾಚೇತನ** (ಗು). ಸಜೀವವಾದ ಮತ್ತು ನಿರ್ಜೀವವಾದ : ಮರ, ಗಿಡು, ಬಳ್ಳಿ . . . ಕನ್ನಡಿ, ಕಳಸ ಇಂತಪ್ಪ ಚೇತನಾಚೇತನವಸ್ತುಗಳೆಲ್ಲಂ ನಪುಂಸಕಮೆ (ಶಮದ. ೯೧ ಪ್ರಯೋ); ಚೇತನಾಚೇತನಾತ್ಮಕವಾದ ಪ್ರಪಂಚದಲ್ಲಿ ಇಪ್ಪತ್ತೈದು ತತ್ತ್ವಗಳಿವೆ (ಭಾರದ. ೧೨೫). [ ಚೇತನ + ಅಚೇತನ ]

**ಚೇತನಿಸು** (ಕ್ರಿ). ಚೈತನ್ಯವನ್ನು ಪಡೆ ; ಜೀವತುಂಬಿಕೊಳ್ಳು : ಚಿತ್ರದ ಬೊಂಬೆಯು ಹಾಗೆ ಎಲ್ಲಕ್ಕೆ ಆತ್ಮನಿಂದ ಚೇತನಿಸಿ ನಡೆವುತ್ತಿವೆ (ಮದೇವ. ೨೭೭-೩೦). [ ಚೇತನ + – ಇಸು₃ ]

**ಚೇತನೆ** (ನಾ). ೧. ಪ್ರಜ್ಞೆ ; ಎಚ್ಚರ : ಎಷ್ಟೋ ಹೊತ್ತಿನವರೆಗೆ ಪ್ರಯತ್ನಿಸಿದ ಬಳಿಕ ಫಾಕ್ಸನಿಗೆ ತುಸು ಚೇತನೆಯುಂಟಾಯಿತು (ಅಂಬಿಕ. ೧೬೦). 'ಚೇತನೆಗೊಳ್', 'ಚೇತನೆವಡೆ' ಪರಾ. ೨. ಗ್ರಹಣಶಕ್ತಿ ; ಬುದ್ಧಿ:ಆಲೋಚನಾ ಸಾಮರ್ಥ್ಯ. ೩. ಚೈತನ್ಯ ; ಶಕ್ತಿ : "ಚೇತನೆ ಚೈತನ್ಯಂ" (ವಸ್ತುಕೋ. ೧೧೫-೨೭) ; ಔಷಧಕ್ಕಿಂತಲೂ ಅವಳ ಹಸನ್ಮುಖದ ಅಂತಃಕರಣದ ನೋಟವೇ ಅವರಲ್ಲಿ ಚೇತನೆಯನ್ನು ತುಂಬುತ್ತಿತ್ತು (ಕುಂಕುಮ. ೮೪). [ ಸಂ. ಚೇತನಾ ]

**ಚೇತನೆಗೊಳ್** (ಕ್ರಿ). ಚೈತನ್ಯವನ್ನು ಪಡೆ ; ಜಾಗ್ರತವಾಗು : ಯಾವನನು ಕಂಡೊಡನೆ ಜೀವ ಚೇತನೆಗೊಂಡು ಭಾವಭಕ್ತಿಯ ಪುಷ್ಪವಾಯಿತಾತ್ಮಾಸನದಿ (ಕೃಷ್ಣಾಕು. ೯-೧). [ ಚೇತನೆ + ಕೊಳ್₁ ]

**ಚೇತನೆವಡೆ** (ಕ್ರಿ). = ಚೇತನಂಬಡೆ: ದನುಜನ ಮಾಯೆಯೊಂದಿನಿಸು ಬೇಗದಿ ನೊರ್ಮೆಯೆ ಮಾಯಮಾಗೆ ಚೇತನೆ[ಪಾಠಾಂ. ನ]ವಡೆದು (ಚಂದ್ರಪು. ೫-೬). [ ಚೇತನೆ + ಪಡೆ₁ ]

**ಚೇತರಣೆ** (ನಾ). ಚೈತನ್ಯ ; ಪ್ರಜ್ಞೆ ; ಎಚ್ಚರ : ಬಟಲ್ದ ಮೆಯ್ಗೆ ಚೇತರಣೆಯಲರ್ಚೆ (ಚಂದ್ರಪು. ೮-೬೦). [ <ಸಂ. ಚೇತಸ್ ]

**ಚೇತರಾಶಿ, ಚಾತರಾಸಿ, ಜಾತರಾಸಿ** (ನಾ). ಒಂದು ಬಗೆಯ ಮೂಲಿಕೆ : ಚೇತರಾಶಿ, ನೈದಿಲಗೆಡ್ಡೆ, ತುರುಚನ ಬೇರು, ಕೊತ್ತಂಬರಿ ಬೀಜ . . . ಹಿಪ್ಪಲಿ ಇಷ್ಟನ್ನು ಕಷಾಯವ ಕಾಸಿ ಕೊಡಿಸಲು ವಾತ, ಪಿತ್ತ, ಶ್ಲೇಷ್ಮಂಗಳಿಂದುಂಟಾದ ವಿಸರ್ಪ ಶಮನವಹುದು(ವೃದ್ಯಸಾ. I, ೩೭೩). **ಚಾತರಾಸಿ:** ಹಾವುಮೆಕ್ಕಿ ಬೇರು, ಚಾತರಾಸಿ, ಗೊರಟೆ, ನೆಲಗುಳ್ಳ, ಈ ಬಗೆಗಳ ರಸವ . . . ಹಾಕಿ (ಸಕವೈ. ೧೫೩). **ಜಾತರಾಸಿ:** ಜಾತರಾಸಿ, ಸಹಮೂಲ . . . ಕಷಾಯವನಿಕ್ಕಿ ತೆಗೆದುಕೊಳ್ಳಲು ಶೀತಜ್ವರ ಪರಿಹಾರವಾಗುವುದು (ಸಕವೈ. ೬೫). [ ←ತೆಲು. ಚೇತರಾಸಿ, ಚೇದರಾಸಿ ]

**ಚೇತರಿಸು** (ಕ್ರಿ). ೧. ಚೈತನ್ಯವನ್ನು ಪಡೆ : ಎಚ್ಚೆತ್ತುಕೊಳ್ಳು ; ಜಾಗ್ರತನಾಗು : ಕಿಱಿದು ಬೇಗಮನಿರ್ದು ತನ್ನಂ ತಾನೆ ಚೇತರಿಸಿ (ಪಂಪಭಾ. ೫-೧೫ವ): ಸೀತಾದೇವಿ ಕೇಳ್ದು ಮೂರ್ಛೆವೋಗಿ ಕಿಱಿದುಂ ಬೇಗದಿಂ ಚೇತರಿಸಿ (ಪಂರಾಮಾ. ೧೫-೬೫ ವ) ; ವಾತಜನ ಮೂಲಿಕೆಗೆ ಕಪಿಬಲ ಚೇತರಿಸಿದುದು (ಕಾಶಿರಾ. ೩೭-೨೦). ೨. ಎಚ್ಚರಿಸು ; ಜಾಗ್ರತೆಗೊಳಿಸು ; ಚೈತನ್ಯವನ್ನು ತುಂಬು: ಸಂಸಾರಾಸಾರತೆಯನಱಿದನುಂ ಮಹಾಸತ್ತ್ವನುಮಪ್ಪುದಱಿಂ ತನ್ನಂ ತಾನೆ ಸಂತೈಸಿಯುಂ ಚೇತರಿಸಿಯುಂ (ಪಂಪಭಾ. ೧೩-೨೦ ವ) ; ಪ್ರಪಂಚವನ್ನು ನಿನ್ನ ಹೃದಯದೊಲುಮೆಯಿಂದ ಚೇತರಿಸಿ ಬದುಕಿಸಿ ಬೆಳೆಯಿಸಬಲ್ಲ ಸೃಷ್ಟಿಯ ಮಾಯೆ ನೀನು ! (ಕಮನೆ. ೨೦೩).

**ಚೇತರಿಸಿಕೊಳ್ಳು** = ಎಚ್ಚೆತ್ತುಕೊಳ್ಳು : ಪುನಃ ಚೈತನ್ಯವನ್ನು ಪಡೆ; ಮತ್ತೆ ಶಕ್ತಿಯನ್ನು ಪಡೆ : ಆ ತಳೋದರಿ ಬಳಿಕ ಮೆಲ್ಲನೆ ಚೇತರಿಸಿಕೊಂಡೆದ್ದು (ತೊರರಾ. ೫-೩-೬೮) . [ ಚೇತರಣೆ + – ಇಸು$_3$ ]

**ಚೇತಸ್ಸು** (ನಾ). ೧. ಪ್ರಜ್ಞೆ : ಬುದ್ಧಿಶಕ್ತಿ. ೨. ಮನಸ್ಸು : ಚಿತ್ತ. ೩. ಜೀವ : ಆತ್ಮ. [ ಸಂ. ಚೇತಸ್ ]

**ಚೇತೋಜಾತ** (ನಾ). ಮನಸ್ಸಿನಲ್ಲಿ ಹುಟ್ಟಿದವನು ; ಮನ್ಮಥ : ಚೇತೋಜಾತನ ಮೂರ್ತಿಗಾತನೆ ಮಿಗಿಲ್ (ಶಾಂತೀಶ್ವ. ೨-೩೪). 'ಚೇತೋಜಾತವೈರಿ', 'ಚೇತೋಜಾತಹರ' ಪರಾ. [ ಸಂ. (ಚೇತಸ್ + ಜಾತ) ]

**ಚೇತೋಜಾತವೈರಿ** (ನಾ). ಮನ್ಮಥನ ವೈರಿ : ಶಿವ : ಅಂತಾತಗಂ ಬದುಕುಂಟೆ ಚೇತೋಜಾತವೈರಿಯ ಬಾರಿಯಲಿ (ಬಸಪು. ೫೪-೪೭).

[ ಚೇತೋಜಾತ + ವೈರಿ ]

**ಚೇತೋಜಾತಹರ** (ನಾ). ೧. ಮನ್ಮಥನನ್ನು ಸಂಹರಿಸಿದವನು ; ಶಿವ. ೨. [ಛಂದ] ಗುರು ಅಕ್ಷರದ ಸಂಜ್ಞೆ : ಶೀತಕರಾಗ್ನಿ ಚೇತೋಜಾತಹರರ್ಕಳಿರ್ದಂದು . . . ವಿನಿಮ್ನಂ (ಛಂದೋಂಬು. ೨-೮೪). [ ಸಂ. ]

**ಚೇತೋನಂದನ** (ನಾ). ಮನಸ್ಸಿಗೆ ಆನಂದದಾಯಕವಾದುದು : ಜನಚೇತೋನಂದನಂ ನಂದನಂ ಲಳಿತ ಶ್ರೀಪರಿರಂಜನಂ ಜನಮೆನಲ್ ಚೆಲ್ವಾದುದುರ್ವೀತಳಂ (ಜಗವಿ. ೨-೨). [ ಸಂ. (ಚೇತಸ್ + ನಂದನ) ]

**ಚೇತೋರಥ** (ನಾ). ಮನೋರಥ : ಬಯಕೆ : ಅಭೀಷ್ಟ : ಲೋಕಮಂ ರಕ್ಷಿಸುತಿರ್ಕ್ಕುಪೂರ್ಣ್ಣಂ ಚೇತೋರಥಯುತಂ ಕಮಳಾಕಲ್ಪವಲ್ಲೀವಿಳಾಸಾವಸಥಂ ಶ್ರೀವಿಷ್ಣುದಂಡಾಧಿಪ ದಿವಿಜಕುಜಾತಂ (ಎಕ. V, ಬೇಲೂರು. ೧೭-೨೭ ; 1136). [ ಸಂ. (ಚೇತಸ್ + ರಥ) ]

**ಚೇತೋವೃತ್ತಿ** (ನಾ). ಮನಸ್ಸಿನ ವ್ಯಾಪಾರ : ಚಿತ್ತವೃತ್ತಿ : ತೋಱಿದೆ ಚೇತೋವೃತ್ತಿಯುಂ ಕೊರಗುವೆ (ಪುಷ್ಪಪು. ೩-೧೦೧).

[ ಸಂ. ( ಚೇತಸ್ + ವೃತ್ತಿ) ]

**ಚೇತೋಹಾರಿ** (ಗು). ಮನಸ್ಸನ್ನು ಸೂರೆಗೊಳ್ಳುವ : ಮನೋಹರವಾದ ; ಸುಂದರವಾದ : ಸೊಗಯಿಕುಂ ಶೋಭಾವಹಂ . . . ಸಮಸ್ತ ಜನಚೇತೋಹಾರಿ ಶಯ್ಯಾಗೃಹಂ (ಪಂಚತಂ. ೧೨೩-೭) : ತನ್ನೆದುರಾಗಿ ಕೆಳಗೆ ಪರ್ವಿರ್ದ ಚೇತೋಹಾರಿ ದೃಶ್ಯಮಂ ದರ್ಶಿಸುತ್ತಿರೆ(ಶ್ರೀರಾಮಾ. ೨೮೪-೧೭೮).

[ ಸಂ. ಚೇತೋಹಾರಿನ್ ]

**ಚೇತ್ರ** (ನಾ). ಪುಣ್ಯಸ್ಥಳ ; ಕ್ಷೇತ್ರ : ಪುಣ್ಯಗ್ರಹಂಗಳ ನಡುವಣ ಮಿತ್ರಮಂಡಲದಂತೆ ಸುಕ್ಷೇತ್ರದೊಳ್ಕಾಶಿಚೇತ್ರದಂತೆ (ಚಿಬಪು. ೨೯-೮).

[ <ಸಂ. ಕ್ಷೇತ್ರ ]

**ಚೇದಿ** (ನಾ). ಒಂದು ದೇಶದ ಹೆಸರು : ಮರುವಂಗಾಂಗ ಕಳಿಂಗ . . . ಲಾಟ ಕರಹಾಟಚ್ಚೇದಿ ಕಾಸ್ಮೀರ ಗುರ್ಜ್ಜರ . . . ಪ್ರಸಿದ್ಧಾವನೀಶ್ವರರಂ ಸಾಧಿಸಿ (ಎಕ. XI, ದಾವಣ. ೩-೧೦ : 1121) ; ಸರ್ವವಿತ್ತವನಡಕಿತನಿಲ್ಲಿ ಜನಾಳು ಮುಂದಣ ಚೇದಿ ದೇಶದಲಿ (ಕುವ್ಯಾಸ. ४-३). [ ಸಂ. ]

**ಚೇದಿಯ** (ನಾ). ಬಸದಿ ; ಚೈತ್ಯ : ಪರಲೂರಾ ಚೇದಿಯದ ಬಟ ಪ್ರಭಾಚನ್ದ್ರ ಗುರಾವರ್ ಪಡೆದಾ[ರ್] (ಇಅ. XI, ೭೦-೨೦; ಸು. 6ನೆಯ ಶತ) ; ಜೇಬುಳಗೇರಿಗೆ ಕಲಿಯಮ್ಮಗಾಮುಣ್ಡಗೆಯ್ದಾ ಚೇದಿಯಮಾನ್ಮಾಡಿಸಿದಾನ್ (ಸಾಇಇ. XI-1, ೫-೯; ?).

[ <ಪ್ರಾ. ಚೇಇಅ./ ಪಾಲಿ. ಚೇತಿಯ./ಸಂ. ಚೈತ್ಯ ]

**ಚೇಪರಿಸಿನ** (ನಾ). ಒಂದು ಬಗೆಯ ಅರಿಸಿನ ; ಕೆಂಪು ಅರಿಸಿನ : ಕಡೆದ ಚೇಪರಿಸಿನ ಕಸ್ತೂರಿ ಕುಂಕುಮವು (ಜಗೀತ. ೭೨). [ ಚೇಪು$_3$ + ಅರಿಸಿನ ]

**ಚೇಪರ್ದು** (ನಾ). ಒಂದು ಬಗೆಯ ಹದ್ದು ; ಕೆಂಪು ಹದ್ದು : ಕರಿಯಪರ್ದುಱೆಪರ್ದು ಚೇಪರ್ದು[ಪಾಠಾಂ. ಚೆಂಬರ್ದು]ರುತರದ ಹಡೆಹರ್ದು ಪೆರ್ವರ್ದವಱೊಳೊಪ್ಪಿದವೂ (ಸಾಳ್ವಭಾ. ೫-೨೩). [ ಚೇಪು$_3$ + ಪರ್ದು ]

**ಚೇಪಿಡು** (ಕ್ರಿ). ಅರಿಸಿನವನ್ನು ಇಡು : ಆ ಪಾಪಿಯಾ ಪರುಷಾಕ್ಷರಮಾಲಾಲೊಪಕ್ಕೆ ಕಿನಿಸ್ವನಗೇಳ್ದು ಚೇಪಿ[ಪಾಠಾಂ. ಜೇಪೆ, ಜೇವ, ಜೇ]ಡೆಯುಡುಗು ಉರಗನಂತೆ ನಡುಗುತ ನಾ ಪಕ್ಕದೊಳು ತಲೆಯುಡುಗಿದೆ(ಸೊಬಸೋ. ೧೯-೪೫) : ಚಂಪಕದ ಮೈಯವರ್ ಚೇಪಿಟ್ಟ ಚಿತ್ತಿನಿಯರೂ(ಪರಶು. ೮-೬).

[ ಚೇಪು$_3$ + ಇಡು$_1$ ]

**ಚೇಪು$_1$** 'ತೇಪು' ನೋ.

**ಚೇಪು$_2$, ಸೇಪು** (ನಾ). ಕೆಚ್ಚಲಿನ ಹಾಲು ತೊರೆಯುವುದು,–ಹೊರಚಿಮ್ಮುವುದು. 'ಚೇಪುಬಿಡು' ಪರಾ. ಸೇಪು: 'ಸೇಪುಬಿಡು' ಪರಾ.

[ ದೇ.II ಕೊಡ. ತೆಲು. ಚೇಪು ]

**ಚೇಪು$_3$, ಚಿಪ್ಪು** (ನಾ). ೧. ಒಂದು ಬಗೆಯ ಅರಿಸಿನ; ಕೆಂಪು ಅರಿಸಿನ: ಚಿನ್ನದ ಓಲೆಗಳ ಕಾಂತಿಗಳಿಂದ ಹೊಳೆಯುತಲಿರುವ ಕೆನ್ನೆಗಳಲ್ಲಿ ಚೇಪನ್ನು ತೊಡಕೊಂಡು (ಶಿವದ. ೩೦-೮) ; ತಿಗಳರುಡುಗೆಯುಟ್ಟು ಸೊಗಸು ಚೇಪುಗಳಟ್ಟು ಅಗಿಲು ಚಂದನ ಗಂಧ ಧರಿಸಿ (ಸೌಂದಕಾ. ೩-೨೫). ೨. ಕೆಂಪು. 'ಚೇಪರ್ದು' ಪರಾ. **ಚಿಪ್ಪು:** ೨. ಕೆಂಪು ಚಿಪ್ಪು ಅರಿಸಿನ ಗಂಧ ಇಂಪಾದ ಹರಿಸಾಮದ ಬಟ್ಟು (ನಾಪದ. ೨೧೪). [ ←ತಮಿ. ಚೀಪ್ಪು ]

**ಚೇಪುಬಿಡು, ಸೇಪುಬಿಡು** (ಕ್ರಿ). (ಎಮ್ಮೆ, ಹಸು ಮೊದಲಾದುವು) ಹಾಲಿನ ಧಾರೆಯನ್ನು ಬಿಡು : ಸೊರುಬಿಡು : (ಕ). **ಸೇಪುಬಿಡು:** ಈವತ್ತು ಎಮ್ಮೆ ಯಾಕೋ ಸೇಪುಬಿಡಲೇ ಇಲ್ಲ (ರೂಢಿ).

[ ಚೇಪು$_2$ + ಬಿಡು$_1$ ]

**ಚೇಪೆ$_1$** 'ಚಾಪೆ' ನೋ.

**ಚೇಪೆ$_2$** 'ಸೀಬೆ' ನೋ.

**ಚೇಪೆಕಾಯಿ** 'ಸೀಬೆಕಾಯಿ' ನೋ

**ಚೇರ** (ನಾ). ೧. ಒಂದು ದೇಶದ ಹೆಸರು; ℙ ಪ್ರಾಚೀನ ಪಾಂಡ್ಯ, ಚೋಳ ಮತ್ತು ಚೇರ ಎಂಬ ಮೂರು ತಮಿಳು ರಾಜ್ಯಗಳಲ್ಲಿ ಒಂದು; ಈಗಿನ ಕೇರಳ : ಗೌಳ ಲಾಟ ಚೋಟಿ ಚೇರ ಪಾಂಡ್ಯ ಕಳಿಂಗಾದಿವಿಷಯಂಗಳಂ ಸಾಧಿಸಿ (ಧರ್ಮಾಮೃ. ೧೧-೭೧). ೨. ಚೇರದೇಶದ ರಾಜ : ಚೋಳನ ಜೂಬು ಮಾಳವನ ಗೋಣ್ಮುರಿ ಚೇರನನಟ್ಟಿ ತಿಂಬ ಮಾಕಾಳಿ (ಎಕ. VII, ಶಿವಮೊ. ೫-೭; 1218); ಚೇರಂ ಪಾರುವಕೋಟಿಯುಂ . . . ಕಳಿಪಿದಂ (ದಶಕು. ೮-೬೧). ೩. ಚೇರದೇಶದ ಜನ. ೧, ೩: ವೈವಾಹಗೇಹದ

ಸಿರಿಯುಪೊಲು ಮಂಗಳಮಯುವು ಮಲೆಯಾಳ ಜನಪದದ ಅರಸಿನಂತಿರೆ ಚೇರಮಯುವೆನಲುರವಣಿಸಿ ನೂಕಿದರು ನಿಡುವಕ್ಕರಿಕೆಗಳ ಗರುವಾಯಿಗಳ ಘನವುದದ ತೇಜಿಗಳ (ಕುವ್ಯಾಭಿ. ೪-೩೧). 'ಕೇರಲ' ಪರಾ. ೪. ಚೇರ ದೇಶದ ಕುದುರೆ: ಮಾಸಲುಗೆಂಪು ಬಣ್ಣದ ಒಂದು ಬಗೆಯ ಕುದುರೆ: "ಅರುಣಂ ಮಾಸೆ ಚೇರನಕ್ಕುಂ" (ಮಂಗರಾ. ೮೧-೧೯); ಜನ್ನನಂ ನೀಲನನಳಗನಂ ತನ್ನಿ . . . ಚೇ[ಪಾಠಾಂ. ಜೇ]ರನನು ತನ್ನಿ (ಬಸಪು. ೫೯-೪೦); ಬಿಳಿಯವು ಬಾಲದ ಮೊಳಗಳ್ ಬೆಳರ್ಗವಿಲಂ ಮೆಯ್ಯ ಬಣ್ಣ ಮಾದೊಡೆ ಚೇರಂ (ಅಶ್ವಶಾ. ೨-೧೦). [ಸಂ.]

**ಚೇರಟೆ** 'ತೇರಂಟೆ' ನೋ.

**ಚೇರಡಿ** (ನಾ). ಕಟ್ಟಡದಲ್ಲಿ ಕಂಬಗಳ ಮೇಲಿನ ಭಾಗ; ಲೋವೆ (?): ಇಂಗೋಲ್ಗಳ ಸೊಗಯಿಪ್ಪ ತೊಲೆಗಳಿಂ ತೆಂಗಿನ ಸುಟಿಯಲೆಯಚ್ಚ ನೆಲೆಗಳಿಂ ಮಂಜು ಶಿರೀಷದ ಚೇರಡಿಯಿಂದಂ ಚೆಂಜಾಜಿಯ ಗೊಂಚಲ ಗುಡಿಯಿಂದಂ (ಉದ್ಭಟ. ೫-೩೦); ಕೀರಣಿಗೆಲಸದ ಹದಿನಾಱು ಕಂಭ ಗಳ್ಚೇರಡಿ ಮದನಕೈಯಿಂದ ಸೇರಿದ ಮುತ್ತಿನ ಗಡಗೆ ಜೋದಿಗೆಯಿಂದ ಸಾರಸಿಂಗರದೊಳೊಪ್ಪಿದುವು (ನಾಗಕು. ೨೭-೧೭). [?]

**ಚೇರಣಿಗ** (ನಾ). ಕೇರಳದೇಶದವನು: "ಕೇರಳನೆನಲ್ ಚೇರಣಿಗ [ಪಾಠಾಂ. ವೇರಡಿಗ]ನಕ್ಕು" (ಮಂಗರಾ. ೧೧೨-೭).

[ಚೇರಣ$_0$ (<ಕೇರಲ) + –ಇಗ]

**ಚೇರಮಾನಿ** (ನಾ). ಒಂದು ಬಗೆಯ ಕುದುರೆ; ಚೇರದೇಶದ ಕುದುರೆ: "ಸಾಂಬ್ರಾಣಿ ಕಲಹತಿ ಚೇರಮಾನಿಯೆಂಬೀಸಱಿೊಳು ಪುಟ್ಟಲಾ ದೇಶ ವೆಸರಿಂದಲಾ ಕುದುರೆಗಭಿಧಾನಮಕ್ಕುಂ" (ಮಂಗರಾ. ೮೩-೩೧). [<ಚೇರ]

**ಚೇರಿ** 'ಕೇರಿ' ನೋ.

**ಚೇರಿಸು** 'ಸೇರಿಸು' ನೋ.

**ಚೇರು** (ನಾ). ಗುಹ್ಯರೋಗದಿಂದ ಉಂಟಾದ ತರುಡಿನ ಬಾವು,–ಊತ: "ಚೇರುಃ = ತರುಡು ಊದುವುದು" (ಕಾಶಕ್ಕ. ೨೧೦).

ಚೇರುಳಿ = ಗುಹ್ಯರೋಗದಿಂದ ತರುಡು ಊದಿಕೊಂಡು ಜೋಲು: (೬). [←ತೆಲು. ಚೇರು, ಚೇಱು]

**ಚೇರುಕುಟಿ** (ನಾ). ಚೇರು ರೋಗದಿಂದ ಬರುವ ಜೊಕ್ಕೆ: ಚೇರುಕುಟಿಗೆ:– ಗಜ್ಜುಗದ ತಿರುಳು ನಾಲ್ಕು ತೂಕ . . . ಹಾಲಲ್ಲಿ ತೇದು ಉದಯದಲ್ಲಿ ದಿನಂಪ್ರತಿಯೂ ತೆಗೆದುಕೊಳ್ಳುವುದು ಚೇರುಕುಟಿ ಮಾಣ್ಗುಂ (ವಿವೈವಿ. ೧೨೭). [ಚೇರು + ಕುಟಿ$_1$ ./ತೆಲು. ಚೇಱುಕುಟ್ಟು]

**ಚೇರೆ** 'ಚಹರೆ' ನೋ.

**ಚೇಲ$_1$, ಚೇಳ** (ನಾ). ೧. ಬಟ್ಟೆ; ವಸ್ತ್ರ: "ಚೇಲಂ, ಚೀರಂ, ವಾಸಃ, ಕರ್ಪಟಂ . . . ವಸ್ತ್ರಂ, ಸಿಚಯಃ, ಪಟಃ–ಈ ೧೦ ಸೀರೆ" (ಹಲಾಯು. ೯೦–೩೯೪), ನೀಲಚೇಲದುಡೆಯುಂ ಮೇಲ್ಕೊಂಡ ಪೊಂಬಟ್ಟೆಯುಂ . . . ಚೆಲ್ವಾಗೆ (ಜಗವಿ. ೩-೧೭); ನೀಲಾಭರಣಭೂಷಿತನಾಗಿ ಕಾಗಿನ ಚೇಲವ ಹೊದ್ದು (ಮೋಹತ. ೧೮-೩೧). 'ಚೇಲಾಂಚಲ' ಪರಾ. ಚೇಳ: ೧. "ಚೀರಂ ಚೇಳಂ ಕರ್ಪಟಂ" (ವಸ್ತುಕೋ. ೭೮-೩೧). ೨. ಕೆಟ್ಟುದು; ಕೀಳಾದುದು: "ಅರ್ವಾಣಂ, ಅಣಕಂ . . . ಅಧಮಂ, ಚೇಳಂ, ಕಾಂಡಂ . . . ಈ ೧೩ ಹೊಲ್ಲಹ ವಸ್ತು" (ಹಲಾಯು. ೫೬-೧೮೨): "ಅವಮಂ . . . ಚೇಳವವದ್ಯಂ ಕುತ್ಸಿತಂ ಕುಪೂಯಂ ಯಾಪ್ಯಂ" (ವಸ್ತುಕೋ. ೧೦೮-೫೯). [ಸಂ.]

**ಚೇಲ$_2$. ಚೇಲಾ, ಚೇಲ್ಲಿ$_2$, ಚೇಲೆ** (ನಾ). ೧. ಶಿಷ್ಯ; ವಿದ್ಯಾರ್ಥಿ: ಗವಯಿಗಳ ಹಿಂದೆ ಚೇಲ ಇರುವಂತೆ (ಯುಕ್ಷಬ. ೯೩). 'ಚೇಲವಾಡಿ' ಪರಾ. ೨. ಅನುಯಾಯಿ; ಸೇವಕ; ಶೈನಾಶಿ: ನಡುವೆ ನಡುವೆ ಚೇಲರು ಹತ್ತಿಸಿಕೊಟ್ಟ ಭಂಗಿ ಚಿಲುಮೆಯನ್ನು . . . ಸೇದಿ (ದಯ್ಯಮ. ೧೦); ಕಣಿವೆಯ ಕೆಳಗಿನವರ ಚೇಲನಾಗಿ ಕುಣಿಯುತ್ತ ಉಂಡಮನೆಗೆರಡು ಬಗೆಯುವ ಅವನ ದ್ರೋಹವರ್ತನೆ (ರಾಗಿಚಿ. ೧೨೨). ೩. ಬಲಾತ್ಕಾರ ದಿಂದ ಎಳೆವಯಸ್ಸಿನಲ್ಲಿಯೆ ಮುಸಲ್ಮಾನನಾಗಿ ಮಾಡಲ್ಪಟ್ಟವನು; ℙ ಇಂತಹ ಬಾಲಕರನ್ನು ದೊಡ್ಡವರಾದ ಮೇಲೆ ಚೇಲ ಎಂಬ ಹೆಸರಿನೊಂದಿಗೆ ಸೈನ್ಯಕ್ಕೆ ಸೇರಿಸಿಕೊಳ್ಳಲಾಗುತ್ತಿತ್ತು (ಕೈಸಗೆ. II, ೩೪೬). ಚೇಲಾ: ೨. ಉಳಿದವರೆಲ್ಲ ಅವರ ಚೇಲಾ ಆಗಿಯೇ ಇರಬೇಕೆಂಬುದು ಅವನ ಸಿದ್ಧಾಂತವಾಗಿತ್ತು (ಗ್ರಾಮಾಯ. ೪೫೯); ಆದರಲ್ಲಿರುವವರು ಆಡಳಿತಗಾರರ ಚೇಲಾಗಳು (ಕಾಮಿಕಾಂ. ೭೩). ಚೇಲ್ಲಿ$_2$: ೩. ಉತ್ತಮವಾದ ಎಲ್ಲಾ ಜಾತೀ ಜನಗಳನ್ನು ತನ್ನ ಜಾತಿಗೆ ಸೇರಿಸಿಕೊಳ್ಳ ಬೇಕೆಂದು ಕೆಲವು ಜನರನ್ನು ಚೇಲಿಗಳನ್ನಾಗಿ ಮಾಡಿಕೊಂಡನು (ಪಾಪುವಂ. ೨೩೪). ಚೇಲೆ: ೩. ಕೊಡಗು ಜನರನ್ನೆಲ್ಲಾ ಮುಂಜಿ ಮಾಡಿ ಕುಲಗೆಡಿಸಿ ಚೇಲೆಯರ ಮಾಡಿ ಇಟ್ಟುಕೊಂಡು (ರಾಜೇಂದ್ರ. ೧೭).

[←ಹಿಂ. ಮರಾ. ಚೇಲಾ / ಪ್ರಾ. ಚಿಲ್ಲ]

**ಚೇಲ$_3$** (ನಾ). ಒಂದು ಬಗೆಯ ಗಿಡ: ಚೆಲಬಾಗೆ, ಚೇಲ, ಎಲೆಸುಜ್ಜಲ ಬಾಗೆ (ವ್ಯಜಿಗಿ. ೪-೩೩). [?]

**ಚೇಲವಾಡಿ** (ನಾ). ವಿದ್ಯಾರ್ಥಿನಿಲಯ: ವಿದ್ಯಾನಿಕೇತನದ ಚೇಲವಾಡಿಯನ್ನು ವಿಸ್ತಾರಗೊಳಿಸುವುದಕ್ಕೆ ನೂರು ಹೊನ್ನು . . . ಕಳುಹಿಸಿದ್ದೇನೆ (ಸಣ್ಣಕ. VIII, ೨೦). [ಚೇಲ$_2$ + ವಾಡಿ$_1$ (<ಪಾಡಿ$_1$)]

**ಚೇಲಾ** 'ಚೇಲ$_2$' ನೋ.

**ಚೇಲಾಂಚಲ** (ನಾ). ವಸ್ತ್ರದ ತುದಿ; ಸೆರಗು: "ಸೆಱಂಗೆಂದು ಚೇಲಾಂಚಲಂ" (ಕಶಸಾ. ೨೦-೩೯೭); ದೇವ ನಿಮ್ಮ ದಯೆಗೆಯ್ದ ಫಳಂ ಕೇವಲ ಶುಭ ಸೂಚಕಮೆಂದಾ ವಧು ಗುಡಿಗಟ್ಟೆ ಚೀನಚೇಲಾಂಚಲಮಂ (ಮಲ್ಲಿಪು. ೪-೩೫).

[ಚೇಲ$_1$ + ಅಂಚಲ]

**ಚೇಲಾಚಾರ** (ನಾ). ಹೀನ ನಡವಳಿಕೆ: ಎಲ್ಲಾ ಒಂದಾದರೆ ಶಾಲ್ಯನ್ನ ಉಂಬುವರು ಹುಲ್ಲನೇತಕೆ ಮೆದ್ದು ಬದುಕರು ಸುವ್ವಿ ಹುಲ್ಲನೇತಕೆ ಮೆದ್ದು ಬದುಕರು ಚೇಲಾಚಾ[ಚಾ]ರಾ ಜಲದೊಳಾಚರಿಸಿ ಆಳುವುದೇಕೆ ಸುವ್ವಿ (ವಾದಿಕೀ. ೧೭೩-೧೭). [ಚೇಲ$_1$ + ಆಚಾರ]

**ಚೇಲಿ$_1$** (ನಾ). ಕೆಟ್ಟ ಹೆಂಗಸು; ದುಷ್ಟೆ. [ಸಂ. ಚೇಲೀ]

**ಚೇಲ್ಲಿ$_2$** 'ಚೇಲ$_2$' ನೋ.

**ಚೇಲಿಕ, ಚೇಳಿಕ** (ನಾ). ಬಟ್ಟೆ ಹೊಲೆಯುವವನು; ಚಿಪ್ಪಿಗ; ಸಿಂಪಿಗ; ದರ್ಜಿ: "ಚಿಪ್ಪಿಗನು ಚೇಲಿ[ಪಾಠಾಂ. ಳಿ]ಕಂ ಸೂಚಿಕಂ ತುನ್ನವಾಯನೆನಿಕ್ಕು" (ಮಂಗರಾ. ೧೧೦-೨). ಚೇಳಿಕ: ಮೇಲಿನ ಪ್ರಯೋಗದ ಪಾಠಾಂತರ ವನ್ನು ನೋಡಿ. [ಚೇಲ$_1$ + –ಇಕ]

**ಚೇಲಿಕೆ, ಚೇಳಿಕೆ** (ನಾ). ಪುನುಗು: "ಚೇಲಿ[ಪಾಠಾಂ. ಳಿ]ಕೆಯೆನಲ್ ಪುಣುಗು" (ಮಂಗರಾ. ೯೯-೨೨). ಚೇಳಿಕೆ: ಕುಸುಮ ಮೃಗಮದ ಗಂಧ ಚೇಳಿಕೆಯು (ಮದೇಪು. ೨-೪೪). [?]

**ಚೇಲೆ** 'ಚೇಲ$_2$' ನೋ.

**ಚೇಷ್ಟಾಕೃತ** (ನಾ). [ನಾಟ್ಯ] ಮೂರು ಬಗೆಯ ಆಂಗಿಕಾಭಿನಯಗಳಲ್ಲಿ ಒಂದು: "ಆಂಗಿಕಾಭಿನಯವು ಶಾರೀರ, ಮುಖಜ, ಚೇಷ್ಟಾಕೃತ ಎಂದು ಮೂರು ವಿಧ; ಕೈ ಕಣ್ಣು ಮುಂತಾದ ಅಂಗೋಪಾಂಗಗಳ ಚಲನೆಗಳು ಶಾರೀರ ಮತ್ತು ಮುಖಜ; ನೃತ್ತ ವಿಶೇಷಗಳು ಚೇಷ್ಟಾಕೃತ" (ಸಂನಾಟ. ೧೧). [ಸಂ. (ಚೇಷ್ಟಾ + ಕೃತ)]

**ಚೇಷ್ಟಾಲು** (ನಾ). ಕೀಟಲೆ ಅಥವಾ ಕುಚೇಷ್ಟೆ ಮಾಡುವ ಸ್ವಭಾವ ದವನು; ವಿನೋದಪ್ರಿಯ: "ನಿನಗೆ ಮನೆಯ ಹಂಬಲಿದ್ದರೆ, ನೀನು ಹೋಗು" ಎಂದು ಚೇಷ್ಟಾಲುವೊಬ್ಬನು ಉತ್ತರಕೊಟ್ಟನು (ಯದುರಾ. ೭೦).

[ℙ ಇದು 'ಕೃಪಾಲು' ಎಂಬ ಪದದ ಅನುಕರಣೆಯಿಂದಾದುದು]

**ಚೇಷ್ಟಿತ** (ಗು). ೧. ಕೆಲಸ ಮಾಡಿದ,-ಮಾಡಲ್ಪಟ್ಟ. ೨. ಕದಲಿಸಿದ ; ಚಲಿಸುವಂತೆ ಮಾಡಿದ. ೩. ಯತ್ನಿಸಿದ ; ಯತ್ನಿಸಲ್ಪಟ್ಟ. (ನಾ). ೪. ಕಾರ್ಯ ; ಕೆಲಸ ; ನಡೆವಳಿಕೆ : ಸೃಷ್ಟಿಸಮಯದೊಳಿದರ್ಕಿದು ಚೇಷ್ಟಿತಮೆಂದಖಿಳ ಜಾತಿಯೊಳ್ ಕಲ್ಪಿಸೆ ನೀಂ ದುಷ್ಪತೆ ನಿಸರ್ಗಮಾಯ್ತು (ಜಗವಿ. ೩-೧೧೨) ; ತೋಱುವುದು . . . ನಿರ್ಹೇತುಕಮಪ್ಪ ಖೇದಮನಿದಲ್ತು ಕೃಪಾವತಿಯರ್ಗೆ ಚೇಷ್ಟಿತಂ (ಚಂದ್ರಪು. ೩-೭೫) ;ಚಿಃ ಕಷ್ಟಮಿಾ ಚೇಷ್ಟಿತಂ (ಪುಷ್ಪಪು. ೧೩-೩೦). ೫. ಗತಿ ; ಸಂಚಾರ. [ ಸಂ. ]

**ಚೇಷ್ಟಿಸು** (ಕ್ರಿ). ೧. ಚಲಿಸು ; ಅಲುಗಾಡು. ೨. ಉದ್ಯೋಗಿಸು ; ಆಚರಿಸು ; ಕೆಲಸಮಾಡು : ಇಲ್ಲಿಗೆ ತಕ್ಕುದೇನುಮಂ ಚೇಷ್ಟಿಪಂ (ಚಂದ್ರಪು. ೩-೬೮) ; ಮಿಕ್ಕಿನ ಸರ್ವಾಂಗಂಗಳುಂ ನಿಮ್ಮಯ ದೆಸೆಗೆ ಕರಂ ಚೇಷ್ಟಿಸುತ್ತೊರ್ಮೆಯುಂ ನಿಲ್ವಿನಂ (ರಕ್ಷಾಶ. ೬೬) ; ಧರ್ಮದೊಳ್ ಚೇಷ್ಟಿಸಿ ಶಾಸ್ತ್ರದೊಳ್ ತಿಳಿದು (ದಶಕು. ೧೯-೨೪). ೩. ಚಲನೆಯುಂಟು ಮಾಡು ; ಚೈತನ್ಯವನ್ನು ತುಂಬು : ಆ ಸಂಸಾರ ಪ್ರಪಂಚಿಕವನೆಲ್ಲವಂ ಚೇಷ್ಟಿಸಿ ಜಗತ್ರಯವನೊಕ್ಕಲಿಕ್ಕಿ ಕೊಲ್ಲುತ್ತಿಪ್ಪುದಲ್ಲವು ಮಾಯೆ (ಗಣಭಾ. ೪೪) ; ನೀನು ಚೇಷ್ಟಿಸದಿರಲ್ ಕಾಲ್ನಡೆಯಬಲ್ಲವೆ (ಏಕೋಪು. ೧೯-೯೪). ೪. ಚೇತರಿಸಿಕೊಳ್ಳು ; ಜಾಗ್ರತವಾಗು: ವನಮೃಗರಾಜಿಗಳ್ ತೃಷೆಯ ಕೋಟಲೆಯಿಂ ವನವೆಲ್ಲಮಂ ತೊಟಲ್ದಿನಕಿರಣಂಗಳಿಂ ಕಿಡೆದು ಚೇಷ್ಟಿಸಿ ಕಂಡು ಮರೀಚಿಕಾಜಲಕ್ಕನುನಯದಿಂ ಕರಂ ಪರಿದು ಲಂಘಿಸಿ (ದಶಕು. ೯-೨೩) ; ಪೋಡಶ ಘಟಿಕೆ ಸಂದುದು . . . ಶಿವಾರ್ಚನೆಯ ಮಾಡಬೇಕೆಂದು ಕಟ್ಟಿಗೆಕಾಱರು ಕೊಂಡಾಡಲ್ಕೆ ಕ್ಷಣದೆ ಚೇಷ್ಟಿಸಿದ (ಮೋಹತ. ೨೦-೫೦). ೫. ಕೆಣಕು; ಚಲ್ಲಾಟವಾಡು: ಚೇಷ್ಟಿಪ ವೇಶ್ಯಾಭುಜಂಗರ ಮಧುಪಾನ ಗೋಷ್ಠಿಯ ಸೊಬಗನೀಕ್ಷಿಸಿದ (ಮೋಹತ. ೧೮-೯೬). [ಚೇಷ್ಟೆ+ – ಇಸು₃]

**ಚೇಷ್ಟೆ** (ನಾ). ೧. ಅಂಗಾಂಗಗಳ ಚಲನೆ ; ಸಂಜ್ಞೆ ; ಚಲನವಲನ: ದರ್ಪಣದ ಪ್ರತಿಬಿಂಬಕ್ಕೊಂದು ಚೇಷ್ಟೆಯುಂಟೆ (ಅದವ. ೨೮-೮೦) ; ಆಯತನೇತ್ರೆಯಾಕ್ಷಿಸಿದ ರೀತಿ ತದಾಸ್ಯದ ಚೇಷ್ಟೆಯಿಂ . . . ಅಱಿಯ ಲಾಯ್ತೆನಗಂದಿದಿರಲ್ಲಿ ನಿಶ್ಚಯಂ (ದಶಕು. ೧೩-೫೪). ೨. ಉದ್ಯೋಗ ; ಕ್ರಿಯೆ; ಕಾರ್ಯ: ಧೈರ್ಯಂಗೆಟ್ಟು ಮೇಲ್ವಾಯ್ವ ಚೇಷ್ಟೆಗೆ ಪೌಲಸ್ತ್ಯನು ಮೊತ್ತುಗೊಟ್ಟನೆನಲಾಱಂ ದರ್ಪಕಂ ದಂಡಿಸಂ (ಪಂಪರಾಮಾ. ೯-೧೧೪) ; ಲೋಕದ ಚೇಷ್ಟೆಗೆ ರವಿ ಬೀಜವಾದಂತೆ ಕರಣಂಗಳ ಚೇಷ್ಟೆಗೆ ಮನವೆ ಬೀಜ (ಮಹಾದೇ. ಬ. ೨೪-೯೬). ೩. ವರ್ತನೆ ; ನಡವಳಿಕೆ : ಪರವೆಯರ ವಾರ್ತೆಯಂ ಕೊಂಡು ಚಿಚ್ಚರದಿಂದೆ ಬರಲವನ ಚೇಷ್ಟೆಯಂ ಕಾಣುತೆರ್ದೆ ಹಡಿದೆಱಿದು (ನಂಬಿರ. ೧೭-೧೧೯). ೪. ಚಾಲನೆ; ಪ್ರೇರಣೆ; ಸಂಚಲನೆ: ತತ್ಕಳಿಂಗಕನ್ನಿಕೆಯು ಗರಂ ನೆಲೆಯಲ್ತದಲ್ಲದಿರ್ದೊಡೆ ನೆಲೆಯಾಕೆಗೆ ಕಡೆಗೆ ಗರದ ಚೇಷ್ಟೆ ನಿತಾಂತಂ (ದಶಕು. ೧೩-೭೦); ಬಲುಭೂತ ಸೋಂಕಿತೋ ಗ್ರಹದ ಚೇಷ್ಟೆಯೋ ಪೈತ್ಯ ತಲೆಗಡರ್ದುದೊ (ನವಮೋ. ೨೩-೯೯). ೫. ಹುಡುಗಾಟ; ತಮಾಷೆ : ಅವನ ಮಿತ್ರರನೇಕರು ಚೇಷ್ಟೆ ಮಾಡಿದಾಗಲೆಲ್ಲ ಅವನು ನಕ್ಕು ಅದನ್ನು ತೇಲಿಸಿಬಿಡುತ್ತಿದ್ದ (ಭಾರತಿ. ೧); ಕುಂಟನಿಗೆ ಎಂಟು ಚೇಷ್ಟೆ, ಕುರುಡನಿಗೆ ನಾನಾ ಚೇಷ್ಟೆ (ಗಾದ). ೬. ಸರಸ ; ಚೆಲ್ಲಾಟ. ‘ಚೇಷ್ಟಿಸು’ ಪರಾ. ೭. ತುಂಟತನ ; ತುಂಟಾಟ ; ಕೀಟಲೆ : ಆ ಹುಡುಗನದು ಬಹಳ ಚೇಷ್ಟೆ (ರೂಢಿ). [ ಸಂ. ಚೇಷ್ಟಾ ]

**ಚೇಷ್ಟೆಕೋರ, ಚೇಷ್ಟೆಖೋರ** (ನಾ). ಹುಡುಗಾಟದ ಸ್ವಭಾವದವನು ; ತಮಾಷೆಗಾರ : ಇತ್ತೀಚೆಗೆ ಈ ಮುದುಕರ ಗದ್ದಲ ಒಂದಿನಿತು ಕಡಿಮೆ ಯಾಗಿದೆ; ನಾನು ಚೇಷ್ಟೆಕೋರನಾದ್ದರಿಂದ ಹಾಗಾಗಿರಬೇಕು (ಚಂದುಟಿ. ೯೨). ಚೇಷ್ಟೆಖೋರ : ಸೃಷ್ಟಿಯೊಳಗೆ ಇಂಥ ಚೇಷ್ಟೆಖೋರನ ಕಾಣೆ (ಪುರಂದ. ೧-೭೫ ಅನುಪಲ್ಲವಿ) ; ಇದೆಲ್ಲ ಚೇಷ್ಟೆಖೋರರ ಹಾರಿಕೆಯ ಸುದ್ದಿ (ಗಂಗಾಸಾ. ೧೧೯). [ ಚೇಷ್ಟೆ + – ಕೋರ₃ ]

**ಚೇಷ್ಟೆಖೋರ** ‘ಚೇಷ್ಟೆಕೋರ’ ನೋ.

**ಚೇಷ್ಟೆಗಾರ** (ನಾ). = ಚೇಷ್ಟೆಕೋರ : (ಹ).
[ ಚೇಷ್ಟೆ + – ಗಾರ(< –ಕಾಱ) ]

**ಚೇಷ್ಟೆಗೆಡು** (ಕ್ರಿ). ಚಲನೆ ನಿಂತುಹೋಗು ; ಚೈತನ್ಯ ಉಡುಗು : ಈ ದೇಹದೊಳಿಂದೀ ಪ್ರಾಣಮುಳ್ಳನ್ನೆಗಮೆ ತಡೆಯದಾತ್ಮೇಶನಂ ಕಾಣ್ಬೆನೋ ಪುಣ್ಯದಿನೆಂದಾಂ ಚೇಷ್ಟೆಗೆಟ್ಟಂದವಳನೆ ಪಿಡಿದಲ್ಲಿಂದಮೆಂತಾನುಮೆಟ್ಟಿಂ (ಕಾದಂಪೂ. ೮೮೭) ; ಕರಣ ಬಲ ಪ್ರಾಣದ ಚೇಷ್ಟೆಗೆಟ್ಟು ಭರತಂ ಪದಾನತಂ ವಿಕಲನಾಗಿ ಮೂರ್ಛೆಗೆ ಸಂದಂ (ಪಂಪರಾಮಾ. ೭-೧೫). [ಚೇಷ್ಟೆ + ಕೆಡು₁]

**ಚೇಹರಾ** ‘ಚಹರೆ’ ನೋ.

**ಚೇಳ್** (ನಾ). ಒಂದು ಬಗೆಯ ವಿಮಾನ: ಚೇಳ್ಪಸಿಗಂ ಸಸಿಲ್ಗೊ ದಳ ವಿಮಾನ್ . . . ಬಣ್ಣವಿಮಾನೆನಿಪಿವೆಲ್ಲಂ ಬಿಳ್ದುವಾ ತಾಣದೊಳ್ (ರಾಜಶೇ. ೫-೧೧೫).
[ ←ತಮಿ. ಚೀಲ್ ]

**ಚೇಳ** ‘ಚೇಲ₁’ ನೋ.

**ಚೇಳಿಕ** ‘ಚೇಲಿಕ’ ನೋ.

**ಚೇಳಿಕೆ** ‘ಚೇಲಿಕೆ’ ನೋ.

**ಚೇಳು₁** ‘ತೇಟ್₂’ ನೋ.

**ಚೇಳು₂** (ನಾ). ಒಂದು ಬಗೆಯ ಗಿಡ : “ಗಂಧಪುಷ್ಪಿ – ಚೇಳು” (ಓಪಧಿ. ೯೭). [ ? ]

**ಚೇಳುಕೊಂಡಿ** (ನಾ). ಚೇಳಿನ ಬಾಲದ ತುದಿಯಲ್ಲಿರುವ ಮುಳ್ಳು. ‘ಚೇಳುಕೊಂಡಿಗಿಡ’ ಪರಾ. [ ಚೇಳು₁(<ತೇಟ್₂) + ಕೊಂಡಿ₁ ]

**ಚೇಳುಕೊಂಡಿಗಿಡ** (ನಾ). ೧. ಚೇಳು ಕೊಂಡಿಯಂತಹ ಕೊಂಡಿಯಿರುವ ಬಣ್ಣಬಣ್ಣದ ಹೂವುಗಳನ್ನು ಬಿಡುವ ಒಂದು ಬಗೆಯ ಸಣ್ಣ ಗಿಡ ; ಕರ್ಣಕುಂಡಲ: ಚೇಳುಮಣಿಗಿಡ, ಚೇಳುಕೊಂಡಿಗಿಡ (ಮೃಜಿಗಿ. ೯೨-೮೩೩). ೨. “ನಾಗದಂತಿ” (ಪಂಡಿತ). ೩. ಒಂದು ಬಗೆಯ ಮುಳ್ಳುಪೊದೆ: “ವೃಶ್ಚಿಕಃ–ಮುಳ್ಳುಹುಳ, ಚೇಳು, ಚಕಾರದಿಂದ . . . ಚೇಳುಕೊಂಡೀಗಿಡ” (ಸಿದ್ಧಾಂತಿ. ೩೨೧). [ ಚೇಳುಕೊಂಡಿ + ಗಿಡ (<ಗಿಡು) ]

**ಚೇಳುಬಾಣ** (ನಾ). ಒಂದು ಬಗೆಯ ಮದ್ದಿನ ಬಾಣ : ಉರಿಬಾಣ ಚೇಳುಬಾಣಗಳ ಬಿಡುತ ಪರಿಪರಿಯಲ್ಲಿ ಪುಷ್ಪಬಾಣಗಳಾ ಸುರಿವುತ ಬರುತಿರ್ದರರ್ತಿಕಾಱರು (ಭರತ. ೨೦-೭೨) ; ಚೇಳುಬಾಣಗಳ ಜಾಟಳವುರಿ ಪೊಟ್ಟಣವೇಳುವ ಜಂತ್ರದ ದಗಳು . . . ಪಟ್ಟಣದಾಳುವೇರಿಯ ತುಂಬಿಹುವು (ಕಂನವಿ. ೭-೨೧). [ ಚೇಳು₁(<ತೇಟ್₂) + ಬಾಣ ]

**ಚೇಳುಬಾಲ** ‘ಚೇಳುವಾಲ’ ನೋ.

**ಚೇಳುಮಣಿ** (ನಾ). ಚೇಳಿನ ವಿಷವನ್ನು ಇಳಿಸತಕ್ಕ ಒಂದು ಬಗೆಯ ಮಣಿ : (ಹ). [ ಚೇಳು₁(<ತೇಟ್₂) + ಮಣಿ₃ ]

**ಚೇಳುಮಣಿಗಿಡ** (ನಾ). = ಚೇಳುಕೊಂಡಿ ಗಿಡ ೧ : ಚೇಳುಮಣಿಗಿಡ, ಚೇಳುಕೊಂಡಿಗಿಡ (ಮೃಜಿಗಿ. ೯೨-೮೩೩). [ಚೇಳುಮಣಿ + ಗಿಡ(<ಗಿಡು)]

**ಚೇಳುರಿಗಿಡ** (ನಾ). ಒಂದು ಬಗೆಯ ಗಿಡ ; ತುರಂಚಿ : ಅಂಟು ಸುರುಸುರಿಗೆ ಬಳ್ಳಿ, ತುರಚಿಬಳ್ಳಿ, ಚೇಳುರಿಗಿಡ (ಮೃಜಿಗಿ. ೭೫-೦೫೬).
[ ಚೇಳು₁ (<ತೇಟ್₂) + ಉರಿ₂ + ಗಿಡ (<ಗಿಡು) ]

**ಚೇಳುವಾಲ, ಚೇಳುಬಾಲ** (ನಾ). ೧. ಚೇಳಿನ ಬಾಲ. ೨.= ಚೇಳು ಕೊಂಡಿಗಿಡ ೨ : “ಯುಗಫಲ–ಕೊಡಸಿಗೆ, ಚೇಳುವಾಲ” (ಓಷಧಿ. ೦೩೨); ಚೇಳುವಾಲದ ಗಿಡುವಿನ ಬೇರು, ಗಂಟುಭಾರಂಗಿ ಇಪ್ಪನು ಸಮಾಂಶವಾಗಿ ತೆಗೆದುಕೊಂಡು (ವೈದ್ಯಸಾ. I, ೦೫೦). ಚೇಳುಬಾಲ: ೨. “ಅಹಿದಂಷ್ಟ್ರಾ–ಚೇಳುಬಾಲ” (ಅಕಾನಿ. ೨-೧೧) ; ತಗಚೆಸೊಪ್ಪಿನ ರಸ, ಚೇಳುಬಾಲದ ಸೊಪ್ಪಿನ ರಸ . . . ಪ್ರಾತಃಕಾಲದಲ್ಲಿ ಗಳಿತೂಕವಂ ಸೇವಿಸುವುದು (ಸಕವೈ. ೨೧೭). [ ಚೇಳು₁(<ತೇಟ್₂) + ಬಾಲ₁ ]

**ಚೇಳುವಾಲಿ, ಚೇಳಂವಾಳಿ** (ನಾ). = ಚೇಳುವಾಲ ೨: "ಉಷ್ಣಧೂಮ–ಚೇಳುವಾಲಿ" (ಓಷಧಿ. ೧೬): "ವೃಶ್ಚಿಕಾಪ್ಹಾ–ಚೇಳುವಾಲಿ" (ಓಷಧಿ. ೧೫೭). ಚೇಳುವಾಳಿ: "ಭೂವೃಶ್ಚಿಕಾಳಿ – ಚೇಳುವಾಳಿ" (ಓಷಧಿ. ೧೧೩). [<ಚೇಳುವಾಲ]

**ಚೇಳುವಾಳಿ** 'ಚೇಳುವಾಲಿ' ನೋ.

**ಚೇಟ್** 'ತೇಟ್₂' ನೋ.

**ಚೈ** 'ಚಯ್₂' ನೋ.

**ಚೈಕೋಲ್** (ನಾ). ಒಂದು ಪ್ರದೇಶದ ಹೆಸರು (?): ಅದಟ ತದನನ್ತರ ಚೈಕೋಲ ತಾಟಮರ ಅದಟ ತದನಾನ್ತರ ಮಟ್ಟಟಿಯ ಕುರಚಿಗೊಣ್ಡ (ಸೌಇಇ. IX-I, ೪೧-೨೫; ?). [?]

**ಚೈಗುಡು** 'ಚೆಯ್ಗುಡು' ನೋ.

**ಚೈತ** (ಗು). ಚಿತೆಗೆ ಸಂಬಂಧಿಸಿದ. 'ಚೈತಾಗ್ನಿ' ಪರಾ. [ಸಂ.]

**ಚೈತನ್ಯ** (ನಾ). ೧. ಜೀವದ ಲಕ್ಷಣ ; ಜೀವಂತಿಕೆ. ೨. ಗ್ರಹಣಶಕ್ತಿ ; ಬುದ್ಧಿಶಕ್ತಿ; ಅರಿವು ; ಪ್ರಜ್ಞೆ : "ಚೇತನೆ ಚೈತನ್ಯಂ" (ವಸ್ತು ಕೋ. ೦೦೫-೨೬): ಮುನಿಯ ಮಾತಿನ ಬಲೆಗೆ ಸಿಲುಕಿತು ಜನಪತಿಯ ಚೈತನ್ಯಮೃಗ (ಕುವ್ಯಾಸ. ೧-೯೩). ೩. ಜೀವ ; ಆತ್ಮ ; ಚಿತ್‌ಶಕ್ತಿ : ಭೂತಚತುಷ್ಟಯ ಸಂಭೂತಚೈತನ್ಯಂ ಪಿಷ್ಟೋದಕಗುಡಧಾತಕ್ಯಾದಿಯತ್ತಣಿಂ ಮದಶಕ್ತಿ ಪುಟ್ಟುವಂತೆ ಪುಟ್ಟುಗುಂ (ಶಾಂತಿಪು. ೮-೧೨೮ ವ) ; ಜಡವಸ್ತುಗಳಲ್ಲಿ ಚೈತನ್ಯವು ಪೂರ್ಣವಾಗಿ ತಿರೋಹಿತವಾಗಿರುವುದು (ಶಕ್ತಿವಿ. ೯) : ಎಲ್ಲಾ ಪ್ರಾಣಿಗಳಲ್ಲಿಯೂ ದೇವರ ಚೈತನ್ಯ ಇದೆ ಎಂದು ತಿಳಿಯಬೇಕು (ನೀತಿಚಂ. I, ೧೨). ೪. ಚಟುವಟಿಕೆ ; ಚಲನ ; ಎಚ್ಚರ : "ಮಿಡುಕು, ಮಿಡುಂಕು–ಚೈತನ್ಯೇ (ಚೇತರಿಸು)" (ಶಮಧಾ) : ಕತ್ತಲೆಗೆ ಕಾಠಿಣ್ಯವನು ಚೈತನ್ಯವನು ಗಿರಿಗಳಿಗೆ . . . ಕೊಟ್ಟರೆ ಲೇಸು ಬಳಿಕೇನು (ಕುವ್ಯಾಕ. ೬-೭) ; ಇಂಥ ಸಣ್ಣಪುಟ್ಟ ಇಂಧನವನ್ನೇ ಸಾಧನವನ್ನಾಗಿಸಿಕೊಂಡು ಮಹಾಚೈತನ್ಯಾಗ್ನಿಯೊಂದು ದೇಶದಲ್ಲೆಲ್ಲ ವಿಳುವದಿತ್ತು (ಸಮುಜೀ. ೭೧೯). ೫. ಶಕ್ತಿ ; ಸಾಮರ್ಥ್ಯ : ಒಬ್ಬ ಹಣಗಾರನು ಸಾವಿರಾರು ವರಹಗಳ ಚೈತನ್ಯವುಂಟಾದವನಾಗಿದ್ದು (ಕಥಾಮಂ. IV, ೧೩). 'ಚೈತನ್ಯಗೆಡಂ', 'ಚೈತನ್ಯದಾಯಕ' ಪರಾ. ೬. ಬಂಗಾಳದಲ್ಲಿ ಭಕ್ತಿಪಂಥವನ್ನು ಪ್ರಚುರಪಡಿಸಿದ ಒಬ್ಬ ಸಂತ; ಗೌರಾಂಗಪ್ರಭು: ತನ್ನ ಭಕ್ತಿಭಾವನೆಯಿಂದ ಉತ್ತರಭಾರತವನ್ನು ಚೇತನಗೊಳಿಸಿದವನು ಚೈತನ್ಯದೇವ (ಭಾರದ. ೨೮೯). [ಸಂ.]

**ಚೈತನ್ಯಂಬಡೆ, ಚೈತನ್ಯವಡೆ** (ಕ್ರಿ). ೧. ಜೀವಂತವಾಗು ; ಜೀವದಂಬಿಕೊಳ್ಳು : ಮೊದಲ್ಲೋಜಿದ ಚಿತ್ರವೆ ಚೈತನ್ಯಂಬಡೆದಂತೆ ಮನುಜೇಶ್ವರನೊರ್ವಂ ಮನೆಯುಂ ಪೊಕ್ಕು (ಜಯುಕಾ. ೪-೨೫). ಚೈತನ್ಯವಡೆ: ೧. ಹೇಮಗಂಭಂಗಳ್ ಚೈತನ್ಯವಡೆದು ಮುಂಬರಿದೆಡೆಯಾಡುವಂತೆ ತತ್ಕುವರಿಯ ಪೊಂಬಾಳೆದೊಡೆಗಳೊಪ್ಪಿದುವು (ಮೋಹತ. ೨೩-೧೬). ೨. ಚೇತರಿಸು ; ಎಚ್ಚರಂ : ಅನ್ನೆವರ ಹನುಮಂತ ನಸು ಚೈತನ್ಯವಡೆದನು (ಕೌಶಿರಾ. ೨೫-೨೭). [ಚೈತನ್ಯ + ಪಡೆ₁]

**ಚೈತನ್ಯಗೆಡು** (ಕ್ರಿ). ಸಾಮರ್ಥ್ಯಗುಂದು ; ಉತ್ಸಾಹವಿಲ್ಲದಂತಾಗು : ತೂಕಡಿಕೆಯುಂಟಾಗಿ ವ್ಯೆಕಾಂತಿಗುಂದಿ ಚೈತನ್ಯಗೆಟ್ಟು ನುಡಿಯಲ್ಲದೆ . . . ಕಷ್ಟವುಂಟಾಗಿರ್ಪುದೆ ಅಭಿನ್ಯಾಸ ಸನ್ನಿಪಾತಲಕ್ಷಣವೆಂದು ಅರಿದುಕೊಳ್ವುದು (ಸಕವ್ಯ. ೧೬೭). [ಚೈತನ್ಯ + ಕೆಡು₁]

**ಚೈತನ್ಯದಾಯಕ** (ಗು). ಸಾಮರ್ಥ್ಯವನ್ನು ಕೊಡುವ; ಉತ್ಸಾಹವನ್ನು ನೀಡುವ: ವನ್ಯೂಷನ ಧ್ವನಿಯೂ ಗಾಡಿಯ ಧ್ವನಿಯೂ ಮಾತ್ರ ಆಗಾಗ್ಗೆ ಅವನ ಚೈತನ್ಯದಾಯಕವಾದ ಯವ್ವನದ ನಿದ್ರೆಯನ್ನು ಕೆಡಿಸುತ್ತವೆ (ಮಲನಾ. ೦೫). [ಸಂ.]

**ಚೈತನ್ಯದಾಯಿ** (ಗು). = ಚೈತನ್ಯದಾಯಕ: ಚೈತನ್ಯದಾಯಿಯಾದ ಹೊಸ ಗಾಳಿಯನ್ನು ಸೇವಿಸಿದನು (ಪುನರು. ೧೩೫). [ಸಂ. ಚೈತನ್ಯದಾಯಿನ್]

**ಚೈತನ್ಯಭಾವಿ** (ನಾ). ೧. ಆತ್ಮಸ್ವರೂಪಿ ; ಚಿತ್‌ಸ್ವರೂಪನಾದವನು : ಅಪರಿಮಿತ ಸೂಕ್ಷ್ಮದೊಳಖಿಳಮಂ ಕಪಟನಾಟಕಸೂತ್ರವಿದ್ಯಾನಿಪುಣದಿಂ ಪ್ರಕಟಿಸುವ ತತ್ ಚೈತನ್ಯಭಾವಿ ಶಿವಂ (ಬಸಪು. ೫೦-೩೦). ೨. ಬುದ್ಧಿವಂತನಾದವನಂ ; ಪ್ರಜ್ಞಾವಂತ. [ಸಂ. ಚೈತನ್ಯಭಾವಿನ್]

**ಚೈತನ್ಯವಡೆ** 'ಚೈತನ್ಯಂಬಡೆ' ನೋ.

**ಚೈತನ್ಯವಡೆಸು** (ಕ್ರಿ). ಉತ್ಸಾಹವನ್ನು ತುಂಬು ; ಪ್ರೋತ್ಸಾಹಿಸಂ : ತೋರದಾಸೆಯನಿಕ್ಕಿ ಚೈತನ್ಯವಡೆಸಿದಳಾ ರಾಜಮುಖಿ ತನ್ನ ಸಖಿಯು (ಮೋಹತ. ೨೮-೩). [ಚೈತನ್ಯವಡೆ (<ಚೈತನ್ಯಂಬಡೆ) + – ಸು₁]

**ಚೈತನ್ಯವಾದ** (ನಾ). "ಇಂದ್ರಿಯ ಗೋಚರವಾಗುವ ಬಾಹ್ಯವಸ್ತುಗಳು ವಾಸ್ತವವಾಗಿ ಭಾವನಾಮಯವಾದವು ಎಂಬ ವಾದ" (Idealism. ಇಂಕನಿ) : ಚೈತನ್ಯವಾದಕ್ಕೆ ಪುಷ್ಟಿಕೊಡುವ ೨೦ನೇ ಶತಮಾನದ ಜೀವ ಶಾಸ್ತ್ರಜ್ಞರ ಕಾಣಿಕೆ . . . ಸಾಹಾಯ್ಯಕವಾಗಿದೆ (ಹುಕ್ಕಾರ. ೩೬ ಪೀಠಿಕೆ). [ಚೈತನ್ಯ + ವಾದ₃]

**ಚೈತನ್ಯಸ್ಥ** (ನಾ). ೧. ಪ್ರಜ್ಞಾಶೀಲ ; ಬುದ್ಧಿವಂತ : ಅತುಳಿತಾನಂದಿತ ಪರವಶೀಯುತ ಮಹಿಮ ತತ್ತ್ವಸ್ಫುರಣಗತಿಮತಿ ಸಕಾಯ ಸಕರ್ಮ ಚೈತನ್ಯಸ್ಥ ರತಿವಿತತಿ ಸತತಮುಂ ನಿಮ್ಮಲ್ಲಿರಲು ಸಮ್ಮತಿಸಿ ಕರುಣಿಸು (ಬಸಪು. ೬೧-೫೯). ೨. ಹಣವಂತ ; ಶ್ರೀಮಂತ. [ಸಂ.]

**ಚೈತನ್ಯಾತುಮ** (ನಾ). ಚೈತನ್ಯಸ್ವರೂಪವಾದ ಆತ್ಮ ; ಪರಮಾತ್ಮ : ಪ್ರೀತಿ ಮಿಗಲಾ ಹರಿಯೆ ಚೈತನ್ಯಾತುಮನು ತಾನೆಂಬ ನಿಜಧ್ಯಾನಾತಿಶಯಮಳವಡಲು ವ್ಯಷ್ಟಿಸಮಾಧಿಯೆನಿಸುವದು (ಗಗತಾ. ೧೩-೩೭). [<ಚೈತನ್ಯಾತ್ಮ]

**ಚೈತನ್ಯಾತ್ಮ** (ನಾ). = ಚೈತನ್ಯಾತುಮ: ಹರಿಯಂತಿರಲಿ ಚೈತನ್ಯಾತ್ಮನಾತನ ಮಾತದೇಕೆಂದ (ಕುವ್ಯಾದ್ರೋ. ೧೫-೫೪). [ಚೈತನ್ಯ + ಆತ್ಮ]

**ಚೈತಾಗ್ನಿ** (ನಾ). ಚಿತೆಯ ಬೆಂಕಿ : ಸೂರ್ಯತನಯಂ ತೇಜೋಗ್ನಿಯಿಂದಂ ದ್ವಿಷದ್ಬಲಮಂ ಸುಟ್ಟನುದಾತ್ತಪುಣ್ಯನವನಂ ಚೈತಾಗ್ನಿಯಿಂ ಸುಟ್ಟನಿಲ್ಲ (ಪಂಪಭಾ. ೧೩-೬೦). [ಚೈತ + ಅಗ್ನಿ]

**ಚೈತ್ರ** (ಗು). ಚಿತ್ರಕ್ಕೆ ಸಂಬಂಧಿಸಿದ : ಲೋಕದಲ್ಲಿ ಜ್ಞಾನ ಸುಖ ದುಃಖ . . . ಮೊದಲಾದ ಭಾವಗಳು ಸರ್ವಜನ ಪ್ರಸಿದ್ಧಗಳಾಗಿರುತ್ತವೆ. ಇವುಗಳಿಗೆ ಮೂಲವಾಗಿರುವುದನ್ನು ಚಿತ್ತವೆಂದೂ, ಇವುಗಳನ್ನು ಚೈತ್ರವೆಂದೂ ಸಾಮಾನ್ಯವಾಗಿ ವ್ಯವಹರಿಸುವರು (ಹಿಂದಸಾ. ೦೦೯). [ಸಂ.]

**ಚೈತ್ಯ** (ಗು). ೧. ಚಿತೆಗೆ ಸಂಬಂಧಿಸಿದ. (ನಾ). ೨. ಚಿತಾಭಸ್ಮವನ್ನು ಹೂಳಿದ ಜಾಗದಲ್ಲಿ ಕಟ್ಟಿದ ಸ್ಮಾರಕ : ಚೈತ್ಯ ಎಂದರೆ ಶವದಹನಾನಂತರ ಭಸ್ಮವನ್ನು ಇಡುವ ಸ್ಥಳ (ಸೌಂದಸ. ೦೨೦). ೩. ಯಜ್ಞಶಾಲೆ. ೪. (ಬೌದ್ಧ ಅಥವಾ ಜೈನ) ದೇವಾಲಯ : ಒಪ್ಪಂಬೆತ್ತುಮಂ ಮಾಡಿಸಿ ದರತುಲ ಚೈತ್ಯಂಗಳಂ ಭಕ್ತಿಯಿಂದಂ (ಚಂದ್ರಪು. ೩-೬೦); ಏನೊಪ್ಪಿರ್ಪುವೊ ಪೋಲ್ತು ದಿವ್ಯ ಜಿನಚೈತ್ಯಂಗಳ್ ಬಹಿತ್ರಂಗಳಂ (ಪುಷ್ಪಪು. ೨-೭೪): ಬುದ್ಧನು ಚರ್ಚೆ ನಡೆಸಿದ ಸ್ಥಳದಲ್ಲಿ ಅರವತ್ತು ಮೊಳ ಎತ್ತರದ ಚೈತ್ಯವನೆತ್ತಿ (ಪ್ರವಾಇ. I, ೧೬೯). ೫. ಜೀವಾತ್ಮ. ೬. ಅರಳಿಮರ. 'ಚೈತ್ಯಕ್ಷಿತಿಜಾತ' ಪರಾ. [ಸಂ.]

**ಚೈತ್ಯಕ** (ನಾ). ಸ್ಮಾರಕ ಶಿಲೆ ; ಸ್ಮಾರಕ : ಪ್ರೀತ್ಯಾಶೈಲಮಿದಂ ಸ್ವಯಂ ನೃಪತಿನಾ ಸಂಸ್ಥಾಪಿತಂ ಚೈತ್ಯಕಂ (ಎಇ. XXVII, ೧೩೨-೨ ; ೧೧ನೆಯ ಶತ) ; ಅವಳ ಮರಣದ ಸ್ಮಾರಕವಾಗಿ ಮತ್ತು ತನ್ನ ಪ್ರೀತಿಯ ಸ್ಮಾರಕವಾಗಿ ಅವಳ ಗಂಡನು ಶಿಲೆಯ ಚೈತ್ಯಕವನ್ನು ನಿಲ್ಲಿಸುತ್ತಾನೆ (ಕಶಾಇ. ೪೨೦). [ಸಂ.]

**ಚೈತ್ಯಕ್ಷಿತಿಜಾತ** (ನಾ). ಅರಳಿಮರ; ಅಶ್ವತ್ಥವೃಕ್ಷ: ತುಂಗಶಾಖಾಚ್ಛದಚ್ಛನ್ನ ತರುಚ್ಛಾಯಾವನೀಭಾಗದೊಳಳವಡೆ ಕೈಯಿಕ್ಕಿ ಕೊಂಡಿರ್ದು ಚೈತ್ಯಕ್ಷಿತಿಜಾತ ಪ್ರಾಂತದೇಶಸ್ಥಿತ ಕನಕಮಯ ಪ್ರಾತಿಹಾರ್ಯಾಷ್ಟಕಾರ್ಹತ್ಪ್ರತಿಬಿಂಬಭ್ರಾಂತಿಯುಮ ಮಾಡಿದಂ (ಚಂದ್ರಪು. ೩-೮೨). 'ಚೈತ್ಯವೃಕ್ಷ' ಪರಾ. [ ಚೈತ್ಯ + ಕ್ಷಿತಿಜಾತ ]

**ಚೈತ್ಯಗೃಹ** (ನಾ). ಜಿನಾಲಯ; ಬಸದಿ: ಭಕ್ತಿಭರಾವನತನಪವರ್ಗಲಕ್ಷ್ಮಿಯ ಮನಮಂ ಪುಗುವಂತೆ ಚೈತ್ಯಗೃಹಮಂ ಪೊಕ್ಕಂ (ಮಲ್ಲಿಪು. ೧೦-೧೧೮). [ ಚೈತ್ಯ + ಗೃಹ ]

**ಚೈತ್ಯಗೇಹ** (ನಾ). = ಚೈತ್ಯಗೃಹ: ಅನಿಶಂ ಪೊಂಪುಟ್ಟೋಪುವಾ ಪುರದ ಚಂಚಚ್ಚೈತ್ಯಗೇಹೋತ್ಕರಂ (ಚಂದ್ರಪು. ೧೦-೭೩). [ ಚೈತ್ಯ + ಗೇಹ ]

**ಚೈತ್ಯಪುರುಷ** (ನಾ). ಜೀವಾತ್ಮ: ಚೇತನವೂ ಮನವೂ ನಮ್ಮಲ್ಲಿ ಹಣಿಕೆ ಹಾಕುತ್ತ ಪ್ರತಿವ್ಯಕ್ತಿಯೊಳಗಿನ ಚೈತ್ಯಪುರುಷನು (Psyche) ಈ ಪೃಥ್ವಿಯಲ್ಲಿ ಹೇಗೆ ಮುಂದುವರಿಯುತ್ತಿದ್ದಾನೆಂಬುದರ ಒಳನೋಟವನ್ನು ನಮಗೆ ತೋರಿಸಿಕೊಡುವವು (ಮಹಾಯೋ. ೧). [ ಚೈತ್ಯ + ಪುರುಷ ]

**ಚೈತ್ಯಭವ** (ಗು). ಚೈತ್ಯಗೃಹದಲ್ಲಿ ಉದ್ಭವಿಸಿದ,-ಉಂಟಾದ: ಗಗನದ ತೆಜಿಪಂ ತೀವಿತ್ತು ಚೈತ್ಯಭವ ಶಂಖರವಂ (ಚಂದ್ರಪು. ೮-೯೯). [ ಚೈತ್ಯ + ಭವ ]

**ಚೈತ್ಯರಾಜಿ** (ನಾ). ಬಸದಿಗಳ ಸಾಲು: ನೀಮೆರಡುವರೆ ದ್ವೀಪದ ಚೈತ್ಯರಾಜಿಗೊಯ್ಯುದೆ ಬೆಸಂ ಬೆಸಂ ಪೆಱತುಂಟೇ (ಶಾಂತಿಪು. ೯-೭೨). [ ಚೈತ್ಯ + ರಾಜಿ$_1$ ]

**ಚೈತ್ಯವೃಕ್ಷ** (ನಾ). = ಚೈತ್ಯಕ್ಷಿತಿಜಾತ: "ಚೈತ್ಯದ್ರುಮ – ಚೈತ್ಯವೃಕ್ಷು ಇದ. ಅರಳಿಯ ಮರಕ್ಕಂ (ಅಪ್ಪುದು)?" (ಓಪಧಿ.೫೮): ಶ್ರೀಮದಶೋಕ ಪ್ರಾಸಾದಾಮರತರು ಚೈತ್ಯವೃಕ್ಷ ಸಿದ್ಧಾರ್ಥ ಮಹಾಸಾಮಜ ರಿಪುವಿಷ್ಟರ ಲಕ್ಷ್ಮೀಮಂಟಪ ಗಂಧಕುಟಿಯದೇನೊಪ್ಪಿದುದೋ (ಅಜಿಪು. ೬-೨೦): ದೇವಾಲಯವು ಪವಿತ್ರವಾದ ತೀರ್ಥವಾದುದರಿಂದ ಸ್ನಾನಕ್ಕಾಗಿ ಕೊಳ (ಕಲ್ಯಾಣಿ); ಚೈತ್ಯವೃಕ್ಷ . . . ಮುಂತಾದುವನ್ನು ನಿರ್ಮಿಸಬೇಕು (ಹೊಯ್ಸವಾ. ೧೨). [ ಚೈತ್ಯ + ವೃಕ್ಷ ]

**ಚೈತ್ಯಸಂಪ್ರಜ್ಞೆ** (ನಾ). ಚೈತ್ಯದ ಅರಿವು: ತನ್ನ ಭೀಪ್ಸಾ ದೂತನಂ ಮೃಣ್ಮಯದ ಜಡಕೆ ಸಂವಾದಿಯಾಗಿರ್ಪ ಸುಪ್ತಚಿತ್ತದ ಗುಪ್ತತಿಮಿರದ ಸೆರೆಯ ಚೈತ್ಯಸಂಪ್ರಜ್ಞೆಯಂ ಪುಡುಕಿ ಕಂಡೈತರಲ್ ಕಳುಹುವಧ್ಯಾತ್ಮದೋಲ್ ಶ್ರೀರಾಮನಟ್ಟಿದಾ ಸುಗ್ರೀವದೂತೋತ್ತಮಂ ಪೊಕ್ಕನೈಸಲೆ ಲಂಕೆಯಂ (ಶ್ರೀರಾಮಾ. ೪೩೫-೭). [ ಚೈತ್ಯ + ಸಂಪ್ರಜ್ಞೆ ]

**ಚೈತ್ಯಾಲಯ, ಚೈತ್ಯಾಳಯ** (ನಾ). ಜೈನ ಅಥವಾ ಬೌದ್ಧ ದೇವಾಲಯ: ಚೈತ್ಯಾಲಯ ನಿರ್ಮಾಣ ನಿರ್ಮಾಪಣ ಶಾಸನಾರೋಪಿತ ಗ್ರಾಮಕ್ಷೇತ್ರ ವಿತರಣಮುಂ (ಆದಿಪು. ೧೫-೧೩ ವ): ಮಂದರಾಚಲದ ಕೃತ್ರಿಮ ಚೈತ್ಯಾಲಯಂಗಳೆಲ್ಲಂ ಸೌಧಾಲಯಂಗಳೆನಿಸೆಯುಂ (ಅಜಿಪು. ೪-೭೭ ವ); ಚೈತ್ಯಾಲಯಗಳು ಬುದ್ಧನನ್ನು ಪೂಜಿಸುವ ಸ್ಥಳಗಳು (ವ್ಯಾ ವಾ ಸು. ೨೪). ಚೈತ್ಯಾಳಯ: ಸಿಂಹಣನನ್ದ್ಯಾಚಾರ್ಯರ್ ಮುಡಿಪಿದೆಡೆ[ಯೊಳ್] ಬೆಡೆಂಗಂ ಪಡೆದಿರೆ ಮಾಡಿಸಿ ಜಿನೇನ್ದ್ರಚೈತ್ಯಾಳಯಮಂ (ಕಳಅ. ೭೨-೮-೧೦; 1008). [ ಚೈತ್ಯ + ಆಲಯ ]

**ಚೈತ್ಯಾವಸಥ** (ನಾ). = ಚೈತ್ಯಗೃಹ: ರಸವತ್ಸಂಗೀತ ನಾನಾ ಪಟುಪಟಹ ನಿನಾದಂಗಳಿಂ ತೀವೆ ಚೈತ್ಯಾವಸಥಂಗಳ್ (ಸುಕುಮಾ. ೧೦-೫೩). [ ಚೈತ್ಯ + ಅವಸಥ ]

**ಚೈತ್ಯಾವಾಸ** (ನಾ). = ಚೈತ್ಯಗೃಹ: ಅಮರನಿಕಾಯಾನ್ವಿತಂ ವಿಶ್ರುತಾಕೃತ್ರಿಮ ಚೈತ್ಯಾವಾಸಪೂಜೋತ್ಸವದಿನಗಲನಲ್ಲಿಂದಮೆಂದುಂ ಸುರೇಂದ್ರಂ (ಸುಕುಮಾ. ೯-೪೦). [ ಚೈತ್ಯ + ಆವಾಸ ]

**ಚೈತ್ಯಾಳಯ** 'ಚೈತ್ಯಾಲಯ' ನೋ.

**ಚೈತ್ಯಾಳಿ** (ನಾ). ಜಿನಗೃಹಗಳ ಸಾಲು: ಎರಡುಂ ವಿದ್ಯಾಧರಶ್ರೇಣಿಯೊಳೆಡೆಯಿಡೆಯೊಳ್ ಜೈನಚೈತ್ಯಾಳಿ ತಳ್ತಿಂಬರಮಂ ತಟ್ಟಿಸಿ (ಶಾಂತಿಪು. ೩-೧೧೭). [ ಚೈತ್ಯ + ಆಳಿ$_4$ (=ಆಲಿ$_1$) ]

**ಚೈತ್ಯೇಶ** (ನಾ). = ಚೈತ್ಯಪುರುಷ: ಅಂತರ್ಯಾದೊಂದು ಚೈತನ್ಯ ನಿನ್ನ ಕೈಂಕರ್ಯ ಕರ್ತೃವಾಗಿ ಕ್ಷೇತ್ರಜ್ಞ ಬರಲಿ ಚೈತ್ಯೇಶನಾಗಿ ಮಧುಬೋಧ ಮೋದವಾಗಿ (ಅರಳು. ೩-೧೦). [ ಚೈತ್ಯ + ಈಶ ]

**ಚೈತ್ರ** (ನಾ). ಚಿತ್ರಾನಕ್ಷತ್ರದಲ್ಲಿ ಪೂರ್ಣಚಂದ್ರನಿರುವ ತಿಂಗಳು: ಚಾಂದ್ರಮಾನ ಸಂವತ್ಸರದ ಮೊದಲನೆಯ ತಿಂಗಳು; ವಸಂತ ಋತುವಿನ ಮೊದಲ ತಿಂಗಳು; ಮಧುಮಾಸ: ಮಂದಾನಿಲಂ ತೆಂಕಣಿಂ ಬರೆ ಚೈತ್ರಂ ಕುಡುವರ್ಘ್ಯಲಾಜತತಿಯೋ (ಕಾದಂಪೂ. ೭೪೦); ನವಚೂತಂ ತಳಿರ್ವಂದದಿಂ ತಳಿರ್ಗುಮೇ ಸ್ವಾಣೂತ್ಕರಂ ಚೈತ್ರದೊಳ್ (ಜಗವಿ. ೧-೧೩); ಚೈತ್ರನಾಗಮವಾಯ್ತು ಮಂಥರೆಯ ಶಿಶಿರಕ್ಕೆ (ಶ್ರೀರಾಮಾ. ೩೩-೬೦೮). [ ಸಂ. ]

**ಚೈತ್ರದೂತ** (ನಾ). ವಸಂತಾಗಮನವನ್ನು ತಿಳಿಸುವ ಹಕ್ಕಿ; ಕೋಗಿಲೆ: ನಳನಳಿಪ ಮಾಮರದ ಕೆಂದಳಿರನುಂಡು ಕುಕಿಲುವಾ ಚೈತ್ರದೂತನ ದುಃಸ್ಥಿತಿಯ ಕಂಡು (ಕೋಗಿಲೆ. ೩-೭೩). [ ಚೈತ್ರ + ದೂತ ]

**ಚೈತ್ರದೂತಿ** (ನಾ). ಒಂದು ಬಗೆಯ ಬಳ್ಳಿ ಮತ್ತು ಅದರ ಹೂವು; ಅದಿರ್ಗಂತಿ; ಅವಿಮುಕ್ತೆ; ವಸಂತದೂತಿಕೆ: ವನಪಾಲಂ ಕಾಣ್ಕೆಗೈದು ವಿಚಕಿಲದರಲಂ ಪಚ್ಚೆಯಂ . . . ಚೈತ್ರದೂತೀಘನಗುಚ್ಛವ್ರಾತಮಂ (ರಾಜಶೇ. ೧೦-೨). [ ಚೈತ್ರ + ದೂತಿ ]

**ಚೈತ್ರಪವಿತ್ರ** (ನಾ). ಚೈತ್ರಮಾಸದಲ್ಲಿ ಆಚರಿಸುವ ಒಂದು ಉತ್ಸವ: ಶ್ರೀಕಣ್ಠೇಶ್ವರದೇವರ ಅಂಗಭೋಗಕ ರಂಗಭೋಗಕ ಚೈತ್ರಪವಿತ್ರಕ್ಕ ತಪೋಧನರಾಹಾರದಾನಕ್ಕ (ಎಕ. VIII, ಸೊರಬ. ४೭೬-೧೮; 939): ಶ್ರೀಮಾಳೇಸ್ವರದೇವರ ಗ(ಂ)ನ್ಧಪೂಚ್ಪಧೂಪದೀಪನಿವೇದ್ಯಕ್ಕಂ ಚೈತ್ರಪವಿತ್ರಕ್ಕಂ ಖಿಣ್ಣಸ್ಪುಟಿತ ಜೀರ್ಣೋದ್ಧಾರಕ್ಕಂ (ಸೌಇಇ. XI-II,೧೬೨-೩೭; 1112); ಚೈತ್ರಪವಿತ್ರಂಗಳೊಳು ಗಾಣದಲ್ಲಿ ವೀಸವೈದು (ಎಇ. XX, ೧೨-೧೧೭; 1167). [ ಸಂ. ]

**ಚೈತ್ರಮಾಸ** (ನಾ). = ಚೈತ್ರ: ಚೈತ್ರಮಾಸಂ ಪೋದುದು (ಚಿ ಪಿ ಧ. ೫-೧೮). [ ಚೈತ್ರ + ಮಾಸ$_2$ ]

**ಚೈತ್ರಮಿತ್ರ** (ನಾ). ವಸಂತ ಋತುವಿನ ಗೆಳೆಯ; ಮನ್ಮಥ: ತುಂಬಿಯಿಂದಂ ಗಿಳಿಯಿಂದಂ ಬೀರಮಂ ಪಾಡಿಸಿ ಪೊಗಟಿಸುವಂ ಚೈತ್ರದೊಳ್ ಚೈತ್ರಮಿತ್ರಂ (ಜಗವಿ. ೧೪-೪೦). [ ಚೈತ್ರ + ಮಿತ್ರ ]

**ಚೈತ್ರರಥ** (ನಾ). ಅಲಕಾನಗರದ ವನ; ಕುಬೇರನ ಉದ್ಯಾನವನ: ಅಂತಾ ಚಿತ್ರರಥನಿಂ ಚೈತ್ರರಥಮೆಂಬ ಬನಮು ಮಚ್ಛೋದಮೆಂಬ ಸರೋವರಮುಮಾದುದಲ್ಲದೆಯುಂ (ಕಾದಂಪೂ.೭೦೦): ಅದು ಮೆಚ್ಚದು ಚೈತ್ರರಥದ ಚಿತ್ರಾಸ್ಪದಮನೆನಲ್ವೀತಶೋಕ ಪುರವರಮೆಸೆಗುಂ (ಮಲ್ಲಿಪು. ೨-೩೨). [ ಸಂ. ]

**ಚೈತ್ರಾಗಮ** (ನಾ). ವಸಂತಋತುವಿನ ಪ್ರಾರಂಭ: ಈ ಕೋಮಳೆ ಕಾಮಕ್ಲಿಪ್ತೆ ಚಿತ್ರಕ್ಕೆಳಲನೊಲವುಮಂ ಪುಟ್ಟಿಪಳ್ ನೋಡೆ ಪತ್ರಾವಳೀಪಂಚಿತ್ತೆ ಚೈತ್ರಾಗಮಪವನಪರಿಸ್ಪೃಷ್ಟ ವಾಸಂತಿಯಾವೋಲ್ (ಶಾಕುಂತ. ೩೫-೬೧). [ ಚೈತ್ರ + ಆಗಮ ]

**ಚೈತ್ರಾದೀಪ** (ನಾ). (?): ಶ್ರೀಪೌಲೋಮೀಶ ಭೂಭೃತ್ಸಮುದಯವಿನುತಂಗಳ್ ತಮಸ್ತೋಮ ಚೈತ್ರಾದೀಪಂಗಳ್ . . . ಪುಷ್ಪದಂತ ಶ್ರೀಪಾದಂಗಳ್ ಸಮುತ್ಪಾದಿಸುಗೆಮಗೆ ಹೃದಿಂದೀವರಾನಂದದೊಳ್ಪಂ (ಪುಷ್ಪಪು. ೧-೧). [ P ಇದು 'ಚೈತ್ರಾದೀಪ' ಎಂದಿರಬಹುದೆ ? ]

**ಚೈತ್ರಾನಿಲ, ಚೈತ್ರಾನಿಳ** (ನಾ). ಚೈತ್ರಮಾಸದ ಗಾಳಿ; ವಸಂತ ಋತುವಿನ ಗಾಳಿ: ಮಳಯಾವನೀಧರಚರಂ ತಾಂ ಬಂದುದಾ ದಾನ ಬಂಧುರ ಗಂಧಾಕುಳ ಭೃಂಗಮಂಗಜಗಜಂ ಬರ್ಪಂತೆ ಚೈತ್ರಾನಿಲಂ [ಪಾಠಾಂ. ಳಂ] (ಚಂದ್ರಪು. ೭-೩೮). ಚೈತ್ರಾನಿಳ: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಚೈತ್ರ + ಅನಿಲ ]

**ಚೈತ್ರಾನಿಳ** 'ಚೈತ್ರಾನಿಲ' ನೋ.

**ಚೈತ್ರಿ** (ನಾ).=ಚೈತ್ರ. [ ಸಂ. ಚೈತ್ರೀ ]

**ಚೈತ್ರಿಕ** (ನಾ).=ಚೈತ್ರ. [ ಸಂ. ]

**ಚೈದ್ಯ** (ಗು). ೧. ಚೇದಿದೇಶಕ್ಕೆ ಸಂಬಂಧಿಸಿದ. (ನಾ). ೨. ಚೇದಿದೇಶದ ರಾಜ; ಶಿಶುಪಾಲ: ಸೋತನ್ನೆ ಹರಿಯೆಂದು ಚೈದ್ಯನ ಬೂತುಗಳು ಬಣ್ಣಿಸಿದರು (ಕುವ್ಯಾಸ. ೧೦-೬೯): ಶಿವಶಿವಯೆನುತ ಚೈದ್ಯನನು ಬೈವುತ ನೆರೆದ ಸುರ ಮುನಿಜನವಿರಲು (ನಿಭಾಗ. ೧೦-೪೦-೧೧). [ ಸಂ. ]

**ಚೈನಿ, ಚೈನು$_1$** (ನಾ). (ಉಕ) ವಿಲಾಸ: ಸುಖಭೋಗ; ಮಜ; ಷೋಕಿ: ಕಾಲೇಜಿಗೆ ಹೋಗಿ ಚೈನಿ ಮಾಡುವ ಸಂಧಿ ದೊರೆಯುವದೆಂದು ಮೊದಲಿನಿಂದ ಅಭ್ಯಾಸದಲ್ಲಿ ತೊಡಗಿದ್ದೆ (ಅನ್ನ. ೧೯೦): ರೈತಾಪಿ ಕಸುಬು ಬಿಟ್ಟು, ಚೈನಿ ಮಾಡಿಕೊಂಡು ತಿರುಗಿದವರು ಯಾರು ಉದ್ಧಾರವಾದರು ಹೇಳಿ (ಬೆಳುಮ. ೨೧೧). ಚೈನು$_1$: ಇಡೀ ದಿನವೂ ಅವಳ ಮನಸ್ಸಿಗೆ ಚೈನೆಂಬುದು ಇರಲಿಲ್ಲ(ಕಾಗೆಕ. ೬೯).

ಚೈನಿಹೊಡೆ=ಷೋಕಿಮಾಡು; ಮಜಾಮಾಡು: ಕಾಲೇಜು ಅಂದರೆ ಚೈನಿ ಹೊಡೆಯುವದೆಂದು ಬಂದಿರಬೇಕು (ಭೂಮಿತಾ. ೫೩).

[ ←ಹಿಂ. ಮರಾ. ಚೈನ್ ]

**ಚೈನು$_1$** 'ಚೈನಿ' ನೋ.

**ಚೈನು$_2$** (ನಾ). ೧. ಸರಪಣಿ. ೨. ಕೊರಳಿನಲ್ಲಿ ಅಥವಾ ಕಾಲಿನಲ್ಲಿ ಧರಿಸುವ ಆಭರಣ: ಕಾಲಿಗೆ ಬೆಳ್ಳಿಯ ಚೈನು (ನಡದಾ. I, ೫೫೮); ಕುತ್ತಿಗೆ ಚೈನಿಗೆ ಯಾರೋ ಕೈಹಾಕಿದಂತೆ ಭಾಸವಾಯಿತು (ಸಾವಿಸ. ೧೦). [←ಇಂ. Chain]

**ಚೈಮುಂಡಾಡು** 'ಚೆಯ್ಮುಂಡಾಡು' ನೋ.

**ಚೈರಂತನ** (ಗು). ಪುರಾತನವಾದ; ಪ್ರಾಚೀನವಾದ: ಇಂತು ಕವೀಂದ್ರ ಸಮಯಮಂ ಚೈರಂತನಮಾರ್ಗದೊಳೊಂದೆ ತಿಳಿಯೆ ಪೇೞ್ದಂ . . . ನಾಕಿಗಂ (ಕಾವ್ಯಾವ. ೯೫೯); ಚೈರಂತನ ಯೋಗಿನಾಯಕಯಶಸ್ಸಮಕೀರ್ತಿ . . . ಮಾಘಣಂದಿ ಸೈದ್ಧಾಂತಿಕಚಕ್ರವರ್ತಿ (ಚಂದ್ರಪು. ೧-೨೨). [ ಸಂ. ]

**ಚೈರಂತನಕ್ರಮ** (ನಾ). ಪ್ರಾಚೀನ ಸಂಪ್ರದಾಯ: ಮಳಲೊಂದನಲ್ಲಿ ಕುೞಿಪಂ ಮಾಡಿಟ್ಟು ಚೈರಂತನಕ್ರಮದಿಂದಾ ಮಣಲೆಲ್ಲಮಂ ಮಗುೞೆ ಪಾರಾವಾರದೊಳ್ ಪೊಯ್ದು ಮತ್ತಮದಂ ಸೋದಿಸಿ ಕಾಣ್ಬವೊಲ್ (ಸುಕುಮಾ. ೫-೩೩). [ ಚೈರಂತನ + ಕ್ರಮ ]

**ಚೊಂಕು** (ನಾ). (?): ಅಲ್ಲಿ ಜಡೆಮುಡಿ ಚೊಂಕು ಮಂಡೆಯಲಿ ರುದ್ರಾಕ್ಷಿಯಲ್ಲಿ ರಚಿಸಿದ ಟೋಪಿ (ಚೋರಬ. ೪-೧೬). [ ? ]

**ಚೊಂಗೆ** (ನಾ). ರೊಟ್ಟಿಯಂತಹ ಒಂದು ಬಗೆಯ ಸಿಹಿ ಖಾದ್ಯ; "ಒಂದು ಸೀ ತಿನಿಸು" (ಜಾನಕೋ. ೫೮). [ ←ಮರಾ. ಚೋಂಗಾ ]

**ಚೊಂಚ** (ನಾ). ಸೊಟ್ಟಗೈಯವನು; ಚೊತ್ತ: ಚೀಲ ಚೀಲ ಬೋನವ ಬಸಿದು ಚೊಂಚರಿಗೆ ನೀಲಪ್ಪ ಉಣಿಸಿ ಬರುವಳು (ಸಿದ್ಧಪು. ೫-೨೩): ಗುಳ್ಳಗಣ್ಣ, ಗುಜ್ಜ, ಚೊಂಚ ಎಂದು ನಿಂದಿಸುವುದು ಅನ್ಯಾಯ (ದಾಬುತ್ತಿ. ೩೦). [ ಚೊಂಚು + – ಅ$_7$ ]

**ಚೊಂಚು** (ನಾ). ಡೊಂಕುತನ; ವಕ್ರತೆ. 'ಚೊಂಚುಗೈ' ಪರಾ. [?]

**ಚೊಂಚುಗೈ** (ನಾ). ಡೊಂಕಾದ ಕೈ; ಸೊಟ್ಟಗೈ: ಆ ಚೊಂಚುಗೈ ಹೆಣ್ಣು ಮಗಳಿಗೆ ಜೀವನದಲ್ಲಿ ಇಷ್ಟಾದರೂ ಸಮಾಧಾನ ಬೇಡವೆ (ಸಮುಜೀ. ೯೭೭).

[ ಚೊಂಚು + ಕೈ$_2$ (< ಕೆಯ್$_2$) ]

**ಚೊಂಟ** 'ಸೊಟ್ಟ' ನೋ.

**ಚೊಂತತಟಾಕ** (ನಾ). ಒಂದು ಕೊಳದ ಹೆಸರು: ಚೊನ್ತ ತಟ(ಟಾ)ಕಮಂ ವಟವೃಕ್ಷಮು (ಇಆ. VIII, ೨೧೪-೩೭; ಸು. 10ನೆಯ ಶತ).

[ ಚೊಂತ$_0$ + ತಟಾಕ ]

**ಚೊಂದಕಪ್ಪೆ** (ನಾ). ಬಾಲದ ಕಪ್ಪೆ; ಗೊದಮಟ್ಟೆ: ಚೊಂದಕಪ್ಪೆ ಇಲ್ಲವೆ ಬಾಲಕಪ್ಪೆಗಳು ತಮ್ಮ ತಮ್ಮ ಅಂಗಿಯನ್ನು ಕಳಚಿ ಕಪ್ಪೆಯಾಗುವುವು (ಬಾಲಪ್ರ. III, ೧೩೨೦). [ ←ತುಳು. ತೊಂದಪ್ಪೆ ]

**ಚೊಂಬು** 'ಚೆಂಬು$_1$' ನೋ.

**ಚೊಂಯ್** (ನಾ). ಒಂದು ಅನುಕರಣ ಪದ: ಚೊಂಯ್ ಚೊಂಯ್ ಅನ್ನೋ ಸದ್ದು ಎಣಿಸುತ್ತ . . . ಕೂತಿರುತ್ತಾರೆ ಆರೇಳು ಮಂದಿ (ಚಂಗೂಲಿ. ೧೩೬).

**ಚೊಕ್**(ನಾ). ಒಂದು ಅನುಕರಣ ಶಬ್ದ: ರ್ಘೂಟ್ಟೆಂಬ ಝುಮ್ಮೆಂಬ ಚಕ್ಕೆಂಬ ಚೊ[ಪಾಠಾಂ. ಘೊ]ಕ್ಕೆಂಬ . . . ಕೂರಸಿಗಳುರವಣೆಯ ದನಿಯುಡಸುತಂ ಪುಟ್ಟೆ (ಇಹರ. ಹ. ೧೩೯-೭).

**ಚೊಕ್ಕ, ಚೊಕ್ಕು$_2$, ಚೋಖು** (ಗು). ೧. ಶುದ್ಧವಾದ: ಸ್ವಚ್ಛವಾದ: ಸಕ್ಕರೆ ಬೆರೆಸಿದ ಚೊಕ್ಕ ಪಾನಕಕಿನ್ನು ಮಿಕ್ಕಿ ಮೆರೆಯುತಲಿದೆ ರಕ್ಕಸಾರಿಯ ಧ್ಯಾನ (ಜಗದಾ. ೧೦೧). 'ಚೊಕ್ಕಚಿನ್ನ' ಪರಾ. (ನಾ). ೨. ಸುಂದರವಾದುದು; ಮನೋಹರವಾದುದು: "ನಿಗರ, ನೆಟ್ಟೆ, ಕಿನೆ, ಚೊಕ್ಕಳಿಕೆ, ಚೊಕ್ಕ . . . ಕಣ್ಗೆವಂದುದು, ಪರಿವಡೆದುದು – ಈ ೧೪ ಮನೋಹರಂ" (ಕಶಸಾ. ೧೧-೨೧೧); "ಚೊಕ್ಕವೆನಲೊಕ್ಕಳ್ತು" (ಕರ್ಣಾನಿ. ೧೫): ಒಕ್ಕಲಿಗಂ ಚೊಕ್ಕೆಲೆಗಳಂ ತಂದು ಪೂಟ್ದಿರ್ದ ಕರಗದ ನೀರಂ ಕಟ್ಟಿ ದೋಗರದ ಮೊಟ್ಟೆಯಂ ತೆಗದು (ಪುಣ್ಯಾಸ್ರ. ೧೨-೧೬ ವ): ಸುಗಂಧದ ಪುಷ್ಪಸಮೂಹದ ಮಾಲೆಯಿಂ ಚೊಕ್ಕವಾದ ಮೇಲ್ಕಟ್ಟಿಸೆವುತಿರಲಾಗಿ (ಮನೋವಿ. ೧-೨೬ ಟೀಕು). ೩. ಸ್ವಚ್ಛವಾದುದು; ಶುದ್ಧವಾದುದು; ಕಲಂಕವಿಲ್ಲದುದು; ದೋಷರಹಿತವಾದುದು: ಈ ಪಂಥದವರು ಚೊಕ್ಕಾದ ಮರಾಠಿಯಲ್ಲಿ ವಿಪುಲಸಾಹಿತ್ಯವನ್ನು . . . ನಿರ್ಮಿಸುತ್ತಾ ಬಂದಿದ್ದಾರೆ (ಮಸಾಹಿ. ೧೦). ೪. ಉತ್ತಮನಾದವನು: ಶ್ರೇಷ್ಠನಾದವನು; ದೋಷರಹಿತನಾದವನು: ಯಜನ ಯಾಜನವಧ್ಯಯನಾಧ್ಯಾಪನ . . . ಮಾಡುವ ಚೊಕ್ಕ ದ್ವಿಜಮಹಾರಾಜರೊಪ್ಪಿದರು (ಮೋಹತ. ३-३೮): ಚೋದ್ಯಪುರುಷನೆ ಚೊಕ್ಕನೆ ಜಯ ಭವರೋಗವೈದ್ಯ ಚಿದಂಬರಪುರುಷ (ಭರಜ. ೬೪-೧೦೮); ಅಕ್ಕನ ರೂಪಿಗೆ ತಕ್ಕ ಚೆನ್ನಿಗನಿವ ಚೊಕ್ಕನಾದೊಡೆ ವೀಣೆಯಲಿ ಸಕ್ಕರೆ ಪಾಲೊಳು ಬೆರೆದಂದವೆಂದು (ನಾಗಕು. ೧೨-೮೫). ೫. ಪರಿಶುದ್ಧತೆ; ಸ್ವಚ್ಛತೆ. ಚೊಕ್ಕು$_2$: ೩. ಕಳವು ಆಗ್ಯಾವೇನೋ ಅಂತ ಲೆಖ್ಖಪತ್ರದ ಕಾಗದಾ ತಗದು ನೋಡತೇನಿ, ಲೆಖ್ಖ ಎಲ್ಲಾ ಚೊಕ್ಕು (ಗಂಮಾಯಿ. ೧೩೮). 'ಚೊಕ್ಕುತನ' ಪರಾ. ೬. ಸೌಂದರ್ಯ; ಚೆಲುವು: ಅಕ್ಕನಾ ಗಾಂಧಾರಿ ವಿವಹಕೆ ತೆಕ್ಕೆಯೊಳಗೈದಿರ್ದ ಭಾವನ ಚೊಕ್ಕ ನೋಡೀತನಿಗೆ ಬೇಡಿದರಮ್ಮ ನಿನ್ನುವನು (ಜಿನಭಾ. ४-೧೮). ಚೋಖು: ೩. ಆಚಾರ್ಯರು . . . ಎಷ್ಟು ಚೋಖಾಗಿ ಪಾಲು ಮಾಡಿಟ್ಟರು. ಇದಕ್ಕನಬೇಕು ನ್ಯಾಯ ಪಕ್ಷಪಾತಿ ಅಂತ! (ಸಮುಜೀ. ೧೮೧).

ಚೊಕ್ಕಮಾಡು=ಶುದ್ಧಮಾಡು; ಸ್ವಚ್ಛಮಾಡು: ನಾವೇ ಬೀಗ ತೆಗೆದು ಒಳಗೆಲ್ಲ ಗುಡಿಸಿ ಚೊಕ್ಕಮಾಡ್ತೇವೆ (ರಂಗಕ. ೩೦).

[ ದೇ.॥ ತಮಿ. ಚೊಕ್ಕ, ಚೊಕ್ಕು; ಮಲ. ಚೊಕ್ಕ, ಚೊಜ್ಜು; ತುಳು.ತೆಲು. ಚೊಕ್ಕ. / ಪ್ರಾ. ಚೋಕ್ಖ. / ಸಂ. ಚೋಕ್ಷ ]

**ಚೊಕ್ಕಕಾಲ** (ನಾ). ಉತ್ತಮವಾದ ಕಾಲ; ಸುಖದ ಕಾಲ: ಸೊಕ್ಕೇಱುತಿದ್ದುದು ಸುಖತೃಪ್ತಿ ತೋಱುವ ಚೊಕ್ಕಕಾಲವನೇನನೆಂಬೆ(ಭರಜ. ४೧-೮೭).

[ ಚೊಕ್ಕ + ಕಾಲ ]

**ಚೊಕ್ಕಚಿನ್ನ** (ನಾ). ಶುದ್ಧವಾದ ಚಿನ್ನ; ಅಪ್ಪಟ ಬಂಗಾರ; ಅಪರಂಜಿ: ಚೆನ್ನಾಗಿ ಪುಳಿದೊಡೆದೊಪ್ಪವಿಕ್ಕಿದ ಚೊಕ್ಕಚಿನ್ನದ ಪತುಮೆಗಳಂತೆ (ಮೋಹತ. ೧೮-೩೭). [ ಚೊಕ್ಕ + ಚಿನ್ನ$_{1}$ ]

**ಚೊಕ್ಕಟ, ಚೊಕ್ಕಟ್ಟ, ಚೊಕ್ಕಣ, ಚೊಕ್ಕಳ** (ನಾ). ೧. ಅಂದ; ಸೊಬಗು; ಸೌಂದರ್ಯ: "ಗರಗರಿಕೆ ಚೊಕ್ಕಟಂ" (ಚತುನಿ.೯೦); "ಸುಭಗತೆಗೆ ಚೊಕ್ಕಟಂ ಬುದಕ್ಕುಂ" (ಕಶರ. ೩೭). ೨. ಸ್ವಚ್ಛವಾದುದಂ ; ಪರಿಶುದ್ಧವಾದುದುಂ : ಚೊಕ್ಕಟಹ ಸುರಧೇನುವಿಂಗೆಣೆಯೆ ಪಾರಿಜಾತಕ್ಕೆಣೆಯೆ (ಷತಿಲ. ೩-೫). ೩. ಕುಂದಿಲ್ಲದಿರುವಿಕೆ ; ಅಚ್ಚುಕಟ್ಟು ; ಓರಣ : ಮಕ್ಕಳನು ಬಯಸಿ ದೈವದ ಮುಂದೆ ನೋಂಪಿಯು ಚೊಕ್ಕಟದಿ ಮಾಡಿತಿಲ್ಲ (ಸಮ್ಯಕಾ. ೫-೧೫); ಚೊಕ್ಕಟವಾಗಿ ರಾಜ್ಯವನಾಳು ದ್ವಾರಕಿ ಹೊಕ್ಕು ಬರುವೆನು ಬೇಗದಲಿ (ಮೋಹತ.೧೩-೮); ಚರಲಿಂಗಕೊಲವಿನಿಂ ಚೊಕ್ಕಟದೆ ಮಾಡಿಸಿದ ಪರಿಪರಿಯ ಪರಿಕರಂಗಳನಿರದೆ ತರಿಸಿ (ಚಬಪು. ೬೨-೧೧) : ಅಕ್ಕಱೆೊಳಗೆ ಬಹು ಬಗೆಯ ಧಾನ್ಯಗಳನು ಚೊಕ್ಕಟವಾಗಿಯೆ ಬೆಳೆದು (ಕಂನವಿ. ೬-೫೨). ಚೊಕ್ಕಟ್ಟ: ೨. ಕಿಟ್ಟಗಟ್ಟಿದ ಕಬ್ಬಿಣಕ್ಕೆ ಪುಟವ ಹಾಕಿಸೊ ಚೊಕ್ಕಟ್ಟ[ಪಾಠಾಂ.ಉತ್ಕೃಷ್ಟ] ಬಂಗಾರದೊಳು ಎನ್ನ ಸೇರಿಸೊ (ಪುರಂದ. ೨-೨೩-೩). ಚೊಕ್ಕಣ: ೧. ತನುವಿಂ ನರುವಂ ದೆಸೆಗಳ್ಗೆ ಕೊಟ್ಟು ಸಂಪನ್ನತೆವೆತ್ತು ನೆಟ್ಟಗೊಳೆ ಚೊಕ್ಕಣ ಮಾದೆಣೆಗಂಟು ಕಟ್ಟು (ಕಮಮಾ. ೧೫-೩೯). ಚೊಕ್ಕಳ: ೧. ತೊಳಪ್ಪ ಬೆರಲುಂಗುರಮಿಂಚೆರವಿಾವ ನೇವುರಂ ಚೊಕ್ಕಳವಪ್ಪ ಚೆಲ್ವನೊಳಕೊಂಡಿರೆ (ಕಬ್ಬಿಕಾ. ೩೦೪); ಚೊಕ್ಕಳಮಪ್ಪಳ ರೂಪಿಂ ರತಿಯಂ ಮಿಕ್ಕಳಂ (ಉದ್ಭದೇ. ೨-೪೮) : ಇಕ್ಕೆಲದರಸುಗಳೋಳಿ ಸಭಾಲಕ್ಷ್ಮಿಯಿಕ್ಕಿದ ಕಂಠಿಕೆಯೆನಲು ಚೊಕ್ಕಳವಾಗೆ (ನಾ ಗ ಕು. ೩೨-೧೦೮). ೨. ಚೊಕ್ಕಳವಮಣಿಯೋಲೆವೆಳಗು ಸೊಗಸಿದುದವಳಾ (ಉದ್ಭಟ. ೫-೪೫) : ಚೊಕ್ಕಳದ ನೀರ್ದಾಣವುಂ ಬನವುಂ ದೇಗುಲವುಂ ಕಂಡು (ರಾಮಾಶ್ವ. ೫೪-೨೭): ಮುಕ್ಕಣ್ಣನಡಿ ಗೊಪ್ಪಿಸುತ್ತ ತದ್ದೇಹಮಂ ಚೊಕ್ಕಳವ ಮಾಡಿದಂ (ಲಿಂಗಪು. ೬-೩೧). ೪. (ಅರಿವಿನಿಂದ)ಪರಿಶುದ್ಧನಾದವನಂ; ತಿಳಿವು ಪಡೆದವನಂ: ಚೊಕ್ಕಳ ನೆನಿಪಂ ನಿಜವಧು ಮಕ್ಕಳ್ಪಡೆದಂದು ಭೋಗಿಸಲ್ ಪೇಸಿಯೆ ಪಿಂತಿಕ್ಕುವ ತೆಱದಿಂದಂ ಪಿಂತಿಕ್ಕಿದನಾ ರಾಜ್ಯವನಿತೆಯುಂ ತತ್ತ್ವವಿದಂ(ಪಾರ್ಶ್ವಪು. ೪-೯೧). [ <ಚೊಕ್ಕ./ತುಳು. ತೆಲು. ಚೊಕ್ಕಟ./ಮರಾ. ಚೋಖಟ, ಚೋಖಟಾ ]

**ಚೊಕ್ಕಟಂಬಡೆ** (ಕ್ರಿ). ಸೊಗಸಾಗು; ಅಚ್ಚುಕಟ್ಟಾಗು: ಚೊಕ್ಕಟಂಬಡೆದ ಸಂಭಾರಮಂ ಬಗೆಯನಱೆದೊಡವೆರಸಿ ಕಲಸಿ (ಸೂಪಶಾ. ೪-೩). [ ಚೊಕ್ಕಟ + ಪಡೆ$_{1}$ ]

**ಚೊಕ್ಕಟಗೊಳಿಸು** (ಕ್ರಿ). ಸ್ವಚ್ಛಮಾಡಂ: ಮಿಕ್ಕ ಮಾಂಸವ ಬಲು ಕೈಗೆಲಸ ಗಳಿಂದೆ ಚೊಕ್ಕಟಗೊಳಿಸಿ . . . ರಕ್ಕಸರಾಯುಗಾತಿಥ್ಯವ ಗೆಯ್ದಳು (ಮೋಹತ. ೧೧-೪೮). [ ಚೊಕ್ಕಟ + ಕೊಳ್$_{1}$ + – ಇಸು$_{3}$ ]

**ಚೊಕ್ಕಟ್ಟ** 'ಚೊಕ್ಕಟ' ನೋ.

**ಚೊಕ್ಕಣ** 'ಚೊಕ್ಕಟ' ನೋ.

**ಚೊಕ್ಕಣಿಕೆ**(ನಾ). ಒಂದು ಬಗೆಯ ಮೂಲಿಕೆ: "ತುಲಪೋಟಃ–ಚೊಕ್ಕಣಿಕೆ, ಆವರೆ, ಬಲುಗುಣಿಕೆ, ಎಲಚಿ, ನೆಲದಾಳು" (ಓಷಧಿ. ೬೫): ಸಣಬಿನ ವಿಷಕ್ಕೆ ಕುಡು ಚೊಕ್ಕಣಿಕೆಯ ಕೂಡಮೃತಲತೆಯುಂ (ಖಮದ. ೨-೪೯). [ ? ]

**ಚೊಕ್ಕತನ, ಚೊಕ್ಕುತನ** (ನಾ). ಅಚ್ಚುಕಟ್ಟುತನ ; ಒಪ್ಪ ; ಓರಣ : ಆಕೆ ಚೊಕ್ಕತನದಿಂದ ಸಂಸಾರ ಮಾಡಿಕೊಂಡು ಇದ್ದಾಳೆ (ರೂಢಿ). ಚೊಕ್ಕುತನ: ಮಾದ್ರಿಯ ಒರಲಿಕೆ 'ಕೆಟ್ಟೆಂ' ಎಂಬುದರಿಂದ ಮೊದ ಲಾದುದೂ ಮುಂದೆ ಬರುವ ಓಕಾರದ ಅಂತ್ಯಪ್ರಯೋಗವೂ ಪಂಪನ ದೇಸಿಯ ಚೊಕ್ಕುತನವನ್ನು ಒಕ್ಕಣಿಸುತ್ತವೆ (ತವನಿ. ೬೪); ಕೆಲಸದ ಚೊಕ್ಕು ತನದಿಂದ ಆಗದಿದ್ದರೆ ಇನ್ನಾವುದಾದರೂ ರೀತಿಯಿಂದ ಆದರೂ ಈ ಬೈಗಳು ತಪ್ಪಿಸಿಕೊಳ್ಳಬೇಕು (ಗಂಮಾಯಿ. ೨೭). [ ಚೊಕ್ಕ + – ತನ ]

**ಚೊಕ್ಕದಂಬುಲ** (ನಾ). ಉತ್ತಮವಾದ ತಾಂಬೂಲ ; ರುಚಿಕರವಾದ ವೀಳೆಯಂ: ಎತ್ತಿ ಪೊನ್ನ ಬಟ್ಟಲೊಳೆಱೆದೀವ ಕುಂಕುಮರಸಂ ಹಿಡಿಹಾರದಿ ನೀವ ಚೊಕ್ಕದಂಬುಲಮೆಸೆವನ್ನೆಗಂ ಮೆಱೆದಳೆಂದು ವಿಲಾಸಿನಿ ತದ್ವಿಲಾಸಮಂ (ಚಂದ್ರಪು. ೮-೪೬). [ ಚೊಕ್ಕ + ತಂಬುಲ ]

**ಚೊಕ್ಕನೆ** (ಅ). ಚೆನ್ನಾಗಿ ; ಅಂದವಾಗಿ : ಚೊಕ್ಕನೆಸೆವ ಜವ್ವನಾಯುಷ್ಯ ಭೋಗಗಳಕ್ಕ ವ್ಯರ್ಥಗಳೆಂದಳವಳು (ಚಂಪ್ರಸಾಂ. ೩-೧೦೪): ಸೊಕ್ಕುಜವ್ವನೆ ಯರ ಮೊತ್ತದೊಳು . . . ನೃಪತಿ ಚೊಕ್ಕನಾನಂದಿಸುತಿರ್ದನು ಮದಗಜ ಪೊಕ್ಕು ನೀರಾಟವಾಡುವೊಲು (ಭರಚ. ೭೫-೭೭).

ಚೊಕ್ಕಚೊಕ್ಕನೆ (ದ್ವಿರುಕ್ತಿ) : ಚೊಕ್ಕಚೊಕ್ಕನೆ ತಾನಗಳ ತಂದು ಕೊರಳಲ್ಲಿ ಜಕ್ಕುಲಿಸಿದರು ಜಾಣೆಯರು (ಭರಚ. ೫-೬೨). [ ಚೊಕ್ಕ + – ಅನೆ$_{1}$ ]

**ಚೊಕ್ಕಬಂಗಾರ, ಚೊಕ್ಕುಬಂಗಾರ** (ನಾ). = ಚೊಕ್ಕಚಿನ್ನ : ಚೊಕ್ಕ ಬಂಗಾರವೇ ಬೇಕೆಂಬ ಹಟವೇಕೆ ನಿನಗೆ (ನೆಲಮು. ೨೭-೫). ಚೊಕ್ಕು ಬಂಗಾರ : ಇಲ್ಲಿ ಬಂದ ಹರಟೆಗಳಲ್ಲಿ ಎಲ್ಲವೂ ಹರಟೆಯ ಹದಿನಾರಾಣೆ ಚೊಕ್ಕುಬಂಗಾರವೇ ಆಗಿರಲಿಕ್ಕಿಲ್ಲ (ಮುಂಗಾಪು. ೭). [ಚೊಕ್ಕ + ಬಂಗಾರ]

**ಚೊಕ್ಕಬೆಳ್ಳಿ** 'ಚೊಕ್ಕವೆಳ್ಳಿ' ನೋ.

**ಚೊಕ್ಕಭೋಜನ** (ನಾ). ೧. ಸೊಗಸಾದ ಊಟ. ೨. ಮಾಂಸವಿಲ್ಲದ ಆಹಾರ ; ಸಸ್ಯಾಹಾರ (ಎಸಮ್ಮ. II, ೧೭). [ ಚೊಕ್ಕ + ಭೋಜನ ]

**ಚೊಕ್ಕಮಾತು** 'ಚೊಕ್ಕವಾತು' ನೋ.

**ಚೊಕ್ಕಮುತ್ತು** (ನಾ). ಶ್ರೇಷ್ಠವಾದ ಮುತ್ತು ; ಕುಂದಿಲ್ಲದ ಮುತ್ತು : ಅರಳ ಕುಲಕಂ ಬೈತಲೆಯ ಚೊಕ್ಕಮುತ್ತೆನಿಪ ಮಲ್ಲಿಗೆಗಳೆಂ ಬಿರಿದುವೋ (ಚಬಪು. ೪೫-೧೬). [ ಚೊಕ್ಕ + ಮುತ್ತು$_{5}$ ]

**ಚೊಕ್ಕಯ್ಯ** (ನಾ). ಒಬ್ಬಾತನ ಹೆಸರಂ : ಚೊಕ್ಕಯ್ಯಙ್ಗಂ ಆಚಬ್ಬೆಗಂ ಪುಟ್ಟಿದಂ ಬಿಕ್ಕಿಯಣಂ (ಎಕ. XII, ಶಿರಾ. ೩೫-೫ ; 948). [ ಚೊಕ್ಕ$_{0}$ + ಅಯ್ಯ$_{1}$ ]

**ಚೊಕ್ಕರೆಯ** (ನಾ). ೧. ಚೊಕ್ಕ ಹರೆಯಂ ; ಒಳ್ಳೆಯ ಪ್ರಾಯಂ. ೨. ಚೊಕ್ಕಹರೆಯಂವುಳ್ಳವನಂ ; ಏರುಜವ್ವನಿಗ : ವರ ವರೂಥದಿ ಸ್ಥಾಣು ಗಿರಿಜೆಯರಿರವಿನೊಳಗೊಪ್ಪಿರ್ದನವ ಚೊಕ್ಕರೆಯನೀ ಬ್ರಾಹ್ಮಣಗೆ ಮುನ್ನಾ ಚರಣೆ ಫಲ ವದಗೀ ದೊರೆದಳಾಹಾ ಜಾತಿವಾಜಿಯು ಕುರುಡನಿಗೆ ಸಫಲಾದ ವೋಲ್ (ಜಿನಭಾ. ೨೧-೨೨). [ ಚೊಕ್ಕ + ಹರೆಯ (<ಪರಯ) ]

**ಚೊಕ್ಕವಾತು, ಚೊಕ್ಕಮಾತು** (ನಾ). ಅಚ್ಚುಕಟ್ಟಾದ ಮಾತು ; ಜಾಣ್ಮೆಯಂ ನುಡಿ : ಬಿಡುಮುತ್ತಿಗೆಣೆಯಹ ಚೊಕ್ಕವಾತುಗಳನು ನುಡಿವು ತಿರ್ದುದು ತಾನೀಗ ಕಡುಚಿಂತೆವಡೆದಂದವೇನು (ನಾಗಕು. ೩-೦೦೫). ಚೊಕ್ಕಮಾತು: ಅಕ್ಕ ನಿನ್ನೀ ನುಡಿ ನನ್ನ ಚಿತ್ತಕೆ ಬಾರದಕ್ಕಟ ಬಂದರು ಸುರೆನೆ ಪಕ್ಕಿಗೇತಕೆ ಬಹುದೀ ಜಾಣ್ಮೆಯೆಂದುದು ಚೊಕ್ಕಮಾತಿನ ರಾಜಕೀರ (ಭರಚ. ೬-೯೯). [ ಚೊಕ್ಕ + ಮಾತು$_{1}$ ]

**ಚೊಕ್ಕವೆಳ್ಳಿ, ಚೊಕ್ಕಬೆಳ್ಳಿ** (ನಾ). ಶುದ್ಧವಾದ ಬೆಳ್ಳಿ : ದಿವಿಜವರನೀಶ ನೊರ್ವನೇ ಪತಿಯೆಂದು ಮೇದಿನಿಗಱೆಪೆ ಚೊಕ್ಕವೆಳ್ಳಿಯೊಳ್ ಸಮೆದು ನಭದಲ್ಲಿಯೊಂದಱ ಲೆಕ್ಕಮಂ ಸಾದರದಿನಮರೆ ಪತ್ತಿಸಿದನೋ . . . ಎನಲ್ಕಾಗಳರೆವೆಱೆಯೊಗೆದುದು (ಪದ್ಮರಾ. ೮-೭೩) ; ಚಾರುಮುದ್ರಾಪುರದ ಚೊಕ್ಕವೆಳ್ಳಿಯ ಕೋಂಟೆ (ಏಕೋಪು. ೪-೩). ಚೊಕ್ಕಬೆಳ್ಳಿ : ಅದು ಕಂದು ಬೆಳ್ಳಿಯದಲ್ಲ ; ಚೊಕ್ಕ ಬೆಳ್ಳಿಯದು (ರೂಢಿ). [ ಚೊಕ್ಕ + ಬೆಳ್ಳಿ ]

**ಚೊಕ್ಕಳ** 'ಚೊಕ್ಕಟ' ನೋ.

**ಚೊಕ್ಕಳಕಾತಿ** (ನಾ). ಅಣೆಗಾತಿ ; ಓರಣಗಾತಿ : ತಕ್ಕೈಸಿ ಬಾಯ್ಗೆ ತಂಬುಲವಾ ಇಕ್ಕಿದನೊಡನೆ ಥೂಥೂಯೆನುತುಗುಳ್ದುದು ಚೊಕ್ಕಳಕಾತಿ ಭಾಪೆಂದ (ಭರಚ. ೪೩-೬೩). [ ಚೊಕ್ಕಳ (<ಚೊಕ್ಕಟ) + – ಕಾತಿ$_{5}$ ]

**ಚೊಕ್ಕಳತನ** (ನಾ).=ಚೊಕ್ಕತನ : ಚೊಕ್ಕಳತನದಿಂ ಮಿಕ್ಕಲರ್ಗೆ ಮೊಗಸದಿರುಳುಣ್ಣದೊಡಲ ಪಸಿವಿಂಗೆ ಪಾಯ್ದು . . . ಬೇಸರವಾಗದೊಸಗೆ ಗಂಪನುಣ್ಬ ಬಾಕುಳಿದುಂಬಿಗಳ(ಲೀಲಾವ.೩-೨೧೪); ಚೊಕ್ಕಳತನದಿಂ ಸವಿದಂ ಮೊಕ್ಕಳಂ (ವೃಷವಿ. ೪೦-೭೫). [ ಚೊಕ್ಕಳ(<ಚೊಕ್ಕಟ) + – ತನ ]

**ಚೊಕ್ಕಳವೆಳಗು** (ನಾ). ಶುಭ್ರವಾದ ಬೆಳಕು ; ಬೆಳುದಿಂಗಳು : ಚೊಕ್ಕಳವೆಳಗಾವರಿಸುವವನಿತಳವಕ್ಕಱುಗೊಂಬ ವಿರಹಿಗಳ್ ನೆಯ್ದಿಲ ತಕ್ಕನುದಯಗಿರಿಶಿಖರವುನೇಱಲ್ ಪಿರಿದುಂ ಸೊಗಸಿದುದು (ಜಯುಕಾ. ೧೧-೫೯).

[ ಚೊಕ್ಕಳ (<ಚೊಕ್ಕಟ) + ಬೆಳಗು$_2$ ]

**ಚೊಕ್ಕಳಿಕೆ, ಚೊಕ್ಕಳಿಕ್ಕೆ** (ನಾ). ೧. ಸೊಗಸು ; ಚೆಂದ ; ಅಚ್ಚುಕಟ್ಟು ; ಮನೋಹರತೆ : “ ನಿಗರ, ನೆಟ್ಟೆ, ಕೆನೆ, ಚೊಕ್ಕಳಿಕೆ, ಚೊಕ್ಕ . . . ಕಣ್ಗೆ ವಂದುದು, ಪರಿವಡೆದುದು ಈ ೧೪ ಮನೋಹರಂ ”(ಕಶಸಾ. ೧೧-೩೧೧): ಸಕ್ಕದಮುಂ ಮಱಗೊಳ್ಳದೆ ಚೊಕ್ಕಳಿಕೆಯಿನಚ್ಚಗನ್ನಡಂ ಬೇಟ್ಟರ ಕಯ್ವೊಕ್ಕ ನಿಧಿಯೆನಿಪಪಭ್ರಂಶಕ್ಕಂ ದೇಶೀಯು ಪದಕಮುಂಟು ಸಮಾಸಂ (ಶಮುದ. ೨೯೯) ; ಚೊಕ್ಕಳಿಕೆಯ ನವಚಂದ್ರಿಕೆಯೆನೆ ಹೃದಯಕ್ಕೆ ವಿಲಾಸಮನೀವುದು ಸತ್ಪ್ರಭುರಾಜನ ಸವಿಮಾತು (ಜಯುಕಾ. ೧-೩೪): ಉಳುಗಂ ಬಿತ್ತುತೆ ನಾಡೆ ಚೊಕ್ಕಳಿಕೆಯಿಂ ಸ್ವಚ್ಛಂದನಾಮೋದಮುಂ ತಳೆದೋರಂತೆಸೆದಿರ್ಪ ಸೂಳೆಯರ ಪೆರ್ಮೆಳಂಗಳಿಂದಂ (ವೀರವಿ. ೭-೯೪) ; ರಕ್ಕಸಮಾಣಂತಿಯರು ತಲೆಬುರುಡೆಯೊಳಕ್ಕಱು ಮಿಗೆ ಮೊಗೆಮೊಗೆದು ಲೆಕ್ಕವಿಲ್ಲದೆ ಬಿಸಿನೆತ್ತರ ಮಿಂದೊಂದು ಚೊಕ್ಕಳಿಕೆಯನೇನೆಂಬೆ (ನಾಗಕು. ೧೦-೧೨೫) ; ಉನ್ನತಕುಶಲನಲ್ಲವೆಂಬೊಡಂ ನೀನೀಗಳೆನ್ನ ಸವಿನುಡಿಯ ಚೊಕ್ಕಳಿಕೆಯಿಂ ತಿಳಿಯಿದಲ್ತೆನ್ನ ಸತ್ಪ್ರಾರ್ಥಿಗೇಳು (ಪಾಸೋಪು. ೭-೪೬) ; ಸಲ್ಲದ ನಿನ್ನಂಕದ ಬಿಂಕದ ಮೈಸಾಸದ ಸಡಗರದ ಬಿಡುನುಡಿಯ ಚೊಕ್ಕಳಿಕೆಯಿಂ ಒಲ್ಲದೆ ನಿಲ್ಲದೆ ಮರಲ್ವುದೆಂದಂ (ರಾಮಾಶ್ವ. ೯೦-೦೦). ೨. ಪ್ರಸಿದ್ಧಿ : “ ಚೊಕ್ಕಳಿಕೆ ಪ್ರಸಿದ್ಧದೊಳೆ ” (ಕರ್ಣಾನಿ. ೯೦). ಚೊಕ್ಕಳಿಕ್ಕೆ : ೨.ಅಂಗುಸರಾಯನ ಗಂಡುಬೀರಮುಂ ಕಂಡಿಸಿ ಚೊಕ್ಕಳಿಕ್ಕೆಯೊಡನೊಂದಿದ ಪಟ್ಟದ ಭೋಜರಾಜನಂ ಕೊಂಡನೆನಲ್ಕೆ ಚಂಡಿಸುವ ಗಂಡರದಾರ್ಗಳ ಚಾಮರಾಜನೊಳ್ (ಚಕವಿ. ೨-೭೫).

[ ಚೊಕ್ಕಳ (<ಚೊಕ್ಕಟ) + – ಇಕೆ ]

**ಚೊಕ್ಕಳಿಕೆವಡೆ** (ಕ್ರಿ). ಅಂದವನ್ನು ಹೊಂದು ; ಮನೋಹರವಾಗು : ಚಿಕ್ಕಹರೆಯದೊಳು ಚಿನ್ನದ ಬೊಂಬೆಯಂತೆ ಕಡು ಚೊಕ್ಕಳಿಕೆವಡೆದ ಚೆಲ್ವು (ಸಮ್ಯಕಾ. ೧೨-೨೭). [ ಚೊಕ್ಕಳಿಕೆ + ಪಡೆ$_1$ ]

**ಚೊಕ್ಕಳಿಕ್ಕೆ** ‘ಚೊಕ್ಕಳಿಕೆ’ ನೋ.

**ಚೊಕ್ಕಳೆ** (ನಾ). ಸೊಗಸಂಗಾತಿ ; ಚೆಲುವೆ : ಹಸನಹ ರೂಪು ತಕ್ಕ ಹರೆಯಂ ಕಡು ಚೊಕ್ಕಳೆ ಜಾಣೆ ಹಕ್ಕಿವೊಲ್ ಕೊಸರುವ ಲಾಗು ಕೂಡಿ ತಣಿವಿಲ್ಲದ ಬಾಕುಳಿ . . . ಬಸನದ ಬಿತ್ತೆನಿಪ್ಪಳೊಡಗೂಡಿದೊಡಲ್ಲದಲಂಪು ಪೋಪುದೇ (ಸೂಕ್ತಿಸು. ೮-೪೦೧). [ ಚೊಕ್ಕಳ + – ಎ$_2$ ]

**ಚೊಕ್ಕು$_1$** (ಕ್ರಿ). ಕುಗ್ಗು ; ಪರಿತಪಿಸು : ನೀನೆ ಬೇಡೆನಲ್ಸುರವಂದ್ಯ ನಕ್ಕುವಾಹನನಾಗು ತನಗೆನಲ್ಕೇಳಿ ತಲೆಗುಕ್ಕಿದಂ ಹೋ ಹೋ ಕೋಳ್ಪಿಡಿದ ತನ್ನನುಮಹಂಕಾರದಿಂ ಕೆಟ್ಟೆನೆಂದು ಚೊಕ್ಕಿದಂ ಬಳಿಕ ಹರುಷವ ತಾಳ್ದು ಮನದೊಳಗೆಯುಕ್ಕಿದಂ ಹರಿಪದಕೆ ತನುವನೀಡಾಡಿ ಜನ್ಮಕ್ಕೆ ಸಫಲವಿದಾಯ್ತು ನಿನ್ನ ಪೊತ್ತುದರಿಂದ ಸುಖಿಯಾದೆ ನಾನೆಂದನು(ತುರಂಗ. ೪-೩೪).

[ <ಸುಕುರ್$_1$ ? ]

**ಚೊಕ್ಕು$_2$** ‘ಚೊಕ್ಕ’ ನೋ.

**ಚೊಕ್ಕುತನ** ‘ಚೊಕ್ಕತನ’ ನೋ.

**ಚೊಕ್ಕುಬಂಗಾರ** ‘ಚೊಕ್ಕಬಂಗಾರ’ ನೋ.

**ಚೊಕ್ಕೆಯ, ಚೊಕ್ಕೆಹ, ಜೊಕ್ಕೆಯ** (ನಾ). ೧. ಬಿನ್ನಾಣ; ಚಾತುರ್ಯ : ಪ್ರಥಮಾಲಿಂಗನದೊಳೆ ಸಫಲಮಾಗೆ ಮತ್ತೆ ಮತ್ತುಜ್ವಲಿಸುವ ಚೊಕ್ಕೆ[ಪಾಠಾಂ. ಬೊಬ್ಬೆ]ಯದನುಭವಕ್ಕೆ ಸಿರಿಮಂಚಂ ಸುಖದುಕ್ಕಡಮಾಗೆ (ನಂಬಿರ. ೧೦-೯೮). ೨. ಮಲ್ಲಯುದ್ಧದಲ್ಲಿ ಒಂದು ಪಟ್ಟು : ಕಡಂಗುವ ಮಲ್ಲನನಡಸಿ ತಿವಿದು ಕಡುಪಿಂ ಕೆಡಪಿ ಕೊಪ್ಪರದೊಳ್ ಕುಮ್ಮಿ ಮಂಡಿಯೊಳ್ ಮಿದಿದು ಕುದಿದು ಸದೆದು ಸಣ್ಣಿಸುವ ಚೊಕ್ಕೆಯದಾಸೆಗೆ ಪೊಕ್ಕ ಮಲ್ಲನನಿಕ್ಕಿ ಮೆಟ್ಟಿ (೧ರಿಕ. ೨-೧೦೫ ವ): ಇಕ್ಕಿದರು ಗಳಹತ್ತದಲಿ ಸಲೆ ಮಿಕ್ಕು ಸತ್ರಾಣದಲಿ ಮಿಗೆ ಸರಿಪೊಕ್ಕು ಹಿಡಿದರು ಬಿನ್ನಣದ ಚೊ[ಪಾಠಾಂ. ಜೊ]ಕ್ಕೆಯದ ಜೋಡಿಯಲಿ (ಕುವ್ಯಾಸ. ೨-೯೬). ೩. ಸಂದೇಹ ; ಅನುಮಾನ (?): ಅವರವರೆಂದಂತೆ ಎನ್ನದೆ ತನ್ನಿರವ ಭಿನ್ನವ ಮಾಡದೆ ಮೂಢಸಾಧನೆಯವನೊಡನೆ ಕಾಡುವ ತೆಱದಂತೆ ಅವನಿಗೆ ಚೊಕ್ಕೆಯ [ಪಾಠಾಂ.ಹ] ಇವನಿಗೆ ನಿಶ್ಚಯ ಉಭಯವ ನೀವೇ ಬಲ್ಲಿರಿ (ಪ್ರಭುಲಿಮಾ. ೧೪೯-೫೬೪). ಚೊಕ್ಕೆಹ: ೧. ಸೊಕ್ಕುಗಲೆಗಳ ಸೋಲಕ್ಕೆ ಮೈಗೊಟ್ಟು ಮೇಲಿಕ್ಕಿ ಲಲ್ಲೈಪ ಭಾವಕಿಯಾ ಚೊಕ್ಕೆಹದನುಭಾವದಕ್ಕರಗಳಿಗೆ ಸಂಯುಕ್ತಾಗಿ ತೋರ್ಪುದೀ ಕಾವ್ಯ(ಭ್ರರವೇ. ೧-೧೯). ೩. ಮೇಲಿನ ‘ಪ್ರೋಳಿಮಾ’ ಪ್ರಯೋಗದ ಪಾಠಾಂತರವನ್ನು ನೋಡಿ. ೪. ಯುಕ್ತಿ : ಭಕ್ತನಾಗಿದ್ದಲ್ಲಿ ಉಭಯದ ಮಾರ್ಗವ ಗುರುವಿನ ಚೊಕ್ಕೆಹವ [ಪಾಠಾಂ. ಚೊಕ್ಕವಹ] ಆ ಜಂಗಮದ ಅಪೇಕ್ಷೆಯ ಇದಿರಿಟ್ಟು (ಅಱಮಾ. ೦೨೯-೯೨); ವಾದಿಯ ಚೊಕ್ಕೆಯ ವಾಗ್ಮಿಯ ಚೇತನ (ಡಬೊಮ್ಮ. ೨೩೯-೪೯). ಜೊಕ್ಕೆಯ: ೨. ಗಾಯವುಂಟೇ ತೋಱು ನಿನಗಡುಪಾಯೊ ಬಿಡು ಜೊಕ್ಕೆಯವನೆನುತಲಿ (ಕುವ್ಯಾಅ. ೬-೩೧) ; ಜೊಕ್ಕೆಯದೊಳಗೆ ಮುಂದಲೆವಿಡಿದು (ಮ್ಯರಾಕಾ. ೪-೭೬).

**ಚೊಕ್ಕೆಯತನ** (ನಾ). ಚಾತುರ್ಯ ; ಜಾಣ್ಮೆ : “ ಚೊಕ್ಕೆಯತನಮೆ ನಾಡೆ ಬಿನ್ನಾಣಮೆಂಬರ್ ” (ಭಾರನಿ. ೬೪). [ ಚೊಕ್ಕೆಯ + – ತನ ]

**ಚೊಕ್ಕೆಹ** ‘ಚೊಕ್ಕೆಯಂ’ ನೋ.

**ಚೊಗಚೆ** ‘ಚಗಚೆ’ ನೋ.

**ಚೊಗರು$_1$** ‘ತೊವಱು’ ನೋ.

**ಚೊಗರು$_2$** ‘ತೊಗರು$_1$’ ನೋ.

**ಚೊಗೆ, ಚೋಗೆ** (ನಾ). ಪಾದದವರೆಗೆ ಇರುವ ಉದ್ದವಾದ ಅಂಗಿ ; ನಿಲುವಂಗಿ : ಕಾಗಿನ ಚೊಗೆಯಾಂತು ಬಲರಾಮದೇವನಂತಾಗಿರ್ಪ ಜನರ ಕಣ್ಮನಕೆ (ಮೋಹತ. ೧೭-೭೬) ; ಮೃಗಶತ್ರುಚ್ಚರ್ಮದಿಂ ಮಾಡಿದ ಚೊಗೆ ಮೆರೆಯಲ್ (ಹಾಲಾಸ್ಯ. ೪-೨-೩೨) ; ಸೊಗಸಿಂದ ನಿದ್ರೆಗೈದಿಂದುಹಾಸನು ತೊಟ್ಟ ಚೊಗೆಯ ಕುಪ್ಪಸದ ಕೊನೆಯಲ್ಲಿ ಬಿಗಿದು ಕಟ್ಟಿರ್ದ ಪತ್ರಿಕೆಯನ್ನು ಮೆಲ್ಲನೆ ತೆಗೆದುಕೊಂಡಳು ಮಂತ್ರಿತನುಜೆ (ಚಂದ್ರಹಾ. ೩-೨೮): ಬಾಲ ಬಂಗಾರು ಚಿಲ್ ಪಟ್ಟೆದುಕೂಲ ಚೊಗೆಯಿಂ (ಷಟುಭಾ. ೧೯-೩). ಚೋಗೆ: ಉಟ್ಟ ಚಲ್ಲಣ ಜಟ್ಟಿಚೋಗೆ ಕುಲ್ಲಾಯಿಗಳಿಟ್ಟ ಕಸ್ತುರಿಬೊಟ್ಟು ಮೆಱೆವ ಕಟ್ಟಾಳುಗಳಂತೆ . . . ಇಟ್ಟಾಡಿದರು ತುಂಬಿ ಜಲವ (ಗೋಮಟೀ. ೧೭-೧೪೯). [ ←ಹಿಂ. ಮರಾ. ತುರ್ಕಿ, ಚೋಗಾ ]

**ಚೊಚ್ಚ** (ಗು). ಸ್ವಚ್ಛ ; ನಿರ್ಮಲ ; ಶುದ್ಧ : ಸುಧರ್ಮರೆಂಬ ದಿಗಂಬರರ ಪೊರ್ದಿ ಚೊಚ್ಚ ಧರ್ಮವ ಕೇಳ್ದು (ಸಾಳ್ವಭಾ. ೨೦-೭೬).

[ <ಸಂ. ಸ್ವಚ್ಛ ]

**ಚೊಚ್ಚನೆ** (ಗು). ಶುಭ್ರವರ್ಣದ ; ಸ್ವಚ್ಛವಾದ ; ಬಿಳುಪಾದ : ಮೃದುವಾಕ್ಯನಸ್ಸಕ್ಸ್ವರಂ ಸುದೃಷ್ಟಿ ಮೇಧಾವಿ ನಿಡಿಯನನಿಲಕಫಾತ್ಮಂ ಸದಯಂ ಚೊ [ಪಾಠಾಂ. ಕೆ]ಚ್ಚನೆ ಮೈ ಬಟ್ಟಿದನತಿಚಪಳಂ ಸಖಪ್ರಿಯಂ ಸಸಿಯೆನಿಕುಂ (ಜಾತಕಿ. ೨-೨೦). [ ಚೊಚ್ಚ + – ಅನೆ$_2$ (<–ಅನೆಯ್$_2$) ]

**ಚೊಚ್ಚಲ್** ‘ಚೊಚ್ಚಲ್’ ನೋ.

**ಚೊಚ್ಚಲು** ‘ಚೊಚ್ಚಲ್’ ನೋ.

**ಚೊಚ್ಚಿಲ್** ‘ಚೊಚ್ಚಲ್’ ನೋ.

**ಚೊಚ್ಚಿಲು** ‘ಚೊಚ್ಚಲ್’ ನೋ.

**ಚೊಚ್ಚುಲ್, ಚೊಚ್ಚಲ್, ಚೊಚ್ಚಲು, ಚೊಚ್ಚಿಲ್. ಚೊಚ್ಚಿಲು** (ನಾ). ೧. ಮೊದಲನೆಯ ಬಸಿರು: ಮೊದಲ ಸೂಲು: ಗೃಷ್ಟಿ. ಸಕೃತ್ಪ್ರಸೂತಾ-ಈ ೨ ಚೊಚ್ಚು[ಪಾಠಾಂ. ಚ್ಚ]ಲ ಮಣಿಕಂ (ಹಲಾಯು. ೪೬-೧೧೮). **ಚೊಚ್ಚಲ್:** ೧. ಚೊಚ್ಚಲ್ ಪೆಱುವಳಂತೆ ತೊಟಲುತ್ತುಂ (ಧರ್ಮಾಮೃ. ೧-೧೬೦). (ಗು). ೨. ಮೊತ್ತಮೊದಲನೆಯ; ಪ್ರಪ್ರಥಮ: ಪಟಯಿಸಿದ ಳ್ಕೊಂತಿ ತನ್ನ ಚೊಚ್ಚ[ಪಾಠಾಂ. ಚ್ಚಿ]ಲ ಮಗನಂ (ಗದಾಯು. ೧೦-೧೮); ಶಾರಿಕೆಯ ಚೊಚ್ಚಲ ಶಾಬಕಮೋದಿದಪ್ಪುದು (ಅರ್ಧನೇ. ೧-೯೪); ಸುಭುಜನುಂ ತನ್ನ ಚೊಚ್ಚಲ ಮಗಂಗೆ ಪಟ್ಟಮಂ ಕಟ್ಟಿ (ರಾಮಾಶ್ವ. ೯೯-೪). **ಚೊಚ್ಚಲು:** ೧. ಕರುವು ಚೊಚ್ಚಲು: ತೊರೆದ ಕೆಚ್ಚಲು (ಕಎಪು. ೨೦-೯): ಚೊಚ್ಚಲು ಬಸುರಿ ಉಡಿ ತುಂಬಿಸಿ ಕಳುಹಿಸಬೇಕು (ರೂಪಸಂ. ೧೬): ಗೌರಿ ಚೊಚ್ಚಲು ಬಾಣಂತಿ (ಮುಂಗಾಪು. ೨೩). ೨. ಹೊಚ್ಚ ಹೊಸ ಚೊಚ್ಚಲನು ಭವಕೆ ಕಾಯುತಿದ್ದೇನೆ (ಕೋಗಿಲೆ. ೪-೯೬): ರಾಘವಾಂಕನು ಗುರುವಿನ ಪಾದಕ್ಕೆ ಶರಣು ಮಾಡಿ ತನ್ನ ಅಚ್ಚುಮೆಚ್ಚಿನ ಚೊಚ್ಚಲು ಕೃತಿಯನ್ನು ಬೊಗಸೆಯಲ್ಲಿ ಹಿಡಿದು (ತುಂಗಭ. ೪೫). **ಚೊಚ್ಚಿಲ್:** ೧. ಹಲವು ಸೂಟಿಾಕಳು ವರೇಷ್ಟಿಕೆಯೆನಿಕ್ಕು ಚೊಚ್ಚಿಲದು ಗೃಷ್ಟಿಯೆನಿಕ್ಕು (ಮಂಗರಾ. ೫೪-೪). ೨. ನೀಮುಂ ನಿಮ್ಮ ಚೊಚ್ಚಿಲ ಮಗನಪ್ಪ ಸೂರ್ಯಸೂನುಮಂ ಸೂರ್ಯದಿನದಂದು ಕಂಡು (ಪಂಪಭಾ. ೯-೬೩ ವ); ಚೊಚ್ಚಿಲ ಕೂಸು ಮೊಲೆಯ ತೊಟ್ಟು ನುಂಗಿತ್ತು (ಕಲ್ಯಾಶಾಂ. ೧೦೩-೮). **ಚೊಚ್ಚಿಲು:** ೧. ಮುಚ್ಚು ಮಱೆಯೇಕಿನ್ನು ಸುತರಲಿ ಚೊಚ್ಚಿಲವ ನೀನೆಂದು ಮೈದಡವಿದನು ಶಶಿಮೌಳಿ (ಕುಮಾ್ಯಗ. ೯-೨೩). ೨. ನೀಲವ್ವನನ್ನು ಚೊಚ್ಚಿಲ ಹೆರಿಗೆಗೆ ತನ್ನ ಹಳ್ಳಿಗೆ ಕರೆದುಕೊಂಡು ಹೋಗಲು (ಬರಹಾ. ೧೮).

ಚೊಚ್ಚಿಲುಸಂಭ್ರಮ = ಪ್ರಥಮ ಪ್ರಯತ್ನಗಳಲ್ಲಿ ಮಾಡುವ ಉತ್ಸಾಹದ ಕಾರ್ಯ. [ ಚೊಚ್ ? + ಚುಲ್(<ಸೂಲ್). / ತೆಲು. ಚೊಚ್ಚಿಲು, ಚೊಚ್ಚಿಲ್ಲು = ಪ್ರಾರಂಭಿಸು; ಮೊದಲುಮಾಡು ]

**ಚೊಟ್ಟ** 'ಸೊಟ್ಟ' ನೋ.

**ಚೊಟ್ಟಗಾಲು** 'ಸೊಟ್ಟಗಾಲು' ನೋ.

**ಚೊಟ್ಟಗೆಯ್** 'ಸೊಟ್ಟಗೆಯ್' ನೋ.

**ಚೊಟ್ಟಿ$_1$** 'ಸೊಟ್ಟ' ನೋ.

**ಚೊಟ್ಟಿ$_2$** (ನಾ). ಅಂಗಹೀನೆ ; ಹೆಳವಿ : (ಕ).

[ ಚೊಟ್ಟ(<ಸೊಟ್ಟ) + – ಇ$_2$ ]

**ಚೊಟ್ಟಿ$_3$**(ನಾ). ಹುಂಜದ ತಲೆಯ ಮೇಲಿರುವ ಕೆಂಪು ಬಣ್ಣದ ಕೊಟ್ಟು.- ಜುಟ್ಟು : ಹುಂಜಗಳ . . . ಕೆಂಗೆಂಪು ಚೊಟ್ಟಿಗಳು ಸೇರೆಗಾರರ ತಲೆ ವಸ್ತ್ರಕ್ಕಿಂತಲೂ ಕೆಂಪಾಗಿ ರಂಜಿಸಿದುವು (ಕಾನೂರು. ೫೦೫). 'ಕೊಟ್ಟು$_1$', 'ಜುಟ್ಟಿ' ಪರಾ. [ ದೇ.॥ ತಮಿ. ಮಲ. ಚುಟ್ಟಿ. / ಪ್ರಾ. ಚೋಟ್ಟೀ ]

**ಚೊಟ್ಟಿಗೆಯ್** 'ಸೊಟ್ಟಗೆಯ್' ನೋ.

**ಚೊಟ್ಟು** 'ಸೊಟ್ಟು$_2$' ನೋ.

**ಚೊಟ್ಟೆ$_1$** 'ಚಟ್ಟೆ$_1$' ನೋ.

**ಚೊಟ್ಟೆ$_2$** (ನಾ). ಹೀನಸ್ವಭಾವದ ಮನುಷ್ಯ ; ಅಲ್ಪ : (ಕ).

[ ←ಹಿಂ. ಛೋಟಾ ]

**ಚೊಟ್ಟೆ$_3$, ಸೊಟ್ಟೆ$_2$** (ನಾ). ೧. ರಸ ತೆಗೆದ ಮೇಲೆ ಉಳಿದ ಭಾಗ ; ಸಿಪ್ಪೆ. 'ನಿಂಬೆಚೊಟ್ಟೆ' ಪರಾ. **ಸೊಟ್ಟೆ$_2$:** ೧. (ಎತ್ತುಗಳ) ಮೈಯನ್ನು ದಿನದಿನದ ಸಾಯಂಕಾಲದಲ್ಲಿ ಹೀರೇಕಾಯಿ ಸೊಟ್ಟೆಯಿಂದ ಚೆನ್ನಾಗಿ ತಿಕ್ಕಿ ಒರಿಸಿ (ಕೃಷಿಪ್ರ. ೧೯). ೨. ತೆಂಗು ಮೊದಲಾದುವುಗಳ ಮೇಲ್ಪದರ ; ಮೊಟ್ಟೆ : ತೆಂಗಿನ ಸೊಟ್ಟೆಯನ್ನು ಮೊದಲು ಒಂದು ವರ್ಷ ಕೆಸರೊಳಗೆ ಹುಗಿದಿಟ್ಟು (ಕಭಾಗ. ೧೮೪). ೩. ಬುರುಡೆ: ತಂತಿ ಝಣಗುಡದ ಪೊಳ್ಳು ಸೊಟ್ಟೆ ಎನಿಸೀತು ಹೇಗೆ ವೀಣೆ ? (ಅರಳು. ೬೬-೧೧).

ಚೊಟ್ಟೆಹಾಕು=ವ್ಯರ್ಥವಾಗಿ ಕಾಲಕಳೆ : ರಾಮಸ್ವಾಮಿ ಅಯ್ಯಂಗಾರಿ ನಾಲ್ಕುದಿವಸ ಮೈಸೂರಿಗೆ ಹೋಗಿ ಸಂಗೀತ ಕಲಿಯುತ್ತೇನೆಂದು 'ಚೊಟ್ಟೆ' ಹಾಕಿ ಬಂದಿದ್ದ (ಸಂಧ್ಯಾರಾ. ೨೬). 'ಚರಟ' ಪರಾ. [ ? ]

**ಚೊಟ್ಟೆ$_4$** (ನಾ). ಒಂದು ಬಗೆಯ ಮರ : ಚೆಳ್ಳೆಹಣ್ಣುಮರ, ಸೊಳ್ಳೆ, ಚೊಟ್ಟೆ, ಕೆಂದಲ್, ಮಣ್ಣಡಿಕೆ, ಚೆಡ್ಲು (ವ್ಯಾಜಿಗಿ. ೨೪-೪೫೩). [ ? ]

**ಚೊಟ್ಯಾಲುಗುಬ್ಬಿ** (ನಾ). ಕುದುರೆಗೆ ಕತ್ತಿನ ಮೇಲೆ ಹಾಕುವ ಒಂದು ಬಗೆಯ ಒಡವೆ: ಸುವರ್ಣರಜತಮ ನಿರ್ಮಿಸಿದ ಉಚ್ಚೈಶ್ರವಸ್ಸೆಂಬ ಅಶ್ವರತ್ನದ ಆಭರಣದ ಲೆಕ್ಕ . . . ೧ತುರಾಯಿ ಪೀಠ ಸಹ ೧೮ ಚೊಟ್ಯಾಲುಗುಬ್ಬಿ (ಎಕ. XIV, ನಂಜನ. ೨೯೩; 1947). [ ಚೊಟ್ಟಿ$_3$+ <ಅಯಾಲು+ಗುಬ್ಬಿ$_2$ ]

**ಚೊಣ್ಣ** 'ಚಲ್ಲಣ' ನೋ.

**ಚೊತ್ತ** 'ಸೊತ್ತ$_1$' ನೋ.

**ಚೊತ್ತಮ್ಮ** (ನಾ). ಒಬ್ಬಾತನ ಹೆಸರು: ಅರಟ್ಟಿಗಳರಸರ್ ಚೊತ್ತಮ್ಮನ್ ಎಡೆತೊಱೆ ನಾಡು ಸಾಸಿರವುಂ ಆಳುತ್ತಿದು (ಎಕ. III, ಮೈಸೂರು. ೫೫-೫: 740). [ ಚೊತ್ತ$_0$ + ಅಮ್ಮ$_1$ ]

**ಚೊತ್ತಿ** 'ಸೊತ್ತಿ' ನೋ.

**ಚೊತ್ತಿಗೆ** 'ಜೊತ್ತಗೆ' ನೋ.

**ಚೊತ್ತು** 'ಸೊತ್ತು$_1$' ನೋ.

**ಚೊಪ್ಪಟೆ** (ನಾ). ದೇವದಾರು ವೃಕ್ಷ : "ಚೊ[ಪಾಠಾಂ. ಬೊ]ಪ್ಪಟೆಯೆನಲ್ ದೇವದಾರುವಕ್ಕುಂ" (ಮಂಗರಾ. ೩೬-೧೬). [ ? ]

**ಚೊಬ್ಬೆ** (ನಾ). ಪುಟ್ಟಿ; ಬುಟ್ಟಿ: ಬೆತ್ತದ ಚೊಬ್ಬೆಯಲ್ಲಿ ಹಿಡಿದುಕೊಂಡಿದ್ದ ಮಾವಿನ ಹಣ್ಣುಗಳಲ್ಲಿ (ಆಬೋಲೀ. ೬೨). 'ಚಿಬ್ಬಲ್' ಪರಾ. [ ? ]

**ಚೊಮ್ಮನೆ** 'ಜೊಮ್ಮನೆ' ನೋ.

**ಚೊರ್** (ನಾ). ಒಂದು ಅನುಕರಣ ಶಬ್ದ : ಕಾದ ಹಂಚಿನ ಮೇಲೆ ನೀರು ಸಿಡಿದಾಗ ಚೊರ್ರೆಂದಿತು (ರೂಢಿ).

**ಚೊಲ್ಲ** (ನಾ). ಹರಡಿರುವುದು ; ವ್ಯಾಪಕವಾಗಿರುವುದು (?) : ಎಲ್ಲಿ ನೋಡಲು ಮಡಿದ ವೀರರ ವಲ್ಲಭೆಯರಾರ್ತಧ್ವನಿಯು ನೆಱೆ ಚೊಲ್ಲವಾಗಿರೆ ಕಂಡು ಬೆದಱುತ ಬಂದನಾ ವಿದುರ (ಶಿಮ್ಮಸ್ತ್ರೀ. ೧-೧೮). [ <ಚಲ್ಲು$_1$ ]

**ಚೊಲ್ಲಣ** 'ಚಲ್ಲಣ' ನೋ.

**ಚೊಲ್ಲಣಿಗೆ** (ನಾ). ಚೆಲುವು; ಸೊಗಸು; ಹೊಳಪು (?): ಅಲ್ಲಿ ಸಾವಿರದ ನಾನೂರು ಯೋಜನದೆಡೆಯ ಪಲ್ಲವಿತಮಾದ ಶಿವಗಣಗಳಾಗಾರದಿಂ ಚೊಲ್ಲಣಿಗೆವಡೆದ ನವರಂಗ ಮಣಿಮಯಗೇಹ ಸಲ್ಲಲಿತ ಹರ್ಮ್ಯಕುಳದ (ಲಿಂಗಪು. ೩-೧೪) ; ಕೋಟೆ ಹರ್ಮ್ಯಗಳ ಮಲ್ಲಿಕಾಗ್ರದಿ ರಾಜಿಪ ಚೊಲ್ಲಣಿಗೆ ವಡೆದ ಚಿಂತಾರತ್ನ ಕಳಶದಿಂ ತೆಲ್ಲವಣ್ಣದ ಬಾಗಿಲಿಂ ಕನಕವಲಗೆಯಿಂ . . . ಸಲ್ಲಲಿತವಾಗೆಸೆದುದು (ಲಿಂಗಪು. ೩-೨೧). [ ? ]

**ಚೊಲ್ಲಣಿಸು** (ಕ್ರಿ). ಶೋಭಿಸು ; ಹೊಳೆ (?) : ಮಾದೇವ ಸಲ್ಲಲಿತ ನಂದಿ ಗೊಲಿದು ಮೆಲ್ಲಡಿಗಳಿಂ ತೋರ್ಪ ದೃಷ್ಟಿಯಿಂ ಕಟಕದಿಂ ಪಲ್ಲವದ ಸಂಗ್ರಹಣ ಮೌಲದಿಂ ಸೊಬಗಿಡಿವುತಲ್ಲಿ ಕುಂಡಿಲಮನಲುಗುತ ಮುಂದೆ ಶೋಭಿಸಿದ ಚೊಲ್ಲಣಿಸಿ ವೃಷಭ ಪೆಚ್ಚಿ (ಲಿಂಗಪು. ೧೪-೪೩). [ ? ]

**ಚೊಲ್ಲೆಯ$_1$, ಚೊಲ್ಲೆಹ, ಜೊಲ್ಲಯ, ಜೊಲ್ಲೆ, ಜೊಲ್ಲೆಯ$_1$, ಜೊಲ್ಲೆಹ** (ನಾ). ೧. ತುರುಬಿನ ಕೊನೆ: "ಚೊಲ್ಲೆಯ[ಪಾಠಾಂ. ಹ]ಮೆಂದು ತುಱುಬಿನ ಕೊನೆ" (ಕಶಸಾ. ೨೦-೪೧೫) ; ಕತ್ತುರಿಯಡ್ಡಬೊಟ್ಟೆಸೆಯೆ ಮುತ್ತಿನ ಮೂಗುತಿಯೊಪ್ಪೆ . . . ಜೋಲ್ದಿರೆ ಚೊಲ್ಲೆಯಂ (ಲೀಲಾವ. ೨-೩೯); ಕತ್ತುರಿಪೀಲಿಯನಾಂತ ಚೊಲ್ಲೆಯಂ (ಚಂದ್ರಪು. ೮-೫೧) ; ಚಲ್ಲಣವನಳವಡಿಸಿ ಜಾಱಿದ ಚೊಲ್ಲೆಯವ ಮಿಗೆ ಸಂವರಿಸಿಕೊಂಡು (ಜೀವಂಧ. ೧೬-೬೧): ಚೊಲ್ಲೆಯದ ಬಳಲುಮುಡಿಯ ತೊಳಪ ಕೆಂಬಲ್ಲ ಕಂಬುಗ್ರೀವದ (ಕೈವಲ್ಯ. ೨-೧೨-೩) : ಕೆದಱಿ ಕುರುಳೊದರೆ ಚೊಲ್ಲೆಯಂ (ಚಿಕವಿ. ೬-೪೮). ೨.

**ಟಕ್ಕುಟೌಳಿ** 'ಟಕ್ಕುಟವಳಿ' ನೋ.

**ಟಕ್ಕುತನ, ತಕ್ಕುತನ** (ನಾ). ವಂಚಕತನ ; ಮೋಸಗಾರಿಕೆ : (ಕ). **ತಕ್ಕುತನ** : ಬೊಕ್ಕನಾದರೂ ತಕ್ಕುತನ ಬಿಡಲಿಲ್ಲ (ಗಾದೆ). [ ಟಕ್ಕು$_1$ + – ತನ ]

**ಟಕ್ಕುದೋಱು** (ಕ್ರಿ). ವಂಚಿಸು ; ಮೋಸಮಾಡಂ : ಬೆಲೆವೆಣ್ಗೆ ನಿಚ್ಚಮುಮೆಯ್ವಲೆಯಿೞಯದೆ ಟಕ್ಕುದೋಱಿ (ವ್ಯಪವಿ. ೩೯-೧೩). [ ಟಕ್ಕು$_1$ + ತೋಱು ]

**ಟಕ್ಕುರ** (ನಾ). ಒಡೆಯ ; ದೇವತೆ : ಟ[ಪಾಠಾಂ. ಠ]ಕ್ಕುರಂಗೆ ವಾಚಕ ಭೂಪತಿಗೆ ದೆಸೆ ಅಜಾತಂಗೆ ನಿಶ್ಚಯ ನೇಮಂಗೆ ಖಂಡಿತಭಾವ ನಿರ್ಧರ ವಾಗಬೇಕು ಐಘಟದೂರ ರಾಮೇಶ್ವರಲಿಂಗವನಱಿವುದಕ್ಕೆ (ಮಹಾಮಿಂ. ೪೯-೧೭). [ <ಸಂ. ಠಕ್ಕುರ ]

**ಟಕ್ಕುವಗೆ** (ನಾ). ಮೋಸದ ಕ್ರಮ ; ವಂಚನೆಯ ಮಾರ್ಗ : ಆ ಲಾಕ್ಷಾ ಗೃಹದಾಹವೊಂದೆ . . . ಟಕ್ಕುವಗೆಯಿಂ ಗೆಲ್ದಿರ್ದ ಜೂದೊಂದೆ (ಪಂಪಭಾ. ೯-೩೨). [ ಟಕ್ಕು$_1$ + ಬಗೆ$_3$ ]

**ಟಕ್ಕುಹಿಡಿ** (ಕ್ರಿ). ಆತಂಕದಿಂದ ಪ್ರತೀಕ್ಷಿಸು; ಏಕಾಗ್ರತೆಯಿಂದ ನಿರೀಕ್ಷಿಸು: ಬಾವಿಯ ಮುಂದೆ ಯಾವಾಗ ತಮ್ಮ ಪಾಳಿಯು ಬಂದೀತೆಂದು ಟಕ್ಕು ಹಿಡಿದು ಕುಳಿತಿರುವ ಹೆಂಗಸರು (ಕನಳಿ. ೯). [ಟಕ್ಕು$_2$ + ಹಿಡಿ$_1$ ( <ಪಿಡಿ$_1$)]

**ಟಕ್ಕೆ$_1$** 'ತಕ್ಕೆ$_4$' ನೋ.

**ಟಕ್ಕೆ$_2$** (ನಾ). (?) : ಕೊಠಾರದೊಳಂ ಪೂರೊಳಗಂ ಆಳದ ಟಕ್ಕೆ ಸಲಗೆ ಗೊಮನ ಮತ್ತ್ರಯುಗುರ ಮೂನೂರ್ವ್ವರು ದೇವರ ಅಪ್ಪವಿಥಾರ್ಚ್ಛನೆಗೆ [ಯೇಣಿಗೆ] ಹಾರವಂ ಬಿಟ್ಟರು (ಕಇ. V, ೪೬. ೮ ; 1288). [ ? ]

**ಟಕ್ಕೆಯ, ಟೆಕ್ಕೆ$_1$, ಟೆಕ್ಕೆಯಂ, ಟೆಕ್ಕೆಹ, ತಕ್ಕೆಯಂ, ತೆಕ್ಕೆಯಂ** (ನಾ).ಬಾವುಟ; ಧ್ವಜ : ಅಲಗಿಂ ಸಿಂಗಮನಿಱಿದನ ಕಲಿತನಮಂ ನಗುವ ತೆಱದೆ ಮೆಱೆವುದು ಸಳೆಯಿಂ ಪುಲಿವೊಯ್ದ ಕುಱುವು ಪೊಯ್ಸಳ ಕುಲತಿಲಕನ ಮತ್ತಗಜದ [ಟ]ಕ್ಕೆಯದೋಳೀಗಳ್ (ಎಕ. VI, ತರೀಕೆ. ೪೨-೩ ; 1206) ; ಒತ್ತರಿಪ ಸಿತಕೀರ್ತಿ ಯೊಳು ಪ್ರಭೆವೆತ್ತು ಪರದರುಶನದ ಮೂಗಿನ ಕತ್ತಿಯೆಂಬಾ ಟ[ಪಾಠಾಂ. ಠೆ] ಕ್ಕೆಯವನಾ ಪುರದೊಳೆತ್ತಿಸಿದ (ಬಸಪು. ೩೩-೩೭);' ಹೂವಿನ ತೇರೇನಾದುದು ನಚ್ಚಿನ ತಾವರೆಗೋಲೆತ್ತ ಪೋಯ್ತು ಕೋವಿದನೆ ಗಳ ಟಕ್ಕೆಯವಡಗಿದುದೆಲ್ಲಿ (ವರ್ಧಚ. ೧೨-೨೮). **ಟೆಕ್ಕೆ$_1$** : ಬಸವನ ಟೆಕ್ಕೆ ಗಗನದೊಳೆ ಸೊಗಸೆ (ಹಾಲಾಸ್ಯ. ೩-೯-೨೧ ರಗಳೆ) ; ನೆಲಕುದ್ದಿದರು ವಾಜಿಗಳ ಪರಿದರು ಬಿರುದು ಟೆಕ್ಕೆಗಳ (ಅನಂರಾ. ೬-೧೬-೧೫) : ಕುಗ್ಗದಂತೆ ಹಿಗ್ಗಿಪಂತೆ ನಿನ್ನ ಹೆಸರ ಟೆಕ್ಕೆಯಂ (ಗಿಳಿವಿಂ. ೮೨-೩೭). **ಟೆಕ್ಕೆಯಂ** : ಹೊಯ್ಸಳ ಕುಳತಿಳಕನ ಮತ್ತಗಜದ ಟೆಕ್ಕೆಯದೊಳ್ (ಮ್ಯ ಆರಿ. ೧೯೩೭, ೩೬-೫ ; 1196) : ಭೀಮ ನಗುತ ಧನಂಜಯನ ಟೆಕ್ಕೆಯಕೆ ಬಿಜಯಂಗೈಯಬೇಕೆಂದ (ಕುವ್ಯಾಅ. ೧೦-೪೦); ಪರು ಶವಿಸಿರ್ದ ನಾನಾವಿಧ ಟೆಕ್ಕೆಯು ತೆರಳಿತು ನಭವನಳ್ಳಿಱಿದು (ಮೋಹತ. ೧೫-೩೦). **ಟೆಕ್ಕೆಹ** : ಟೆಕ್ಕೆಹವನೆತ್ತಿ ಸಾಱಿಸಿದನೀ ಭೂತಳದೊಳು (ವೀಕ್ಕೃಪು. ೪-೩-೧೭). **ತಕ್ಕೆಯಂ** : ಸೌರಾಷ್ಟ್ರನಾಥಂ ನಿಸದದಿಂ ನಾಳೆ ಬರ್ಪಂ ತಕ್ಕೆಯವನು ಕಳುಹಿಸಿದಂ (ಪಾಸೋಪು. ೪-೦೯೯) : ನಸುಗಾಳಿ ಗೊಲೆದಾಡುವೆಳಗೊಂಬೆ ಸೊಂಡಿಲಾಗಸಕೆದ್ದ ನಟ್ಟಗೊಂಬೆಸೆವ ತಕ್ಕೆಯ ಮಾಗಲಸಮಶರನೆಡಬಲದೊಳಟ್ಟಣಿಸಿ ನಡೆವ ಮಾಮರದಾನೆಗಳ್ ಮೆಱೆದುವು (ಜಿಬಪು. ೩೫-೮) ; ನೆನೆದಾಗ ಬರುವೆನು ರಥದ ತಕ್ಕೆಯಕ್ಕೆನುತೆ ಕಳುಹಿಸಿಕೊಂಡ ಬಳಿಕ (ತುರಂಗ. ೧೫-೩೭). **ತೆಕ್ಕೆಯಂ** : ಬಿಗಿದ ಗುಳದಲಿ ಹೊಳೆಯೆ ಹೊಂಗೆಲಸದ ಸುರೇಖೆಗಳು ಗಗನ ಗಂಗಾನದಿಯ ಕಾಲುವೆ ತೆಗೆದರೆನೆ ತೆಕ್ಕೆಯದ ಪಲ್ಲವವಗಿಯೆ ಮೆಱೆದುದು (ಕುವ್ಯಾದ್ರೋ. ೩-೪) ; ಶಲ್ಯ ಕಡಿದನು ಭಟನ ತೆಕ್ಕೆಯವ (ಕುವ್ಯಾದ್ರೋ. ೬-೩೫).

[ ದೇ.॥ ತಮಿ. ಟಕ್ಕೆಯ. ಟಕ್ಕಿಯ ; ತೆಲು. ಟೆಕ್ಕೆ, ಟೆಕ್ಕಿಯ ]

**ಟಗರು** 'ತಗರ್$_2$' ನೋ.

**ಟಗರುದಲೆಯ** (ನಾ). ಟಗರಿನ ತಲೆಯುಳ್ಳವನು ; ದಕ್ಷಪ್ರಜಾ ಪತಿ ; ದಕ್ಷಬ್ರಹ್ಮ : (ಕ). [ ಟಗರು ( <ತಗರ್$_2$) + ತಲೆ$_1$ + – ಅ$_7$ ]

**ಟಣ್** (ನಾ). ಒಂದಂ ಅನುಕರಣ ಧ್ವನಿ : (ಕ). **ಟಣ್‌ಟಣ್** (ದ್ವಿರುಕ್ತಿ) : ಸೈಕಲ್ ಬೆಲ್ಲು ಟಣ್‌ಟಣ್ ಎಂದು ಸದ್ದು ಮಾಡುತ್ತ ಹೋಯಿತು (ರೂಢಿ). 'ಟಂಟಣಿಸು$_1$' ಪರಾ.

**ಟಣಕಲಿ** 'ತನಕಲಿ' ನೋ.

**ಟಣ್ಣನೆ** (ಅ). ಚಂಗನೆ : ಒಬ್ಬೊಬ್ಬರೆ ಟಣ್ಣನೆ ಜಿಗಿದುಬಿಟ್ಟರು (ಮುಂಗಾಪು. ೩೪). [ ಟಣ್ + – ಅನೆ$_1$ ]

**ಟತ್ವ** (ನಾ). 'ಟ' ಎಂಬ ಅಕ್ಷರ ; ಟಕಾರ : ಕಡಿದು ನಿಡಿದೆಂಬ ನಡು ವೆಂಬ ಡಕಾರಂ ಟತ್ವಮಾಯ್ತು (ಶಮದ. ೧೪೧). [ ಸಂ. ]

**ಟನ್** 'ಟನ್ನು' ನೋ.

**ಟನ್ನು, ಟನ್** (ನಾ). ಸುಮಾರು ತೊಂಬತ್ತು ಮಣಗಳಷ್ಟು ತೂಕ : "೨,೨೪೦ ಪೌಂಡಿನ ತೂಕ : ಟನ್ನು" (Ton. ಇಂಕನಿ.); ಸದ್ಯವೇ ಸಿಗಲಿದೆ ಸಾಲವು ಕಂದಾ ಸತ್ಯ ಅಹಿಂಸೆಯ ನೂರ್ ಟನ್ನು (ಅರರೋ. ೩೪-೧೫). **ಟನ್** : ೨೦ ಟನ್‌ಗಳ ಭರಾವಣೀ ಬಾಬತು ಜಹಜನ್ನು ಯಾ ಅಂತಸ್ತಿನ ಜಹಜನ್ನು ನಾಶಪಡಿಸುವ . . . ಇರಾದೆಯಿಂದ ಕೆಡಕು ಮಾಡೋಣ (ಗ್ರಾಮಾಶ. ೧೯೮). [ ←ಇಂ. Ton ]

**ಟಪಾರಿಕೆ, ಟೆಪಾರಿಕೆ** (ನಾ). ೧. ಮುಚ್ಚಳ ; ಹೊದಿಕೆ : ಮರುದಿವಸ ಬೆಳಗಾದ ಮೇಲೆ ತಲೆ ಬಿಚ್ಚಿ ನೋಡಲು, ತಲೆಯ ಟಪಾರಿಕೆಯೇ ಕಡೆ ಗಾಯಿತು. ಆದರೆ ತಲೆಯು ಅಚ್ಚಳಿದಿದ್ದಿಲ್ಲ (ಕಲಕು. ೦೪). **ಟೆಪಾರಿಕೆ** : ೨. ಘನ ಅಳತೆಯ ಮಾನದಲ್ಲಿ ಅಳತೆಗಿಂತ ಹೆಚ್ಚಾಗಿರುವ ಧಾನ್ಯವನ್ನು ತೊಡೆದುಹಾಕುವಿಕೆ ; ಅಳತೆ ಮಾಡಿಕೊಡುವಾಗ ತಲೆಸವರುವಿಕೆ : (ಕ). [ ←ಹಿಂ. ಟಪರಾ; ಮರಾ. ಟಪ್ಪರ ]

**ಟಪಾಲ್** 'ಟಪಾಲು' ನೋ.

**ಟಪಾಲು, ಟಪಾಲ್, ಟಪ್ಪಾಲು** (ನಾ). ೧. ಅಂಚೆ; ಅಂಚೆಯ ಮೂಲಕ ಬಂದಿರುವ ಅಥವಾ ಕಳುಹಿಸಲಿರುವ ಪತ್ರ ಮೊದಲಾದುವು: ಈ ಮಾತುಗಳು ಮುಗಿಯುವ ಹೊತ್ತಿಗೆ ಟಪಾಲು ಬಂತು (ರಂಗಳ. ೩೦): ವಾರಕ್ಕೊಮ್ಮೆ ಪೋಸ್ಟುಮನ್ ಚಾವಡಿಗೆ ಬಂದು ಟಪಾಲನ್ನಿತ್ತು ರಾತ್ರಿ ಅಲ್ಲಿಯೇ ತಂಗುತ್ತಾನೆ (ಗಾಳಿಗು. ೩). ೨. ಅಂಚೆಯ ರವಾನೆ. **ಟಪಾಲ್** : ೧. ಹಾಗೆ ರಿಜಿಸ್ಟರ್ ಪೋಸ್ಟಿನಲ್ಲಿ ರವಾನಿಸಬೇಕಾದರೆ ಟಪಾಲ್ ಛಾರ್ಜನ್ನು ಡಿಪಾಜಿಟ್ಟಾಗಿ ಇಡಬೇಕು (ಗ್ರಾಮಾಶ. ೬೬). **ಟಪ್ಪಾಲು** : 'ಟಪ್ಪಾಲು ಕಟ್ಟೆ' ಪರಾ. [ ←ಮರಾ. ಟಪಾಲ್, ಟಪ್ಪಾಲ್ ]

**ಟಪಾಲುಗಾಡಿ** (ನಾ). ಅಂಚೆಯನ್ನು ಸ್ಥಳದಿಂದ ಸ್ಥಳಕ್ಕೆ ಒಯ್ಯುವ ಗಾಡಿ: ರಸ್ತೆಯ ಮೂಲಕ ಟಪಾಲು ಸಾಗಿಸುವ ಬಂಡಿ; ಟಪಾಲುಬಂಡಿ (Mail-Cart. ಇಂಕನಿ.). [ ಟಪಾಲು + ಗಾಡಿ$_3$ ]

**ಟಪಾಲುಸಿಪಾಯಿ** (ನಾ). ಅಂಚೆಯನ್ನು ತರುವ ಆಳು ; ಅಂಚೆಪೇದೆ: ತುಬಾಕಿಯ ಗುರಿತಪ್ಪಿ . . . ಮನೆಗೆ ಪತ್ರ ಕೊಡಲಿಕ್ಕೆ ಬರುತ್ತಿದ್ದ ಒಬ್ಬ ಟಪಾಲುಸಿಪಾಯಿಗೆ ತಾಕಿತು (ಮೋಹಿನೀ. ೧೧೨). [ ಟಪಾಲು + ಸಿಪಾಯಿ ]

**ಟಪ್ಪಾ** 'ಟಪ್ಪೆ' ನೋ.

**ಟಪ್ಪಾಲು** 'ಟಪಾಲು' ನೋ.

**ಟಪ್ಪಾಲುಕಚೇರಿ** (ನಾ). = ಟಪ್ಪಾಲುಕಟ್ಟೆ: ನಮ್ಮ ಹಳ್ಳಿಗೆ ಒಂದು ಟಪ್ಪಾಲುಕಚೇರಿ ಮಂಜೂರಾಗಿದೆ (ರೂಢಿ).
[ ಟಪ್ಪಾಲು ( <ಟಪಾಲು) + ಕಚೇರಿ ]

**ಟಪ್ಪಾಲುಕಟ್ಟೆ** (ನಾ). ಅಂಚೆಕಚೇರಿ : (ಕ).
[ ಟಪ್ಪಾಲು ( <ಟಪಾಲು) + ಕಟ್ಟೆ$_1$ ]

**ಟಪ್ಪೆ, ಟಪ್ಪಾ** (ನಾ). ೧. ಪ್ರಯಾಣದ ದಾರಿಯ ಮಧ್ಯದಲ್ಲಿ ಏರ್ಪಡಿಸಿರುವ ನಿಲುಗಡೆಯ ಸ್ಥಳ; ಮಜಲು; ವಾಹನವನ್ನು ಬದಲಾಯಿಸಿಕೊಳ್ಳುವ ಅಥವಾ ಹೊರೆಯನ್ನು ಒಂದು ತಲೆಯಿಂದ ಮತ್ತೊಂದು ತಲೆಗೆ ಬದಲಾಯಿಸಿಕೊಳ್ಳುವ ಎಲ್ಲೆ: ತಲೆಯಿಂದ ತಲೆಗೆ ಪೀಳಿಗೆಯಿಂದ ಪೀಳಿಗೆಗೆ ಅಲೆಯಿಂದಲಲೆಗೆ ಟಪ್ಪೆಯ ಚಾರನಂತೆ ಇಳಿಯುತಿದೆ ಯುಗದಿಂದ ಯುಗಕೆ ಮಾನವಧರ್ಮ (ಮಂಕುಕ. ೪೦೮). ೨. ಟಪ್ಪಾಲು ; ಅಂಚೆ : ಒಂದು ಪತ್ರವನ್ನು ಬರೆದು ಕುದುರೆ ಟಪ್ಪೆಯಿಂದ ಕಳುಹಿಸಿಕೊಟ್ಟನು (ಚಕರಾ. ೩೭೩). **ಟಪ್ಪಾ** : ೧. ದಾರಿಯಲ್ಲಿ ನಿಲ್ಗಡೆ : ನಿಲ್ದಾಣ: ಮಜಲು; ಟಪ್ಪಾ (Stage. ಇಂಕನಿ.).

ಟಪ್ಪಾ ಬಂಡಿ = "ಮಜಲಿನಿಂದ ಮಜಲಿಗೆ, ಬಾಡಿಗೆ ಗೊತ್ತು ಮಾಡಿದ ಅಥವಾ ಬಾಡಿಗೆಯ ಟಪ್ಪಾಕುದುರೆಯಿಂದ ನಡೆಸುವ, ಟಪ್ಪಾ ಬಂಡಿ"(Post-Chaise.ಇಂಕನಿ.); "ಮಜಲುಗಾಡಿ, ಟಪ್ಪಾಬಂಡಿ" (Stage-Coach. ಇಂಕನಿ.). ಟಪ್ಪೆಓಟ=ಒಂದು ಬಗೆಯ ಓಟದ ಪಂದ್ಯದಲ್ಲಿ ಒಂದು ಮಜಲಿನಿಂದ ಮತ್ತೊಂದು ಮಜಲಿಗೆ ಓಡುವ ಓಟ : ಆಯಾ ತಂಡದಲ್ಲಿ ಒಬ್ಬನು ಒಂದು ಮಜಲಿಂದ ಮುಂದಿನ ಮಜಲಿಗೆ ಓಡಿ ನಿಲ್ಲುವ, ಅಲ್ಲಿನವನು ಅಲ್ಲಿಂದ ಮುಂದಿನ ಮಜಲಿಗೆ ಓಡುವ, ಹೀಗೆ ಆಯಾ ತಂಡದಲ್ಲಿ ಪ್ರತಿಯೊಬ್ಬನೂ ಮುಂದಿನ ಮಜಲಿಗೆ ಓಡಿ, ಕೊನೆಗಿರುವವನು ಗುರಿಯನ್ನು ಮುಟ್ಟುವ ಓಟದ ಪಂದ್ಯ; ಟಪ್ಪೆ ಓಟದ ಪಂದ್ಯ; ಮಜಲು ಓಟದ ಪಂದ್ಯ (Relay race. ಇಂಕನಿ). ಟಪ್ಪೆಕುದುರೆ, ಟಪ್ಪಾಕುದುರೆ = ಒಂದೊಂದು ಮಜಲಿನಲ್ಲಿ ಬದಲಾಯಿಸಿಕೊಳ್ಳುವ ವಾಹನದ ಕುದುರೆ: ದೀರ್ಘಪ್ರಯಾಣದಿಂದ ಒಂದೇ ಕುದುರೆಗೆ ಆಯಾಸವಾಗದಂತೆ ಅಶ್ವಾರೋಹಿಗೆ ವಾಹನವನ್ನು ಬದಲಾಯಿಸಿಕೊಳ್ಳುವುದಕ್ಕಾಗಿ ಒಂದು ನಿರ್ದಿಷ್ಟ ಸ್ಥಳದಲ್ಲಿ ಸಿದ್ಧವಿರುವ ಕುದುರೆ; ಮಜಲಿನ ಅಶ್ವ: (+); "ಟಪ್ಪಾಕುದುರೆ" (Post-horse.ಇಂಕನಿ.); ದಣಿದ ಕುದುರೆಗಳಿಗೆ ಬದಲಾಗಿ ಹೂಡುವ ಹೊಸ ಕುದುರೆಗಳ ತಂಡ; ಟಪ್ಪಾ ಕುದುರೆಗಳ ತಂಡ (Relay. ಇಂಕನಿ.). ಟಪ್ಪೆಯ ಸವಾರ = " (ಚರಿತ್ರೆ) ಕಾಗದ ಪತ್ರಗಳನ್ನು ಮುಂದಿನ ಮಜಲಿಗೆ ಒಯ್ಯುವುದಕ್ಕಾಗಿ ದಾರಿಯುದ್ದಕ್ಕೂ (ಹಲವು) ಮಜಲುಗಳಲ್ಲಿ ಕುದುರೆಯ ಸಮೇತ ನಿಲ್ಲಿಸಿರುವ ಸವಾರರಲ್ಲೊಬ್ಬನು" (Post. ಇಂಕನಿ.).

[ ←ಹಿಂ. ಮರಾ. ಟಪ್ಪಾ ]

**ಟಪ್ಪೆನಿಲ್ಲು** (ಕ್ರಿ). ಬೇರೊಬ್ಬರ ತಲೆಯ ಮೇಲಿನ ಹೊರೆಯನ್ನು ಇಳಿಸಿಕೊಂಡು ತಾನು ವಹಿಸಿಕೊಳ್ಳುವುದಕ್ಕಾಗಿ ಗೊತ್ತಾದ ಮಜಲಿನಲ್ಲಿ ಸಿದ್ಧವಾಗಿ ನಿಲ್ಲು : (+). [ ಟಪ್ಪೆ + ನಿಲ್ಲು (<ನಿಲ್) ]

**ಟಪ್ಪೆಯಿಡು** (ಕ್ರಿ). (ಎತ್ತು, ಕುದುರೆ ಮೊದಲಾದ) ವಾಹನಗಳ ಬದಲಾವಣೆಗಾಗಿ ಅಲ್ಲಲ್ಲಿ ಗೊತ್ತಾದ ಮಜಲುಗಳಲ್ಲಿ ಬೇರೆಯ ವಾಹನಗಳನ್ನು ಸಿದ್ಧಪಡಿಸು : (+).

[ ಟಪ್ಪೆ + ಇಡು$_1$ ]

**ಟಬರು** (ನಾ). (ಉಕ) ಅಧಿಕಾರ ದರ್ಪ ; ಜಬರ್ು; ಗರ್ವದ ವರ್ತನೆ : ಎಲ್ಲೀತನಕಪಾ ಇನ್ನೂ ಅಳಿಯಂದಿರು ಅಂಬೋ ಟಬರು (ವೃನಿ. ೩೨೮) ; ಏಟ ಅವನ ಟಬರು (ಗ್ರಾಮಾಯ. ೧೨೩).

ಟಬರು ನಡೆಸು = ದರ್ಪವನ್ನು ತೋರು : ಸುಭದ್ರೆಯು ವಿದ್ಯಾಭೂಷಿತೆಯು, ಸುಧಾರಕಳು, ಈವರೆಗೂ ಗಂಡನ ಮೇಲೆ ಟಬರು ನಡೆಸುತ್ತ ಬಂದವಳು (ಭಾಮಿನಿ. ೪೨). ಟಬರು ಮಾಡು = ಅಧಿಕಾರ ಚಲಾಯಿಸು : "ಯಾಕರೀ ಸಾಹೇಬರ ಮತ್ತ ನೀವೂ ಬಾಡಿಗೀ ಕೊಟ್ಟಿಲ್ಲಂತ? " ಎಂದು ಹುಣಸೇಕೊಪ್ಪ 'ಟಬರು' ಮಾಡಿದನು (ರಾಯಚಾ. ೧೨೦).

[ <ಜಬರು ? ]

**ಟಬ್ಬು** (ನಾ). ನೀರು ತುಂಬಲು ಮರ ಅಥವಾ ಲೋಹದಿಂದ ಮಾಡಿದ ಅಗಲವಾದ ಬಾಯುಳ್ಳ ಪಾತ್ರೆ: ಜನಗಳಿಗಾಗಿ ಬಟ್ಟೆಬರೆ ಒಗೆಯುವುದಕ್ಕೋಸ್ಕರ ತುಂಬಿಟ್ಟ ದೊಡ್ಡದೊಂದು ಟಬ್ಬು (ಹೂಬಿಸಿ. ೧೭).

[ ←ಇಂ. Tub ]

**ಟಮಕಿ** 'ಟುಮಕು' ನೋ.

**ಟಮಾಳ, ಟವಾಳ, ಠಮಳ, ಠಮಾಳ, ಠವಳ, ಠವಾಳ** (ನಾ). ೧. ಮೋಸ; ಕಪಟ; ವಂಚನೆ; ಧೂರ್ತವಿದ್ಯೆ: ದುರಾಗ್ರಹಂ ಚಿತ್ತದೊಳಾಗೆ ಏನ್ನ ಬಟಿಯಂ ಬರಲೀ ಮುಳಿಸೇಂ ಟ[ಪಾಠಾಂ. ಠಂತ]ಮಾಳದಿಂ ಸುತ್ತುವರ್ಗಲ್ಲದೊಲ್ಲೆ (ಕಾವ್ಯಾವ. ೪೩೦). ೨. ವಂಚನೆಯ ಮಾತು : ದುರ್ವಿಮಂತ್ರಮಂ ಪರೆಪ ಟ[ಪಾಠಾಂ. ಠ]ಮಾಳಮಂ ಪಿರಿದನೋದಿದೊಡಪ್ಪ ಪದಾರ್ಥಮಾವುದೋ (ಪಂಪಭಾ. ೧೩-೬೭). **ಟವಾಳ** : ೩. ಮರುಳು ; ಮೋಹ ; ಮಾಯೆ. 'ಟವಾಳಿಸು' ಪರಾ. **ಠಮಳ** : ೧. ತೊಟ್ಟ ತಕ್ಕು ಠಮಳವ ಬಿಟ್ಟು ಸರ್ವರಾಗವಿರಾಗನಾಗಿ (ಶೂನ್ಯಸಂ.೨೪೦). **ಠಮಾಳ**: ೧. ದ್ರೋಹ ಠಮಾಳಂ ಮಾಡುವೆನಾಹವಮಂ ಕಂಡು ಮಾಣೆಂ (ಬಂಪರಿ. ೧೨-೮) : ಬೊಂಬುಳಿಯಾಳಮಾಳಮಂತೆ ಠಮಾಳಂ . . . ಜಿಟ ಸಂದೇಹಂ (ಶಮುದ. ೨೫). 'ಠಮಾಳತನ' ಪರಾ. **ಠವಳ** : ೧. ಭಕ್ತರ ಗುಣವ ನೋಡಿಹೆನೆಂದು ತೊಟ್ಟ ತಕ್ಕು ಠವಳವ ಬಿಡು (ಮದೀವ. ೨೭೨-೧೨). **ಠವಾಳ**: ೧. ಎಳತಟ ತಕ್ಕು ಠವಾಳ ತಿರಸ್ಕಾರ ಕಳವಳ ವಂಚನೆ(ಯೋಗಾಂವಿ. ೩-೨೩) : ಕಳವಳದಾಳಮಾಳದ ವಿಟಾಳಿ ಠವಾಳದ ಸೂಳೆವೆಂಗಳಾಕುಳ ರತಿಕಾಮಕೇಳಿಯ ವಿಕಾರದ ಭೋಗದೊಳಿರ್ದರಾಗಳುಂ (ಹಮ್ಮಿ್ರ: ೨-೮೯).

[ ? ]

**ಟಯರು** 'ಟೈರು' ನೋ.

**ಟರಟರ** 'ಟಜಟಜ' ನೋ.

**ಟರ್ಕಿಕೋಳಿ** (ನಾ). ದೊಡ್ಡ ಆಕಾರದ (ಮಾಂಸಾಹಾರಿಗಳು ರುಚಿಕರವಾದುದೆಂದು ತಿಳಿದಿರುವ, ತುರ್ಕಿದೇಶದ್ದೆಂದು ಭ್ರಮಿಸಲಾಗಿದ್ದ) ಅಮೇರಿಕದ ಒಂದು ಬಗೆಯ ಕೋಳಿ : ಸಾಮಾನ್ಯ ಕೋಳಿಸಾಕಣೆಯನ್ನರಿತ ರೈತನು ಟರ್ಕಿಕೋಳಿ, ಗಿನಿಕೋಳಿ, ಬಾತುಕೋಳಿಗಳನ್ನು ಸುಲಭವಾಗಿ ಸಾಕಬಹುದು (ಬಾಲಪ್ರ. III, ೧೭೭೯).

[ ಟರ್ಕಿ$_0$ + ಕೋಳಿ$_1$ (<ಕೋೞಿ$_1$) ]

**ಟರ್ಕಿಟವಲು** (ನಾ).ಗುಂಜುಗುಂಜಾದ ಹೆಣಿಗೆಯುಳ್ಳ ವಸ್ತ್ರ,-ಟವಲು: ಟರ್ಕಿಟವಲಿನಲ್ಲಿ ನೀರು ಚೆನ್ನಾಗಿ ಹೋಗುತ್ತದೆ (ರೂಢಿ).

[ ಟರ್ಕಿ$_0$ + ಟವಲು./ ಇಂ. Turkish Towel ]

**ಟರ್ನಿಪ್** (ನಾ). ಸಾಸವೆ ಜಾತಿಯ ಒಂದು ದ್ವಿವಾರ್ಷಿಕ ಸಸ್ಯ : (ಮ್ಯಾಕಿಗಿ. ೧೪-೨೫೩); ಟರ್ನಿಪ್ ತರಕಾರಿಯನ್ನು . . . ಹಗುರವಾದ ನೆಲದಲ್ಲಿ ಚೆನ್ನಾಗಿ ಬೆಳೆಯಬಹುದು (ತರಬೆ. ೫೭). [ ←ಇಂ. Turnip ]

**ಟರ್ಪಂಟೈನ್** (ನಾ). ೧.ಕರ್ಪೂರ ತೈಲದ ಮರ: ಸೀಮೆ ಕರ್ಪೂರ ತೈಲದ ಮರ, ಟರ್ಪಂಟೈನ್ (ಮ್ಯಾಕಿಗಿ. ೬೨-೧೨೪೮). ೨. ಬಣ್ಣ, ವಾರ್ನಿಶ್ ಮತ್ತು ಔಷಧಗಳಿಗೆ ಬಳಸುವ ಒಂದು ಬಗೆಯ ಮರದ ಮಂದದ್ರವ, ಕರಾಳ; ಕರ್ಪೂರ ತೈಲ: ನೆಲದ ಮೇಲೆ ಪೇಂಟ್ ಕರೆಗಳಿದ್ದರೆ ಟರ್ಪಂಟೈನ್ ಒಂದನ್ನೇ ಉಪಯೋಗಿಸಿ ತೆಗೆಯಬಹುದು (ಗೃಹವಿ. ೧೭೨).

[ ←ಇಂ. Turpentine ]

**ಟಲಾಯಿಸು, ಟಳಾಯಿಸು, ಠಲಾಯಿಸು, ಠಳಾಯಿಸು** (ಕ್ರಿ). ೧. ಕುದುರೆಯನ್ನು ಅತ್ತಿತ್ತ ನಡೆಸು : (+). ೨. ಅತ್ತಿಂದಿತ್ತ ಇತ್ತಿಂದತ್ತ ತಿರುಗಾಡು.-ಅಡ್ಡಾಡು,-ಸುತ್ತಾಡು; ಶತಪಥ ತಿರುಗು: ಹಾಡುತ್ತ ಟಲಾಯಿಸುತ್ತಿದ್ದ (ಉಡುಗೊ. ೮೦) ; ಬೀದಿಯಲ್ಲಿ ಆವನೋ ಒಬ್ಬನು ಬಲುಹೊತ್ತಿನಿಂದಲೂ ಅಲ್ಲಿಂದಿಲ್ಲಿಗೆ ಇಲ್ಲಿಂದಲ್ಲಿಗೆ ಟಲಾಯಿಸುತ್ತಿರುವನು

(ಪಿಶಾಪ. ೧೪). ಟಳಾಯಿಸು : ೨. ಮನೆ ರೂಮ್ನಲ್ಲಿ ಟಳಾಯಿಸ್ತೌರೆ (ಶಕಾರ. ೦೪೩). ಠಲಾಯಿಸು : ೨. ಒಂದು ದಿನ ರಾಜ ತನ್ನ ಬಿಡದಿಯ ಆವರಣದ ತೋಟದಲ್ಲಿ ಠಲಾಯಿಸುತ್ತಿದ್ದಾಗ . . . ಗುರುನಾಥ ಭೆಟ್ಟಿಯಾದ (ನಟಸಾ. ೪೯೭); ಒಂದೆರಡು ಗಂಟೆ ಹೊತ್ತು ಹಾಗೇ ಠಲಾಯಿಸಿ . . . ಮನೆಗೆ ಹೋದೆ (ಅನ್ನಾವ. ೭೯). ಠಳಾಯಿಸು : ೨. ಆ ರೂಮಿನಲ್ಲಿ ಠಳಾಯಿಸುತ್ತ ಹೆಂಡತಿಯನ್ನು ಕೂಗಿದೆ'(ನಡದಾ. II, ೧೨೧೯).

[ ಟಲಾ₀ (ℙ ← ಹಿಂ. ಟಲನಾ) + – ಇಸು₃ ]

**ಟವಟವ** (ನಾ). ಪ್ರಫುಲ್ಲತೆ ; ಕಳೆ. 'ಟವಟವಿಸು' ಪರಾ.

[ ←ಮರಾ. ಟವಟವ ]

**ಟವಟವಿಸು** (ಕ್ರಿ). ಕಳೆ ತುಂಬಿರು ; ಪ್ರಸನ್ನವಾಗಿರು : ನವಭಕುತಿಯ ರಸನವಕದ ಚೆಲುವೆಯರು ಟವಟವಿಪರು ಮುಖದಿಂದ (ಪ್ರಸಭಾ. ೨೭-೧೩); ಟವಟವಿಸುವ ತುಂಗಮಂಟಪ (ಪ್ರಸಭಾ. ೬೨-೬).

[ ಟವಟವ + – ಇಸು₃ ]

**ಟವಣೆ** 'ಅಟ್ಟವಣೆ' ನೋ.

**ಟವಣೆಕೋಲ್** 'ಅಟ್ಟವಣೆಕೋಲ್' ನೋ.

**ಟವಣೆಹಾಕು** (ಕ್ರಿ). [ಗಣಿತ] ಮೊತ್ತವನ್ನು ಕೂಡು,–ಕೂಡಿಸು : ಬಾಲಕರಿಗೆ ಓನಾಮದಿಂದ ಮೊದಲುಮಾಡಿ ಕೊಟ್ಟ ಕಾಗದ ಓದುವುದು, ಹೇಳಿದ್ದನ್ನು ಬರೆಯುವುದು, ಟವಣೆಹಾಕುವುದು, ಕಳೆಯುವುದು ಇಷ್ಟರ ಮಟ್ಟಿಗೆ ಕನ್ನಡದಲ್ಲಿ ಹೇಳಿಕೊಡುವ ಮಠವನ್ನು ಇರಿಸಿದ್ದರು (ಕುರಾಜ. ೨೭).

[ ಟವಣೆ(<ಅಟ್ಟವಣೆ) + ಹಾಕು (<ಪಾಯ್ಕು₁) ]

**ಟವರ್ಗ** (ನಾ). [ವ್ಯಾಕ] ಟ ಠ ಡ ಢ ಣ ಎಂಬ ಅಕ್ಷರಗಳ ಗುಂಪು : ಇರೆ ವರ್ಗಪ್ರಥಮಂಗಳ್ ಪರದೊಳ್ ಚಟವರ್ಗಮುಟಿಯೆ ತಮ್ಮ ತೃತೀಯಾಕ್ಷರಮಕ್ಕುಂ (ಶಮದ. ೬೫); ಈ ವರ್ಗಗಳಿಗೆ ಕ್ರಮವಾಗಿ ಕವರ್ಗ, ಚವರ್ಗ, ಟವರ್ಗ, ತವರ್ಗ, ಪವರ್ಗ ಎಂದು . . . ಹೆಸರನ್ನು ಇಟ್ಟಿದ್ದಾರೆ (ಮಧ್ಯಮ. ೧೩). [ ಟ + ವರ್ಗ ]

**ಟವಲ್** 'ಟವಲು' ನೋ.

**ಟವಲು, ಟವಲ್, ಟಾವೆಲು, ಟಾವೆಲ್ಲು** (ನಾ). ಮೈಒರಸುವ ಬಟ್ಟೆ ; ಚೌಕ : (ಮೈ ಒರಸುವ) ಚೌಕ, ಟವಲು (Towel. ಇಂಕನಿ.). ಟವಲ್: ಅಡಿಗೆಯವನು ಅಳಿಯನಿಗೆ ಕೈಕಾಲಿಗೆ ನೀರು ಕೊಟ್ಟು, ಒರೆಸಿಕೊಳ್ಳುವುದಕ್ಕೆ ಟವಲ್ ಕೊಟ್ಟು ಉಪಚರಿಸಿದನು (ಮಹಾಗ. ೧೪). ಟಾವೆಲು : ವಾಡಿಕೆಗೆ ವಿರೋಧವಾಗಿಯೇ ಒಂದು ಟಾವೆಲನ್ನು ಜನಿವಾರದ ಹಾಗೆ ಎದೆಯ ಮೇಲೆ ಹಾಕಿಕೊಂಡಿದ್ದರು (ಪತಿ. ೨೭). ಟಾವೆಲ್ಲು : ನಾನು ಟಾವೆಲ್ಲು ತೆಗೆದುಕೊಂಡು ಸ್ನಾನದ ಮನೆಗೆ ಹೋಗಿ ಸ್ನಾನ ತೀರಿಸಿಕೊಂಡು . . . ಬಂದೆನು (ಹೇಮಂತ. ೫೫೮). [ ←ಇಂ. Towel ]

**ಟವಳಿ, ಟವುಳಿ₁, ಟಾಳಿ, ಟೌಳಿ₁, ಠವಣೆ₁, ಠವಳಿ, ಠವುಳಿ₁, ಠಾಳಿ, ಠೌಳಿ₁, ಡೌಳಿ, ತವುಳಿ** (ನಾ). ೧. ಠಕ್ಕು ; ಮೋಸ; ವಂಚನೆ; ಅಪ್ರಾಮಾಣಿಕತೆ. 'ಟಕ್ಕುಟವಳಿ' ಪರಾ. ಟವುಳಿ₁ : ೧. ಕಳವು ವಂಚನೆ ಟವುಳಿಯೊಳು ಸಂಚಲ ಕಟಾಕ್ಷದಿ ಕೊಂಕು . . . ಕನಿಷ್ಠವಂಗುಲಿಗಳೊಳಗಲ್ಲದೆ ಕುಂತಳದ ಭೂಮಿಯೊಳು ಕಾಣೆಸವು (ಶಂಕದಾ. ೦-೪೨). ಟಾಳಿ : ೧. 'ಟಾಳಿಕಾಱ', 'ಟಾಳಿಸು' ಪರಾ. ಟೌಳಿ₁ : ೧. ನಟನೆಗಳ ನಾಡು ನಾಟಕ ನರ್ತನದ ಬೀಡು ಕುಟಿಲಂಗಳೀಡು ಟೌಳಿಯ ಜೋಡು ನಿತ್ಯಲಟಮಟಗಳ ನಿವಾಸ (ರುಕ್ಮಾಂಗ. ೩-೩೯). ೨. ಸುಳ್ಳು ; ಹುಸಿ : ಅಕ್ಕ ನೀನಾಡಿದ ನುಡಿಯೆಲ್ಲ ನೃಪತಿಗೆ ತಕ್ಕವಲ್ಲದೆ ಟೌಳಿಯುಂಟೆ (ಭರಚ. ೭-೩). ಠವಣೆ₁ : ೧. 'ಠಕ್ಕುಠವಣೆ' ಪರಾ. ಠವಳಿ : ೨. ಚೆನ್ನಾಗಿ ಕಂಡಲ್ಲಿ ಬಾಯಿ ಸವಿಯವುಂಡು ಟೊಣ್ಯನಾಗಿಪ್ಪೆನು ಠವಳಿ ಪೇಳಿ (ಮೋಕ್ಷದೀ. ೭೫-೩). ಠವುಳಿ₁: ೧. ಯಾಕವ್ವ ಈ ಠವುಳಿ ನಿಘಂಗೆ (ಕುಮಾಸಾಂ. ೧೪೬). ಠಾಳಿ : ೩. ಹೀಯಾಳಿಕೆ ; ತಿರಸ್ಕಾರ. 'ಠಾಳಿಸು' ಪರಾ. ಠೌಳಿ₁ : ೧. ಆರರೆ ಠೌಳಿಯ ವಿದ್ಯೆಯೊ ಮಹೇಂದ್ರಜಾಲವಿದೊ (ಸಾನಂಚ. ೮-೯೦); ಖೂಳ ತೆಗೆ ಪೆಱಸಾರು ಠಕ್ಕಿನ ಠೌಳಿಯೂಟವೆ ಕದನ (ಕುವ್ಯಾಕ. ೧೪-೦೭) : ಪುಸಿ ನುಸುಳನ್ಯಾಯ ಠೌಳಿವಂಚನೆಗಳು ವಸುಧೇಶನಾಳ್ವ ರಾಜ್ಯದಲಿ ಮಿಸುಕಲಮ್ಮವು (ಕಂನವಿ. ೭-೬೫) : ಅನ್ಯಾಯದಾಗರ . . . ಠೌಳಿಯ ಬೀಡು (ಜನರಾ. ೪-೧೩೫). ೨. ನಿಮ್ಮ ಮನುಷ್ಯರಂ ಕಳುಪಲೀವೆಂ ದ್ರವ್ಯಮುಂ ಠೌಳಿಯಲ್ತು (ದಿವ್ಯಚ. ೯-೩೮). ಡೌಳಿ : ೪. ಮೋಸಗಾರ ; ವಂಚಕ: ಡಂಬಕನು ಡೌಳಿಯು ವೃಥಾ ದುಱುದುಂಬಿಗಂ(ಮದೀಪು. ೩-೨೬). ತವುಳಿ: ೨. ಕವಡು ಕುಟಿಲಗಳಿಲ್ಲ ಮನದೊಳು ಅರಸಿ ನೋಡಿದಡೆ ತವುಳಿ ಪೇಳುವನಲ್ಲ (ಹಮುಚ. ೧೧೭). [ ದೇ.॥ ತಮಿ. ಟವಳಿ; ತೆಲು. ಠವಳಿ ]

**ಟವಳಿಗಾರ** 'ಟವಳಿಗಾಱ' ನೋ.

**ಟವಳಿಗಾಱ, ಟವಳಿಗಾರ, ಟವುಳಿಕಾಱ, ಟಾಳಿಕಾಱ, ಟೌಳಿಕಾಱ, ಠವುಳಿಕಾಱ, ಠೌಳಿಕಾಱ, ಠೌಳಿಗಾರ** (ನಾ). ಮೋಸಗಾರ ; ಕಪಟಿ; ವಂಚಕ : ಎಂಥಾ ಟವಳಿಗಾಱನಮ್ಮ ಗೋಪ್ಯಮ್ಮ ಕೇಳೆ ಎಂಥಾ ಟವಳಿಗಾಱನಮ್ಮ (ಕನಕ. ೧೦೦ ಪಲ್ಲವಿ). ಟವಳಿಗಾರ: ಟವಳಿಗಾರನ ಮೈಮೇಲೆ ಗವುಳಿ ಬಿತ್ತು (ಗಾದೆ). ಟವುಳಿಕಾಱ : ಚೆಂಡ ಕಳುಹುವೊಲು ಬಲು ಟವುಳಿಕಾಱನ ಚೆಂಡನೆಲ್ಲರು ನೋಡುತಿರಲು ಕೊಂಡೊಯ್ದು ಕುಟಿಲದೇವತೆಗಳವಳ ಪದಪುಂಡರೀಕಕೆ ಸೇರಿಸಿದವು (ಕುರಾಸಾಂ. ೩೧-೧೧೯). ಟಾಳಿಕಾಱ: ಚಾಳಿಸುವ ಟಾಳಿಕಾಱನ ಮನದ ಚಮತ್ಕಾರವಿರಬೇಕು (ಪ್ರಭುಪು. ೫-೭೨). ಟೌಳಿಕಾರ: ಅಱಿಯೆಯಾ ನೀನಿದ ನಗೆಕಾಱ ಬಗೆಕಾಱ ಮಱಕಾಱ ಬಲು ಟೌಳಿಕಾಱ (ಭರಚ. ೮-೨೫). ಠವುಳಿಕಾಱ : ಕರಸ್ಥಲದಲ್ಲಿ ಲಿಂಗವ ಹಿಡಿದುಕೊಂಡು ಠವುಳಿಕಾಱನಂತೆ ಮನವ ಕದ್ದು ಮಾತನಾಡುತ್ತ ಮನೆಮನೆಗೆ ಹೋಗಿ ಹೊಟ್ಟೆಯ ಕಿಚ್ಚಿಗೆ ಸಟೆಯ ಶಾಸ್ತ್ರವ ಹೇಳುವ ಡೊಂಬರಂತೆ (ಘನವ. ೩೪-೨೬). ಠೌಳಿಕಾಱ : ಡೊಂಕಣಿಯ ಠಕ್ಕಿನ ಠೌಳಿಕಾಱನು ನಿನ್ನ ಮಾಯೆಯ ಹೇಳಲಮ್ಮೆನು (ಕುವ್ಯಾಕ. ೨೬-೨೬) ; ಕಡುಗನ್ನಗತಕದ ಠೌಳಿಕಾಱನೆಳೆಯಳೆ ಕೇಳ ನಿನ್ನಡಿಗೆ ನಿನ್ನಕ್ಕನಂ ಮಣಿಯಿಸುವೆನೆಂದೊಡಂ ಬಡಿಸಿದನು (ಸಾಳ್ವಭಾ. ೭೬-೨). ಠೌಳಿಗಾರ : ಠೌಳಿಗಾರನ ಹತ್ತಿರ ಧರ್ಮ ಉಂಟೇ ? (ಗಾದೆ). [ ಟವಳಿ + – ಕಾಱ ]

**ಟವಾಳ** 'ಟವಮಾಳ' ನೋ.

**ಟವಾಳಿಸು, ಠವಮಾಳಿಸು, ಠವಾಳಿಸು** (ಕ್ರಿ). ೧. ಮೋಸಗೊಳಿಸು ; ವಂಚಿಸು. ೨. ಮರುಳುಗೊಳಿಸು ; ಮೋಹಕ್ಕೆ ಒಳಪಡಿಸು : ರಸ ಮಡವು ಮುಂಕೊಂಡುಯಿದಿರೇಳ್ವಂತೆ ಚಿತ್ತ ಮುಂಬರಿವುದೀತನ ಟವಾಳಿಪೆ ಪ್ರೌಢಿಯಿಂ (ಪ್ರಭುಪು. ೮-೬೩). ಠವಮಾಳಿಸು: ೧. ತಿರುನೀಲಕಂಠರಂ ಮಾಂಜಿ ಸೂರುಳ್ಗೊಂಡ ನಿರತಂಗಮರನೀತಿಯಂ ಠವಮಾಳಿಸಿ ಮಟ್ಟಮಿರದೊಕ್ಕಲಂ ಮಾಱುಗೊಂಡಂಗೆ ನಂಬಿಯನಳಿಪಿ ತೊಳ್ತುಗೊಂಡವಂಗೆ (ಪದ್ಮರಾ. ೧೩-೮). ಠವಾಳಿಸು : ೧. ಕನಸು ಕಂಡು ವಿಚ್ಚತ್ತೆನೆನುತಂ ಠವಾಳಿಸಿ ಸವತಿಯಂ (ಪ್ರಭುಪು. ೭-೧೬೯) : ಶಿವದೀಕ್ಷೆಯಂ ಪಡೆದೆನೆಂದಾರೈಕೆಯಿಲ್ಲದೆಮ್ಮಂ ಠವಾಳಿಸಿ ನಿಮ್ಮ ಕಾರುಣ್ಯಕತಿದೂರನಾಗಿ (ಬಕೋಚು. ೯-೪೪). ೨. ಕ್ರೂರರರೂಪನು ಧರಿಸಿ ನುಂಗುವ ಮಾರಿಯಾ ಠವಾಳಿಸುವ ಸಂಹಾರರರೂಪಿಂದಿಹುದು (ಸ್ವರೂಪಾ. ೦-೨೦).

[ ಟವಾಳ (<ಟವಮಾಳ) + – ಇಸು₃ ]

**ಟವುಳಿ₁** 'ಟವಳಿ' ನೋ.

**ಟವುಳಿ₂, ಟೌಳಿ₂, ಠವುಳಿ₃, ಠೌಳಿ₂** (ನಾ). ೧. ಯೋಧರು ತಲೆಗೆ ಧರಿಸುವ ಲೋಹದ ಟೊಪ್ಪಿಗೆ ; ಸೀಸಕ ; ಶಿರಸ್ತ್ರಾಣ : ಅಂದಿನ ಆ ನೆತ್ತರಲ್ಲಿ ತೋದ ಕವಚ ಟವುಳಿ ಬಿಲ್ಲು ಬತ್ತಳಿಕೆ ಆ ಕೃಪಾಣ ಎಲ್ಲವನ್ನೂ ನಾಶಮಾಡಿದೆನು (ಸುಗುಗಂ. ೯೦-೨). ೨. ಉಕ್ಕಿನ ಕವಚ; ಯುದ್ಧಕವಚ:

ತನಂತ್ರಾಣ: (ಕಿ). ಟೌಳ್ಳಿ: ೧. "ಟೌಳಿ ಸೀಸಕವೆನಿಕು" (ಶಬ್ದಮಂ. ೪೩); "ಸೀಸಕವೆನ್ನಲ್ ತಲೆಟೌಳಿಯು" (ಶವಿಕಂ. ೧೩೧); ವಿಕಟಾಂಗದ ಕುದುರೆ . . . ಅದಟ ಮೇಲಿದ್ದ ಬಲ್ಲಹಂಗೆ ಬಲ್ಲೆಹ ಟೌಳಿ ಸುಲಲಿತ ತರಕಸ ಸಿಂಗಾಡಿಗತ್ತಿ (ಸುಂಕಬಂ. ೬೪). ಠವುಳ್ಳಿ: ೧. ಮಿಸುನಿಯ ಪಕ್ಕರೆ ಜೋಡು ಸವಗ ಠವುಳಿ[ಪಾಠಾಂ. ಟೌಳಿ]ಮಿಸುಪ ಖಂಡೆಯ ಪೀಡೆಯಗಳ ಪೊಸೆದಿತ್ತು (ಕುರಾಸಾಂ. ೩೯-೬೫); ತಲೆಠವುಳಿ ಜೋಡುದಗಲಿ ಬೆನ್ನೊಳಳ ವಟ್ಟ ಬಿಲ್ಲು ಬಾಣಗಳ ಬತ್ತಳಿಕೆಯು . . . ಕುದುರೆಯ್ಯೆತಂದುವು ಮುಲುಕರ ಹಿಮಸೆಂಬುವನ (ಕಂನವಿ. ೧೮-೪೩). ಟೌಳ್ಳಿ: ೧. "ಕಂಕಟಕ ಮೆನೆ ಟೌಳಿ" (ಮಂಗರಾ. ೪೬-೩೧); "ಸೀಸಕವೆನೆ ತಲೆಯ ಟೌಳಿ" (ಭಾರಶಿ. ೧೨); ಪರಿಪರಿಯಾದ ಮೈಜೋಡು ಟೌಳಿಯಸಾಂತುರವಣಿಸಿತು ರಾವುತರು (ಅಂಜಚ. ೬-೭೦); ತೊಟ್ಟ ವಜ್ರಾಂಗಿಯ ಜೋಡು ಸವಗ ಪೊಂಬಟ್ಟಲ ಚೀನಿಯ ಟೌಳಿ ಕಟ್ಟಿದ ಬಿರಿದು ಮೆಟ್ಟಿಯೆ (ಕುರಾಸಾಂ. ೧೨-೮೭); ಮುಚ್ಚಿದ ಕೂರಸಿಯ ನೆಗ್ಗಿದ ಹರಿಗೆಯ ಹಂಚುಹಚ್ಚಯಾದ ತಲೆಯ ಟೌಳಿಗಳ . . . ಕಾಲಾಳ್ಗಳು ಕುಟಾವಟಿಯಾದರು (ವರ್ಧಚ. ೬-೯೩). [ ? ]

ಟವುಳಿಕಾಜಿ 'ಟವಳಿಗಾಜು' ನೋ.

ಟವುಳಿನುಡಿ (ನಾ). ವಂಚನೆಯ ಮಾತು; ಮೋಸದ ಮಾತು: ಮಿಗೆ ಟಕ್ಕುನುಡಿ ಟವುಳಿನುಡಿಗಳಿಂ ಪುರುಷರನು ಬೆಗಡುಗೊಳಿಸುವ ಬನ್ನಣೆಯ ನುಡಿಯ ಭಾವೆಯರು (ನವಮೋ. ೨೪-೧೫). [ಟವುಳಿ$_1$ (<ಟವಳಿ)+ನುಡಿ$_2$]

ಟಸ್ಸೆ 'ಠಸ್ಸೆ' ನೋ.

ಟಳಾಯಿಸು 'ಟಲಾಯಿಸು' ನೋ.

ಟಳಟಳಿ, ಟರಟರೆ (ನಾ). ಒಂದು ಅನುಕರಣ ಶಬ್ದ: ಹುಯ್ಯಲನಿಕ್ಕು ವಂದದಿಂ ಟಳಟಳ ಜೇಕುಜೇಕು ಬೆಚೆ . . . ಎಂದುಮೊತ್ತಲು . . . ದರ್ದುರವ್ರಜಂ (ಅನಂಪು. ೯-೧೩). ಟರಟರ: ಅಂತೊಪ್ಪುವ ಕೆರೆಯೊಳ್ ಪಲವುಂ ಕಪ್ಪೆಗಳ್ ಟರಟರೆಂಬ ಶಬ್ದದೊಳ್ ಕರೆಯುತ್ತಮಿರ್ಪುದುಂ (ಪಂಚತಂ. ೩೦೪-೧೪).

ಟಾಂಕಿ, ಟಾಕ್ಕಿ$_3$ (ನಾ). ನೀರು ತುಂಬುವ ತೊಟ್ಟಿ,-ಪಾತ್ರೆ: ನಮ್ಮ ಮನೆಯ ಟಾಂಕಿ ಸುಮಾರು ಇಪ್ಪತ್ತೈದು ಕೊಡ ನೀರು ಹಿಡಿಯುತ್ತದೆ (ರೂಢಿ). ಟಾಕ್ಕಿ: ಪೇಟೆಯ ಮನೆಯಲ್ಲಿ ಒಂದು ಟಾಕಿ ಇಲ್ಲದಿದ್ದರೆ ಹೇಗೆ? (ರೂಢಿ). [ ←ಮರಾ. ಟಾಂಕೀ, ಟಾಕೀ ]

ಟಾಂಗ$_1$ 'ಟಾಂಗಾ' ನೋ.

ಟಾಂಗ$_2$, ಟಾಂಗು (ನಾ). ಕಾಲು; ಮೊಳಕಾಲು. ಟಾಂಗು: ಮುಗ್ಗರಿಸಿ ಬಿದ್ದಿರುವ ಆತನ ಬೆನ್ನನ್ನು ಇವನು ಟಾಂಗಿನಿಂದ ತಿವಿದನು (ರೂಢಿ).

ಟಾಂಗನಿಕ್ಕು = (ಮೊಳ) ಕಾಲನ್ನೂರು: ದೇವತೆಗಳು ಆ ರಕ್ಕಸನೆಡೆಗೆ ಬಂದು ತಮ್ಮ ಕಿವಿಯ ಹಿಡಿದುಕೊಂಡು ಟಾಂಗನಿಕ್ಕಿ ನಮಸ್ಕರಿಸಿ (ಭೈರಸೂ. ೪೧). ಟಾಂಗುಕೊಡು = (ಎದುರಾಳಿಯನ್ನು ಕೆಳಗೆ ಬೀಳಿಸಲು) ಎದುರಾಳಿಯ ಕಾಲಿಗೆ ಅಡ್ಡಗಾಲು ಇಡು: ಟಾಂಗುಕೊಟ್ಟು ನನ್ನನ್ನು ಅವನು ಬೀಳಿಸಿದ (ರೂಢಿ). [ ←ಹಿಂ. ಮರಾ. ಟಾಂಗ. / ಸಂ. ಟಂಗ ]

ಟಾಂಗಾ, ಟಾಂಗ$_1$ (ನಾ). ಸಾಮಾನ್ಯವಾಗಿ ಹಿಂಭಾಗದಲ್ಲಿ ಇಬ್ಬರು ಕುಳಿತುಕೊಳ್ಳಬಹುದಾದ ಎರಡು ಚಕ್ರದ ಒಂಟಿ ಕುದುರೆಯ ಗಾಡಿ: ಅಷ್ಟರಲ್ಲಿ ಹೊರಗೆ ಒಂದು ಟಾಂಗಾ ಬಂದು ನಿಂತಿತು (ಅಪನಾ. ೧೪೩); ಮನೆಯ ಮುಂದೆ ಟಾಂಗಾ ಬಂದು ನಿಲ್ಲುತ್ತಲೇ ಪದ್ಮಾವತಿ ಧಾವಿಸಿ ಹೊರಗೆ ಬಂದಳು (ಅಶೋಕ. ೧೫೩). ಟಾಂಗ$_1$: ಟಾಂಗ ರಿಕ್ಷಾಗಳ ನೆಳೆಗೊಳಗಾಗದೆ ನಿಂತೆ (ಇಂಚಾಪ. ೧೦೩-೫); ಉಳಿದ ಪಯಣಿಗರಿಗೆ ಮೋಟರು ಟಾಂಗ ಮೊದಲಾದ ವಾಹನಸೌಕರ್ಯಗಳು ಸಿಗುತ್ತವೆ (ಅಳನಿ. ೨). 'ಜಟಕಾ$_2$' ಪರಾ. [ ←ಹಿಂ. ಟಾಂಗಾ ]

ಟಾಂಗಾವಾಲ (ನಾ). ಟಾಂಗಾ ಹೊಡೆಯುವವನು: ನಗರಗಳಲ್ಲಿ ಇನ್ನೂ ಟಾಂಗಾವಾಲಗಳ ಸೊಕ್ಕು ಇಳಿದಿಲ್ಲ (ಸಮಜೀ. ೮, ೬೬೦). [ ←ಹಿಂ. ಟಾಂಗಾವಾಲಾ ]

ಟಾಂಗು 'ಟಾಂಗ$_2$' ನೋ.

ಟಾಂಟಾಂ (ನಾ). ತಮಟೆಯನ್ನು ಬಾರಿಸುತ್ತ ಬೀದಿಬೀದಿಗಳಲ್ಲಿ ಪ್ರಚಾರಮಾಡುವ ಕ್ರಮ; ತಮಟೆ ಬಡಿಯುತ್ತ ಡಂಗುರ ಸಾರು ವಿಕೆ: ಹರಾಜು ಯಾವ ತಾರೀಖಿನಲ್ಲಿ, ಯಾವ ಸ್ಥಳದಲ್ಲಿ ಆಗುತ್ತದೋ ಅದನ್ನು ಕುರಿತು ಟಾಂಟಾಂ ಮೂಲಕ ಪ್ರಸಿದ್ಧಪಡಿಸಬೇಕು (ಗ್ರಾಮಾಕ. ೭೬).

ಟಾಂಟಾಂಮಾಡು = ಎಲ್ಲರಿಗೂ ತಿಳಿಯಪಡಿಸು; ಬಹಿರಂಗಪಡಿಸು: ಅಷ್ಟರೊಳಗೆ ಅವನು ಆ ಗುಟ್ಟನ್ನು ಟಾಂಟಾಂಮಾಡಿಬಿಟ್ಟನು (ರೂಢಿ).

ಟಾಂತ (ನಾ). ಟಕಾರದಲ್ಲಿ ಕೊನೆಗೊಳ್ಳುವ ಶಬ್ದ: ಟಾಂತಕ್ಕೆ ಅಟ್ಟು-ಅನುಧಾವನೇ (ಶಮಧಾ). [ ಟ + ಅಂತ$_2$ ]

ಟಾಂತಾಕ್ಷರ (ನಾ). ೧. 'ಟ' ಎಂಬ ಅಕ್ಷರವು ಕೊನೆಯ ಅಕ್ಷರವಾಗಿರು ವಂಥದು. ೨. [ಜೈನ] 'ಟ' ಎಂಬ ಅಕ್ಷರವನ್ನು ಕೊನೆಯಾಗುಳ್ಳ ಒಂದು ಮಂತ್ರ: ಟಾಂತಾಕ್ಷರಮಮನನುಷ್ಠಿಸೆ ಚಿಂತಿತ ಫಲಸಿದ್ಧಿಯಕ್ಕುಮೆಂಬರ್ (ಜಿನಾಳ. ೧೨). [ ಟಾಂತ + ಅಕ್ಷರ ]

ಟಾಕ 'ಟಾಕು$_2$' ನೋ.

ಟಾಕಣ, ಠಾಕಣ (ನಾ). ಒಂದು ಬಗೆಯ ಗಿಡ್ಡ ಕುದುರೆ: ಬೆಟ್ಟಸೀಮೆಗಳಲ್ಲಿ ಕುದುರೆ, ಟಾಕಣ, ಹೇಸರಗತ್ತೆ, ಕತ್ತೆ ಹೆಚ್ಚು ಉಪಯೋಗಕರ (ಭೂವಿವ. ೨೭೦); ಮಡಿಕೇರಿಯ ಮಳೆಯಲ್ಲಿ ತಟ್ಟು, ಟಾಕಣ ಏರಲು ಕಲಿತ ಅವರು, ಅಶ್ವಾರೋಹಿಗಳಾಗಿ, ಬೆಟ್ಟದ ದೊರೆಯಂತೆ ಬಂದರು (ಕುದಿಕೂ. ೬೪); ಮಾತಂಗಿ ಬಿಳಿಯ ಅರಬ್ಬೀ ಟಾಕಣದ ಮೇಲೆ ಕುಳಿತು . . . ಶತ್ರುಸೈನ್ಯವನ್ನಿದಿರಿಸಿದಳು (ನಡಿದಾ. II, ೯೯೩). ಠಾಕಣ: ಶೀನಪ್ಪನ ಹತ್ತಿರ ಮಾತನಾಡುತ್ತಿರುವಾಗ ಮನಸ್ಸು ಅರಬ್ಬಿ ಠಾಕಣದಂತೆ ನರ್ತಿಸುತ್ತದೆ (ಅನಾಥ. ೩೩೭); ರಾಯ ಹುಲಿಯಂತೆ ಒಂದೇ ಹಾರಿಗೆ ಠಾಕಣದ ಮೇಲೆ ಕುಪ್ಪಳಿಸಿ ಕುಳಿತನು (ಆಳಾಳ. ೬೪); ಯುದ್ಧದಲ್ಲಿ ಜಯಿಸಿದಾಗ ತನ್ನ ಪಾಲಿಗೆ ಬಂದಿದ್ದ ಒಂದು ಅರಬ್ಬಿ ಠಾಕಣವನ್ನು ಹತ್ತಿದನು (ಭಾರವೀ. ೩). [ ←ಮರಾ. ಟಾಕಣ; ಹಿಂ. ಟಾಂಗನ್./ಸಂ. ಟಂಕಣ, ಟಂಕನ ]

ಟಾಕಾಪೂರ್ತಿ (ಅ). ತಾತ್ಪೂರ್ತಿಕವಾಗಿ; ಸದ್ಯಕ್ಕೆ: ಕನ್ನಡವಾಙ್ಮಯವನ್ನೇ ಪರೀಕ್ಷೆಗೆ ತೆಗೆದುಕೊಂಡು ಅಭ್ಯಾಸಿಸಿದವರು ಕೂಡ, 'ಟಾಕಾಪೂರ್ತಿ' ಎಂಬಂತೆ ಪರೀಕ್ಷೆಗಷ್ಟಷ್ಟೇ ಓದಿ ಅದಾದ ಮೇಲೆ . . . ಓದಿದುದನ್ನೂ ಮರೆತುಬಿಡುವ ಪರಿಸ್ಥಿತಿ ಕಂಡುಬರುತ್ತಿದೆ (ಬಿದುರಿ. ೯೩ಪ್ರಸ್ತಾವನೆ). [ ←ಮರಾ. ಠಾಕಾಪೂರ್ತೀ ]

ಟಾಕಿ$_1$, ಟಾಕು$_1$ (ನಾ). ಒಂದು ಬಗೆಯ ಹೊಲಿಗೆ,-ಜೋಡಣೆ: ಅಂಗಿ ಹರಿದಿದೆ. ಎರಡು ಟಾಕಿ ಹಾಕಿಕೊಡಿ (ರೂಢಿ). ಟಾಕು$_1$: "ಹೊಲಿಗೆ, ಟಾಕು" (Stitch. ಇಂಕನಿ.).

ಟಾಕಿ ಹರಿ = (ಉಕ) ಧೈರ್ಯ ಕುಗ್ಗು: ರಾಹು ಪೋಲೀಸರನ್ನು ಕರೆಯ ಕಳುಹಿಸಿದ. ಅದನ್ನು ಕಂಡಕೂಡಲೇ ಮಾರವಾಡಿಯ ಟಾಕಿ ಹರಿಯಿತು (ಮೋಜೀವ. ೧೨). ಟಾಕಿ ಹಾಕು, ಟಾಕು ಹಾಕು = ಜೋಡಿಸಿ ಹೊಲಿ: ಬಟ್ಟೆ ಹರಿದುಹೋಗಿದೆ. ಟಾಕಿ ಹಾಕಬೇಕು (ರೂಢಿ); ದಾಟು ಹೊಲಿಗೆ ಹಾಕು; ಟಾಕು ಹಾಕು (Baste. ಇಂಕನಿ.). [ ←ಹಿಂ. ಮರಾ. ಟಾಕಾ, ಟಾಂಕಾ ]

ಟಾಕಿ$_2$ (ನಾ). (ಲೋಹ, ಕಲ್ಲು ಇವನ್ನು ಕೆತ್ತಿ ಆಕಾರಕ್ಕೆ ತರುವ ಒಂದು ಬಗೆಯ ಉಕ್ಕಿನ ಬಾಯಿಯು) ಉಳಿ ಮತ್ತು ಅದರ ಪೆಟ್ಟು: ಅವನ ಮನೆಯಲ್ಲಿ ಮಾತ್ರ ಪಾತ್ರೆಗಳಿಗೆ ಟಾಕಿ ಹಾಕುವ ಕೆಲಸ ನಡೆದೇ ಇತ್ತು (ಮೂರುದಾ. ೯೯). [ ←ಮರಾ. ಟಾಕೀ. / ಸಂ. ಟಂಕ ]

**ಟಾಕಿ₂** 'ಟಾಂಕಿ' ನೋ.

**ಟಾಕಿ₃** (ನಾ). ಮಾತಾಡುವ ಚಲನಚಿತ್ರ: ಭಾರತದಲ್ಲಿದ್ದ ಮೂಕಿ ನಿರ್ಮಾಣ ಸಂಸ್ಥೆಗಳು ಒಂದೊಂದಾಗಿ ಟಾಕೀನಿರ್ಮಾಣಸಂಸ್ಥೆಗಳಾದುವು (ನಟಸಾ. ೬೬೭); ಈಗೇನು ಸಿನಿಮಾ, ಟಾಕಿ, ನಾಟು ಮುಂತಾದುವುಗಳಿಗೇ ಹೆಚ್ಚು ಪ್ರೋತ್ಸಾಹನ (ರಾಯುಕ. ೬೫). [ ←ಇಂ. Talkie ]

**ಟಾಕು₁** 'ಟಾಕ್ಕಿ' ನೋ.

**ಟಾಕು₂, ಟಾಕ** (ನಾ). ೧. ಲೇಖನಿ: ಟಾಕು, ಗಲಗು ಅಲ್ಲದೆ ಬೆಂಕಿಪೆಟ್ಟಿಗೆಯ ಒಂದು ಕಡ್ಡಿಯಿಯೂ ಸಹ ನನಗೆ ನಡೆಯುತ್ತಿತ್ತು (ಸ್ವ್ಯತಿಚಿ. ೧೫೭); ಹಳ್ಳಿಯ ಆ ದೊಡ್ಡ ಅಧಿಕಾರಿ ಟಾಕನ್ನು ಯತ್ನಪೂರ್ವಕವಾಗಿ ಹಿಡಿಯುತ್ತ . . . ನೋಡಿದ (ಜಮಿನ್ನಾ. ೫): ಸಣ್ಣ ಸ್ವದೇಶಿ ಅಂಗಡಿಯನ್ನು ತೆರೆದು ಪೆನ್ಸಿಲ್ ಹಾಳೆ ಟಾಕು ಮೊದಲಾದುವನ್ನು ಮಾರಲು ಇಡುತ್ತಿದ್ದ (ಸೇನಾಹ. ೧೨). ೨. (ಘನವಸ್ತುಗಳ) ಭಾರದ ಒಂದು ಅಳತೆ,–ತೂಕ: ಇಪ್ಪತ್ತುನಾಲ್ಕು ಟಾಕಿನ ಘನವಾನ ಶಾರ್ಙ್ಗವ ತರಿಸಿದನು (ಕುರಾಸಾಂ. ೧೪-೧೧). **ಟಾಕ:** ೨. ೨೪ ರತಿ ಅಂದರೆ ೧ ಟಾಕ (ಮುಂಬವ್ಯಾ. ೧೩೭).
[ ←ಮರಾ. ಟಾಂಕ್ ]

**ಟಾಕೋಟಾಕು, ಠಾಕೋಠಾಕು. ಠಾಕೋಠೀಕು** (ಅ). ಕಾಲಕ್ಕೆ ಸರಿಯಾಗಿ; ತಕ್ಷಣ; ತಡಮಾಡದೆ: ಟಾಕೋಟಾಕು ತಲುಪಿಸಬೇಕೆಂದು ವಿಳಾಸ ಬರೆದು ಟಪಾಲು ಮೇಲೆ ಹಾಕಿಬಿಟ್ಟರು (ಕಥಾಮಂ. IV, ೪೩). **ಠಾಕೋಠಾಕು:** ಠಾಕೋಠಾಕು ಎಂಟುಗಂಟೆಗೆ ಬಂದೇಬಿಟ್ಟ ಆಸಾಮಿ (ರೂಢಿ). **ಠಾಕೋಠೀಕು:** ಎರಡು ಗಂಟೆಗೆ ಠಾಕೋಠೀಕಾಗಿ ಗೌಡ ಹಾಜರಾದ (ಡಂಡತೋ. ೫೧). [ ←ಮರಾ. ಟಾಕೋಟಾಕ್ ]

**ಟಾಚಣಿ** (ನಾ). (ಉಕ) ಗುಂಡಂಸೂಜಿ: ಅದು ಬಹಳ ಚಿಕ್ಕದಾಗಿ ಅಂದರೆ ಟಾಚಣಿಯ ಮೊನೆಯಷ್ಟು ಸೂಕ್ಷ್ಮವಾಗಿ ಕಾಣುತ್ತಿತ್ತು (ಮಹಾತ್ಮಾ. ೧೨೨): ಕೆಲವು ಮಾತುಗಾರರು ತಮ್ಮ ಮುಂದಿದ್ದ . . . ಪಿನ್ ಕುಶನ್ನಿನ ಟಾಚಣಿಯೊಡನೆ ನಿರರ್ಥಕವಾಗಿ ಹೋರಾಡುವರು (ಗೋಯಾತ್ರ. ೬೦).
[ ←ಮರಾ. ಟಾಚಣೀ ]

**ಟಾತಡಾಧಣ** (ನಾ). ನಿಶ್ಚಿತವಾದುದು; ನಿಸ್ಸಂದೇಹವಾದುದು; ನಿರ್ದಾಕ್ಷಿಣ್ಯವಾದುದಂ; ಅಚಲವಾದುದು (?): ಎನ್ನ ನುಡಿ ಟಾತಡಾಧಣ [ಪಾಠಾಂ. ಯೆರಡಾದೊಡ]ಮೆನ್ನಂ ಬೆಸಸುವುದು ರಾಜಸೂಯಂ ಬೇಳಲ್ (ಪಂಪಭಾ. ೬-೨೬): "ಟವರ್ಗಾಕ್ಷರಗಳಂತೆ ನಿಯತ. ಶಾಶ್ವತ" (ಪಂಪದೀ. ೨೨೦). [ ? ]

**ಟಾಣ** 'ಠಾಣ' ನೋ.

**ಟಾಣಕೋಲು** (ನಾ). ಬಟ್ಟೆ ನೇಯುವ ಮಗ್ಗದಲ್ಲಿ ನೂಲುಗಳನ್ನು ಹೆಣೆಯಲು ಹಾಸಿನ ಮೇಲ್ಗಡೆಗೆ ಹಾಗು ಕೆಳಗಡೆಗೆ ಜೋಡಿಸಿರುವ ಕೋಲು; ನೇಯ್ಗೆಕೋಲು: ಟಾಣಕೋಲುಗಳೆರಡು ಕಾಣಮಗ್ಗದೊಳೇನೊ (ಕನ್ನಜಾ. ೪೯೯). [ ←ಮರಾ. ಟಾಣಕೋಲ್ ]

**ಟಾಣಗುಂದೂರ್** (ನಾ). ಒಂದು ಊರಿನ ಹೆಸರು: ಆದರ ಸೀಮೆ ಬಡಗ ಟಾಣಗುನ್ದೂರ ಸೀಮೆಯ ಪಳ್ಳಂ (ಎಕ. VII, ಶಿಕಾರಿ. ೧೨೦-೧೭; 1048). 'ಠಾಣಗುಂದೂರ್' ಪಠಾ. [ ? + ಊರ್ ]

**ಟಾಣದೀವಿಗೆ** 'ಠಾಣದೀವಿಗೆ' ನೋ.

**ಟಾಣಯ, ಟಾಣೆಯಂ, ಠಾಣೆಯ, ಠಾಣ್ಯ, ತಾಣ್ಯ** (ನಾ). ೧. ನೆಲೆ; ಬೀಡು; ಆಶ್ರಯ: ಗರುಡ ಗಾಂಧರ್ವಗಳೆಕ್ಷಾದ್ಯರಿಗೆ ಕೊಟ್ಟಿಹ ದೇಶಗಳು ತನ್ನವರಿಗೆ ಟಾಣಯವಾದವೆಲೆ ಭೂಪಾಲ (ದೇವೀಮ. ೫-೧೯). **ಟಾಣೆಯ:** ೨. (ಕೋಟೆ, ಕಿಲ್ಲೆ, ಪಟ್ಟಣ ಮೊದಲಾದುವುಗಳ) ರಕ್ಷಣೆಗಾಗಿ ಇಟ್ಟಿರುವ ಸೈನ್ಯ; ರಕ್ಷಕ ಸೈನ್ಯ; ಕಾವಲುದಂಡು: ದ್ವಿಸಪ್ತಲೋಕಂಗಳ್ಗೆ ಟಾ[ಪಾಠಾಂ. ಠಾ]ಣೆಯುವನಿಟ್ಟು ವಿಧಿ ಸಪ್ತತ್ರಯಾಮವತಾರಾಧಿಪರನೆಬ್ಬಿಟ್ಟದಂ ಖಿಳಂ ಸಾಮಾನ್ಯನೇ (ಚಬಪು. ೪೭-೧೧). **ಠಾಣೆಯ:** ೧. "ತಾಣಾಂತರವೆಂದೆನಲು ಠಾಣೆಯ" (ಚತುನಿ. ೦೦೯); ಕುಪ್ಪಟೂರ ಠಾಣೆಯದೊಳ ಠಾಣೌಘ ಸಹಿತಂ ಪಿರಿಯಕೆ[ರೆ]ಗೆ ೨ ಲಕ್ಕವಡಕೆಯ ಸುಂಕವುಂ ಬಿಟ್ಟರ್ (ಕಇ. II, ೪-೨೦; 1072); ಗಣೇಶನೊಡನೆ ಠಾಣಿಂತೆಂದು ನಾಕಂ ನೋಳ್ಪೊಡೆ ನನ್ನದು ವೈಕುಂಠಂ ನನ್ನ ಠಾಣೆಯಂ (ವೀರವಿ. ೫-೧೨). ೩. ಸೇನಾ ಶಿಬಿರ; ಪಾಳೆಯ: ಇಂದು ನಾಳಿನೊಳೆಮ್ಮ ರಾಯ ಕೋಪದೊಳೆತ್ತಿ ಬಂದು ನಿಮ್ಮಯ ಠಾಣೆಯ[ಪಾಠಾಂ. ಣಯ, ಣ್ಯ]ಗಳ ಮುಂದುಗೆಡಿಸದಿರನು (ಕುರಾಸಾಂ. ೧೧-೧೩): ಸೆಳೆದರಿನೃಪರ ದುರ್ಗಗಳ ಠಾಣೆಯವನು ಬಲಿದು ಬಹಳ ದಿನಗಳನು ತಳುವದೆ ತಂದೀವೆನು (ಕಂನವಿ. ೮-೩೪). **ತಾಣ್ಯ:** ೧. ಊರಿಗೆ ಭೇಟಿ ಕೊಡುವ ಭಿಕ್ಷುಕರಿಗೆಲ್ಲ ರಾತ್ರಿ ತಾಣ್ಯ ಇದೇ (ರೂಪಸಂ. ೬೧). ೩. "ಪ್ರಚಕಂ, ಚಲಿತಾರ್ಥಕಂ ದಂಡು ತಾಣ್ಯದ ಸ್ಥಳ ಬಿಟ್ಟು ಹೊರಟದಕ್ಕೆ ಹೆಸರುಗಳು" (ಸಿದ್ಧಾಂತಿ. ೨೯೯). **ಠಾಣ್ಯ:** ೧. ಶತಬಾಹುವುಂ ಸುರನಗರದೊಳ್ ಠಾಣ್ಯಮಂ ಬಲಿದನುಳಿದಖಿಳದನುಜವಾಗ್ನೆಯರೊಳಮಮಾ (ಘೋರಾಸು. ೬೭).

**ತಾಣ್ಯ ಹಾಕು** = ಶಿಬಿರವನ್ನು ಸ್ಥಾಪಿಸು; ಪಾಳಯವನ್ನಿಡು: ದಂಡಿನೊಡನೆ ತಾಣ್ಯ ಹಾಕಿ ಸಮಯ ಹೊಂಚುವಿಕೆ (ಸಿದ್ಧಾಂತಿ. ೩೦೭); ಐಮಂಗಲ, ಪಾಳತಿ ಈ ಕೋಟೆಗಳನ್ನು ಮುತ್ತಿ ತಾಣ್ಯ ಹಾಕಿದರು (ಚಿತ್ರಪಾ. ೨೪). [ <ಪ್ರಾ. ಥಾಣಯ ]

**ಟಾಣಾಂತರ** 'ಠಾಣಾಂತರ' ನೋ.

**ಟಾಣಾದೀವಿಗೆ** 'ಠಾಣದೀವಿಗೆ' ನೋ.

**ಟಾಣೆಯ** 'ಟಾಣಯ' ನೋ.

**ಟಾಣೋಘ, ಠಾಣೋಗ** (ನಾ). ಒಂದು ಬಗೆಯ ತೆರಿಗೆ; ಸರಕಿನ ರೂಪದಲ್ಲಿ ಪಡೆಯುವ ಸುಂಕ (?): ಸೋಮೇಶ್ವರದೇವರ್ಗ್ಗೆ ನಿವೇದ್ಯಕ್ಕಂ ಸೊಡರೆಣ್ಣೆಗಂ ಖಣ್ಡಸ್ಫುಟಿತಕ್ಕನ್ನು ವಡ್ಡರಾವುಳಂ ಟಾಣೋಘ ಸಹಿತಂ . . . ಮೂಜುಂ ಸುಂಕದೊಳವಾಗಿ ಬಿಟ್ಟ ಉಪ್ಪಿನ ಹೇಜು ಅಯ್ದುತ್ತು (ಸೌಇಇ. XX, ೩೪-೧೯; 1058). **ಠಾಣೋಗ:** ದೇವಧರ ದಣ್ಣನಾಯಕನ ಬೆಸದಿಂ ಬಳ್ಳಿಗಾವಿಯ ಸ್ಥಳದ ಠಾಣೋಗದ ಸುಂಕವೊಗ್ಗಡೆ ಕೊಮ್ಮರಾಜಂ (ಎಕ. VII (s), ಶಿಕಾರಿ. ೩೩೪-೧೯; 1100). [ ? ]

**ಟಾನಿಕ್ಕು** (ನಾ). ಶಕ್ತಿವರ್ಧಕ ಔಷಧ: ಬಡರೋಗಿಗಳಿಗಾಗಿ ಸರಕಾರ ಒದಗಿಸುತ್ತಿರುವ ಮದ್ದುಗಳು, 'ಟಾನಿಕ್ಕು'ಗಳು ಅವರಿಗೆ ದೊರೆಯುತ್ತಿಲ್ಲ (ದೀಪದ. ೧೭೫). [ ←ಇಂ. Tonic ]

**ಟಾಪರಿಸು** (ಕ್ರಿ). ತಿನ್ನು; ಭಕ್ಷಿಸು: ಇದು ಜಂಬುನೇರಳೆ ಕಾಳಿದಾಸರೇ, ನೀವಿದನ್ನು ಟಾಪರಿಸಬೇಕು (ಗಂಗಾವ. ೪೦).
[ ಟಾಪರ₀ (P ←ಮರಾ. ಟಾಪರ) + – ಇಸು₃ ]

**ಟಾಪು** (ನಾ). ೧. ದ್ವೀಪ; ನಡುಗಡ್ಡೆ: ದಂಡು ಸೇರಿಸಿ ಆ ದಳವನ್ನು ಸ್ಥಲದುರ್ಗಗಳು ಅಂದರೆ ಸಮುದ್ರದ ಟಾಪುಗಳು . . . ಬೆಟ್ಟದ ಕೋಟೆಗಳು . . . ನೆಲೆಯಾಗಿರುವ ಹಾಗೆ ವಿಂಗಡಿಸಿದನು (ಕಥಾಮಂ. IV, ೭೯): ಒಂದು ಹಡಗಿನ ಮೇಲೆ ಇವರಿಬ್ಬರನ್ನು ಕೂರಿಸಿ ಸಮುದ್ರದ ಮೇಲೆ ಕರೆದುಕೊಂಡು ಹೋಗಬೇಕು . . . ದೂರವಾಗಿರತಕ್ಕ ಅಂಥಾ ಒಂದು ಟಾಪಿನ ಮೇಲೆ ಆ ಮೇದರವನನ್ನೂ ಅರಸನನ್ನೂ ಬಿಟ್ಟು ಬರಬೇಕು (ಸುಮತಿ.೩೭). ೨. (ಕರಾ)=ಟಾಪುಶಿಕ್ಷೆ: ಆದುದರಿಂದ ಈ ಮರಣಾಂತರದ ಟಾಪನ್ನು ಸ್ವೀಕರಿಸಬೇಕು (ಸರಸ. ೧೧೧). [ ←ಹಿಂ. ಟಾಪೂ./ಪ್ರಾ. ಟಪ್ಪ ]

**ಟಾಪುಟೀಪು** (ನಾ). ಶಿಸ್ತು; ಅಚ್ಚುಕಟ್ಟು: ಹೊಸ ಪದ್ಧತಿಯ ಟಾಪುಟೀಪಿನ ಮನೆಯಲ್ಲಿದ್ದ ಸುಶೀಲೆಗೆ ಈ ಹಳೇ ಪದ್ಧತಿಯ ಮನೆಯಲ್ಲಿ ಸ್ವಲ್ಪ ಎಡಚಿಡಚು ಎನಿಸಹತ್ತಿತು (ಅನಂತ. ೩).
[ ←ಮರಾ. ಟಾಪ್‌ಟೀಪ್. / ಇಂ. Tip-Top ]

**ಟಾಪುಶಿಕ್ಷೆ, ಟಾಪೂಶಿಕ್ಷೆ** (ನಾ). ದ್ವೀಪಾಂತರ ವಾಸದ ಶಿಕ್ಷೆ ; ಕರಿನೀರಿನ ಶಿಕ್ಷೆ ; ಗಡೀಪಾರಿನ ಶಿಕ್ಷೆ : ನಿನ್ನ ಒಂದು ಸಾಕ್ಷಿಯಿಂದಲೇ ನಿನ್ನ ಧನಿಯ ಮಗನಿಗೆ ಜನ್ಮ ಟಾಪುಶಿಕ್ಷೆಯನ್ನು ಅಮಲ್ದಾರರು ವಿಧಿಸಿದರು (ವಿಧಿವ್ಯ. ೨೨). **ಟಾಪೂಶಿಕ್ಷೆ:** ಅದರಲ್ಲಿ ಇಬ್ಬರಿಗೂ ಇಪ್ಪತ್ತು ವರ್ಷದ ಟಾಪೂಶಿಕ್ಷೆ ಯಾಯಿತು (ಗುರುಪ್ರ. ೬೮). [ ಟಾಪು + ಶಿಕ್ಷೆ ]

**ಟಾಪೂಶಿಕ್ಷೆ** 'ಟಾಪುಶಿಕ್ಷೆ' ನೋ.

**ಟಾರ್** 'ಟಾರು' ನೋ.

**ಟಾರು, ಟಾರ್, ಟಾರ್‍ು** (ನಾ). ೧. "ಮರ, ಕಲ್ಲಿದ್ದಲು, ಮೊ. ನ್ನು ಒಣಬಟ್ಟಿ ಇಳಿಸುವುದರಿಂದ ದೊರೆಯುವ, ಮರ, ಕಬ್ಬಿಣ, ಮೊ. ನ್ನು ಕೆಡದಂತೆ ಇಡಲು ಉಪಯೋಗಿಸುವ, ಕಪ್ಪುಬಣ್ಣದ ಅಂಟು ದ್ರವ : ಡಾಂಬರೆಣ್ಣೆ, ಕೀಲೆಣ್ಣೆ" (Tar. ಇಂಕನಿ.). ೨. (ಆಲಂ) ಬಹಳ ಕಪ್ಪು : ದೇವರು ತನ್ನ ಭಕ್ತರನ್ನು ತನ್ನ ಬಣ್ಣದಲ್ಲಿ ಸೃಷ್ಟಿಸಿದ್ದಾನೆ ಎಂಬುದರಲ್ಲಿ ನನಗೇನೂ ಸಂದೇಹವಿಲ್ಲ, ನಮ್ಮೂರ ನರಸಿಂಹಸ್ವಾಮಿಯ ಮೂಲವಿಗ್ರಹ ನೋಡಿ, ಟಾರು (ಬಿಸ್ತ್ರಕ. ೩). **ಟಾರ್ :** ೧. ರಕ್ತ ಸುರಿಯುವುದು ನಿಂತ ಕೂಡಲೆ ಒಡೆದ ಕೊಂಬಿನ ಮೇಲೆ ಟಾರ್ ಹಚ್ಚಿದ ಬಟ್ಟೆಯನ್ನು ಗಾಳಿಗೆ ಓಡದಂತೆ ಸಿಂಬಿಯಾಗಿ ಸುತ್ತುವುದು (ಗ್ರಾಮಾಳ. ೧೪೭). **ಟಾರ್‍ು :** ೧. ಉತ್ತಮವಾಗಿ ಟಾರು (Tarred) ಮಾಡಿದ ರಸ್ತೆಗಳಿಂದ ಧೂಳು ಏಳುವುದಿಲ್ಲ (ಬಾಲಪ್ರ. I, ೨೯೮). [ ←ಇಂ. Tar ]

**ಟಾರೆಣ್ಣೆ, ಟಾರೆಣ್ಣೆ** (ನಾ).=ಟಾರು ೧: "ಡಾಂಬರೆಣ್ಣೆ; ಕೀಲೆಣ್ಣೆ, ಟಾರೆಣ್ಣೆ" (Tar. ಇಂಕನಿ.). **ಟಾರೆಣ್ಣೆ:** ಮನೆಗೆ ಉಪಯೋಗಿಸಿದ್ದ ಮರಮುಟ್ಟುಗಳೆಲ್ಲ ಅನೇಕ ವರ್ಷಗಳಿಂದ ಹೊಗೆ ಹಿಡಿದು ಟಾರೆಣ್ಣೆ ಬಳಿದಂತೆ ಕರ್ರಗಾಗಿದ್ದುವು (ಕಾನೂರು. ೩೬). [ ಟಾರು + ಎಣ್ಣೆ ]

**ಟಾಪು** 'ತಾವ್ರು' ನೋ.

**ಟಾವೆಲು** 'ಟವಲು' ನೋ.

**ಟಾವೆಲ್ಲು** 'ಟವಲು' ನೋ.

**ಟಾಳಿ** 'ಟವಳಿ' ನೋ.

**ಟಾಳಿಕಾಜಿ** 'ಟವಳಿಗಾಜಿ' ನೋ.

**ಟಾಳಿಸು, ಠಾಳಿಸು** (ಕ್ರಿ). ೧. ವಂಚಿಸು ; ಮೋಸಗೊಳಿಸು : ಟಕ್ಕಂ ಟಾಳಿಸಿ ಕನ್ನಂಗೊಟಿದತಿ ಟಕ್ಕೆಯ ಮಣಿಗಳ ಕದ್ದು (ಪ್ರಭುಪು. ೯-೧೪೭). ೨. ಹೀಯಾಳಿಸು : ತಿರಸ್ಕರಿಸು : ಅಮರ್ದುಗಯ್ಯನಂ ಪೊಂದಾವರೆಯ ನಮಳಮಣಿಮುಕುರಮಂ ಪದಪಿನಿಂದೇಳಿಪ್ಪ ಟಾಳಿಪ್ಪ ಜಾಳಿಪೊಂದದಟನಿಂದೇಳಿಸಿತು ಸುದತಿಯಾ ವಿಜುಮಿನುಪ ವದನ (ಉದ್ಭಟಕಾ. ೨-೫೩). **ಠಾಳಿಸು :** ೨. ಕನಕಹರ್ಮ್ಯದ ವಸತಿಯಿಲ್ಲದೇ ಕಟಕದೊಳು ಬಿನದಿಸುವ ತರು ಗುಲ್ಮ ಲತೆ ಬಿದಿರ್ ಬೆತ್ತಗಳ ವನಿತೆಯರು ನೀವು ಕಂಡಬಿಯರಿವ ನೋಡಿಯೆಂದಲ್ಲಮಂ ಠಾಳಿಸಿದನು (ಪ್ರಭುಪು. ೫-೧೪೫).

[ ಟಾಳಿ (<ಟವಳಿ) + – ಇಸು₃ ]

**ಟಂಕ್ಚರ್, ಟಂಚರು** (ನಾ). ಒಂದು ಬಗೆಯ ಕ್ರಿಮಿನಾಶಕ ದ್ರವ ; ಮದ್ದ್ಯಾರ್ಕ : ಅದರ ಹೊಕ್ಕುಳಿಗೆ ಟಂಕ್ಚರ್ ಐಡಿನ್ ಮೊದಲಾದ ಕ್ರಿಮಿನಾಶಕವನ್ನು ಸವರಬೇಕು (ಬಾಲಪ್ರ. II, ೭೬೩). **ಟಂಚರು:** ಗಾಯಕ್ಕೆ ಟಂಚರು ಹಚ್ಚಿದರು (ರೂಢಿ). [ ←ಇಂ. Tincture ]

**ಟಂಗ್** (ನಾ). ಒಂದು ಅನುಕರಣ ಶಬ್ದ ; ಕಿಂದರಿ, ತಂಬೂರಿ, ವೀಣೆ ಮೊದಲಾದ ತಂತಿವಾದ್ಯಗಳನ್ನು ಬೆರಳುಗಳಿಂದ ಮಿಡಿಯುವಾಗ ಹುಟ್ಟುವ ಧ್ವನಿ.

**ಟಂಗ್‌ಟಂಗ್** (ದ್ವಿರುಕ್ತಿ) : ಕಿಂದರಿಜೋಗಿ ಟಂಗ್‌ಟಂಗ್ ಎಂದು ಕಿನ್ನರಿಯನ್ನು ಬಾರಿಸಿದನು (ರೂಢಿ).

**ಟಂಚರು** 'ಟಂಕ್ಚರ್' ನೋ.

**ಟಂಟಣಿ** (ನಾ). ಒಂದು ಅನುಕರಣ ಶಬ್ದ : ಸಂಜೆಯಾಗಲು ಎಲ್ಲರೊಡನೆ ಕರುಗಳ ಟಂಟಣಿಯಲ್ಲಿ ಯಾವುದೋ ಅವ್ಯಕ್ತ ಮಧುರ ಸಂದೇಶವನ್ನು ಕೇಳುತ್ತ ಮನೆಗೆ ಬರುತ್ತಿದ್ದ (ಶರಡ. ೨೦೩).

**ಟಂವ್‌ಗುಡು** (ಕ್ರಿ). ಟಂವ್ ಎಂದು ಕೂಗು : ಕೊಳದ ಬಾಂದಳದಲ್ಲಿ ಟಂವ್‌ಗುಡುವ ಟೀಂವಕ್ಕಿ ನೀನಾರೆ ಬಲ್ಲೆಯಾ ನಲ್ಲನೆಲ್ಲಿ (ನನಲ್ಲ. ೧೦-೬).

[ ಟಂವ್$_0$ + ಕುಡು$_1$ (<ಕೊಡು$_1$) ]

**ಟಂಹಕ್ಕಿ** 'ಟೀಂವಕ್ಕಿ' ನೋ.

**ಟಿಕ್** (ನಾ). ಒಂದು ಅನುಕರಣ ಧ್ವನಿ; ಗಡಿಯಾರದ ಚಲನದ ಶಬ್ದ.

**ಟಿಕ್‌ಟಿಕ್** (ದ್ವಿರುಕ್ತಿ) : ಗಂಟೆಯ ನೆಂಟನೆ ಓ ಗಡಿಯಾರ . . . ಟಿಕ್‌ಟಿಕ್ ಗೆಳೆಯಾ, ಟಿಕ್‌ಟಿಕ್‌ಟಿಕ್ (ಕವಪು. ೩-೩೮); (ತಂತೀವರ್ತಮಾನವನ್ನು ತಾನೇ ಬರೆದಿಡುವ ಸಲಕರಣೆಯ ವಿಷಯದಲ್ಲಿ) ಟಿಕ್‌ಟಿಕ್ ಎಂದು ಸುದ್ದಿ ಗುರುತಿಸು (Tick-out. ಇಂಕನಿ.). **ಟಿಕ್‌ಟಿಕ್ ಎನ್ನು =** (ಗಡಿಯಾರ ಮೊದಲಾದುವುಗಳ ವಿಷಯದಲ್ಲಿ) ಟಿಕ್‌ಟಿಕ್ ಎಂದು ಹೊಡೆ: ಗಡಿಯಾರ ಟಿಕ್‌ಟಿಕ್ ಎನ್ನುವ ಶಬ್ದ ಮಾತ್ರ ಕೇಳಿಸುತಿತ್ತು (ರೂಢಿ). **ಟಿಕ್ ಮಾಡು =** ಸರಿಯೆಂದು ಗುರುತುಮಾಡು : ಪತ್ರಿಕೆಗಳನ್ನು ಬೆಲೆಕಟ್ಟುವಾಗ ಎಲ್ಲಕ್ಕೂ ಟಿಕ್ ಮಾಡುವವರೇ ಹೆಚ್ಚುಮಂದಿ (ರೂಢಿ).

**ಟಿಕಳಿ, ಟಿಕಳೆ** (ನಾ). (ಉಕ) ೧. ಚುಕ್ಕೆ ; ಬೊಟ್ಟು : ಬೆಂಡೋಲೆ . . . ಹರಿದ್ವರ್ಣದ ಟಿಕಳಿಯೊಡನೆ ಸ್ಪರ್ಧಿಸುತ್ತಿದ್ದುವು (ದೀಪಹ. II, ೩೮೯). ೨. ಸಣ್ಣ ಬಿಲ್ಲೆ ; ನಕ್ಕಿ : ಟೊಪ್ಪಿಗೆಯ ನೆತ್ತಿಯ ಮೇಲಿನ ದೊಡ್ಡ ಹೂ ಹರವಾಗಿತ್ತು, ದೊಡ್ಡ ದೊಡ್ಡ ಜರದ ಟಿಕಳಿಗಳಿಂದ (ವ್ಯನಿ. ೯). **ಟಿಕಳೆ :** ೧. ಹಣೆಯ ಮೇಲೆ ಒಂದು ತೀರ ಚಿಕ್ಕದಾದರೂ ಕುಂಕುಮದ ಟಿಕಳೆ ಇತ್ತು (ಸುಸ್ನಿಮ. ೧೭೮). [ ←ಮರಾ. ಟಿಕಲಾ, ಟಿಕಲೀ : ಹಿಂ. ಟಿಕಿಯಾ./ಪ್ರಾ. ಟಿಕ್ಕ./ಸಂ. ತಿಲಕ ]

**ಟಿಕಳೆ** 'ಟಿಕಳಿ' ನೋ.

**ಟಿಕಾಯಿಸು, ಟಿಕಾಸು** (ಕ್ರಿ). (ಉಕ) (ಹೆಚ್ಚುದಿನ) ತಾಳು,–ಉಳಿ : ಈ ಗ್ರಾಮದಲ್ಲಿ ಈ ಪುಡಾರಿಯ ದರ್ಬಾರು ಟಿಕಾಯಿಸುವ ಹಾಗಿಲ್ಲ (ರೂಢಿ). **ಟಿಕಾಸು:** ಮಾಮಲೇದಾರನ ಹುಕುಮು ಹೌದಲ್ಲೋ ? ಅಪೀಲ ಮಾಡಿದರೆ ಟಿಕಾಸತದ ಏನೋ ಶೇಷಪ್ಪಾ (ಗ್ರಾಮಾಯ. ೨೨೬).

[ ಟಿಕಾವು$_0$ (P ←ಹಿಂ. ಟಿಕನಾ ; ಮರಾ. ಟಿಕಣೇ) + – ಇಸು$_3$ ]

**ಟಿಕಾಸು** 'ಟಿಕಾಯಿಸು' ನೋ.

**ಟಿಕೀಟು, ಟಿಕೆಟ್ಟು, ಟಿಕೇಟು, ತಿಕೀಟು** (ನಾ). ೧. ಪ್ರಯಾಣಕ್ಕೆ ಅಥವಾ ಪ್ರವೇಶಕ್ಕೆ ಅಧಿಕಾರ ಕೊಡುವ ಗುರುತಿನ ಚೀಟಿ: ಟಿಕೀಟು ತೆಕ್ಕೊಡುವ ಮಾತು ಹಾಗಿರಲಿ (ಹುಟ್ಟಿಹ. ೦೨೭); ಟಿಕೀಟಿಲ್ಲದೆ ರೈಲಿನಲ್ಲಿ ಪ್ರಯಾಣ ಮಾಡುವವರಿಗೆ ಶಿಕ್ಷೆಯಾಗುತ್ತದೆ (ಮಧ್ಯಮ. ೦೬೩). ೨. ಪಕ್ಷದ ಉಮೇದುವಾರಿಕೆಗೆ ಕೊಡುವ ಅನುಮಂತಿ ಪತ್ರ : ಅವರಿಗೆ ಈ ಸಲ ಚುನಾವಣೆಗೆ ಕಾಂಗ್ರೆಸ್ ಟಿಕೀಟು ಸಿಕ್ಕಲಿಲ್ಲ (ರೂಢಿ). **ಟಿಕೆಟ್ಟು:** ೧. ಅಂದಿನ ನಾಟಕದ ಉತ್ಪತ್ತಿಯನ್ನು ಅವರವರು ಮಾರಿದ ಟಿಕೆಟ್ಟುಗಳ ಪ್ರಮಾಣಾನುಸಾರವಾಗಿ ನಟರು ಹಂಚಿಕೊಳ್ಳುವ ಸಹಾಯಾರ್ಥ ನಾಟಕ (Ticket-night. ಇಂಕನಿ.). **ಟಿಕೇಟು :** ೧. ಟಿಕೇಟಿನ ಬೆಲೆ ಒಂದು ಡಾಲರು (ಮಹಾತ್ಮಾ. ೦೦೩): ಟಿಕೇಟಿನ ಮೂಲಕ ಆಟ ಆಡುವ ರೂಢಿಯು ಬಂದಿದೆ (ಯಕ್ಷಬ. ೨೦). **ತಿಕೀಟು :** ೧. ವಿಷ್ಣು ಎರಡು ಪೆನಿಯ ತಿಕೀಟನ್ನೇ ತೆಗೆದುಕೊಂಡಿದ್ದ (ಸಮತೀ. ೭೦೮). ೩. ಸ್ಟಾಂಪು: ಒಂದು ರೂಪಾಯಿ ತಿಕೀಟು ಕಳಿಸಿ ಪತ್ರ ವ್ಯವಹಾರ ಮಾಡಬೇಕು (ನಿರಾಥ. ೦೬೭). [ ←ಇಂ. Ticket ]

**ಟಿಕೆಟ್ಟು** 'ಟಿಕೀಟು' ನೋ.

**ಟಿಕೇಟು** 'ಟಿಕೀಟು' ನೋ.

ಟಿಕ್ಕರಿ 'ಠಿಕ್ಕರಿ' ನೋ.

ಟಿಕ್ಕರಿಗಳೆ 'ಠಿಕ್ಕರಿಗಳೆ' ನೋ.

ಟಿಕ್ಕೆ₁, ಟಿಕ್ಕೆ₂, ಟೀಕೆ (ನಾ). (ವಜ್ರದ ಅಥವಾ ಮಾಣಿಕ್ಯದ ಹರಳಿನಂತೆ ಕಾಣುವ) ಗಾಜಿನ ಮಣಿ ; ಖೋಟಾರತ್ನ ; ಕೃತಕಮಣಿ : ತಕ್ಕಿನ ಪವಳದ ಸಂಕೆಯ ಟಿಕ್ಕೆಯ ಮಣಿಗಳನನೇಕವಂ ಕೊಂಡವನಂ ಡೊಕ್ಕರಿಸದೆ (ಧರ್ಮಾಮೃ. ೨-೩೭); ಟಿಕ್ಕೆಯೊಳಗೆ ಮಾಣಿಕ್ಯ ಉಂಟೇ ಅಯ್ಯ (ಆದವ. ೧೩-೨೮) : ಕನಕಶೈಲಕೆ ಮೇಣ್ಪರಮಾಣು ಟಿ[ಪಾಠಾಂ. ಟೆ]ಕ್ಕೆ ನಿರ್ಜರ ಮಣಿಗೆಯ್ದೆ ಕೋಪಿಸುವವೊಲ್ಮುಳಿದಂ (ವೀರವಿ. ೭-೫೭) ; ಇರುಳೆರಡೇಳು ಲೋಕವ ಸುತ್ತಿ ಟಿಕ್ಕೆಯ ಹರಳ ತಂದೆನಗೆ ತೋಱಿಸಿದೆ (ಮೋಹತ. ೩೦-೨೨). ಟೆಕ್ಕೆ₂ : ಟಿಕ್ಕೆಯ ಕಲ್ಗಳಿಮಾ ಕವಿಲೆ ಕರ್ಬುನಕಂ ಮನಸಂದು ಬಂದನೇ (ಶಮದ. ನ. ೧೭೮ ಪ್ರಯೋ) ; ಚಿಂತಾಮಣಿಗೆ ಕೈದುಡುಕಿ ಹರಳು ಟಿಕ್ಕೆಯಿದೆಂಬ ಪಾಪಿಗೆ ಪರಮಗುರು ನಾನಾದೆನೈ (ಕುವ್ಯಾಭೀ.೭೦೭೩.೩-೬೯); ಟಿಕ್ಕೆಯ ಹರಳು ಗಡ ಕೌಸ್ತುಭಕೆ ಸರಿಯೆಂದನು (ಕುವ್ಯಾದ್ರೋ. ೧೫-೮) ; ಒಲವಿಂ ಟಿಕ್ಕೆಯ ಕಲ್ಗಳಾಭರಣದಿಂ (ಪಾಪಶ. ೭) ; ಧರಿಸಿ ಚಿಂತಾಮಣಿಯ ಟಿಕ್ಕೆಯ ಹರಳಿಗಳಲುವರುಂಟೆ (ಉತ್ತರಾ. ೩೦-೪೯). ಟೇಕೆ: ರತ್ನವ ಬಿಟ್ಟು ಟೀಕೆಯ ಹಿಡಿವರೆ (ಬಿಜ್ಜರಾ. ೧೨-೧೦೮).

ಟಿಕ್ಕೆ₂ 'ಟೀಕ್ಕೆ₂' ನೋ.

ಟಿಟ್ಟಿಬ, ಟಿಟ್ಟಿವ (ನಾ). = ಟಿಟ್ಟಿಭ : ತಾಪಸರು ಕೆಟ್ಟರು ಕಿಟ್ಟುದು ಸತ್ಯವೆಂದಲಸದೆ ಟಿಟ್ಟಿಬ ನುಡಿದುದಾ ಬನದಿ (ಮೋಹತ. ೭-೧೮). ಟಿಟ್ಟಿವ: ಹೊಱಸು ಟಿಟ್ಟವನು ಮಣಿಗನು ಗರುಡ ಕೊಣಕನು ಮೇಣು ಟೀವನು (ಸಾಳ್ವಭಾ. ೫-೨೩). [ <ಸಂ. ಟಿಟ್ಟಿಭ ]

ಟಿಟ್ಟಿಭ (ನಾ). ಒಂದು ಬಗೆಯ ಹಕ್ಕಿ; ಬಾನಾಡಿ ಹಕ್ಕಿ ; ಲಕುಮುಕಿ ಹಕ್ಕಿ : "ಟಿಟ್ಟಿಭಾಃ, ಕ್ಷುದ್ರಪಕ್ಷಿಕಾಃ—ಈ ೨ ಚಿಟ್ಟೆ" (ಹಲಾಯು. ೯೨-೪೯); "ಬಾನಡಿ ಟಿಟ್ಟಿಭ" (ಕವಿಕಂ. ೬೨); ಹರಡೆ ಗೌಜು ಟಿಟ್ಟಿಭ . . . ತುಱುಗಿ ನಭದೊಳು ಖಗಾನೀಕ ಮಂಡಳಿಸಲು (ಹಚಕಾ. ೫-೪೨) ; ವೈನತೇಯ ನಿರ್ದಾಡಿದ ಗಾಳಿವಟ್ಟಿಗೆ ಮನಂ ಬಿಡೆ ಧೀಂಕಿಡುವಂತೆ ಟಿಟ್ಟಿಭಂ (ಪುಷ್ಪಪು.೧-೪೨): ಟಿಟ್ಟಿಭ ಪಕ್ಷಿಗಳ ಕಣ್ಣುಗಳಂತೆಯೂ (ಸೌಗಂಧಿ. ೩೦೦-೨೦); ಟಿಟ್ಟುಟಿಟ್ಟೆಂದೊಂದು ನಿಟ್ಟಿಗೆ ಟಿಟ್ಟಿಭವು ತಾನಡಗಿದೆ (ಚಿಂತನ. ೧೮-೦೨). [ಸಂ. ]

ಟಿಟ್ಟಿಭಕ (ನಾ). = ಟಿಟ್ಟಿಭ : "ಕೋಯಷ್ಟಿಕಃ–ಕೀಚುಬಾಲದ ಹಕ್ಕಿ, ಟಿಟ್ಟಿಭಕಃ, ಲಕುಮುಕೀಹಕ್ಕಿ" (ಸಿದ್ಧಾಂತಿ. ೦೯೩): ಕಾಗೆಗೂಗೆಗಳ ಟಿಟ್ಟಿಭಕ ಗರುಡಗಳ (ಸಿದ್ಧಕಾ. ೭-೩೩). [ಸಂ. ]

ಟಿಟ್ಟಿವ 'ಟಿಟ್ಟಿಬ' ನೋ.

ಟಿನ್ನು (ನಾ). ೧. ತಗಡು : ಕೈಯಲ್ಲಿ ಒಂದು ಹಳೆಯ ಬಟ್ಟಲು ಒಂದು ಟಿನ್ನಿನ ಡಬ್ಬ (ದೀಪದ. ೨೨). ೨. ತಗಡಿನ ಡಬ್ಬ,–ಡಬ್ಬಿ : ಎತ್ತರದ ರೆಂಬೆ ಕಿದರಿದ ಮರಗಳಿಗೆ ಕಟ್ಟಿದ ಟಿನ್ನಿನ ಬಾಯಿಗಳು ಬಂಡೆಯ ಮೇಲಿನ ಜೀವಕ್ಕೆ ಅಭಯ ಕೂಗಿದವು (ಎಮುಳ. ೫೩). [ ←ಇಂ. Tin ]

ಟಿಪಾಯಿಸು, ಟಿಪಾಸು (ಕ್ರಿ). ಇಸ್ಪೀಟಿನ ಎಲೆಗಳನ್ನು ಕಲಸು,–ಬೆರಸು: ಭಲೋ ಟಿಪಾಯಿಸರಿ ಪಾಟೀಲ್ರ (ಹುಚ್ಚಾಟ. ೧೦೮). ಟಿಪಾಸು : ಭುಜಂಗ ಎಲೆಯನ್ನು ಟಿಪಾಸಿ ಮೂರೆಲೆ ಆಟಕ್ಕೆ ಹಂಚಿದ (ದಿವಾಬ. ೪೫). [ ಟಿಪಾಯಿ₀ (P ← ಹಿಂ. ಟೇಪ್) + – ಇಸು₃ ]

ಟಿಪಾಸು 'ಟಿಪಾಯಿಸು' ನೋ.

ಟಿಪಿ 'ಟೇಪಿ' ನೋ.

ಟಿಪ್ಪಣ (ನಾ). ೧. ವಿವರಣೆ ; ವ್ಯಾಖ್ಯಾನ : ಆ ಕೃತಿಗೆ ಪಂಚಿಕೆ ವೇಟ್ಟುದದರ್ಕೆ ಟಿಪ್ಪಣಂಬೇಟ್ಟುದು ಟೀಕುವೇಟ್ಟುದೆನೆ ಪೇಟ್ದವನುಂ ಕವಿಯೆಂಬ ಲೆಕ್ಕಮೋ (ಕಾವ್ಯಾವ. ೨೯೯) ; ಮನಸಿಜಾಗಮದ ಟಿಣವಪ್ಪ ಲೇಖಿಸುವಂತೆ ವನಿತೆ ಕಪೋಲಫಲಕದಿ ಕೊನೆಯುಗುರಲಿ ಬರೆದುದನೋದಿ ಮೆಚ್ಚಿಪೊಲು ಮಿನುಗಿತು ಗಳರವವಳ (ವರ್ಧಚ. ೫-೮೮). ೨. (ಭಾಷಣ, ಲೇಖನ, ವ್ಯಾಸಂಗ ಮೊದಲಾದುವುಗಳ ಅಥವಾ ಅವುಗಳಿಗಾಗಿ) ಮುಖ್ಯ ವಿಷಯಗಳನ್ನು ಮಾತ್ರ ನೆನಪಿಗಾಗಿ ಗುರುತುಮಾಡಿಕೊಂಡ ಬರೆವಣಿಗೆ. [ಸಂ. ]

ಟಿಪ್ಪಣಿ (ನಾ). ೧. = ಟಿಪ್ಪಣ ೧ : ಫ್ಲಿಟ್ಟನ ಒಲವು ಮತ್ತು ಮೇಧಾ ಶಕ್ತಿಯು, ಹೆಚ್ಚಾಗಿ ಪ್ರಾಚೀನಗ್ರಂಥಗಳಿಗೆ ಟೀಕೆ ಟಿಪ್ಪಣಿಗಳನ್ನು ಬರೆದು, ಅವುಗಳಿಂದ ಸೂಕ್ತ ಅಂತಿಮನಿರ್ಧಾರಗಳಿಗೆ ಬರುವ ಭಾಷಾಶಾಸ್ತ್ರಜ್ಞನಂತೆ ಇತ್ತು (ಸಸ್ಯಕ. ೮೩). ೨.=ಟಿಪ್ಪಣ ೨: "(ಭಾಷಣಕ್ಕಾಗಲಿ ಲೇಖನಕ್ಕಾಗಲಿ ಮಾಡಿಕೊಂಡ) ವಿಷಯಗಳ, ಅಭಿಪ್ರಾಯಗಳ, ಟಿಪ್ಪಣಿ ; ಮುಖ್ಯಾಂಶಗಳ ಪಟ್ಟಿ" (Note. ಇಂಕನಿ.) : ಟಿಪ್ಪಣಿ ಉಪಾಧ್ಯಾಯರ ಪೂರ್ವಸಿದ್ಧತೆಯ ಒಂದು ಅಂಗ (ಶಿಕ್ಷದ. ೨೫೭). [ಸಂ. ಟಿಪ್ಪಣೀ ]

ಟಿಪ್ಪಣಿಗಾರ (ನಾ). ಟಿಪ್ಪಣಿ ಬರೆಯುವವನು ; ಟೀಕಾಕಾರ : (೬). [ ಟಿಪ್ಪಣಿ + – ಗಾರ (< – ಕಾಱ) ]

ಟಿಪ್ಪಣಿಸು (ಕ್ರಿ). ಟಿಪ್ಪಣಿ ಬರೆ : ಸಂಗ್ರಹಿಸಿ ಬರೆದಂ, ಟಿಪ್ಪಣಿಸಿ ಬರೆದಂ (ಶಬ್ದಾನು. ೫೮೧ ಪ್ರಯೋ). [ ಟಿಪ್ಪಣಿ + – ಇಸು₃ ]

ಟಿಫನ್ನು 'ಟಿಫಿನ್ನು' ನೋ.

ಟಿಫಿನ್ನು, ಟಿಫನ್ನು, ಟಿಫೀನಿ (ನಾ). ಉಪಾಹಾರ ; ಫಲಾಹಾರ: ಟಿಫಿನ್ನು ಸಿದ್ಧವಾಗಿದೆ, ಬನ್ನಿ (ರೂಢಿ). ಟಿಫನ್ನು : ಈ ದಿನ ಬೆಳಗಿನ ಟಿಫನ್ನಿಗೆ ಇಡ್ಲಿ ಮಾಡಿದ್ದರು (ರೂಢಿ). ಟಿಫೀನಿ : ಕಾಫಿ ಮಾಡಿಸಿದ್ದಾರೆ ಸಂಜೆಗೆ ಟಿಫೀನಿಯೂ ಇದೆ (ಸ್ವಪ್ನಹೂ. ೮೭).
[ ←ಇಂ. Tiffin. / ಅರ. ಹಿಂ. ಟಿಫನ್ ]

ಟಿಫೀನಿ 'ಟಿಫಿನ್ನು' ನೋ.

ಟಿಬಕಿ (ನಾ). ಒಂದು ಬಗೆಯ ಹೊಲಿಗೆ; ಟಿಬ್ಬಿ : ಅಂಚಿಗೆ ಟಿಬಕಿ ಹಾಕಿಧಾಂಗ ಆಗಿರಬೇಕು (ದೀಪಪ. II, ೩). [ ? ]

ಟಿಬ್ಬರಿಸು 'ಟೆಬ್ಬರಿಸು' ನೋ.

ಟಿಬ್ಬಿ₁ (ನಾ). ೧. ಒಂದು ಬಗೆಯ ಹೊಲಿಗೆ ; ಟಾಕಿ ಹೊಲಿಗೆ: ಬ್ರಹ್ಮ ಗಂಟುದಾರ ವಿಷ್ಣುವಿಂಗೆ ಉಭಯದ ಹೊಲಿಗೆ ರುದ್ರಂಗೆ ಟಿಬ್ಬಿ ಮಿಕ್ಕಾದ ದೇವಕುಲವೆಲ್ಲಕ್ಕೂ ಅಲ್ಲಲ್ಲಿಗೆ ಕಲ್ಲಿಯ ಹೊಲಿಗೆ (ಸರ್ವವ. ೧೨೩-೬೨೭). ೨. "(ಬಟ್ಟೆ, ಮೊ. ಗಳ) ಅಂಚು (ಮು. ಅಂಚು ಮಡಿಸಿ ಹೊಲಿದದ್ದು)" (Hem. ಇಂಕನಿ.). ೩. ಸ್ತ್ರೀಯರ ಕುಪ್ಪಸ ಮೊದಲಾದುವುಗಳಿಗೆ ಅಲಂಕಾರಕ್ಕಾಗಿ ಹಾಕುವ ಕುಸುರಿಕೆಲಸವುಳ್ಳ ಹೊಲಿಗೆ: ಗುಬ್ಬಿಕಣ್ಣಿನ ಸೀರೆ ಟಿಬ್ಬಿಯ ಕುಬ್ಬಸ ಹಬ್ಬಕುಡುವ ಸೀರೆಯನ್ನುಟ್ಟು ಹೊರಟಾರ (ಸಿದ್ಧಪು. ೧೭-೬೨).
[ ←ಹಿಂ. ಮರಾ. ಟೀಪ್ ]

ಟಿಬ್ಬಿ₂ (ನಾ). ಕುಸ್ತಿಯಲ್ಲಿ ಒಂದು ವರಸೆ : ಟಿಬ್ಬಿಹಾರಿಸುವುದು, ಸವಾರಿ ಹಾಕುವುದು . . . ಇತ್ಯಾದಿ ಪಟ್ಟುಗಳನ್ನೆಲ್ಲಾ ಸುಬ್ಬು ಚಟುಕಾಗಿ, ಸರಾಗವಾಗಿ ಉಪಯೋಗಿಸುವಂತೆ ಕಲಿತ (ಭೀಮುಕಾ. ೪೩). [ ? ]

ಟಿಮ್ಮು (ನಾ). ಬಿಂದು ; ಚುಕ್ಕೆ : ಎರಡು ಟಿಮ್ಮುಗಳು (ಭಾಪಾಶಾ. ೦೦೬).
[ ←ಮರಾ. ಟಿಂಬ್ ]

ಟಿಸಲು 'ಟಿಸಿಲು' ನೋ.

ಟಿಸಲೊಡೆ 'ಟಿಸಿಲೊಡೆ' ನೋ.

ಟಿಸಳು 'ಟಿಸಿಲು' ನೋ.

ಟಿಸಿಲು, ಟಿಸಲು, ಟಿಸಳು (ನಾ). ೧. ಕವಲೊಡೆದ ಕೊಂಬೆ; ಪಕ್ಕದಲ್ಲಿ ಮೂಡಿದ ಟೊಂಗೆ ; ಚಿಕ್ಕ ಕೊಂಬೆ : ದೂರ ದೂರ ಬೇರು ಚಾಚಿ ಟೊಂಗೆ, ಟಿಸಿಲು ಮನುಕುಲ (ನಲಮು. ೨೫-೧೦); ಅವರ ಬಳ್ಳಿ ಮರವಾಗಿ

ಹಬ್ಬಿದೆ. ಆದರೆ ಅದಕ್ಕೆ ಒಡೆದ ಟಿಸಿಲು ಅನಂತವಾಗಿಬಿಟ್ಟಿದೆ (ಹಬ್ಬಿಬ. ೦೦೩); ಕೊಂಚ ವಿಚಾರ ಮಾಡಿದರೆ, ಈ ಮೂರೂ ಒಂದೇ ರೆಂಬೆಯ ಟಿಸಿಲುಗಳೆಂದು . . . ಕಂಡು ಬರುವುದು (ಪ್ರೀಮಾಶ್ರ. ೧೪೫). ೨. ಕವಲು; ವಿಭಾಗ; ಸೀಳು: ಚಿಗರೆಗಳು . . . ಕೋಡಿಗೆ ಒಂಬತ್ತರವರೆಗೆ ಟಿಸಿಲುಗಳಿರುತ್ತವೆ (ಕಥಾಗಿ. ೬೪); ಇವರಡೂ ಟಿಸಿಲುಗಳ ನಡುವಿರುವ ಪ್ರದೇಶವು ಬಲು ಗುಡ್ಡಗಾಡು (ವಿಜಾಭೂ. ೮)

ಟಿಸಲು: ೧. ಟೊಂಗೆಗಳಿಗೆ ಬೇರೆ ಸಣ್ಣಸಣ್ಣ ಟಿಸಲುಗಳು ಒಡೆದಿರುತ್ತವೆ (ಕಸಾಪ. I, ೧೩೦). ೨. ನಾಗವರ್ಮನ ಛಂದೋಂಬುಧಿಯನ್ನು ಐತಿಹ್ಯವಿಷಯಕ ಸಂಶೋಧಕ ದೃಷ್ಟಿಯಿಂದ ನೋಡಿದೆ ಅಲ್ಲಿ ಕೊಟ್ಟ ಸೂತ್ರಾರ್ಥಕ ಟಿಸಲುಗಳನ್ನು ಇನ್ನಷ್ಟು ಗುರುತು ಹಚ್ಚಿದೆ (ಸಂಶೋಧ. ೯೩).

ಟಿಸಳು: ೧. ಗೆಲ್ಲು ಗೆಲ್ಲು ಎಲೆಎಲೆಯೂ ಚಂದ, ಟಿಸಳು ಎಸಳು ಕುಡಿ ಮಿಡಿ ಬಿಸವಂದ (ನಡಬಂ. ೯೫–೬). ೨. ಮನುಷ್ಯನು ವೈರಾಗ್ಯಬುದ್ಧಿಯನ್ನು ತಾಳಿ, ಕಾಮುಮಾರ್ಗದಿಂದ ತಪ್ಪಿಸಿಕೊಂಡು, ಧರ್ಮಮಾರ್ಗಕ್ಕೆ ಹತ್ತಿದ ಬಳಿಕ, ಮುಂದೆ ಎರಡು ಟಿಸಳುಗಳೊಡೆದಿರುತ್ತವೆ (ಗೀತಾಸಂ. ೩೦). [ ? ]

**ಟಿಸಿಲುದಾರಿ** (ನಾ). ಕವಲುದಾರಿ; ಸೀಳುದಾರಿ: ಆದರೆ ಇದರಷ್ಟು ಅರ್ಥಪೂರ್ಣವಾದ ಟಿಸಿಲುದಾರಿಯೊಂದಿದೆ (ಜೀಪಾಠ. ೩೩).
[ಟಿಸಿಲು + ದಾರಿ]

**ಟಿಸಿಲೊಡೆ, ಟಿಸಲೊಡೆ** (ನಾ). ಕೊಂಬೆ ಹುಟ್ಟು; ರೆಂಬೆ ಕವಲಾಗು: ಟಿಸಿಲೊಡೆದ ಹಲವು ಟೊಂಗೆಗಳಲ್ಲಿ ಕುಳಿತು (ತಿಂಮತ. ೦೩೯). ೨. ವಿಭಕ್ತವಾಗು; ಬೇರೆ ಬೇರೆ ಆಗು: ಮೋಡಕರ 'ಮರಾಠಿಗನ್ನಡ', ಸುಬ್ಬಣ್ಣಾಚಾರ್ಯರ 'ಶಿಷ್ಟಗನ್ನಡ' ಹೀಗೆ ಬಳಕೆಮಾತು ಟಿಸಿಲೊಡೆದಿದೆ (ಸಮಜೀ. ೦, ೩೬೩೪). ಟಿಸಲೊಡೆ: ೧. ಅಳ್ಳೆಗೊಂಬು = ಬಗಲೊಡೆದ ಟೊಂಗೆ; ಟಿಸಲೊಡೆದ ಟೊಂಗೆ (ಗಂಗಾಮು. ೨೦). [ಟಿಸಿಲು + ಒಡೆ$_1$]

**ಟೀ, ತೇ$_2$** (ನಾ). ಒಂದು ಬಗೆಯ ಸೊಪ್ಪು ಹಾಗು ಅದರಿಂದ ತಯಾರಿಸುವ ಪಾನೀಯ; ಚಹಾ: ನಮ್ಮ ಹಳ್ಳಿಗೆ ಪದೇ ಪದೇ ಕಾಫಿ, ಟೀ ವ್ಯಾಪಾರಸ್ಥರು ಕ್ರಿಸ್ತಮತ–ಬೋಧಕರು ಮುಂತಾದವರು ತಮ್ಮ ತಮ್ಮ ಮೋಟಾರುಗಳಲ್ಲಿ ಬಂದು (ಹುಟ್ಟಿಹ. ೧೮೪); ಒಂದು ಕಪ್ಪು ಟೀ ಕೊಡು (ರೂಢಿ). ತೇ$_2$: ಟೀ, ತೇ, ಚಾ, ಚಹ,–ಗಿಡ (Tea. ಇಂಕನಿ.).
[←ಇಂ. Tea; ಡಚ್. Thee; ಚೀನಿ. ತೇ]

**ಟೀಂ** (ನಾ). ಒಂದು ಅನುಕರಣ ಶಬ್ದ. 'ಟೀಂವಕ್ಕಿ' ಪರಾ.

**ಟೀಂವಕ್ಕಿ, ಟಿಂಹಕ್ಕಿ** (ನಾ). ಟೀಂವ್ ಟೀಂವ್ ಎಂದು ಕೂಗುವ ಒಂದು ಬಗೆಯ ಹಕ್ಕಿ; ಟೀವನ ಹಕ್ಕಿ: ಕೊಳದ ಬಾಂದಳದಲ್ಲಿ ಟಿಂವ್‌ಗುಡುವ ಟೀಂವಕ್ಕಿ ನೀನಾರೆ ಬಲ್ಲೆಯಾ ನಲ್ಲನೆಲ್ಲಿ (ನನಲ್ಲ. ೦೦–೯); ಅದೇ ವೇಳೆಯಲ್ಲಿ ಟೀಂವಕ್ಕಿಯೊಂದು, ಶಾಂತಿಕುಟೀರದ ಮೇಲಿಂದಲೆ 'ಟಿಂವ್', 'ಟಿಂವ್' ಎಂದು ಧ್ವನಿಮಾಡುತ್ತ ಸಿಡಿಸಿಡಿದು ಹಾರಿಹೋಯಿತು (ಅಶಾಂತಿ. ೧೯೭). ಟಿಂಹಕ್ಕಿ: ಕಾಡುಬೆಕ್ಕಿನಿಂದ ತಪ್ಪಿಸಿಕೊಂಡ ಟಿಂಹಕ್ಕಿಯೊಂದು ಗಿಡ ಬಿಟ್ಟು ಹಾರಿ, ಮದ ತಲೆಗೇರಿ ಸುತ್ತಿ ಚಿಮ್ಮಿ ಚೀರಿತು (ಪ್ರಶ್ನಿ. ೮೪). 'ಟೀವ' ಪರಾ. [ಟೀಂ + ಹಕ್ಕಿ$_1$ (<ಪಕ್ಕಿ$_1$)]

**ಟೀಕಾಕಾರ** (ನಾ). ವ್ಯಾಖ್ಯಾನ ಬರೆಯುವವನು; ವ್ಯಾಖ್ಯಾನಕಾರ: ಸಾರತರೋಕ್ತಿಗೆ ನೆಲ್ಲುಂಮೋರುಂಗೋದಂತೆ ನೇಟ್ ಕಲ್ಪಾರ್ಪರವರ್ಗೋರೆ ನಿಬಂಧನ ಟೀಕಾಕಾರಂಗಲ್ಲದೆ ಪೆಟಂಗೆ ಕೋಟ್ಯೋದಪುದೇ (ಶಾಂತಿಪು. ೧೦–೧೫೩). [ಸಂ.]

**ಟೀಕಾಚಿತ್ರ** (ನಾ). ವಿಡಂಬನ ಚಿತ್ರ; ವ್ಯಂಗ್ಯಚಿತ್ರ: (ಹಾಸ್ಯಪತ್ರಿಕೆಯಲ್ಲಿ, ಮು. ರಾಜಕೀಯ ವಿಚಾರಗಳನ್ನು ಟೀಕಿಸಿ ರಚಿಸಿದ ಪತ್ರಿಕೆಗಳಲ್ಲಿ) ಪೂರ್ಣಪುಟ ಚಿತ್ರ, ದೊಡ್ಡಚಿತ್ರ: ಟೀಕಾಚಿತ್ರ; ಹಾಸ್ಯಚಿತ್ರ; ನಗೆಚಿತ್ರ (Cartoon. ಇಂಕನಿ.). [ಸಂ. (ಟೀಕಾ + ಚಿತ್ರ)]

**ಟೀಕಾರಾಗ** (ನಾ). [ಸಂಗೀತ] ರಾಗಗಳಲ್ಲೊಂದು: ಷಡಾರ ಟೀಕಾರಾಗ ಮಾಳವಿ . . . ಹಿಂದೋಳಮೆಂಬೆಂಟು ರಾಗಂಗಳುಂ ಅಪ್ಪಸಾಧಾರಣ ಜಾತೀಯಂಗಳು (ವಿವೇಕ. ೨೩೩). [ಸಂ.]

**ಟೀಕಿಸು** (ಕ್ರಿ). ೧. ವ್ಯಾಖ್ಯಾನ ಮಾಡು; ವಿವರಿಸು; ಅರ್ಥವನ್ನು ಸ್ಪಷ್ಟಪಡಿಸು. ೨. ಗುಣದೋಷ ವಿಮರ್ಶೆಮಾಡು: "ಟೀಕಿಸು, ಖಂಡಿಸು" (Judge. ಪತ್ರಿನಿ. ೯೮). ೩. ಆಕ್ಷೇಪಿಸು; ದೋಷಗಳನ್ನು ಎತ್ತಿ ತೋರಿಸು: ನೂತನ ಶಿಕ್ಷಣಕ್ರಮಗಳಲ್ಲಿ ಅನುಭವಸಾಧನೆಗೇ ಹೆಚ್ಚಿನ ಅವಕಾಶವುಂಟೆಂದೂ ಟೀಕಿಸುವುದುಂಟು (ಶಿಕ್ಷದ. ೬೯೭); ವಾಸರು ರಾಜಕೀಯವನ್ನು ಸಮಯೋಚಿತವಾಗಿ ಟೀಕಿಸುತ್ತಲೂ ಪ್ರಶಂಸಿಸುತ್ತಲೂ ಇದ್ದರು (ಬದುಬ್ಕೆ. ೩). [ಟೀಕೆ$_1$ + – ಇಸು$_3$]

**ಟೀಕು** (ನಾ). ವ್ಯಾಖ್ಯಾನ; ಅರ್ಥವಿವರಣೆ: "ಟೀಕಾ, ಟೀಕು. ಈ ೨ ವಿವರಂ" (ಕಾಶಕ್ಕ. ೯೦); ಲೋಕಕ್ಕಿದರ್ಥಶಾಸ್ತ್ರದ ಟೀಕೆನಿಸಿದ ತನ್ನ ನುಡಿ ಮನಂಗೊಳಿಸೆ (ಪಂಪಭಾ. ೯–೦೪); ಟೀಕುವೇಟ್ಟುದೆನೆ ಪೇಟ್ಟವನುಂ ಕವಿಯೆಂಬ ಲೆಕ್ಕಮೇ (ಕಾವ್ಯಾವ. ೨೯೯). [<ಸಂ. ಟೀಕಾ]

**ಟೀಕುವರೆ** (ಕ್ರಿ). ಟೀಕೆಯನ್ನು ಬರೆ; ವ್ಯಾಖ್ಯಾನವನ್ನು ಬರೆ: ಅನಿತೊಂದು ಸಿರಿಯ ಮೈಮೆಯೊಳನಿತೌದ್ಧತ್ಯಕ್ಕೆ ಸಲ್ಲದಾ ನೃಪತನಯಂ ವಿನಯೇನ ವಿನಾ ಕಾ ಶ್ರೀ ಎನಿಪುಕ್ತಿಗೆ ಟೀಕುವರೆದ ತೆಱದಿಂ ನಡೆದಂ (ಚಂದ್ರಪು. ೪–೦೦).
[ಟೀಕು + ಬರೆ$_1$]

**ಟೀಕೆ$_1$** (ನಾ). ೧. ವಾಖ್ಯಾನ; ಟೀಕು: "ಭಾಷ್ಯ; ವ್ಯಾಖ್ಯಾನ; ಟೀಕೆ" (Commentary. ಇಂಕನಿ.). ೨. ಗುಣದೋಷ ವಿಮರ್ಶೆ: "ವಿಮರ್ಶೆ, ಟೀಕೆ; ಗುಣದೋಷ ವಿವೇಚನೆ" (Criticism. ಇಂಕನಿ.); ಈ ವಿಚಾರದಲ್ಲಿ ಒಟ್ಟಿನ ಮೇಲೆ ಒಂದು ಟೀಕೆಯ ಮಾತನ್ನು ಹೇಳುವುದು ಅವಶ್ಯವಾಗಿದೆ (ಸಾಹಿಶ. ೭೩). ೩. ಆಕ್ಷೇಪಣೆ; ತಪ್ಪನ್ನು ಎತ್ತಿತೋರಿಸುವಿಕೆ; ನಿಂದಿಸುವಿಕೆ: ಪಾದಚಾರಿಯ ಕಂಡು ಕಾರೊಳು ಬಾ ಎಂದು ಹತ್ತಿಸಿಕೊಳ್ಳುವುದು ಬೇಡ ನಿನ್ನ ಕಾರಿನ ಟೀಕೆ ಮುಗಿಸಿಯೆ ಕಾರಿನಿಂದಿಳಿವನು ನೋಡ (ಇಂಚಾಪ. ೨೩೦–೩೭); ಎಂದಿನಂತೆಯೆ ಶ್ಯಾಮ್ ಅವರಿವರನ್ನು ಟೀಕೆ ಮಾಡುತ್ತ ಕೆಲವರನ್ನು ಹೊಗಳುತ್ತ ಇದ್ದ (ಅಲಹೂ. ೯೩). ೪. [ಸಂಗೀತ] ಒಂದು ಬಗೆಯ ರಾಗ: ಟೀಕೆ, ಸೈಂಧವಿ, ಪಂಚಮ . . . ಉಪಾಂಗವೆಂಬೆಂಟು ರಾಗಂಗಳುಂ (ವಿವೇಕ. ೨೩೩).
[ಸಂ. ಟೀಕಾ]

**ಟೀಕೆ$_2$, ಟಿಕ್ಕೆ$_2$** (ನಾ). ಕೊರಳಲ್ಲಿ ಧರಿಸುವ ಒಂದು ಬಗೆಯ ಚಿನ್ನದ ಆಭರಣ; ಅಡ್ಡಿಕೆ: ಮನೆಯಲ್ಲಿ ಅತಿಥಿಗಳು ಬಂದಿದ್ದಾರೆ, ನನ್ನ ಕರಿಮಣಿ ಟೀಕೆಯನ್ನು ಕಟ್ಟಿಕೋ (ಪವಶೀ. ೮೦). ಟಿಕ್ಕೆ$_2$: ಕೊರಳಲ್ಲಿ ಭಾರವಾದ ಗೆಜ್ಜೆಯ ಟಿಕ್ಕೆ (ಹಬ್ಬಿಬ. ೭); ಅವಳುಟ್ಟ ಮಡಿಯ ಸೆರಗು ಎದೆಯ ಮೇಲಿಂದ ಸರಿದು ಕೊರಳೊಳಗಿನ ದೊಡ್ಡ ಗೆಜ್ಜೆಯ ಟಿಕ್ಕೆ ಹೊರಗೆ ತೋರುತ್ತಿದ್ದಿತು (ಅಶೋಕ. ೮). [←ಹಿಂ. ಮರಾ. ಟೀಕ್]

**ಟೀಕೆಟಿಪ್ಪಣಿ** (ನಾ). ೧. ಶಬ್ದಾರ್ಥವಿವರಣೆ: ಟೀಕೆಟಿಪ್ಪಣಿಗಳೂ ಗ್ರಂಥದ ವಿಷಯವನ್ನು ಹುಡುಕಲು ಅನುಕೂಲಿಸುವಂತೆ ಮುಖ್ಯಾಂಶಗಳ ಅಕಾರದಿ ಪಟ್ಟಿಯೂ ಪುಟಸಂಖ್ಯೆಯೂ ಕೊನೆಯಲ್ಲಿರಬೇಕು (ಶಿಕ್ಷದ. ೨೭೦). ೨. ದೋಷವನ್ನು ಎತ್ತಿ ಹೇಳುವುದು: ಸಮಾಜಸೇವೆಯ ವ್ಯಕ್ತಿ ಎಷ್ಟೇ ಪ್ರಾಮಾಣಿಕತೆಯಿಂದ ನಡೆದುಕೊಂಡರೂ ಟೀಕೆಟಿಪ್ಪಣಿ ಅವನಿಗೆ ಕಟ್ಟಿಟ್ಟ ಗಂಟು (ರೂಢಿ). P ಈ ಜೋಡಿ ಶಬ್ದಗಳು ಬೇರೆಬೇರೆಯಾಗಿಯೂ ಬಳಕೆಯಾಗುತ್ತವೆ. [ಟೀಕೆ$_1$ + ಟಿಪ್ಪಣಿ]

**ಟೀಕೆಬರೆ** (ಕ್ರಿ). = ಟೀಕುವರೆ: ಸಂಸ್ಕೃತ ಮಹಾಕಾವ್ಯಗಳಿಗೆ ಟೀಕೆ ಬರೆಯುವುದರಲ್ಲಿ ಮಲ್ಲಿನಾಥ ನಿಸ್ಸೀಮ (ರೂಢಿ). [ಟೀಕೆ$_1$ + ಬರೆ$_1$]

**ಟೀಪಾಯ್** 'ಟೀಪಾಯಿ' ನೋ.

**ಟೀಪಾಯಿ, ಟೀಪಾಯ್** (ನಾ). ೧. ಮೂರುಕಾಲಿನ ಮಣೆ; ಮುಕ್ಕಾಲು ಮಣೆ. ೨. ಒಂದುಬಗೆಯ ಕಾಲುಮಣೆ; ಪುಟ್ಟ ಮೇಜು:ಟೀಪಾಯಿಯ ಮೇಲೆ ಫಲಾಹಾರವನ್ನಿಡು (ರೂಢಿ). **ಟೀಪಾಯ್:** ೨. ಚಹದ ಟ್ರೇಯನ್ನು ಹತ್ತಿರದ ಟೀಪಾಯ ಮೇಲಿಟ್ಟು (ಹೊಸಕ. ೧೭೦); ಹತ್ತಿರದ 'ಟೀಪಾಯ್'ದ ಮೇಲೆ ಅದನ್ನಿಟ್ಟು ಗಂಡನಿಗೆ ಹೇಳಿದಳು (ಮುತ್ತೈದೆ. ೮೦).
[ ← ಹಿಂ. ತಿಪಾಈ./ಸಂ. ತ್ರಿಪಾದಿ ]

**ಟೀಪು** (ನಾ). ಅಡಿ ಟಿಪ್ಪಣಿ: ಈ ಮಾತಿಗೆ ಒಂದು ಟೀಪು ಕೊಡಬೇಕು (ರೂಢಿ). [ ←ಮರಾ. ಟೀಪ್ ]

**ಟೀಮು** (ನಾ). ಆಟ್ಟಗೆ ಕೆಲಸಮಾಡುವವರ ಅಥವಾ ಆಟಗಾರರ ತಂಡ,–ಗುಂಪು: ಮ್ಯಾಚಿನಲ್ಲಿ ಏನಾಯಿತು? ನಿಮ್ಮ ಟೀಮು ಗೆದ್ದಿತೋ ಹೇಗೆ (ಮಹಾಗ. ೦೭). [← ಇಂ. Team ]

**ಟೀಯ** 'ಟೀವ' ನೋ.

**ಟೀಲ** (ನಾ). ಒಂದು ಬಗೆಯ ಹಕ್ಕಿ: (ಕಿ). [ ? ]

**ಟೀವ, ಟೀಯ** (ನಾ) ಉದ್ದವಾದ ಬಾಲವುಳ್ಳ ಒಂದು ಬಗೆಯ ಪಕ್ಷಿ; ಬಾನಾಡಿ: "ಟೀವಂ ಚಲಾಂಡಮನಿಸಿಕ್ಕು" (ಮಂಗರಾ. ೫೨–೧೧); "ಬಾನಡಿ ಟಿಟ್ಟಿಭ ಟೀವಂ ತಾನಾಗಸವಕ್ಕಿ ಖಂಜರೀಟಮೆನಿಕ್ಕುಂ" (ಕವಿಕಂ. ೬೨); ಟೀ[ಪಾಠಾಂ. ಪೀ]ವ ಕಕ್ಕುಟ ಸೋಜಿಗ ಮೆಳೆಗಿಳಿ ಕಾಡ್ಕೋಳಿ ಪೂವೆಟಗಳ ಮಾಡುವರ ಕಂಡೆ (ಸೊಬಸೋ. ೧೮–೩೪); ಆರೆ ಹೊಜಸು ಟಿಟ್ಟಿವನು ಮಣಿಗನು ಗರುಡ ಕೊಣಕನು ಮೇಣು ಟೀವನು (ಸಾಳ್ವಭಾ. ೫–೨೩); ಪಾರಾವತಂ ಹೆಂಗುರು ಟೀ[ಪಾಠಾಂ. ಲಾ]ವಂ ಟಿಟ್ಟಿಭಂ . . . ಶಿಖಿ ಶುಕಂ ತದ್ವನಾಂತಸ್ಥಮಿರ್ಕುಂ (ಶಬಶಂ. ೩–೬೩). **ಟೀಯ:** ಶಕುನಿ ಶುನಿಗಿಲು ಟಿಟ್ಟಿಭಂ ಕೌಶಿಕಂ ಟೀಯ ನಿಕರಪಿಗ್ಗಂ . . . ಪಕ್ಷಿಮುಖ್ಯಗಳ್ಸುಖಿಪಿಪ್ಪವಾವನದೊಳು (ಏಕೋಪು. ೧೧–೩೦).

ಟೀವನ ಹಕ್ಕಿ, ಟೀಯನ ಹಕ್ಕಿ=ಟಿಟ್ಟಿಭ: "ಟೀವನಹಕ್ಕಿ"(ಶಾಹಟೀ. ೨–೬); "ತೈತ್ತಿರೀ–ಟೀವನ ಹಕ್ಕಿ" (ಓಷಧಿ. ೬೨); "ಕೋಯಷ್ಟಿಕೀ–ಟೀಯೇನ ಹಕ್ಕಿ" (ಓಷಧಿ. ೪೦). [ ? ]

**ಟೀವಕ** (ನಾ). (ನೃತ್ಯಕ್ಕೆ ಸರಿಯಾಗಿ ತಂತಿಯನ್ನು ಮಿಡಿದಾಗ) ತಂಬೂರಿಯಿಂದ ಹೊರಡುವ ಧ್ವನಿ. 'ಟೀವಕಟಂಬಕ' ಪರಾ.
[ ? ]

**ಟೀವಕಟಂಬಕ, ಟೀವಕಟೆಂಬಕ** (ನಾ). "ತಂಬೂರಿಯ ತಂತಿಯನ್ನು ಮಿಡಿದಾಗ ಹೊರಡುವ ಧ್ವನಿಗಳು; ಇವುಗಳಿಗೆ ಸರಿಯಾಗಿ ನೃತ್ಯಕಾರನು ಹೆಜ್ಜೆಯನ್ನು ಹಾಕಬೇಕಾಗುವುದು" (ಬಸವ. ಕೋಶ); ದಿಟಪುಟ ಭಕುತಿ ಸಂಪುಟ ನೆಲೆಗೊಳ್ಳದಾಗಿ . . . ಟೀ[ಪಾಠಾಂ. ಟೇ]ವಕ ಟಂಬಕನಾ[ಪಾಠಾಂ. ಟೆಂಬನನಾ, ಟೆಂಬಕವನಾ]ಡಿಸುತ್ತಿದ್ದಿತಯ್ಯಾ ನಿನ್ನ ಮಾಯೆ (ಬಸವ. ೦೮). **ಟೀವಕಟೆಂಬಕ:** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಟೀವಕ + ಟಂಬಕ ]

**ಟೀವಕಟೆಂಬಕ** 'ಟೀವಕಟಂಬಕ' ನೋ.

**ಟೀವಿ** 'ಠೀವಿ' ನೋ.

**ಟೀಸೊಪ್ಪು** (ನಾ). ಟೀ ಗಿಡದ ಸೊಪ್ಪು: (ಮೃಡಿಗಿ. ೦೭–೩೯೩).
[ ಟೀ + ಸೊಪ್ಪು₃ ]

**ಟು** (ಪ್ರ). ಅಂತು, ಇಂತು, ಉಂತು ಮೊದಲಾದ ಶಬ್ದಗಳ ಮೇಲೆ ಪ್ರಕಾರಾರ್ಥವಲ್ಲಿ ಸೇರುವ ಒಂದು ಪ್ರತ್ಯಯ. 'ಅಂತುಟು', 'ಇಂತುಟು', 'ಉಂತುಟು' ಪರಾ.

**ಟುಂಟುಕ** (ಗು). ೧. ಕೆಳಮಟ್ಟದ; ಅಲ್ಪ; ಕ್ಷುದ್ರ; ತುಚ್ಛ: ಆದಿತ್ಯನ ಕೆಲದೊಳ್ ಚಂದ್ರೋದಯಮೆಸೆಯದವೊಲೀ ಧರಾಮಂಡಲದೊಳ್ ವಾದಿಗಳೆಂಬೀ ಟುಂಟುಕ ವಾದಿಗಳೆಸೆದಪರೆ ವಾದಿರಾಜನ ಕೆಲದೊಳ್ (ಎಕ. VIII, ನಗರ. ೩೫–೭೫; 1077); ಅಚರಸನಲೆನ್ನು ಪೋಲಿಸುವ ಟುಂಟುಕ ಮಂಡಳಿಕವ್ರಜಂಗಳಂ (ಮುಂಬಶಾ. XI, ೩೬೧–೩೪; 1162). (ನಾ). ೨. ಕ್ರೂರ: ದಂಷ್ಟ್ರ: ಕಂಟದ ಬಂಟರಾಗಿ ಬುಧಸಂತತಿಗಂ ಪತಿಗಂ ಕುಬುದ್ಧಿಯಿಂ ಕಂಟಕರಪ್ಪ ಟುಂಟುಕರದಿಕ್ಕೆಮ (ಎಕ. V, ಬೇಲೂರು. ೧೧೪–೪೦; 1173). ೩. ಒಂದು ಬಗೆಯ ಮರ; ಹೆಮ್ಮರ; ತಿಗಡು ಮರ: "ಟುಂಟುಕ=ದಿಂಡಲಮರ" (ಗಂಗಾಮ. ೦೪೪). [ ಸಂ. ]

**ಟುಣುಪುಣು** (ನಾ). ಒಂದು ಅನುಕರಣ ಶಬ್ದ: ಹುರುಪಿನ ಹುರಿದ ಬೀಜದಂತೆ ಟುಣುಪುಣು ಹಾರಾಡುತ್ತಿದ್ದ ತನ್ನ ಗೆಳೆಯನು ಈಗ . . . ಕಂಡವರ ಕೈಗೆ ಆತ್ತರು ಸವರುತ್ತಿರುವ ದೃಶ್ಯ ಮನೋವೇಧಕವಾಗಿ ಅವನಿಗೆ ಕಾಣತೊಡಗಿತು (ರಂಗರೋ. ೧೯೩).

**ಟುಪುಟುಪು** (ನಾ). ಒಂದು ಅನುಕರಣ ಶಬ್ದ: ಎಲ್ಲರೂ ಇಲ್ಲೊಂದು ಅಲ್ಲೊಂದು ಟುಪುಟುಪು ಬಿದ್ದ ಆಲಿಕಲ್ಲುಗಳನ್ನು ಆರಿಸಿಕೊಂಡು ಬಂದು ಸೂರಿನ ಕೆಳಗಡೆ ನಿಂತು ಬಾಯಿಗೆ ಹಾಕಿಕೊಳ್ಳುತ್ತಿದ್ದವು (ಪಶ್ಚಿ. ೩೮).

**ಟುಪ್ಟೀಕೆ** (ನಾ). ಬಹು ಸಂಕ್ಷೇಪವಾದ ವ್ಯಾಖ್ಯಾನ: ಶಾಬರ ಭಾಷ್ಯದ ಮೇಲೆ ವ್ಯಾಖ್ಯಾನವನ್ನು ಆರಂಭಿಸಿದ ಕುಮಾರಿಲಭಟ್ಟನು (ಕ್ರಿ. ಶ. ಶ. ೭೦೦) ೧–೧ರ ಮೇಲೆ ಶ್ಲೋಕವಾರ್ತಿಕವನ್ನು . . . ೪ ರಿಂದ ೧೨ರವರೆಗೆ ಟುಪ್ಟೀಕೆಯನ್ನೂ ರಚಿಸಿದ್ದಾನೆ (ತತ್ವಪ್ರ. ೩೭೧).
[ ಸಂ. ಟುಪ್ಟೀಕಾ ]

**ಟುಮಕ** 'ಟುಮುಕ' ನೋ.

**ಟುಮುಕಿ₁** 'ಟುಮುಕು' ನೋ.

**ಟುಮುಕಿ₂** (ನಾ). ನೀರಿನಲ್ಲಿ ಎರಡೂ ಕೈಗಳಿಂದ ಸದ್ದಾಗುವಂತೆ ಹೊಡೆಯುವಿಕೆ: ಒಂದೀಟು ಟುಮುಕೀ ಹೊಡೀರೀ ಮಾರಗ್ಯ ಹಾಕ್ರಿ (ಧರ್ಮಸಿ. ೮೩). [ ? ]

**ಟುಮುಕ, ಟುಮಕ** (ನಾ). ದಪ್ಪನಾಗಿರುವವನು: ಗಜ್ಜರೆಯು ತುಂಬಿನಂತೆ ಅವನು ಕೆಂಪಾಗಿಯೂ ಟುಮುಕನಾಗಿಯೂ ಇರುವನೆಂದು ಕಂಡು ನೀನು ಮನಸೋತಿರುವಿ (ಪವಶೀ. ೭೩). **ಟುಮಕ:** ಇವ ಗಿಡ್ಡ, ಟುಮಕ; ಗುಳ್ಳಿಗಣ್ಣಿನವ; ಮುಖ ಬಲು ರಾವು (ಮೇದಿಮ. ೪). [ ? ]

**ಟುಮುಕು, ಟಮಕಿ, ಟುಮಕಿ₁, ತುಮುಕು₂** (ನಾ). ಒಂದು ಬಗೆಯ ಚರ್ಮವಾದ್ಯ; ಸಣ್ಣತಮಟೆ: ಕಂಸಾಳ ಡೊಳ್ಳಾರಿ ಟುಮುಕು ತಂಬಟಂ . . . ಮದ್ದಳೆಗಳೆಂಬ ಬಹುವಾದ್ಯದುಬ್ಬಟೆಯುಳಿದಸೆಯೊಳಾವರಿಸಲು (ಚಬಪು. ೫–೭); ಡೋಳಿನ ಕುದುರೆ ಡವಾಣದ ಮದಕರಿ ಸೂಳೈಪ ಟುಮುಕುಗಳೊಂಟೆ . . . ಮೇಳದೊಳಗೆ ತಿರುಗುವುವು (ಕೀಪ. ೧೯–೨೩). **ಟಮಕಿ:** ಕೋರ್ಟಿನವರು ಟಮಕಿ ಹೊಡೆಯುವುದರ ಮೂಲಕ ಯುಕ್ತವಾದ ನೋಟೀಸನ್ನು ಕೊಟ್ಟು ನಂತರ (ಗ್ರಾಮಾಕ. ೩೮). **ಟುಮಕಿ:** ಎಲೇ, ಇದು ಮೂರನೆ ಡಂಗುರದ ಡಾವುಂಟು, ಟುಮಕೀ ಹೊಡಿಯಲೇ (ಮುಂಬಯಿ. ೬–೨೧೮). **ತುಮುಕು:** ರಸಪೂರಮತಿಗಭೀರಂ ಕಾವ್ಯಂ ನೀರಸರಜಿಪಂತೇನಿದು ತಾರೆಲೆಯೆ ಬೀದಿವಾಡೆ ನೆರವಿಯ ತು[ಪಾಠಾಂ.ದು]ಮುಕೇ (ಗಿರಿಶ. ೧–೩೦).

ಟಮಕಿ ಬಾರಿಸು = ೧. ತವಂಟೆ ಬಾರಿಸು; ಡಂಗುರ ಹೊಡೆ. ೨. (ಆಲಂ) ಎಲ್ಲರಿಗೂ ತಿಳಿಯಪಡಿಸು; ಪ್ರಸಿದ್ಧಪಡಿಸು: ಬಹಿರಂಗಪಡಿಸು; ಸಾರು: ಸ್ವಾಮಿಯವರು ತಾವು ಎಲ್ಲಿಗೆ ಹೋಗುವುದಾದರೂ ಹೇಳದೆ ಹೋಗುತ್ತಾರೆ; ಹಾಗೆ ಟಮಕಿ ಬಾರಿಸಿ ಹೋಗುವುದಕ್ಕೆ (ನಂಬಿನಾ. ೩೭೯). ಟಮಕಿ ಸಾರು=ಟಮಕಿ ಬಾರಿಸು ೨: 'ಸಣ್ಣಪ್ಪನನ್ನು ಶಾಲೆಗೆ ಸೇರಿಸಿ ಬಂದೆ' ಎಂದು ಟಮಕಿ ಸಾರುವುದಕ್ಕೆ ಅವರು ಬಂದಿದ್ದರು (ಸ್ವಪ್ನಹೊ. ೯೧). [ ←ಮರಾ. ಟಮಕೀ, ಟಿಮಕೀ; ಹಿ. ಟಮುಕೀ./ತುಳು. ಟಮುಕಿ; ತೆಲು. ಟಮಟಮ ]

**ಟುರು** (ನಾ). ಒಂದು ಅನುಕರಣ ಶಬ್ದ. 'ಟುರುಂಗುಟ್ಟು' ಪರಾ.

**ಟುರುಗುಟ್ಟು, ಟುರ್ಗುಟ್ಟು** (ಕ್ರಿ). ಟುರಂಟುರು ಎಂದು ಶಬ್ದಮಾಡು. ಟುರ್ಗುಟ್ಟು : ಬಾಟೆದೋಂಟಮಂ ಪುಗುವಂತೆ ಪೊಕ್ಕು ಬೊಬ್ಬಿಱಿವರೆಡೆಯೊಳ್ ಟುರ್ಗುಟ್ಟುತೆ (ಅದ್ಭುತ. ೪೭-೭). [ ಟುರು + ಕುಟ್ಟು$_1$ ]

**ಟುರ್ಗುಟ್ಟು** 'ಟುರುಗುಟ್ಟು' ನೋ.

**ಟುವ್ವಿಡು** (ಕ್ರಿ). ಟುವ್ ಟುವ್ ಎಂದು ಶಬ್ದಮಾಡು : ಟುವ್ವಿಡುವ ಕುಕಿಲಿಡುವ ಗಾನದೊನಪು (ನೆಲಮು. ೩-೨೩). [ ಟುವ್$_0$ + ಇಡು$_1$ ]

**ಟುಸ್** (ನಾ). ಒಂದು ಅನುಕರಣ ಶಬ್ದ : ಪಟಾಕಿ ಟುಸ್ ಎಂದುಬಿಟ್ಟಿತು (ರೂಢಿ).

**ಟೂನಮರ** (ನಾ). ಒಂದು ಬಗೆಯ ಮರ : ಕೆಂಪುಗಂಧಗಿರಿ. ನಂದಿವೃಕ್ಷ, ಟೂನಮರ . . . ಗಂಧಗರಿಗೆ (ವೃಜಿಗಿ. ೧೯-೩೪೮). [ ಟೂನ$_0$ + ಮರ$_1$ ]

**ಟೆಂಕ$_1$** 'ತೆಂಕು' ನೋ.

**ಟೆಂಕ$_2$** 'ಟಂಕೆ$_1$' ನೋ.

**ಟೆಂಕದೆಸೆ** 'ತೆಂಕದೆಸೆ' ನೋ.

**ಟೆಂಕಿ** 'ಟಂಕಿ$_2$' ನೋ.

**ಟೆಂಕೆ** 'ಟಂಕಿ$_2$' ನೋ.

**ಟೆಂಗು** 'ತೆಂಗು$_3$' ನೋ.

**ಟೆಂಟಣಿಸು, ಟಂಟಣಿಸು$_2$, ಟಂಠಣಿಸು, ಟೆಂಟೆಣಿಸು, ಟೆಂಠಣಿಸು, ಟೆಂಠೆಣಿಸು, ಡಂಢಣಿಸು, ಡೆಂಡಣಿಸು, ಡೆಂಡೆಣಿಸು, ಡೆಂಢಣಿಸು, ಡೆಂಢಳಿಸು, ಡೆಂಢೆಣಿಸು, ಢೆಂಢೆಣಿಸು** (ಕ್ರಿ). ೧. ವಿರೋಧಿಸು ; ದ್ವೇಷಿಸು ; ವೈರತಾಳು ; ಸ್ಪರ್ಧಿಸು : ಮೊಂಟಾಗಿ ಕೈಗಳೆರಡುಂ ಗೆಂಟಾಗಿರೆ ತನಗೆ ಸಿರಿಯುಂ ಕೂೞುಂ ಕಾಲುಂ ಕುಂಟಾಗಿ ನಮೆಯುತಿರ್ಪರ್ ಟೆಂಟಣಿಸಿ ಮಹಾತಪಂಗಳಂ ಕಿಡಿಸಿದವರ್ (ಧರ್ಮಾಮೃ. ೬-೧೮೦); ತಳ್ತು ಗಂಟಿಕ್ಕಿ ಟೆಂಟಣಿಸುವಂಕವಂ ಸೆಳೆದು ಕೆಡೆಪುವ . . . ಮಾಸಾಳ್ಗಳ ಮಂತಣದೊಳಂ (ಗಿರಿಜ. ೨-೧೦೩ ವ) : ಟೆಂಟಣಿಪ ವೈರಿಗಳ ಗಳಹುವ ಗಂಟಲನು ಮುಱಿಯೊದೆವ ಹರೆಯಕೆ ಕಂಟಕವಲಾ ಮುಪ್ಪು ಬಂದುದು ಮಗನೆ ತನಗೆಂದ (ನಿಘಾಗ. ೩-೮-೨೩). ೨. ಉತ್ಸಾಹಪಡು ; ಸಂಭ್ರಮಿಸು : ಹಿಗ್ಗು : ಹಿಡಿ ಹಿಡಿ ಹೊಡೆ ಹೊಡೆಯೆಂದು ಟೆಂಟಣಿಸಿ ಬೆಂಕೊಂಡಾರ್ಭಟಿಸಿ (ಭರತ. ೫೬-೪೩) ; ಲಕ್ಷ್ಮಿಯ ಗೆಂಟಿನೊಳು ಶ್ರೀರಾಮ ಕುಳಿತಿರೆ ಟೆಂಟಣಿಸಲೋಲಗರು ನಾಟ್ಯದ ಜನರು ಸಹವಾಗಿ (ಶಬುಭಾ. ೧೪-೨೦). ೩. ಅಂಜು ; ಭಯಂಪಡು ; ಹಿಂದೆಗೆ : ತಾಱವಱಾಗೆ ಜಯಂ ಜೊವ್ವೇಱುವ ಟೆಂಟಣಿಸುವರಸನರಸನೆ ವಿರಸಂ (ಶಾಂತಿಪು. ೨-೪೧) ; ತಾಂ ಟೆಂಟಣಿಸದೆ ಬಲ್ವಿಡಿದಂ ಮಿಾಂಟುಂಜವ್ವನಿಗನಾ ನುಡಿಗಳಂ ಮನದೊಳ್ (ಉದ್ಭಟ. ೧೧-೪೪) : ಟೆಂಟಣಿಸದಿದಿರಾಗು (ಕುವ್ಯಾವಿ. ೮-೧೮) ; ಟೆಂಟಣಿಸದಿರು ದಕ್ಷ (ವೀಶೈಪು. ೩-೪-೧೮) ; ಕೃಷ್ಣನ ಮುಂದೆ ಭಾಷೆಯಂ ಪೂರೈಸಿ ಟೆಂಟಣಿಸದೊಡಲಂ ತೊಱೆದು (ಜೈಮಿಭಾ. ೧೩-೬೨). ೪. ಆಧಾರವಾಗು ; ಊರೆಯಾಗು : ಎಂಟು ಕಾಲ ಮಂಟಿಯ ಟೆಂಟ[ಪಾಠಾಂ. ಟೆ]ಣಿಸಿ ನಿಂದವೈದು ಕಂಭ (ಮೋಳಿಮಾ. ೨೫೪-೮೦೫) ; ಅಂತಪ್ಪ ದೇಹಕ್ಕೆ ಪಂಚಕರಣಂಗಳೇ ಆಧಾರವಾಗಿಹುದೆಂಬುದೀಗ ಟೆಂಟಣಿಸಿ ನಿಂದವೈದು ಕಂಭ ಎಂಬ ಶಬ್ದಕ್ಕರ್ಥ (ಮೋಳಿಮಾ. ೮೦೫ ಟೀಕೆ). ೫. ಒಟ್ಟಿಗೆ ಸೇರು ; ಒತ್ತೊತ್ತಾಗಿರು ; ಗುಂಪು ಸೇರು ; ನಿಬಿಡವಾಗಿರು : ಆ ಕುಸುಮಗುಚ್ಛಗುಂಜಾಗೃಹದೊಳ್ ಟೆಂಟಣಿಸದೆ ಗಳಪುವ ಪೋಲ್ ನೀಂಟಾದಿಂಚರ ಮನೆಸಗುತೊಪ್ಪಿದುವಳಿಗಳ್ (ಉದ್ಭಟ. ೯-೨೯) ; ಕೞಿಕಂತಗಲ್ಲದಳೆಂದು ತೋಂಟಗಳ್ವೊಱಗಿಕ್ಕಿದಂತೆ ಟೆಂಟಣಿಸಿಯೆ ಬೆಳೆದಿಹವು ಕೇತಕಿಗಳು (ಅಂಜನ. ೨-೮೭); ಕಂಟಕಿಯು ಸಹಕಾರ ರಂಭ ದಾಡಿಮಫಲಂ ಟೆಂಟಣಿಸಿ ತಳ್ವೊಡೆದು ರಸಪ್ರವಾಹಗಳಾಗೆ (ಪ್ರಭುಪು. ೩-೨೧). ೬. ಉಂಟುಮಾಡು; ಜನಿಯಿಸು: ತುಂಟತನದಿ ಹುಸಿದಾ ಹುಸಿ ತನಗೇಳೆಂಟು ದಿವಸದೊಳಗೆ ಕಂಟಕಮಂ ಮಾಳ್ಪುದು ಮಱುಭವದೊಳ್ ಟೆಂಟಣಿಪುದು ದುಃಖಮಂ(ಜಯಚಾ.೧೦-೧೧). ೭. ಶೋಭಿಸು : ಅಣಿಮಾದ್ಯಷ್ಟಗುಣಂಗಳಿಂ ನೆಲೆಗಳಂ ಮೇಗಾರ್ಯರಿಂದೆಂದು ಟೆಂಟಣಿಸುತ್ತಿರ್ಪುದು (ಶಾಂತಿಪು. ೬-೧೨೨); ಬೇರೊಂದು ವರ್ಣವೆಳ್ದು ಟೆಂಟಣಿಪ ಸುಕ್ಕೊಗಂ ಪೊಳೆವ ಕಂಪನವಿನಿತು ಮೆಂಟಣಿಸೆ (ಸೌಂದಪು. ೯-೧೧). **ಟಂಟಣಿಸು$_2$:** ೧. ಸದ್ಬುಧರ್ಗಿಂದ್ರಭೂಜದೊಳ್ ಟಂಟಣಿಸುತ್ತಮಿರ್ಪ ನಿಜಬುದ್ಧಿಯಿನಾತ್ಮನೃಪಂಗೆ ಕೂಡೆ ನಿಷ್ಕಂಟಕಮಾಗೆ ಮಾಡಿದ ನಿಳಾತಳಮನೆಲ್ಲಮನೊಲ್ದು ಮಲ್ಲಪಂ (ಎಕ. V, ಬೇಲೂರು. ೧೧೪-೪೦: 1173) ; ಮಲೆವವರಿಲ್ಲ ಗಂಡೆಸೆವರಿಲ್ಲಿದಿರಪ್ಪವರಿಲ್ಲ ತೇಜವೆಂದುಲಿವವರಿಲ್ಲ ಟಂಟಣಿಪರಿಲ್ಲ . . . ಕೃಷ್ಣವಿಭುಕೇಶವದೇವಚಮೂಪ ರಾಜ್ಯದೊಳ್ (ಎಕ. VII, ಶಿಕಾರಿ. ೧೧೯-೩೪: 1181) ; ಟಂಟಣಿಸುತ್ತಮಿರ್ಪರಿನೃಪಾಳರ ಹಿಣ್ಣ ನಿಜಾಸಿದಣ್ಣದಿಂ ಕಣ್ಬೆಯ ಬಾರದೊಳ್ ಸುಳಿಸಿ (ಇಆ. XII, ೯೭-೧೯ ; 1187). **ಟಂಠಣಿಸು:** ೮. ನಡುಗು; ಅಲುಗಾಡು; ಕಂಪಿಸು; ಅದಂರು : ಧರಣಿ ಟಂಠಣಿಸೆ ಪದಹತಿ ಧೂಳಿಯಾವರಿಸೆ ತರಣಿ ತೇಜಂಗುಂದೆ (ಸೌಂದಪು. ೧೬-೧೨). **ಟೆಂಟೆಣಿಸು :** ೫. ಉಂಟು ಒಬ್ಬೊಬ್ಬರಿಗೆ ಬೆನ್ನಲಿ ಎಂಟುಕೋಟಿ ಪ್ರಮಥರು ಟೆಂಟೆಣಿಸಿ ನಿಂದಿಹರು (ಶರಲೀ. ೪೧-೨); ತಾಳೆ ಕಂಸಾಳ ಭೂರಗ ಭೇರಿ ಟೆಂಟೆಣಿಸಿ ಭೋರ್ಗರೆಯಲು (ನವಮೋ. ೧೮-೩೦). **ಟೆಂಠಣಿಸು:** ೧. ಸೆಣಸಲ್ ಮಾರ್ಮಲೆಯಲ್ ಬೆಸಕ್ಕೆ ಬೆಸೆಯಲ್ ದಂಡೋಪನತ್ಯಕ್ಕೆ ಟೆಂಠಣಿಸಲ್ ಪೇೞ್ದುದನಿರ್ಮೆ ಕೇಳಲರಿಯಿಲ್ಲೆಂಬನ್ನೆಗಂ ಗೆಲ್ದು (ಶಾಂತಿಪು. ೧೦-೧೮೫); ಭೀಮನ ಗದೆಯ ಘಾತಿಯ ಘಲ್ಲಣೆಗೆ ಕಂಠಣಿಸಿದವು ಟೆಂಠಣಿಸುವಾನೆಗಳು (ಕುವ್ಯಾಗ. ೧-೫೪); ಗುರುಹಿರಿಯರೊಳು ಟೆಂಠಣಿಪ ಕಡುಪಾತಕಂಗಿದನಂಟಿಸದಿರಲೆ ಮಗನೆ ಮಱೆದೀ ಗುರುರಹಸ್ಯವನು (ಸದ್ಗುರು. ೧-೩೦) ; ಹಿರಿಯರೊಳು ಟೆಂಠಣಿಸಿ ಕಡುಮೂರ್ಖರಾಗಿಹ ಗಂಟುಗಳ್ಳರು (ಅನುಸಾ. ೭-೨). ೩. ಮಣಿದಿರೆ ಮಱವೆಯೊಳಿಂದ್ರಿಯಭಟರು ಟೆಂ[ಪಾಠಾಂ. ಮೆಂ]ಠಣಿಸದೆ ಗನ್ನವನಿಕ್ಕಿ ನೋಡಿದಾಯುದೀವಿಗೆಯನು ಜೀವಚಿಂತಾಮಣಿಯ ಕೊಂಡೊಯ್ದನು ಜವನು (ವರ್ಧಿತ. ೮-೧೫). ೫. ಪಲವು ಸ್ತ್ರೀರತ್ನಗಳಿಂದೆಂದು ಟೆಂಠಣಿಸಿಯೆ ಸೊಬಗಿಂದ (ತರ್ಕಕೌ. ೧-೦೦೩). ೯. ವ್ಯಾಕುಲಗೊಳ್ಳು ; ದುಃಖಿಸು ; ಕುಗ್ಗು ; ಕೊರಗು: ವರಪಾಂಡವರು ಕಣನೊಳು ಮೆಂಠಣಿಸಿದರು ಕಮಠ ಟೆಂಠಣಿಸೆ (ಕುವ್ಯಾಉ. ೧೧ ಸೂಚನೆ) : ಕಣುಗಳಿರ್ದಂಧಕರವೊಲು ಟೆಂಠಣಿಸುವವರಿಬ್ಬರು ಕಣಾ (ಅಂಬಿಕಾ. ೪೭-೫೨). **ಟೆಂಠೆಣಿಸು :** ೧. ಏಱು ಒಡಿಗು ದುರೆಗಳನು ಎಣಿಕೆ ಮಾಡದೆ ಹಿಡಿವ ರಾಯರಾವುತರು ಟೆಂಠೆಣಿಸಿ ಮಾರ್ಮಲೆತು ಕಾದುವ ಮಾವತಿಗರು (ಸಮ್ಯಕ್ಕಾ. ೮-೪೯). ೯. ಶುಂಠಮನುಷ್ಯರಾ ಧರಣಿಪರ್ . . . ಸಚರಾಚರವಾ ವಿಧಿಯ ಪ್ರತಾಪದಿಂ ಟೆಂಠೆಣಿಸುತ್ತ ಪೋದರ್ (ಪಂಪಶ. ೬೬-೬.). **ಡಂಢಣಿಸು :** ೩. ಸಾಯದ ರೀತಿಯಲಿ ಮುರಿಯೆಚ್ಚಡಪ ಡಂಢಣಿಸಿ ತಿರುಗಿದನು (ತಿಮ್ಮಭಾ. ೫-೩೯). **ಡೆಂಡಣಿಸು :** ೨. ಹೆಗ್ಗರಿಯೊಂದ ಕಿತ್ತೆತ್ತಿ ಡೆಂಡಣಿಸಿ ಬಲುಹಿಂದ ಕಪಿಭಟ ಮುಂಡೆಯಲೆ ಹೊತ್ತೆತ್ತಿ ತಂದನು (ಕೌಶಿರಾ. ೦೬-೭). ೮. ಬಲವಳಿದುಡೆಂಡ[ಪಾಠಾಂ. ಡೆ]ಣಿಸಿ ಹಜ್ಜೆ ಹುಣ್ಣಂತಾಗೆ ಅಂಗಾಲೊಳುರಿಗೆಳ್ದ ಬೊಕ್ಕೆ ನೆತ್ತರನುಗುಳೆ (ಓಹಿರ. ಹ. ೨೧೪-೨೨); ಹೊಯ್ಮಳ್ಳಿ ಡೆಂಡಣಿಸುವಡಿಹನಿವ ಬೆಮರು (ಹವಕಾ. ೬-೬೭): ಕೋದಂಡವ ಪಿಡಿದೇಱಿಸಿಯೆಮುಂಡಿಸಿ ತೆಗೆದಿಸೆ ಪುಂಡರೀಕನ ರಥ ಡೊಡಣಿಸಿತು (ಅಂಜನ. ೬-೧೭೯) ; ಬಾಡಿದೆಳೆವಳ್ಳಿಯೊಲು ಡೆಂಡಣಿಪ ನಂಬಿಯಣ್ಣ (ಸೌಂದಪು. ೧೬-೨೯); ಬಿಟ್ಟ ಮಂಡೆಯ ಬೆನ್ನ ಮಲಗಿದ ಹೊಟ್ಟೆಗಳ ಡೆಂಡಣಿಪ ಕೈಕಾಲಿಟ್ಟ ಗೋಳಿನಖಿಳಜನ ನಡೆತಂದುದು (ನಿಘಾಗ. ೪-೧೨-೫). ೯. ಕೌಸಲೆಯ ಮನೆಗಾ ಭರತ ಡೆಂಡಣಿಸುತ್ತ ಬಂದನು . . .

ಕೆಡೆದನು ಕರುಣಸೆಂದೆನುತ (ಕೌಶಿರಾ. ೪-೦೫); ಆದಿಶಕ್ತಿಯ ಕಾಣುತಸುರಗೆ ಮನದಿ ನವ ಪೂಬಾಣ ಮಸೆದೋಱಿದುದು ವಿರಹಾಗ್ನಿಯಲಿ ಡೆಂಡಣಿಸಿ (ಅಂಬಿಕಾ. ೧೮-೯೭). **ಡೆಂಡೆಣಿಸು :** ೮. ಸೈಗೆಡೆಯುತ್ತಂ ಬಿಡದೇಳ್ವ ಡೆಂಡೆಣಿಸುತಂ ಬಾಯಾಱುತಂ ಬಳ್ಕುತಂ (ವೃಷವಿ. ೯-೮೧): ಕರಗತಿಯಲಿ ಡೆಂಡೆಣಿಸುತಾಗ ಧರೆಗುರುಳಿ (ಅಭಿಕಾ. ೧೭). **ಡೆಂಢಣಿಸು:** ೧. ಬಲನ ಘಾತಕೆ ಸೈರಿಸದೆ ಕಳವಳಿಸಿ ಗಿಗ್ರನೆ ತಿರುಗಿ ಘೀಳಿಡುತಳಲು ಮಿಗೆ ಡೆಂಢಣಿಸಿ ಮೇಲ್ವಾಯ್ದೊದೆದು ಸೊಂಡಿಲಲಿ ಸೆಳೆದು ನಭಕೀಡಾಡುತಿರೆ (ಅಕ್ರೂಡ. ೬-೨೯). ೩. ಅಡರಿದರಾ ಗಿರಿಯನು ಮಡದಿಯರಂದು ನಡುಗಿ ಡೆಂಢಣಿಸಿ ಬೀಬುತ (ಅಂಜಪ. ೯-೦೬೬) ; ಭಲ್ಲೆಯದ ಬಲುಗಾಯದಲಿ ತನು ತಲ್ಲಣಿಸಿ ಡೆಂಢಣಿಸಿ ರಥದಲಿ ಬಿಲ್ಲ ಬಿಸುಟನು (ನಿಭಾಗ. ೧೦-೫೬-೪೦). ೮. ಬಿಗುಹುಗೆಟ್ಟಳ್ಳೆ ಡೆಂಢಣಿಸುವಡಿಯಾಲಿಸುತೆಲ್ಲ ಕಿವಿ (ಹಡಕಾ. ೫-೨೭) ; ಕಂಗಳ ದಾಯ ತಪ್ಪಿತು ಡೆಂಢಣಿಸಿ ಕಲಿ ವಾಯುಸುತನಪ್ಪಳಿಸಿ ಬಿದ್ದನು ಕಯ್ಯ ಗದೆ ಕಳಚಿ (ಕುವ್ಯಾಗ. ೭-೧೧) ; ಡೆಂಢಣಿಸಲು ತನು ಕೂಗಿದಳಾಗ ಭೂಮಂಡಲ ಪೊದರುವಂದದಲಿ (ಕೃಷ್ಣಗೋ. ೧-೭೨). ೧೦. ನೂಕು ; ತಳ್ಳು ; ಬೀಳಿಸು: ಮಾರುತಿಯು . . . ವಾಮಕರ ತಳದೆರಡು ಬೆರಳಿಂದ ಡೊಕ್ಕರಿಸುತಸುರೆಯಂ ನೆಲಕೆ ಡೆಂಢಣಿಸೆ ಕೆಡೆದಳು ನಿಮಿಷಮಾತ್ರದಿಂದ (ವಂಕಾರಾ. ೫-೩-೧೬). **ಡೆಂಢಳಿಸು :** ೮. ಕಳವಳಿಸಿ ಚಸವಳಿದು ಮಿಗೆ ಡೆಂಢಳಿಸಿ ಯಮುನಂದನನು ಬಿದ್ದನು (ತಿಮ್ಮಅ. ೧-೨). **ಡೆಂಢೆಣಿಸು :** ೩. ಮಾಗಧನು ಹೊಡೆಗೆಡೆದನವನಿಯಲಿ ಭೋಟ ಡೆಂಢೆಣಿಸಿದನು (ಜೀವಂಪ. ೧೫-೨೪). ೮. ಮಡಲ್ವ ಮರ್ಬಿನಿಂ ಹರವಸಗೊಂಡು ಡೆಂಢಣಿಸಿ ಪಿಂದೆಗೆದಾಱಿದೆ ನೆಮ್ಮಿ ಗೋಡೆಯಂ . . . ಎಱಗಿದರ್ ಪದಪದ್ಮಕೆ (ಚಕವಿ. ೪-೧೪೩). **ಢೆಂಢೆಣಿಸು :** ೮. ಮೂಗಿನ ನೆರೆಯೊಡೆದು ಪೊಸನೆತ್ತರ್ ಪೊನಲಿಡೆ ಢೆಂಢೆಣಿಸಿಪಿಂತಣ್ಗೆ ಸರಿದು (ಚಕವಂ. ೧೭೪-೧೭). [ ? + – ಇಸು$_3$ ]

**ಟೆಂಟು** (ನಾ). ಗುಡಾರ ; ಡೇರೆ : ಅನಂತ ತನ್ನ ಟೆಂಟಿಗೆ ಬಂದ (ಜೀದಾನ. ೬೨). [ ←ಇಂ. Tent ]

**ಟೆಂಟೆಣಿಸು** 'ಟೆಂಟಣಿಸು' ನೋ.

**ಟೆಂಠಣಿಸು** 'ಟೆಂಟಣಿಸು' ನೋ.

**ಟೆಂಠಿಣಿಸು** 'ಟೆಂಟಣಿಸು' ನೋ.

**ಟೆಂಠೆಣಿಸು** 'ಟೆಂಟಣಿಸು' ನೋ.

**ಟೆಕ್ಕರಿ** 'ಠಿಕ್ಕರಿ' ನೋ.

**ಟೆಕ್ಕರಿಗಳೆ** 'ಠಿಕ್ಕರಿಗಳೆ' ನೋ.

**ಟೆಕ್ಕೆ$_1$** 'ಟಕ್ಕೆಯ' ನೋ.

**ಟೆಕ್ಕೆ$_2$** 'ಟೆಕ್ಕೆ$_1$' ನೋ.

**ಟೆಕ್ಕೆಯ** 'ಟಕ್ಕೆಯ' ನೋ.

**ಟೆಕ್ಕೆಹ** 'ಟಕ್ಕೆಯ' ನೋ.

**ಟೆನಿಸ್** 'ಟೆನ್ನಿಸ್' ನೋ.

**ಟೆನ್ನಿಸ್, ಟೆನಿಸ್** (ನಾ). ಒಂದು ಬಗೆಯ ಚೆಂಡಾಟ : ಟೆನ್ನಿಸ್ ಆಟ ಮುಗಿಸಿಕೊಂಡು ಅವನೊಂದಿಗೆ . . . ಮನೆಗೆ ಹೋಗುತ್ತಿದ್ದೆ (ಅಲಹೂ. ೯೨). **ಟೆನಿಸ್ :** ಸುತ್ತಲೂ ಆವರಣ ಹಾಕಿ ಗಟ್ಟಿಸಿದ ನೆಲದ ಮೇಲೆ ಮಧ್ಯೆ ಅಡ್ಡಲಾಗಿ ಎಳೆದು ಕಟ್ಟಿದ ಬಲೆಯ ಮೇಲ್ಗಡೆ ಹಾಯ್ದುಹೋಗುವಂತೆ ದಾಂಡಿನಿಂದ ಚೆಂಡನ್ನು ಹೊಡೆಯುವ, ಇಬ್ಬರು, ಮೂವರು ಅಥವಾ ನಾಲ್ವರು ಆಡುವ ಒಂದು ಆಟ: ಟೆನಿಸ್ (Tennis. ಇಂಕಣಿ.).

[ ←ಇಂ. Tennis ]

**ಟೆಪರಿ** (ನಾ). ಗೆಜ್ಜೆಗಳನ್ನು ಕಟ್ಟಿರುವ ಚಿಟಿಕೆ,–ತಾಳ: ಎಂದಿನಂತೆ ಇಂದು ಅವರ ಕಾಲಲ್ಲಿ ಗೆಜ್ಜೆ ಇರಲಿಲ್ಲ; ಕೈಯಲ್ಲಿ ಟೆಪರಿಯೂ ಇರಲಿಲ್ಲ (ಅಬಲಾ.೨೫).

[ ←ಮರಾ. ಟಪರೀ ]

**ಟೆಪಾರಿಕೆ** 'ಟಪಾರಿಕೆ' ನೋ.

**ಟೆಪ್ಪರ$_1$** (ನಾ). ೧. (ಕುದುರೆ ಮೊದಲಾದುವುಗಳ) ನಾಗಾಲೋಟ ; ಪುಟನೆಗೆತ ; ನೆಗೆಯುತ್ತ ಮುಂಬರಿಯುವಿಕೆ : ನಿಯತದ್ವಿತ್ವಕ್ಕೆ: ವಪ್ಪುಕಂ, ಕಪ್ಪಡಿ . . . ತೆಪ್ಪಂ, ಟೆಪ್ಪರೆಂ, ದುಪ್ಪಡಿ (ಶಮದ. ೩೬ ಪ್ರಯೋ.). ೨. ಒಂದು ಬಗೆಯ ಕುಸ್ತಿವರಸೆ ; "ಜಟ್ಟಿಗಳ ಸಾಧನೆ" (ಶಮದ. ನ. ೧೭೦ ಅಡಿಟಿ) ; ದ್ವಿತ್ವಕ್ಕಿಲ್ಲದುದರ್ಕೆ: ತಪ್ಪು, ಹೆಪ್ಪು, ಟಿಪ್ಪಣಂ, ಟೆಪ್ಪರಂ (ಶಮದ. ನ. ೧೭೦ ಪ್ರಯೋ.). [ ? ]

**ಟೆಪ್ಪರ$_2$** 'ಟೆಬ್ಬರ' ನೋ.

**ಟೆಪ್ಪರಿಸು** (ಕ್ರಿ). ನಾಗಾಲೋಟ ಓಡು; ನೆಗೆಯುತ್ತ ಓಡು; ಪುಟನೆಗೆ. 'ಟೆಪ್ಪರಿಸುಹ' ಪರಾ. [ ಟೆಪ್ಪರ$_1$ + – ಇಸು$_3$ ]

**ಟೆಪ್ಪರಿಸುಹ** (ನಾ). ನಾಗಾಲೋಟ ಓಡುವಿಕೆ ; ನೆಗೆಯುತ್ತ ಓಡುವಿಕೆ; ಪುಟನೆಗೆಯುವಿಕೆ ; "ಟೆಪ್ಪರಿಸುಹ – ಪಲ್ಗಿತ" (ನಾಚಿರಾ. ೬).

[ ಟೆಪ್ಪರಿಸು + – ಹ$_2$ ]

**ಟೆಪ್ಪು** (ನಾ). (?): ದ್ವಿತ್ವಕ್ಕಿಲ್ಲದುದರ್ಕೆ–ತಪ್ಪು, ಹೆಪ್ಪು, ಟೆಪ್ಪು, ಉಪ್ಪರಂ (ಶಮದ. ೬. ೧೫೯ ಪ್ರಯೋ.). [ ? ]

**ಟೆಬ್ಬರ, ಟೆಪ್ಪರ$_2$** (ನಾ). ಹಿಂಸೆ ; ಕಾಟ ; ಪೀಡೆ : ಭುಂಜ, ರಾಜ . . . ಟೆಬ್ಬರ, ಗಬ್ಬರ, ಅಬ್ಬರ (ಶಬ್ದಾನು. ೫೯೪ ಪ್ರಯೋ.) ; ಆತನಿಗೆ ಬಿರುನೋಟವನ್ನೊಡ್ಡಿ ಅನಿಮೇಷನಾಗಿ, ತೇಜಗೆಟ್ಟು, ಟೆಬ್ಬರಕ್ಕಾಗಿ, ಬರತ ತುಟಿಗಳನ್ನರತ ನಾಲಗೆಯಿಂದಾರಯ್ದುಕೊಂಡು (ಮಂತ್ರಶ. ೬೫-೦೫). **ಟೆಪ್ಪರ$_2$ :** ಬಿಸುಪಳಿದರ್ಕನುರ್ಕ್ಕುಡಿಗುವಿಂದುವ ಕಾಂತಿ ಕಳಲ್ದುರ್ವ್ . . . ಇಲ್ಲಿ ಲಕ್ಷ್ಮಣಂ ಪುಸಿದೊಡಮಾರ್ಗ್ಗೆ ಟೆಪ್ಪರಮನೊಡ್ಡಿದೊಡಂ ಮನವೊಲ್ದು ಕೂಡಿ ಛಿದ್ರಿಸಿದೊಡಮನ್ಯನಾರಿಗೆ ಮರುಳ್ದೊಡಮಾಹವದೊಳ್ ಮರಲ್ದಡಂ (ಎಳ. VII, ಶಿಕಾರಿ. ೧೩೬-೩೧ ; 1068). [ ? ]

**ಟೆಬ್ಬರಿಸು, ಟಬ್ಬರಿಸು** (ಕ್ರಿ). ೧. ಸತ್ವಹೀನವನ್ನಾಗಿ ಮಾಡು ; ಶಕ್ತಿಗುಂದಿಸು; ಕುಗ್ಗಿಸು; ಕುಂಠಿತಗೊಳಿಸು: "ಟೆಬ್ಬರಿಸು–ಕುಂಠೀಕರಣೇ" (ಶಮಧಾ) : ಪಗೆಗಳ ಪಗೆಯಂ ಕಟ್ಟಚ್ಚರಿಯಿಂ ಟೆಬ್ಬರಿಸಿದ ಮನದಿಂ ವಾಜಿನೀರೊಳಾಯ್ತು (ರಾಮಾಶ್ವ. ೧೨೧-೪). ೨. ಗಾಯಪಡಿಸು: ಹೆಬ್ಬುಲಿಯು ನೋಡಿಲ್ಲಿ . . . ಟೆಬ್ಬರಿಸಲೊಬ್ಬನೇ ಸಾಕಲ್ತೆ ಮಲೆಯ (ಕಾಲೂಕ. ೮೭-೧೬೮). ೩. ನಡುಗು ; ಶಕ್ತಿಗುಂದು : ಟೆಬ್ಬರಿಸುವನೆ ಕಲಿಭೀಮನು ಬ್ಬಟೆಯರಿಗಳಾಹವಧೀರರಾದರೆ ಘಾತುಗೆಡುವವನೆ (ಕುವ್ಯಾಕ. ೦೨-೨೬). ೪. ಹೇವರಿಸು ; ಅಸಹ್ಯಪಡು ; ಜಂಗುಪ್ಸೆತಾಳು ; ವಿಮುಖವಾಗು : ಪಾಡುವಿಂಚರಕೆ ಕಡುಕನಲಿ ಬಿತ್ತರಿಪ ಸಬ್ಬವಕೆ ಟೆಬ್ಬರಿಸಿ ಕೇಳುವ ಕಥೆಯ ಕಿವುಡುಗೇಳಿ (ಸೌಂದಪು. ೧೭-೫೨). **ಟಬ್ಬರಿಸು :** ೫. ಮೊಂಡಾಟಮಾಡು; ಪಟ್ಟುಹಿಡಿ; ಹಟಮಾಡು: ಟಬ್ಬರಿಸದಿರಾತ್ಮಜ ಭವಿಯಂತೆ ಚಿದಭ್ಯಾಸವ ಬಿಡದಿರು (ಯೋಗಾಂವಿ. ೩-೩೩).

[ ಟೆಬ್ಬರ + – ಇಸು$_3$ ]

**ಟೆಲಿಗ್ರಾಂ** (ನಾ). ತಾರು ; ತಂತಿವರ್ತಮಾನ : ದೂರಲೇಖದ ಮೂಲಕ ಬಂದ, ಕಳಿಸಿದ, ಸುದ್ದಿ: ತಂತಿ, ತಂತಿವರ್ತಮಾನ, ತಾರು, ದೂರಲೇಖನ, ಟೆಲಿಗ್ರಾಂ (Telegram. ಇಂಕಣಿ.) ; ನನಗೆ ಮೈಸೂರಿನಿಂದ ಟೆಲಿಗ್ರಾಂ ಬಂತು (ಹೊಸಕ್ಕ. ೧೨೪) ; ನಾಗರಾಜನಿಗೆ . . . ಟೆಲಿಗ್ರಾಂ ಊಟದ ಹೊತ್ತಿಗೆ ಬಂತು (ಮಹಾಗ. ೯೨).

[ ←ಇಂ. Telegram ]

**ಟೆಲಿಗ್ರಾಫ್** 'ಟೆಲಿಗ್ರಾಫು' ನೋ.

**ಟೆಲಿಗ್ರಾಫ್‌ಗಿಡ** (ನಾ). ಒಂದು ಬಗೆಯ ಗಿಡ: ಕಾಡುಹುರುಳಿ, ನಾಗತಗರ, ಟೆಲಿಗ್ರಾಫ್‌ಗಿಡ (ವೃಷಿಗಿ. ೩೦-೫೭೨).

[ ಟೆಲಿಗ್ರಾಫ್ ? + ಗಿಡ (<ಗಿಡು) ]

**ಡಾಕಿನಿ** (ನಾ). ೧. ಹೆಣ್ಣು ದೆವ್ವಗಳಲ್ಲಿ ಒಂದು ಬಗೆ ; ಒಂದು ಬಗೆಯ ಹೆಣ್ಣು ಪಿಶಾಚಿ : ಡಾಕಿನಿ ಪಿಶಾಚ ವೇತಾಳ ಭೂತಂಗಳಿಂ ಭೀಕರದೊಳಂ ಜೆಸಿದವಾರ್ದು ರಿಂಗಣಗುಣಿವ ಕಲಿಗಳ ಕಪಾಲಂಗಳು (ತ್ರಿಪಿಥಾ. ೧೨-೪೫); ಸೀತಾರಾಮನು ಒಬ್ಬ ಡಾಕಿನಿಯ ವಶವಾಗಿಬಿಟ್ಟಿದ್ದ (ಬಂಕಿಮ. ೩೦೮). ೨. ಕಾಳಿಕಾದೇವಿಯ ಪರಿಚಾರಿಕೆಯರ ಒಂದು ವರ್ಗಕ್ಕೆ ಸೇರಿದವಳು. ೩. ರಕ್ಕಸಿಯಂ ಕತ್ತಿ,-ಖಡ್ಗ : "ಡಾಕಿನಿಯೆನಲು ರಕ್ಕಸಿಯ ಕತ್ತಿಗಿರದಪ್ಪ ನಾಮಮಂ" (ಶಬ್ದಮಂ. ೪೪). ೪. (ಆಲಂ) ಕಠೋರಹೃದಯದವಳು; ಕೆಟ್ಟ ಹೆಂಗಸು : ತನ್ನ ಮರ್ಯಾದೆ ತೆಗೆದ ಡಾಕಿನಿ ಎಂದೊಮ್ಮೆ ಅವಡು ಗಚ್ಚಿದನು (ಗ್ರಾಮಾಯ. ೪೬೨). [ಸಂ. ಡಾಕಿನೀ.]

**ಡಾಕಿನಿದೋಷ** (ನಾ). ಡಾಕಿನಿಯ ಆವೇಶದಿಂದುಂಟಾಗುವ ಬಾಧೆ ; ಭೂತೋಪದ್ರವ : ಇಪ್ಪೆಯ ಬೇರ ಅಡಿನ ಮೂತ್ರದಿಂದ ಏಳುಬಾರಿ ಭಾವನೆಯ ಕೊಟ್ಟು ಅರಿಸಿ ಸೈಂಧವ, ಬಜೆ, ತ್ರಿಕಟುಕ, ಇದರಿಂದ ನಸ್ಯ ಮಾಡೆ, ಭೂತ, ಶಾಕಿನಿ, ಡಾಕಿನಿದೋಷ, ಸನ್ನಿಪಾತ ಜ್ವರಂಗಳು ಬಿಟ್ಟು ಹೋಗುವುವು (ವಿವೈವಿ. ೧೩೯). [ಡಾಕಿನಿ + ದೋಷ]

**ಡಾಕಿನೀತಂತ್ರ** (ನಾ). [ತಂತ್ರಶಾ] ಒಂದು ಬಗೆಯ ತಾಂತ್ರಿಕ ಸಿದ್ಧಿ ಮಂತ್ರ : ಡಾಕಿನೀತಂತ್ರ ಕೂಚಿಮಾರತಂತ್ರ ಶಲ್ಯತಂತ್ರ . . . ವಚನ ತಂತ್ರಾದಿ ತಾಂತ್ರಿಕಸಿದ್ಧಿಮಂತ್ರಂಗಳಂ (ವಿವೇಕ. ೮೧). [ಸಂ.]

**ಡಾಕು$_1$, ಢಾಕು** (ನಾ). ೧. ಮುತ್ತಿಗೆ ; ಮೇಲೆಬೀಳುವಿಕೆ ; ಆಕ್ರಮಣ ; ಆಘಾತ : ನೂಕಿದೊಡೆ ಕರ್ಣಾದಿ ದೊರೆಗಳ ಡಾ[ಪಾಠಾಂ. ಢಾ]ಕನಾನು ವನಾರು ದಿವಿಜಾನೀಕದಲಿ (ಕುವ್ಯಾಭ. ೧೯-೧೩). ೨. ಸತ್ತ್ವ ; ಬಲ ; ಪರಾಕ್ರಮ : ಭೀಷ್ಮದ್ರೋಣರಿಂಗೆ ಸರಿಮಿಗಿಲೆನಿಸಿ ತೋರುವೆನು ಕೈಗುಣವನು ಡಾಕನರಿಯದೆ ತನ್ನ ವಿಕ್ರಮದ ಸಿರಿಯನವಿವೇಕಿಗಳು (ತುರಂಗ. ೭೨-೨೩); ಭೀಕರಬಲ ಶಿವಭೂಪನ ಡಾಕಿಂಗಗಿದಖಿಲ ರಾಜರಗಣಿತ ಧನಮಂ ಬೇಕಾದ ವಸ್ತುಚಯವನನೇಕವನಿತ್ತರಗಿ ತದನುಚರರಾಗಿರ್ದರ್ (ಕೆಳನೃ. ೭-೧೬). ೩. ಪ್ರಭೆ; ತೇಜಸ್ಸು; ಕಾಂತಿ: ತರುಣಯರುಗಳಟ್ಟಣಿಸಿ ಮೈಮೈಸೋಂಕಲುರು ಹೇಮದೊಡವುಗಳ್ಮಸೆದು ವರರಜವಿಳಿಯೊಳೊಪ್ಪಿತು ಬಾಲಸೂರ್ಯನ ಕಿರಣದ ಡಾ[ಪಾಠಾಂ.ಢಾ]ಕ ತೋಱುತ (ಕೇನವಿ. ೨೪-೪೪) ; ರಥವೆರಸಿ ಡಾಕಿನಿಂ ಥಳಕಿಡುವ ಸಿಂಧ ಸೀಗುರಿ ಛತ್ರಚಾಮರ ಚಮೂಪಂಗಳ (ಪರಶು. ೬-೨೦). ೪. ಜವ; ವೇಗ; ತ್ವರೆ: ಈ ಕಥೆಯ ಧರ್ಮಜಂಗೊರೆದು ಮತ್ತಲ್ಲಿಂದ ಡಾಕಿಲಿ ಪ್ರಭಾಸಕಂ ಬರಲು (ತುರಂಗ. ೩೦-೦೪). ೫. ಲೂಟಿ ; ಕೊಳ್ಳೆ ; ದರೋಡೆ. **ಢಾಕು** : ೩. 'ಢಾಕುಗೆಡಿಸು' ಪರಾ.

ಡಾಕಳಿ=ಸತ್ತ್ವಗುಂದಂ; ತೇಜಸ್ಸು ನಾಶವಾಗು; ಪ್ರಭಾವ ಕುಗ್ಗು: ಸುರಬಲದಾಕೆವಾಳ ಮೃಗೇಂದ್ರನ . . . ಡಾಕಳಿದುದಾ ಸತ್ತ್ವದಲ್ಲಿರ್ದಾ ಕುಠಾರ ಕೃತಾಂತನವ (ಅಂಬಿಕಾ. ೩೬-೨೨). [←ತೆಲು. ಢಾಕ]

**ಡಾಕು$_2$** 'ಡಾಗು$_1$' ನೋ.

**ಡಾಕ್ಟರಿಕೆ** (ನಾ). ಡಾಕ್ಟರನ ಉದ್ಯೋಗ ; ವೈದ್ಯವೃತ್ತಿ : ಅತ್ತ ಡಾಕ್ಟರಿಕೆ ಕೆಲಸಕ್ಕೆ ಪುರುಸೊತ್ತಿದೆಯೇ ಅಂದರೆ, ಬೆಳಗ್ಗೆದ್ದು ಹೋದರೆ ಹೊತ್ತು ಮಿಾರಿದ ಮೇಲೆಯೇ ಬಂದು ಊಟಮಾಡುವುದು (ಜಾರುದಾ. ೩೩೫) ; ಅವನು ಉಡುಪಿಯಲ್ಲಿ ಡಾಕ್ಟರಿಕೆ ಮಾಡಲಾರಂಭಿಸಿದ ಮೇಲೆ ಮತ್ತೆ ಮತ್ತೆ ಅದರ ಪ್ರಸ್ತಾಪ ಬರುತ್ತಿತ್ತು (ಕೃಹಿಕಾ. ೩೭) ; ಡಂಬನಿಗೂ ಈಗ ತನ್ನ ಮಗನ 'ಡಾಕ್ಟರಿಕೆಯ' ಬಗ್ಗೆ ಸಾಕಷ್ಟು ಹೆಮ್ಮೆಯೆನಿಸಿತು (ಡಂಬನಾ. ೬೦). [ಡಾಕ್ಟರು + -ಇಕೆ]

**ಡಾಕ್ಟರು, ಡಾಗದೊರೆ, ದಾಕುದಾರ, ದಾಕ್ತಾರ, ದಾಗ್ದಾರು** (ನಾ). ೧. ರೋಗಿಗಳಿಗೆ ಮದ್ದುಕೊಡುವವನು ; ವೈದ್ಯ ; ಚಿಕಿತ್ಸಕ : ನನ್ನ ತಮ್ಮನಿಗೆ ನೂರೆರಡು ಡಿಗ್ರಿ ಜ್ವರವಿದೆಯೆಂದು ಡಾಕ್ಟರು ಹೇಳಿದರು (ಮಧ್ಯಮು. ೧೬೫) : ಆ ಆಫೀಸರವರು ಕೂಡಲೇ ಆ ವಿಷಯವನ್ನು . . . ದನಕರುಗಳ ಡಾಕ್ಟರಿಗೆ ತಿಳಿಯಪಡಿಸುವರು (ಗ್ರಾಪಶು. ೧೧೬). ೨. ಗೌರವಾನ್ವಿತವಾದ ಉನ್ನತಪದವಿಯನ್ನು ಪಡೆದವನು ; ವಿಶ್ವವಿದ್ಯಾನಿಲಯಗಳು ಕೊಡುವ ಗೌರವಪ್ರಶಸ್ತಿ ಪಡೆದವನು; ವಿದ್ವಾಂಸ. **ಡಾಗದೊರೆ** : ೧. ಡಾಗದೊರೆ ಕೇವುಲ್ ಸಾಹೇಬರ ಬಂಗಲೆ ಎಲ್ಲಿದೆ ಬಲ್ಲೆಯ (ಮುಸುಗ. ೧೩೦). **ದಾಕುದಾರ** : ೧. ಕೂಸಿಗೆ 'ದಾಕುದಾರ' ರನ್ನು ಬರಮಾಡಬಹುದಿತ್ತು (ಮುಂಗಾಮು. ೧೩೦). **ದಾಕ್ತಾರ** : ೧. ಅಲ್ಲಿ ಈಗಿರುವ ದಾಕ್ತಾರರು ಮನುಷ್ಯರನ್ನು ತಿನ್ನುವುದಿಲ್ಲ ಎಂದೆ ನಾನು (ಮೈಲಿಮಾ. ೨೫). **ದಾಗ್ದಾರು** : ೧. ಅವರನ್ನು ಗಾಂಧೀಜನ, ಓದಿಸೋ ಅಯ್ನೋರು, ದಾಗ್ದಾರು, ಗೋಸಾಯಿಗಳು ಏನೆಂದಾದರೂ ಕರೆದುಕೊಳ್ಳಿ (ಸುವಸಂ. ೧). [←ಇಂ. Doctor]

**ಡಾಗ** 'ಡಾಗು$_1$' ನೋ.

**ಡಾಗದೊರೆ** 'ಡಾಕ್ಟರು' ನೋ.

**ಡಾಗಾನ್** (ಕ್ರಿ). ಮುದ್ರೆಯನ್ನು ಪಡೆ ; (ಕಾದ ಕಬ್ಬಿಣದ ಗುಳದ) ಬರೆಯನ್ನು ಹೊಂದಂ: ತಪ್ತಶುಪು ಮೇಣವನಲ್ಲದುರೆ ಭಿಕ್ಷುಕನ ಡಾಗಾಂತ ಮನೆಯಾಕಳೆ (ಪರಶು. ೨೨-೨೫). [ಡಾಗು$_1$ + ಆನ್$_1$]

**ಡಾಗೀನು** 'ದಾಗೀನು' ನೋ.

**ಡಾಗು$_1$, ಡಾಕು$_2$, ದಾಕ, ದಾಕು$_1$** (ನಾ). ೧. ಕಾದ ಕಬ್ಬಿಣ ಮೊದಲಾದ ಲೋಹಗಳ ಸಾಧನದಿಂದ ಒತ್ತುವ ಮುದ್ರೆ,-ಗುರುತು : ಬ್ರಹ್ಮನ ಡಾಗು ಬೆನ್ನಮೇಲೆ ವಿಷ್ಣುವಿನ ಡಾಗು ಕೈಯ್ಯ ಮೇಲೆ (ಮೋಳಿಮಾ. ೧೦೨-೪೦೭) ; ಬುಂದಿಯ ಅರಸರ ಕುದುರೆಗಳಿಗೆ ಮೊಗಲರ ಡಾಗನ್ನು ಎಂದಿಗೂ ಹಾಕಕೂಡದು (ಅಕ್ಕರ. ೯೦). ೨. ಕಪ್ಪುಕಲೆ,-ಗುರುತು ; ಕರೆ : ರಿಪೋರ್ಟ್ ಸಾಹೇಬರ ಮಸಿಯ ಕಲೆಯ ಡಾಗು ಇಲ್ಲದೆ ಮೇಲೆ ಹೋಗುವಂತೆ ದಕ್ಷತೆ ವಹಿಸುತ್ತಿದ್ದರು (ದೀಪಹ. II, ೨೩೨). ೩. ಮೈಲಿರೋಗ ; ಸಿಡುಬು : ಸಂಸಾರವೆಂಬ ಡಾಗು ಎನ್ನ ಮುತ್ತುತನದಲ್ಲಿ ಕೊಂದಿತ್ತು (ಮೋಳಿಮಾ. ೪೭-೧೯೩). **ಡಾಕು$_2$** : ೨. "ಕಲೆ" (ಜಾನಕೀಲ. ೬೩). ೪. ದೇವಿಹಾಕಲು ಬಳಸುವ ಒಂದು ಬಗೆಯ ರಸಿಕೆ ; ಮುಂದೆ ಸಿಡುಬುರೋಗ ತಗುಲದಂತೆ ದೇಹದೊಳಕ್ಕೆ ಹೊಗಿಸಿದ ಸಿಡುಬಿನ ರಸಿಕೆ : (೬). ೫. ದೇವಿಹಾಕಿದ ಗುರುತು ; ಮೈಲಿ ಕಲೆ : ಈ ಹುಡುಗನ ಕೈಯಲ್ಲಿ ಡಾಕು ಬಹಳ ಚೆನ್ನಾಗಿ ಕಾಣಿಸುತ್ತಿದೆ (ರೂಢಿ). **ದಾಕ** : ೬. 'ಕಾಲರಾ' ಮುಂತಾದ ಕೆಲವು ರೋಗಗಳು ತಗುಲದಂತೆ, ಅವುಗಳನ್ನು ಪ್ರತಿಭಟಿಸುವ ಶಕ್ತಿಯುಳ್ಳ ಸೂಕ್ಷ್ಮರೋಗಾಣುಗಳನ್ನೊಳಗೊಂಡ ರಸಿಕೆ ; ರೋಗವಿಷ: ಇತ್ತೀಚೆಗೆ ಹೊಸ ದಾಕಗಳ ಶೋಧನೆಯಾಗಿದೆ (ದೇವದೂ. ೨೩೨). **ದಾಕು** : ೬. ಮಗುವು ಹುಟ್ಟಿದ ನಾಲ್ಕು ತಿಂಗಳಿನಿಂದ ಹಿಡಿದು ಒಂದು ವರುಷದೊಳಗೆ ಕಡ್ಡಾಯವಾಗಿ, ಮೈಲಿಗೆ, ಕಾಲರಾ, ಟೈಫಾಯ್ಡ್ ಇತ್ಯಾದಿ ೧೮ ಬೇನೆಗಳಿಗಾಗಿ ದಾಕು ಹಾಕುವ ಯೋಜನೆಯು ನಡೆದಿದೆ (ದೇವದೂ. ೨೩೨).

ಡಾಗನೊತ್ತು = ಮುದ್ರೆಯೊತ್ತು ; ಗುರುತುಮಾಡು ; ತನ್ನದೆನಿಸಿಕೊಳ್ಳು: ಹರಿಯದೆಯೊಳು ಬೊಮ್ಮನ ಬಾಯೊಳು ಪುರಹರನ ವಾಮಾಂಗದೊಳು ಅರಲಸರಲ ಡಾಗನೊ[ಪಾಠಾಂ. ತಾಗಲೊ]ತ್ತಿದಂಗಜ ವೀರ ಬರಲಂಜಿದನು ರಾಮನೆಡೆಗೆ (ಕುರಾಸಾಂ. ೩೩-೧೧) ; ನಾಗಭೂಷಣ ನಂತಿರಲಿ ನಿರ್ಜರರೊಳು ಭೋಗದೇವೇಂದ್ರನ ಮೇಲೆ ಡಾಗನೊತ್ತಿದೆ ನೋಡು (ಮೋಹತ. ೩೮-೧೧); ಸುರಪನಂಗದಲಿ ತಮ್ಮಯ ಡಾಗನೊತ್ತಿದವು ಧರೆಯೊಳಿನ್ನುಳಿದ ಮಾನವರೆಮ್ಮ ಪೆಣ್ಣನಕೆ ಸರಿಯಿಯೆಂದೆಂಬ ಬಿರುದಿನ ವಾರನಾರಿಯರು ಪುರದಲ್ಲಿ ಕಣ್ಗೆಸೆದರು (ಭಿಕ್ಷಾಟ. ೨-೧೨) ; ಧಾತನ ಜಿಹ್ವೆಪೀಠದೊಳು ನಿಂದೆಯಾಖಂಡಲಗೆ ಡಾಗನೊತ್ತಿದೆ (ಪ್ರಭುಪು. ೫-೧೫೧).

ಡಾಗಿನ ಪಶು = ಮುದ್ರೆಯೊತ್ತಿದ ಪಶು : ಡಾಗಿನ ಪಶುಗಳೆಲ್ಲರೂ ಭೇದವನಱಿಯಬಲ್ಲರೇ (ಅಂಬಿವ. ೩೯೯-೮೭) : ಡಾಗಿನ ಪಶುಗಳಿಗೆ ಅನಾಗತನ ಸುದ್ದಿ ಏಕೋ (ಮೋಳಿಮಾ. ೧೦೩-೪೦೭); ಇಂತಿವರೆಲ್ಲರು ಡಾಗಿನ ಪಶುಗಳು ವೇಷಧಾರಿಗಳು (ಮೋಳಿಮಾ. ೧೮೩-೬೩).

[ ←ಮರಾ. ಡಾಗ್. ದಾಗ್ ; ಪಾರ. ಹಿಂ. ದಾಗ್./ತಮಿ. ಡಾಕು ; ತೆಲು. ಡಾಗು ]

ಡಾಗು₂, ಡಾಗ (ನಾ). ೧. ಸಾಮಾನು ; ಗಂಟು; ಮೂಟೆ ; ಭಾಂಗಿ : ಮಜೂರಿಯು ಡಾಗಿನ ಆಕಾರದಂತೆ ಮತ್ತು ಬದುಕಿನ ಮಹತ್ತ್ವ ಇದ್ದಂತೆ (ಮುಂಬವ್ಯಾ. ೧೯, ಪ್ರಸ್ತಾವನೆ); ರಾಶಿರಾಶಿಯಾಗಿ ಪಾರ್ಸಲ್ಲ "ಡಾಗು" ಗಳು ಬಿದ್ದಿದ್ದವು (ನಡದಾ. II, ೧೩೬೭). ೨. (ಒಬ್ಬ ಮಾಲೀಕನ) ಅಂಶ ; ಪಾಲು ; ಭಾಗ ; ಹಿಸ್ಸೆ : ನಾಲ್ವತ್ತು ಎಕರೆಯ ಏಕ ಡಾಗನ್ನು ಮಾಡಿಕೊಂಡು (ದೀಪಹ. II, ೨೮೮). ಡಾಗ : ೧. ಕಿರಾಣಿಯ ಬದುಕು ಒಂದು ಡಾಗದ ಒಳಗೆ ಒಂದೇ ತರದ್ದು ತರಿಸಿಕೊಳ್ಳುವವರಿಗೆ ಮಜೂರಿಯ ದರ (ಮುಂಬವ್ಯಾ. ೧೭, ಪ್ರಸ್ತಾವನೆ).

[ ←ಮರಾ. ಡಾಗ್ ]

ಡಾಗೋಬ (ನಾ). (ಬೌದ್ಧರ) ಸ್ತೂಪ ; ಪಗೋಡ ; ಸ್ತೂಪದ ಆಕಾರದಲ್ಲಿರುವ ಬಹಳ ಎತ್ತರವಾದ ಕಟ್ಟಡ ; ಸಮಾಧಿ : ಅನಂತರ ಬುದ್ಧನ ಅಸ್ಥಿ ಮೊದಲಾದ ಅವಶೇಷಗಳನ್ನು 'ಡಾಗೋಬ' ಗಳಲ್ಲಿ ಇರಿಸುತ್ತಿದ್ದರು (ಬಾಲಪ್ರ. II, ೮೫೭) ; ಗುಹೆಯೊಳಗೆ ಸೂರ್ಯನ ಕಿರಣವು ಪ್ರಾತಃಕಾಲದಲ್ಲಿ ನೇರಾಗಿ ಡಾಗೋಬದ ಮೇಲೆ ಬೀಳುವಂತೆ, ಕಮಾನುಳ್ಳ ಕಿಟಕಿಗಳನ್ನು ಕೊರೆದಿರುತ್ತಾರೆ (ಬಾಲಪ್ರ. III, ೧೬೭೦). 'ಪಗೋಡ' ಪರಾ. [←ಪಾಲಿ. ಡಾಬೆಗ; ಮರಾ. ಡಾಗೊಬಾ./ಸಂ. ಧಾತುಗರ್ಭ ]

ಡಾಡಿಮ 'ದಾಳಿಂಬ' ನೋ.

ಡಾಣ 'ದಾಣ₃' ನೋ.

ಡಾಹಾಡಂಗರ 'ಢಣಾಡಂಗುರ' ನೋ.

ಡಾಹಾಡಂಗುರ 'ಢಣಾಡಂಗುರ' ನೋ.

ಡಾಹಾಡಾಣೆ (ನಾ). ದೊಣ್ಣೆಯಿಂದ ಪರಸ್ಪರ ಹೊಡೆದಾಡಿ ಮಾಡುವ ಜಗಳ,-ಯುದ್ಧ : ಡಾಣಾಡಾಣಿ, ಬಾಡಾಬಾಡಿ (ಶಬ್ದಾನು. ೩೩೧ ಪ್ರಯೋ). [ <ಡಾಣೆ₂ + ಡಾಣೆ₂ + – ಇ₃ ]

ಡಾಣಿ₁ 'ದಾವಣಿ₁' ನೋ.

ಡಾಣಿ₂ 'ಢಾಣಿ₁' ನೋ.

ಡಾಣಿ₃ 'ದಾಣ₂' ನೋ.

ಡಾಣಿಗ (ನಾ). ವಪ್ಪನಾಗಿರುವವನು ; ದಡಿಯ ; ಧಾಂಡಿಗ : ದುರಹಂಕಾರಿ ಹಮ್ಮಿನ ಹಗರಣಿಗನು ಡಂಬದ ಡಾಣಿಗರೆರೆಯ (ಚೋರಬ. ೯-೬೪). [ಡಾಣೆ₂ (<ಢಾಣೆ₁) + – ಇಗ ]

ಡಾಣೆ₁ 'ದಾಣ₂' ನೋ.

ಡಾಣೆ₂ 'ಢಾಣೆ₁' ನೋ.

ಡಾಬು, ದಾಬು (ನಾ). ಸ್ತ್ರೀಯರು ನಡುವಿನಲ್ಲಿ ಧರಿಸುವ, ಚಿನ್ನದ ಅಥವಾ ಬೆಳ್ಳಿಯಿಂದ ಮಾಡಿದ ನಡುಪಟ್ಟಿ ; ಒಡ್ಯಾಣ : ಮಣಿಯದ್ದುಗೆಯ ಡಾಬಿನ ಮೇಖಲಾಂಚಿತ (ಅನಂರಾ. ೧-೩-೩೫); ಕಿರೀಟವನ್ನು ಡಾಬಿನ ಉಡುದಾರವನ್ನು . . . ಬ್ರಾಹ್ಮಣನಿಗೆ ಕೊಟ್ಟು (ಕೃವಾಳಿ. ೨೧೧); ಕಡಗ ಪಟ್ಟಿಯು ಡಾಬು, ಬುಗುಡಿ ಗೀರ್ಬಳೆ ಸರಿಗೆ (ಸಿದ್ಧಕಾ. ೮-೧೨) ; ಸಂಕ್ಷುಭಿತಪಕ್ಷಿಶ್ರೇಣಿಯೇ ಡಾಬು (ಧನ್ಯಾಲೋ. ೬೭) ; ಕಟಿಪ್ರದೇಶದಲ್ಲಿ ವಜ್ರದ ಡಾಬು ವಿರಾಜಿಸುತ್ತಿತ್ತು (ಬೌಲತ್. ೩೬೮). ದಾಬು : "ಡಾಬು (ದಾಬು)–ದಾಮನ್ = ಒಡ್ಯಾಣ " (ತದ್ಭಕೋ. ೧೭).

[ ದೇ.॥ ತಮಿ. ತೆಲು. ಡಾಪ್ಪು./ಸಂ. ದಾಮನ್ ]

ಡಾಮರ₁ (ಗು). ೧. ಭಯಂಕರವಾದ ; ಆಶ್ಚರ್ಯಕರವಾದ. (ನಾ). ೨. ದಂಗೆ; ಮುತ್ತಿಗೆ; ಲಗ್ಗೆ ; ಆಕ್ರಮಣ; ಸೂರೆ: ಆ ಮಾಧವೀಲತಾ ಮಂಟಪಮಂ ಕಾಮನ ಡಾಮರಕ್ಕಳ್ಕಿ ವನದುರ್ಗಂಬುಗುವಂತೆ ಪೊಕ್ಕು (ಪಂಪಭಾ. ೫-೬ ವ) ; ತೋಮರಂ ಜವನ ಡಾಮರವಾದುವು (ಪಂರಾಮಾ. ೧೩-೬೧) ; ಕಾಮನ ಡಾಮರಮಲ್ಲಿ . . . ಪಲ್ಲೊರೆವ ಮದಾಳಿಯಲ್ಲಿ ಸಖಿ ಸಾರದಿರಾ ಮರನಂ ವಸಂತದೊಳ್ (ಕಾವ್ಯಾವ. ೩೬೭) ; ತನಗುಣಲಿಲ್ಲದುದಂ ಪಸವೆನ್ನದೊಡಂ ತನ್ನಂ ಕೋಟ್ಟಿಟ್ಟುದಂ ಡಾಮರಮೆನ್ನದೊಡಂ . . .ಬಂಧಹೇತುಗಳಂ ಪೆರ್ಚಿಸುವ ಮೈಯ್ಯಂ ಪಾಪದ ರೂಪೆನ್ನದೊಡಂ ನೀಮಱಿವಿರ್ (ಜೀವಸಂ. ೭೩-೫). ೩. ರೋಗರುಜಿನಗಳ ಬಾಧೆ ; ವ್ಯಾಧಿ ; ಪೀಡೆ : ಪಾಂಡ್ಯರಾಜ್ಯದಲ್ಲಿ ಎರಡು ವರ್ಷಗಳಿಂದಲೂ ವೀರಕ್ಷಾಮವು ಆವರಿಸಿದ್ದಿತು. ಈ ಯುದ್ಧವು ಸಂಭವಿಸಿದ ಮೇಲೆ ಡಾಮರಕ್ಕೂ ಆರಂಭವಾಯಿತು (ಶ್ರೀರಾಯ. ೩೫೯). ೪. ತೊಂದರೆ ; ಕೋಟಲೆ ; ಉಪದ್ರವ : " ಉಪಸರ್ಗಮರಿಷ್ಟಂದುಷ್ಟಪೀಡೆ ಡಾಮರಮುಜನ್ಯಮಿತಿ ಪ್ರಕರಂ" (ವಸ್ತುಕೋ. ೯೬-೧) ; ಅರಿಷ್ಟಮುಪಸರ್ಗಮುತ್ಪಾತಮುಪಲಿಂಗಮುಜನಂ ಡಾಮರಂ ವಿಡಂಬರಿ ವಿಪ್ಲವವೆನಲ್ಕುಪದ್ರವಮಕ್ಕು (ಮಂಗರಾ. ೮-೨೭) ; ಮನೋಜಂ ಮುಯ್ಯಂ ನೋಡಿ ವಿಯೋಗಿಗೆ ಕಯ್ಮೊಸಿದನಾಯ್ತು ಡಾಮರಂ ಮಾಮರದಿಂ (ಮಲ್ಲಿಪು.೫.೧೦). ೫. ಬರಗಾಲ ; ಕ್ಷಾಮ ; ದುರ್ಭಿಕ್ಷ : ಡಾಮರ ಆಗಿದ್ದರೂ ಮಿಗತಾಗಿತ್ತು ವಾಚ್ಯವಾಗಿ ಸರ್ವವೃತ್ತಿಯ ನಡೆಸಬೇಕೆಂದು ಶಿವಾರ್ಪಿತವೆಂದು ಕೊಟ್ಟೆವಾಗಿ (ಮೈಆರಿ ೧೯೩೮ ; ೬೫-೩೨ ; 1509). ಕ್ಷಾಮಡಾಮರಂಗಳುಂ ಬೇರುಡಿದು ಪಾಟ್ಗ್ರೋಕುಂ ಪೊಟಲೊಳ್ (ರಾಮಾಶ್ವ. ೦೪-೩೯). ೬. ಗಲಿಬಿಲಿ ; ಗದ್ದಲ ; ಗೊಂದಲ. ೭. ಯಾವುದಾದರೂ ಆಶ್ಚರ್ಯಕರವಾದ ವಸ್ತು, ನೋಟ ಅಥವಾ ಘಟನೆ.

ಡಾಮರಮಲ್ಲ = ಆಕ್ರಮಣವನ್ನು ಎದುರಿಸಬಲ್ಲ ಶೂರ; ಶತ್ರುಗಳನ್ನು ಆಕ್ರಮಿಸುವುದರಲ್ಲಿ ದಿಟ್ಟನಾದವನು ; ಒಂದು ಬಿರುದು: ಸಿನ್ದನಾರಾಯಣ ನಲ್ಲಗ್ಗ್ಗೆ ನಲ್ಲ ಡಾಮರಮಲ್ಲ ಏಕಾಂಗಶೂದ್ರಕ ಶ್ರೀಪುಲಿಕಾಲ (ಎಇ. III, ೩೩೨-೯ ; 1070). [ ಸಂ. ]

ಡಾಮರ₂, ಡಾಂಬರ, ಡಾಂಬರು, ಡಾಮರು, ದ್ರಾಂಬರು (ನಾ). = ಡಾಂಬರೆಣ್ಣೆ : ಪಟಗರದ ಪೀಪಗಳೂ, ಡಾಮರದ ಪೀಪಗಳೂ, ರಾಂಜಾ ಪೀಪಗಳೂ (ಮುಂಬವ್ಯಾ. ೯) ; ಆ ಗಳಿಗೆಯಲ್ಲಿ ಆರಂಭವಾಗಿತ್ತು . . . ರಸ್ತೆಯ ಹೊದಿಕೆ ಡಾಮರ ಕಳಚಿ ಚೂಪುಕಲ್ಲು ಕಾಲಿಗೆ ಮುಳ್ಳಾಗುವುದಕ್ಕೆ (ಹಳಜೀ. ೧೩೫). ಡಾಂಬರ : ನೀರು ಬಿಟ್ಟ ಮೇಲೆ ತೆರೆದಿರುವ ಕಟ್ಟೆಗಳು ಹುಳಹತ್ತಿ ಕೆಡದ ಹಾಗೆ ಅವುಗಳಿಗೆ ಎಣ್ಣೆರಾಳ . . . ಹಚ್ಚಬೇಕು. ಡಾಂಬರವನ್ನಾಗಲಿ ರೋಗಂಧವನ್ನಾಗಲಿ ಹಚ್ಚಿದರೂ ಬರುತ್ತದೆ (ಕೃಷಿಪ್ರ. ೧೧೨) ; ಡಾಂಬರದಲಿ ಮೈಮೆತ್ತಿದೆ (ನನ್ನಧ. ೦೫-೦೦) ; ಸುತ್ತೂ ಕಡೆಗೆ ಡಾಂಬರ ಸುಟ್ಟ ವಾಸನೆ ಬರಹತ್ತಿತು (ಸ್ಮೃತಿ. ೪೬೭) ; ಇದರ ಜೊತೆಗೆ ಒಬ್ಬರ ಮುಖಕ್ಕೊಬ್ಬರು ಡಾಂಬರವನ್ನು ಬಳಿಯುತ್ತಿದ್ದರು (ರಂಗರೋ. ೪೮). ಡಾಂಬರು : ಡಾಂಬರಿನೊಳಗೆ ಇದ್ದಲೀ ತೆಯ್ಯು ಬಯಕೀ ತೀರಿಸಿಕೊಳ್ಳಲಿಕ್ಕೆ ಕುಡಧಾಂಗ ಕಾಣ್ತದ (ತಿರುಗು. ೦೫). ಡಾಮರು : ಮಾರ್ಗವೇನೋ ಡಾಮರು ಹಾಕಿದ ಮಾರ್ಗ ಆದರೆ ಅಲ್ಲಲ್ಲಿ ಡಾಮರು ಎದ್ದು ಹೋಗಿ ದೊಡ್ಡ ದೊಡ್ಡ ಹೊಂಡಗಳು ಹುಟ್ಟಿದ್ದವು (ಸೀತಾರ. ೯೪) ; ದಾರಿ ಡಾಮರು ಹಾಕಿದ ಒಳ್ಳೆಯ ರಸ್ತೆ (ಅಬುಬಿ. ೭). ದ್ರಾಂಬರು : ವಾಹನದ ಗಾಲಿ ಅದರುಸಿರು ಕಪ್ಪು ದ್ರಾಂಬರಿನ ಬೀದಿ ಕಪ್ಪು ಈ ಕಪ್ಪು ಪ್ರಿಯವು, ಅಪ್ರಿಯವದೇಕೆ ಹೇಳೆನ್ನ ಮೈಯ ಕಪ್ಪು? (ಕರುಶ್ರಾ. ೭೩-೧೫).

[ ←ಹಿಂ. ಮರಾ. ಡಾಮರ್ ]

ಡಾಮರರಸ್ತೆ, ಡಾಂಬರರಸ್ತೆ (ನಾ). ಡಾಮರ ಹಾಕಿದ ರಸ್ತೆ : ಈ ಮಧ್ಯಾಹ್ನದ ಉರಿಬಿಸಿಲಿಗೆ ಎಕ್ಕಡವಿಲ್ಲದೆ ಡಾಮರರಸ್ತೆಯಲ್ಲಿ ನಡೆಯು ವಂತಿಲ್ಲ (ರೂಢಿ). ಡಾಂಬರರಸ್ತೆ : ಅವನು ಡಾಂಬರರಸ್ತೆಗುಂಟ ಒಂದೇ ಸವನೇ ಸಾಗತೊಡಗಿದ (ಮುತ್ತು.ಡಿ. ೬೭) ; ಆ ಕಪ್ಪು ಡಾಂಬರರಸ್ತೆಯನ್ನು ನೋಡುತ್ತಿದ್ದಂತೆ ಏಕೋ ಅರ್ಥವಾಗದ ಸಮಾಧಾನ ಶಾಂತಿಗಳು ಸುರೇಶನ ಮನಸ್ಸಿನಲ್ಲಿ ನೆಲಸಹತ್ತಿದವು (ಆಮೋಲೀ. ೧೦೭). [ ಡಾಮರ$_2$ + ರಸ್ತೆ]

ಡಾಮರು 'ಡಾಮರ$_2$' ನೋ.

ಡಾಮರ್ಬಂಕೆ (ನಾ). ಒಂದು ಬಗೆಯ ಸಸ್ಯ : ಬಿಳೀಭೋಗಿ, ಆಸಿನ ಮರ, ಅಶ್ವಕರ್ಣ, ಡಾಮರ್‌ಬಂಕೆ (ವೃಜಿಗಿ. ೭೦- ೧೧೨೫). [ ? ]

ಡಾಯಿಮ (ನಾ). ಒಬ್ಬಾತನ ಹೆಸರು : ರಟ್ಟರ ಮೇರು ಡಾಯಿಮ ಮಹೀಪಾಳಂ ನೃಪಾಳೋತ್ತಮಂ (ಸೌಇಇ. XX, ೨೪೭-೯ ; 1087). [?]

ಡಾಲರು (ನಾ). ಅಮೇರಿಕಾದಲ್ಲಿ ಬಳಕೆಯಲ್ಲಿರುವ ಒಂದು ನಾಣ್ಯ : ಈ ಮನೆಯ ಮುಂಗಡ ಬಾಡಿಗೆ ೨೫ ಡಾಲರು (ಸಮಸಾ. ೧೨೪); ಟಿಕೇಟಿನ ಬೆಲೆ ಒಂದು ಡಾಲರು (ಮಹಾತ್ಮಾ. ೧೦೩) : ಹೂವಿಲ್ಲ ಹಣ್ಣಿಲ್ಲ ಡಾಲರನು ಪಡೆಯುವ ಭಾಗ್ಯವಿಲ್ಲ (ಆರರೋ. ೧೦). [ ←ಇಂ. Dollar ]

ಡಾಲಿಬಾರು (ನಾ). ಚರ್ಮದ ಪಟ್ಟಿ (?) : ತುರುಕರ ಡಾಲಿಬಾರಿನ ಪಟ್ಟಿ ತಿಂಬರು ಹೇರಿ ಪೈಜರವ (ಕಾಲಸಂ. ೨೩-೧೦). [ ? ]

ಡಾಲಿಮ 'ದಾಳಿಂಬ' ನೋ.

ಡಾಲಿಯಾ 'ಡೇಲಿಯಾ' ನೋ.

ಡಾಲು$_1$ 'ಡಾಳ$_1$' ನೋ.

ಡಾಲು$_2$, ಡಾಳ$_2$, ಡಾಳು, ಢಾಲು$_2$, ಢಾಳ (ನಾ). ೧. ಗುರಾಣಿ : "ಡಾಲು–ಢಾಲ=ಅಡ್ಡಣ" (ತದ್ಭಕೋ. ೧೬); ಬಿರುದಿನ ಡಾಲ ರಾವುತರೆಂಟು ಸಾವಿರ ತುರಗವನೇರುಯ್ಯೆತರಲು (ಕಂನವಿ. ೧೧-೪೬) ; ಗರುಡಹನುಮ ಮಕರದ ಟೆಕ್ಕೆಯ ಡಾಲಬಿರುದಿನ ದೊರೆರಾಯನಾರೊ (ಕಂನವಿ. ೧೩-೩೬); ಅವನ ಡಾಲು ಡಮಾಮಿ ಸತ್ತಿಗೆ ಕೆಂಪಿನ ನಿಶಾನಿಯುಮಂ . . . ಕೈಸೆಚಿ ತಂದು ರಾಯರಿಗೊಪ್ಪಿಸಲ್ (ಕೆಳನೃ. ೨-೪೧) ; ಅದರಿಂದ (ಗಂಡಕದ ತೊಗಲಿನಿಂದ) ಬಹಳ ಬೆಲೆಯುಳ್ಳ ಡಾಲುಗಳು ಆಗುತ್ತವೆ (ಮುಂಬಯಿ. ೪-೪೮) ; ಕಾಲ್ದಳದವರು ಎಡಗೈಯಲ್ಲಿ ಹದಮಾಡಿದ ಎತ್ತಿನ ಚರ್ಮದ ಡಾಲುಗಳನ್ನು ಹಿಡಿದಿರುತ್ತಾರೆ (ಪ್ರವಾಇ. I, ೪೦ ಅಡಿಟಿ). ಡಾಳ$_2$: "ಬೊಪ್ಪರ ದಂಡೆ ಡಾಳ ಕಾಳಾಸ[ಪಾಠಾಂ. ಡೋಳಕ್ಕು ಕಳಾಸ]ಚಾಳೆಯ ಮಂಡಿ ಸೀರಣಂ ಹೆಜ್ಜೆಯಕ್ಕುಂ(ಮಂಗರಾ.೮೮-೩೮); ಬಿರುದಿನ ಡಾಳ ಹಯದ ಪೊತ್ತದಲಿ ತಮಾಸುರನಂತೆ ಮೆಚಿವವನಾರು (ಕಂನವಿ. ೧೨-೪೩) ; ಬಿರುದಿನ ಡಾಳ ದರ್ಪದೆ ಸೆಳೆತಂದು ಭೂಪಾಲನಿದಿರಿನಲಿ ತಪ್ಪದೆ ಮದೆಯ ನೊಟ್ಟಿದರು (ಕಂನವಿ. ೧೫-೧೧೭). ಡಾಳು : ೧. ಬಿರುದಿನ ಡಾಳು ಡಮಾಮಿ ಮಕರಟೆಕ್ಕೆಯುರುತರ ರಾಜಚಿಹ್ನೆಗಳ ಪರಿಯ ತೋರಿಬಾತ(ಕಂನವಿ.೩-೩೭): ಅಂಕೆಯಿಲ್ಲದೆ ನಾನಾ ಬಗೆ ಚಿತ್ರಗಳೆಂಕಿತವಹ ಡಾಳುಗಳ ಅಂಕುಶಖಾನನ ತೇಜಿ ಸಾವಿರವಾಗ ಮುಂಕೊಂಡು ಬಂದುವು (ಕಂನವಿ. ೧೮-೮೪). ಢಾಲು$_2$: ೧.ಬೆಳ್ಳಿ ಢಾಲು ಚಿನ್ನದ ಮುಲಾಮಿನ ಗುಬ್ಬಿ (ಎಕ. XIV, ನಂಜನ. ೨೯೨-೯ ; 1847) ; ಕೈಯೊಳಗಿನ ಕತ್ತಿ ಢಾಲುಗಳನ್ನು ನೋಡಿರಿ (ಮೋಹಿನೀ. ೬೭) ; ನಾಯಕನು ಚಾತುರ್ಯದಿಂದ ಖಡ್ಗಕ್ಕೆ ತನ್ನ ಢಾಲನ್ನೊಡ್ಡಿ ಹೊಡತವನ್ನು ತಪ್ಪಿಸಿಕೊಂಡನು (ಕುಮುದಿ. ೧೭) : ಒಂದು ಕೈಯಲ್ಲಿ ಎತ್ತಿನ ತೊಗಲಿನ ಢಾಲನ್ನು ಜೋತುಬಿಟ್ಟು . . . ಇಪ್ಪತ್ತೈದು ಹುಡುಗರು ಬಂದರು (ಮೇದಿಮ. ೧೧೦). ೨. ಪಂದ್ಯಗಳಲ್ಲಿ ಗೆದ್ದಿರುವ ತಂಡಕ್ಕೆ ಕೊಡುವ ಗುರಾಣಿಯಾಕಾರದ(ಬೆಳ್ಳಿಯ)ಪಾರಿತೋಷಕ,– ಬಹುಮಾನ : ಗೆದ್ದವರಿಗಿದ್ದೆಯಿದೆ ಬೆಳ್ಳಿಯ ಢಾಲು (ನೆಲಮು. ೩೩-೨೪). ಢಾಳ : (೬). [ <ಸಂ. ಢಾಲ ]

ಡಾಲು$_3$ (ನಾ). ಒಂದು ಬಗೆಯ ರಣವಾದ್ಯ : ಕೊಂಬುಕಹಳೆ ತಮ್ಮಟೆ ಡಾಲು ಡಮಾಲು ರಾಯಭಟ ಮುಂತಾದ ರಣವಾದ್ಯಗಳು ತಟ್ಟನೆ ನಿಂತವು (ರೂಲೇಪಾ. ೫). [ ? ]

ಡಾಲುಹೊಡೆ (ಕ್ರಿ). ಪ್ರಕಾಶವನ್ನು ಬೀರು ; ಥಳಥಳಿಸು : ಅವಳು ಕಿವಿಯಲ್ಲಿ ಹಾಕಿಕೊಂಡಿದ್ದ ಕೆಂಪಿನೋಲೆಗಳು ನಾಲ್ಕು ಕಡೆಗೂ ತಳತಳನೆ ಡಾಲುಹೊಡೆಯುತ್ತಿದ್ದುವು (ಭಾರವಿ. ೦೦೦).
[ ಡಾಲು$_1$ (<ಡಾಳ$_1$) + ಹೊಡೆ$_1$ (<ಪೊಡೆ$_1$) ]

ಡಾಲ್ಮರ (ನಾ). ಒಂದು ಬಗೆಯ ಮರ : ಕಲ್‌ಗರಿಕೆ, ಡಾಲ್‌ಮರ, ಗವುಡ, ಮದಗಿಂಬೇವು (ವೃಜಿಗಿ. ೨೦-೩೮೦). [ ? + ಮರ$_1$ ]

ಡಾವ್ 'ಡಾವು' ನೋ.

ಡಾವಣ 'ದಾವಣಿ$_1$' ನೋ.

ಡಾವಣಿ 'ದಾವಣಿ$_1$' ನೋ.

ಡಾವಣಿಕಟ್ಟು 'ದಾವಣಿಗಟ್ಟು$_1$' ನೋ.

ಡಾವಣೆ 'ದಾವಣಿ$_1$' ನೋ.

ಡಾವಣೆನೇಣ್ (ನಾ). ದನ ಮೊದಲಾದವುಗಳನ್ನು ಸಾಲಾಗಿ ಕಟ್ಟುವ ಉದ್ದವಾದ ಹಗ್ಗ : ವಾರುವಗಳ ಡಾವಣೆನೇಣ್ಗಳ ಬಲು ಜೀರುಗುಣಿಕೆಗಳ ಪರಿದು ಕೇರಿಕೇರಿಯೊಳು ತಮ್ಮಿಚ್ಛೆಯೊಳಗೆ ಸಲೆ ತಾಟುಮಾಟಾಗಿ ಯೋಡಿದವು (ಕಂನವಿ. ೧೫-೪೧). [ ಡಾವಣೆ (<ದಾವಣಿ$_1$) +ನೇಣ್$_1$ ]

ಡಾವಪೇಚು, ಡಾವುಪೇಚು (ನಾ). ೧. ಉಪಾಯ ; ತಂತ್ರ : ಗೊತ್ತದ ನನಗ, ನಿಮಗೇನು ಖಾಸಗೀ ಮಾತಾಡೋದದ ಎಂಬೋದು.ಮುತ್ಸದ್ದಿಗಿರೀ ಡಾವಪೇಚು ನಡಸೋದದ (ಜೂಜು. ೦೭). ಡಾವುಪೇಚು: ೨. ಪಟ್ಟು: ನೋಡಿದ ಹಿಡಿತಗಳನ್ನೂ ಡಾವುಪೇಚುಗಳನ್ನೂ ಬಣ್ಣಿಸುವ ರಭಸದಲ್ಲಿ . . . ಅವನನ್ನು ನೆಲಕ್ಕೆ ಅಪ್ಪಳಿಸುವರು (ಗಾಳಿಪ. ೬೫).
[ ←ಮರಾ. ಡಾವಪೇಚ್ ]

ಡಾವರ, ಡಾವರಿ, ಡಾವುರ, ಡಾಹರ, ದಾವರ (ನಾ). ೧. ಬರಗಾಲ ; ಕ್ಷಾಮ ; ದುರ್ಭಿಕ್ಷ : "ಡಾವರಮಾ ಕ್ಷಾಮಮದಕ್ಕುಂ" (ಕವಿಕಂ.೨೪೮): ಇಂಚೆಯ ಪಸವಿನ ಬಟಿದ ಕಳಿಂಚಿನ ಡಾವರದ ಬಾಧೆಯಿಲ್ಲದ ಪದದೊಳ್ ಮುಂಚದೆ ಪಿಂಚದೆ ಬಳೆದು ವಿರಿಂಚಿಯ ಕೆಯ್ಪಿಡಿಪೊಲಾದುವಾ ನಾಡೂರ್ಗಳ್ (ಪಂಪಭಾ. ೮-೩೦) ; ಗೋಪುರವೇಶಲಕ್ಷಣ (ನಿಮಿತ್ತ) ಏಡಂ ಪೊಕ್ಕೊಡೆ ಚಿತ್ರವೃಷ್ಟಿ . . . ಸೇಡಂ ಪೊಕ್ಕೊಡೆ ಡಾವರಂ (ಅಟ್ಟಮ. ೪-೭). ೨. ಕೊಳ್ಳೆ ; ಸೂರೆ ; ಲೂಟಿ : ದಳವುಳ ಬೆಳುಗವತೆಯನ್ನಾಯ ಡಾವರ [ಪಾಠಾಂ. ಪರಿಭವ] ತಕ್ಕು ಡೊಳ್ಳಾಸ . . . ನಿನ್ನೊಳಿಲ್ಲಲೆ ರಾಯ ಕೇಳೆಂದ (ಕುವ್ಯಾಸ. ೦-೪೫) ; ಕರುಬುತನ ದುರ್ಭಿಕ್ಷ ಡಾವರ ಪೊರಿಗೆ ಲಂಚ . . . ಸ್ವಪ್ನದೊಳಗಿಲ್ಲಾಳ್ಕೆಯೊಳು ನಳನ (ಅಂಬಿಕಾ. ೪೮-೯೦). ೩. ಬಾಧೆ ; ಹಿಂಸೆ ; ಕೋಟಲೆ ; ಉಪದ್ರವ : ಪುಂಡರೀಕ ಭೋಂಕನೆ ನಿನಗೀಗಳೆಂದ್ರಿಯದ ಡಾವರವೆತ್ತಣಿನೆತ್ತ ಬಂದುದೋ (ಕಾದಂಪೂ. ೭೭೪) : ಡಕ್ಕೆಯ ಡಾವರಕ್ಕೆ ಸಿಕ್ಕಿ ನೊಂದೆನು (ಡಬೊಮ್ಮ. ೨೨೦-೭) ; ಕಾಮನ ಡಾವರಂ ಕೊಳ್ಳದುಳಿದ ಮಾಯೆಯ ಮಾತು ಬೇಡ (ಹಡಕಾ. ೮-೫೯): ಸಾವು ತಪ್ಪದು ತನಗೆ ಕಾಮನ ಡಾವರವು ಘನ (ಕುವ್ಯಾವಿ. ೨-೨೭) ; ರಕ್ತಬೀಜಜನ ಡಾವರಕೆ ಬೆಚ್ಚದಿರಿ (ಅಂಬಿಕಾ. ೩೮-೯). ೪. ತೀವ್ರತೆ ; ರಭಸ ; ಅತಿಶಯ : ಬಿತ್ತಿದ ಬಿತ್ತು ಪೃಥ್ವಿಯ ಕೂಟ ಅಪ್ಪುವಿನ ದ್ರವದಿಂದ ಮಸ್ತಕ ಒಡೆದುದಲ್ಲದೆ ಉಷ್ಣದ ಡಾವರಕ್ಕೆ ಬೆಂಕಿಯ ಬೇಗೆಗೆ ಮಸ್ತಕ ಒಡೆದುದುಂಟೇ (ಪ್ರೋಳಿಮಾ. ೨೮೦-೪೭); ಉಗಿದು ಹಾಯ್ಕುವ ಖಳನ ನಿಡುದೋಳುಗಳು ಬಳಲಿದವಲ್ಲೆ ಹೊಯ್ದವು ಢಗೆಯ ಡಾವರವಾಯ್ತು ಬಹಳ ಸ್ವೇದಜಲ ಜಡಿಯ (ಕುವ್ಯಾಸ. ೦೫-೨). ೫. ಕಾವು; ದಗೆ; ತಾಪ : ಉರಿಯ ಡಾವರವೆಳೆಯ ಬಾಳೆಯ ಬಿರಸುವಂತಿರೆ

ರಾಯಕುವರನ ಮರಣವಾರ್ತೆಯನಾ ಸುಭದ್ರಾದೇವಿ ಕೇಳಿದಳು (ಕುವ್ಯಾದ್ರೋ. ೭-೧೧) ; ಬಿಸಿಲಿನ ಡಾವರವು ಅತಿಯಾಗಿದ್ದರೂ ಆತನು ತಲೆಗೆ ಟೋಪಿಯನ್ನೂ ಹಾಕಿರಲಿಲ್ಲ (ಕಾನೂರು. ೧). ೬. ಪ್ರತಾಪ ; ಶಕ್ತಿ ; ಸಾಮರ್ಥ್ಯ : ಆ ವಿವಿಧ ಮಂತ್ರಾಸ್ತ್ರವನು ಶತಸಾವಿರವನಾ ಬ್ರಹ್ಮದಂಡದ ಡಾ[ಪಾಠಾಂ. ಥಾ]ವರದಲೇ ಗೆಲಿದನೊಬ್ಬ ವಸಿಷ್ಠ ಮುನಿಯೆಂದ (ಕುವ್ಯಾಆ. ೧೧-೪೩) ; ಆವುದಂತರ ವನಕಳಭಕ್ಕೈರಾವತಕೆ ಮುಝು ಭಾವು ದ್ರೋಣನ ಡಾವರಕೆ ಪಾಂಚಾಲನ್ಯೆಸಟಿವನು (ಕುವ್ಯಾಭೀ. ೮-೩೨). ೭. ಗದ್ದಲ ; ಗಲಿಬಿಲಿ ; ಸಡಗರ : ಧೂರ್ಜಟಿಯ ಡಾವರದ ಡಮರುಧ್ವನಿಯೊ ವಿಲಯದ ಬಳಿಸಿಡಿಲ ಬೊಬ್ಬಾಟವೋ (ಕುವ್ಯಾಕ. ೨೧-೧೬). ೮. ಬಯಕೆ ; ಉತ್ಕಟವಾದ ಇಚ್ಛೆ : ಮಹಾವಾರ್ಧಿಜಲವ ನೊಂದೇ ಸಾರಿ ಸುಱಿಗೊಂಬ ಡಾವರದೊಳಿದ್ದ ವಡಬಾಗ್ನಿಯೋ . . . ಎಂದೆಂಬೊಲಾದುದು ಧನಂಜಯನ ಪಾವಕಾಸ್ತ್ರಂ (ಜೈಮಿಭಾ. ೧೩-೧೧) ; ಆಳ್ದನೂಟಿಗಮನಿತುಮಂ ತಾನೊರ್ವನೆ ಗೆಯ್ವ ಡಾವರದಿಂ (ಚಿಕವಂ. ೪೫-೨೧). ೯. ಭಯಂಕರವಾದುದು : ಭೀಷಣತೆ : ಕರಾಳತೆ : ಆವ ಕೌಳಿಕಮಂತ್ರತಂತ್ರದ ಡಾವರದ ಡೊಳ್ಳಾಸವಿಕ್ಕಿದ ದೀವಸದ ಬೇಳುವೆಯ ನೇನೆಂಬೆನು (ಕುವ್ಯಾಸ. ೧೩-೬೧) ; ಜಲಧಿ ಜಲಧಿಯ ಹಳಚಲಗಿದವ್ವಳಿಪ ವಾದ್ಯಧ್ವನಿಯ ಡಾವರ ಸೆಳೆದುದಸುರರ ಧುರದ ಧೈರ್ಯವನು (ಕುವ್ಯಾಆ. ೧೨-೧೨). ೧೦. ಆವರಿಸುವಿಕೆ; ಸುತ್ತಲೂ ವ್ಯಾಪಿಸುವಿಕೆ. 'ಡಾವರಿಸು' ಪರಾ. **ಡಾವರಿ :** ೪. ಅತ್ತಲರ್ಜುನನುರಿಯ ಡಾವರಿಯನು[ಪಾಠಾಂ. ಡಾವರವನು]ಭಂಗಿಸಿದನೆಚ್ಚು ನಾರಾಯಣಾಸ್ತ್ರದೊಳು (ಜೈಮಿಭಾ. ೮-೪೫). **ಡಾವುರ:** ೮. "ಡಾವುರಮೆನಲಾಪೇಕ್ಷೆಯು" (ಭಾರನಿ. ೩೨). **ಡಾಹರ:** ೬. ಡಾಹರದೊಳೆಟಗಿದೆಕ್ಕಲನದಟುಮಂ ಮುಱಿಯೆ ನೇಹದಿಂ ಹರಿ ತನ್ನ ಕುವರಿಯಂ ಕೊಡೆ (ಲಿಂಗಪು. ೧-೧೬). **ದಾವರ :** ೧೧. ಬಾಯಾರಿಕೆ ; ದಾಹ; ನೀರಡಿಕೆ; ಸೇದೆ : ಬಳಸಿ ಬಂದಿಹ ನಮಗೆ ಇಷ್ಟು ದಾವರವಾಗೆ ಏರಿಬರುವವನಿಗೆಷ್ಟು ದಾವರವೊ (ಅರುಣ. ೩೯-೨೧); ಉಪ್ಪು ತಿಂದವನ್ನೂ ದಾವರವಾಗಿ ಒಣಗಿ ಹೋದೀಯೋ, ಬೆಲ್ಲವೇ ತಿನ್ನು (ಕಥಾಮಂ. IV,೪೨). 'ಡವರ' ಪರಾ. [ <ಸಂ. ಡಾಮರ ]

**ಡಾವರಿ** 'ಡಾವರ' ನೋ.

**ಡಾವರಿಗ** (ನಾ). ೧. ಕೊಳ್ಳೆಹೊಡೆಯುವವನು ; ದಂಗೆಮಾಡು ವವನು; ಸೂರೆಕಾರ ; ದರೋಡೆಗಾರ : ಅಱಿವಿನ ಗರ್ವದಿಂದಿಳಿಸದೀ ತ್ರಿಜಗಂಗಳನೊತ್ತಿ ಮೋಹವೆಂಬಱಿಕೆಯ ಸಂದ ಡಾವರಿಗನುಂ ಪಗೆ ತನ್ನೊಳಗಿರ್ದೊಡೆಂತುಮೇತೆಱದೊಳಮೊಳ್ಳಿಕೆಯ್ಗುಮೆ (ಜೀವಸಂ. ೧೫೮-೧೬); ಡೊಂಬಿಗರ ಡಾವರಿಗರಿವದಿರ ತಿಂಬೆನೀಗಳೆ (ಕುವ್ಯಾಸ. ೧೫-೩೫). ೨. ಶೂರ; ಸಮರ್ಥ; ವೀರ : ಕಂಸನಾನೆಯನಸುಬಡಿದ ಗಡ ಮಲ್ಲರನು ಮರ್ದಿಸಿದನೇ ಡೊಳ್ಳಾಸದಲಿ ಡಾವರಿಗನಹನೆಂದ (ಕುವ್ಯಾಸ. ೧೦-೧೭). ೩. ಗದ್ದಲಮಾಡುವವನು ; ಕೋಲಾಹಲವನ್ನುಂಟು ಮಾಡುವವನು ; ಆರ್ಭಟಿಸುವವನು : (+). [ ಡಾವರ + –ಇಗ ]

**ಡಾವರಿಗತನ** (ನಾ). ಸಾಮರ್ಥ್ಯ ; ಶೌರ್ಯ ; ಪರಾಕ್ರಮ : ಕರ್ಣ ಗಳಹದಿರು ಡಾವರಿಗತನವಾರ ಕೂಡೆ ವೃಥಾ ವಿಲಾಸಿಗಳೆಲವೊ ಸುಭಟರೆ ನೀವು (ಕುವ್ಯಾದ್ರೋ. ೦೩-೨೩). [ ಡಾವರಿಗ + –ತನ ]

**ಡಾವರಿಗವಿದ್ಯೆ** (ನಾ). ಕೊಳ್ಳೆಹೊಡೆಯುವುದು ; ಲೂಟಿ ; ಸೂರೆ : ಆವ ಸೇರಿಕೆ ಜಪಕೆ ಚಾಪಶರಾವಳಿಗೆ ಶಮೆ ದಮೆಗೆ ಖಡ್ಗಕೆ . . . ಆವುದಿದರಭಿಧಾನ ತಪವೋ ಡಾವರಿಗವಿದ್ಯಾಸಮಾಧಿಯೊ ನೀವಿದೆಂತಹ ಋಷಿಗಳು (ಕುವ್ಯಾಆ. ೪-೪೫). [ ಡಾವರಿಗ + ವಿದ್ಯೆ ]

**ಡಾವರಿಸು, ಥಾವರಿಸಂ, ದಾವರಿಸು** (ಕ್ರಿ). ೧. ಸುತ್ತು : ತಿರುಗಾಡು ; ತ್ವರೆಯಿಂದ ಆಚೀಚೆಗೆ ಚಲಿಸು : ರಭಸದಿಂದ ಮುನ್ನುಗ್ಗು : ರಥಿಕರ್ ಕಡುಪಿಂ ರಥಂಗಳಿಂ ಡಾವರಿಸುತ್ತೆ (ದಶಕು. ೭-೭೩) ; ಧುರಧೀರಂ ಗುಂಡದಂಡಾಧಿಪನ ನಿಜಯಶಃಕಾಂತೆ . . . ದಿಶಾಚಕ್ರದೊಳ್ ಡಾವರಿಸಲ್ (ಎಕ. V, ಬೇಲೂರು. ೩-೭೯; 1397) ; ತೀವಿ ತೆಗೆದನು ವಜ್ರಶರದಲಿ ಡಾವರಿಸಿದನು ಕಳನೊಳು (ಕುವ್ಯಾದ್ರೋ. ೧೦-೨೮) ; ನೂಱಾನೆಯಲಿ ಡಾವರಿಸಿದನು ಧರ್ಮಜನ ದಳದಲಿ ಧೀರ ಕುರುರಾಯ (ಕುವ್ಯಾಗ. ೨-೩೫); ನೆಲ ಹಱಿಯೆ ಹರಿದವು ತೇರುಗಳು ತೇರವದ ತೋಳುಗಳ ಉರುಕೃಪಾಣದ ದಂತಿಗಳು ಡಾವರಿಸಿದವು (ತೊರರಾ. ೫-೫-೧೬). ೨. ಬಾಯಾರಿಕೆಯಾಗು: ಸರಸ ತೇರಿನ ಕುದುರೆಗಳು ಡಾವರಿಸಿದುವು ಡಗೆಹೊಯ್ದು ಮಿಗೆ ದಳ್ಳುರಿಯ ಸಸಿಯಂತಾದನರ್ಜುನದೇವ ನಿಮಿಷದಲಿ (ಕುವ್ಯಾಭೀ. ೬-೩೪) ; ತೀವಿದ ಪಾಲ್ಮೊಲೆಯಂ ತಳಿರ್ವಾಯಿಂ ಡಾವರಿಸುತ ಕರ್ಚುವ ಕಂದನ ಸದ್ಭಾವಮನೀಕ್ಷಿಸದಾಕೆಯು ಕಣ್ಗಳ್ ಪೀಲಿಯ ಕಣ್ಣೈಸೆ (ಜಯಕಾ. ೨-೩೭). ೩. ಹಬ್ಬು; ಆವರಿಸಂ ; ವ್ಯಾಪಿಸು : ಅವಿರಳಾಸ್ತ್ರಾನೀಕ ಡಾವರಿಸಿದವು ದಿಗುತಟವ (ಕುವ್ಯಾಭೀ. ೮-೩೬); ಉರಿಯು ಕರಡಿಗೆಯಂತೆ ಶಿಖಿ ಡಾ[ಪಾಠಾಂ. ಸಿಡಿದಾ]ವರಿಸಿತಬುಜಭವಾಂಡಭವನವನು (ತೊರರಾ. ೬-೪-೩೨); ವಿಷಜ್ವಾಲೆ ಮಿಗೆ ಡಾವರಿಸಿತು . . . ಪರಬಲದೊಳು (ಜೈಮಿಭಾ. ೨೪-೩೦) ; ಆತನ ಕೀರ್ತಿಯು ದಶದಿಕ್ಕುಗಳಲ್ಲಿ ಡಾವರಿಸುತ್ತಿತ್ತು (ಕವೀರ. ೦೨೦). ೪. ಚುಚ್ಚು; ತಿವಿ; ಹೊಡೆ; ಹಿಂಸಿಸು; ನೋಯಿಸಂ: ನೀವು ಕಂಡಿರೆ ನಾಭಿ ಜಂಘೆಗೆ ಡಾವರಿಸಿದನು ಹಲವು ಬಾರಿ ಜಯಾವಲಂಬನವೆಂತು ಕೃಪೆಮಾಡೆಂದನಾ ಪಾರ್ಥ (ಕುವ್ಯಾಗ. ೭-೪೩). ೫. ಉರಿ ; ಪ್ರಜ್ವಲಿಸು : ಝಳದ ಡಗೆ ಡಾವರಿಸೆ ಹೊಕ್ಕರು ಕೊಳನ (ತೊರರಾ. ೨-೪-೨೨) : ಭುಗಿಲ್ಭುಗಿಲ್ಭುಗಿಲೆಂದು ಡಾವರಿಸೆ . . . ಎಲ್ಲರಂ ದಹಿಸತೊಡಗಿದುದು ದಳ್ಳುರಿ (ಜೈಮಿಭಾ. ೮-೩೯): ಕಂಬನಿಯ ಕಡಲೊಳಗೆ ಡಾವರಿಪ ವಡಬಶಿಖಿ (ಜೈಮಿಭಾ. ೦೩-೫೯). ೬. ಅತಿಯಾಗಿ ಬಯಸು ; ಉತ್ಕಟವಾಗಿ ಆಸೆಪಡು ; ಆಸೆಯಿಂದ ಹಾತೊರೆ : ವಿಷಯವ ಡಾವರಿಸುವವ ಸ್ಮೃತಿನಿಂದೆಯ ಬಲ್ಲನೆ (ಸರ್ವ. ೩೫-೧೮೮) : ಆವರಿಸುವ ಮನ ಭಕ್ತಿಗೆ ಡಾವರಿಸುವ ಮನ ಶಿವಾರ್ಚನೆಗೆ . . . ದೊರಕಿದೊಡಾವುದಸಾಧ್ಯಂ (ಶಂಕಕಂ. ೨೦). ೭. ಆರ್ಭಟಿಸು ; ಅಬ್ಬರಿಸಂ : ಕಡುಲುಳಿ ಮಸಗಿ ಡಾವರಿಸಿ . . . ತಾಗಿದರು (ಕುವ್ಯಾಸ. ೨-೧೦೩) ; ಪಾವಿನಂತಾವಿನಂತಡಿಗಡಿಗೆ ಮೊರೆದೆದ್ದು ಡಾವರಿಸಿ ಸೀವರಿಸಿ ಮನೆಗೆಲಸಮಂ ಗೆಯ್ಯದಾ ವನಿತೆ ಸಾವನಿತೆ ಲೇಸು (ಜೈಮಿಭಾ. ೫-೨೪): "ಹಟಮಾರಿತನ ಮಾಡು; ಮೊಂಡಾಟಮಾಡು"(ಪ್ರಭಣ). **ಥಾವರಿಸು:** ೬. ಆವುದಱ ದೆಸೆಯಿಂದ ಮನವಿದು ಥಾವರಿಸುತಿಹುದದು ಕಣಾ ಭವಧಾವತಿಗೆ ಕಾರಣವು (ಸ್ವರೂಪಾ. ೧-೪). **ದಾವರಿಸು :** ೪. ಆನೊಲಿದು ಬಂದರೆ ನಿಮ್ಮ ಬಱುನುಡಿಯಲಗಿನಲಿ ದಾ[ಪಾಠಾಂ. ಡಾ]ವರಿಸಿದಿರಿ ಡೊಳ್ಳಾಸವಿದ್ಯೆಯಲಿ (ತೊರರಾ. ೩-೪-೨೦). ೮. ನೋಯು; ಹಿಂಸೆಗೊಳ್ಳು; ಯಾತನೆಯನ್ನನುಭವಿಸು : ಆತುರದಲ್ಲಿ ಕಳವಳಿಸಿ ವ್ಯಾಕುಲದಲ್ಲಿ ದಾವರಿಸುತಿಪ್ಪುದೀ ಮನವು (ವಚಶಾ. II, ೪೪೯) ; ಮುಗ್ದಲದ ಮುರಿಯಲೀ ಯೇಸುವಿಗೆ ಮನಸೋತು . . . ಬೆಂದು ಮನನೊಂದು ಭುಗಿಭುಗಿಲ್ಲ ಕಾವರಕೆ ದಾವರಿಸಿ (ಗೊಲ್ಗೊಥಾ. ೩-೬೧). 'ಡವರಿಸು' ಪರಾ.

[ ಡಾವರ + – ಇಸು₃ ]

**ಡಾವಳಿ** 'ಧಾವಳಿ' ನೋ.

**ಡಾವು, ಡಾವ್, ಡಾವೆ** (ನಾ). ೧. ಹೊಟ್ಟೆಕಿಚ್ಚು ; ಡಂಕು ; ದ್ವೇಷ : ವೈರ : ಆ ಹಾವು ಡಾವು ಇಟ್ಟುಕೊಂಡು ಒಂದು ವರ್ಷದ ನಂತರ ಅವನನ್ನು ಕಚ್ಚಿದೆ (ರೂಢಿ). ೨. ಕುಸ್ತಿಯಲ್ಲಿ ಒಂದು ಬಗೆಯ ಹಿಡಿತ : ಇಂತಹ ಹಿಡಿತಗಳಿಗೆ ಭಾರತ ಪ್ರತಿ ಡಾವು ಮಾಡುವಷ್ಟು ಸಾಧನೆ ಪಡೆದಿವೆ (ಎಚ್ಚಸಾ. ೧೪೮). ೩. ಆಟ ; ಕುಸ್ತಿಯಾಟ : 'ಡಾವುಪೇಚು' ಪರಾ. ೪. ಹಂಚಿಕೆ : ಉಪಾಯ ; ಯುಕ್ತಿ : ಮುದ್ದಾಂ ಮಳ್ಳತನವನು

ಪ್ರದರ್ಶಿಸುವ ಡಾವಿನಿಂದ ನಾನೂ . . . ಅವನ ತಲೆ ಚಿಟ್ಟುಹಿಡಿಸುವಂತೆ ಬಾತಮಿಾ ಒಪ್ಪಿಸಿದ್ದೆ (ದೀಪಹ. II, ೧೪). ಡಾವ್ : ೧. ಸಾಹೇಬರ ಡಾವ್ ಶ್ಯಾಮರಾಯರಿಗೆ ಹೊಳೆದಿತ್ತು (ದೀಪಹ. II ೩೧). ಡಾವೆ : ೧. ಕಾವಳಂ ಮರೆಗೊಂಡು ತಸ್ಕರರ್ ಬಳಿಕಿಂದು ಡಾವೆಯಿಂ ಪರಶುಧೀರಧರನಿಲ್ಲದಿಹ ಸಮಯದೊಳ್ ಮೋಪಿತಿನ್ನಾರ್ ಕಾವರೆಮ್ಮನೆಂದೊಳಗೊಳಗೆ (ಪರಶು. ೩೫-೧೪). [ ←ಹಿಂ. ಮರಾ. ಡಾವ್ ]

ಡಾವುತೀರಿಸು (ಕ್ರಿ). ಹಗೆತನವನ್ನು ಸಾಧಿಸಿಕೊಳ್ಳು : ಮುಯ್ಯಿ ತೀರಿಸಿಕೊಳ್ಳು : (+). [ ಡಾವು + ತೀರಿಸು ]

ಡಾವುಪೇಚು 'ಡಾವಪೇಚು' ನೋ.

ಡಾವುರ 'ಡಾವರ' ನೋ.

ಡಾವೆ 'ಡಾವು' ನೋ.

ಡಾಶೇರು (ನಾ). ಒಂದಂ ತೂಕದ ಅಳತೆ : ಎರಡೂವರೆ ಸೇರು ; ಅಡೀಸೇರು : ವಂದು ಮಣುವಿಂಗೆ ದಡಯು ನಾಲ್ಕುಂ ಪಂಚೇರು ಛಂದದೊಳೆಂಟು ಡಾಶೇರು ಷೋಡಶಮಕ್ಕುಂ (ಭಾಸ್ಕರ. ೭೫-೭).

[ ಡಾ$_0$ (P ←ಹಿಂ. ಢಾಈ) + ಶೇರು$_1$ (<ಸೇರು$_2$) ]

ಡಾಹ, ದಾವು$_1$ (ನಾ). ೧. ಸುಡುವಿಕೆ; ದಹಿಸುವಿಕೆ : ತೊಱೆ ಯಂತೆ ಮಳಮಂ ತೋಱೆ ಬೆರ್ಚಿಸದೆ ಕಿರ್ಚಿನಂತೆ ಅಡಕವಮಂ ತೋಱೆ ನಂಬಿಸದೆ ದಾಟಿಯಂತೆ ಡಾಹಮಂ ಮಾಡಿ ಕಿಡಿಸದೆ (ಧರ್ಮಾಮೃ. ೫-೯೯). ೨. ಸೆಕೆ ; ದಗೆ; ತಾಪ : ಮನುಷ್ಯ ಲೋಕದೊಳಾದ ಸುಖಮೆಲ್ಲಂ ಡಾ[ಪಾಠಾಂ. ದಾ]ಹಕ್ಕೆ ಶೀತಲಕ್ರಿಯೆಗೆಯ್ವಂತೆ ನೋವನಾಱಿಸುವ ಸುಖಂ ಅದು ಸುಖಮೆ (ಜೀವಸಂ. ೫೧-೩೪ ವ). ೩. ನೀರಡಿಕೆ : ಬಾಯಾರಿಕೆ. ದಾವು$_1$ : ೨. ಬಿಸಿಲಿನ ದಾವು ತಗ್ಗಿತ್ತು (ಪಳಮ. ೩೧).

[ <ಪ್ರಾ. ಡಾಹ./ಸಂ. ದಾಹ ]

ಡಾಹರ 'ಡಾವರ' ನೋ.

ಡಾಹಿಣಿ 'ಡಾಕಿಣಿ' ನೋ.

ಡಾಹಿಸು (ಕ್ರಿ). ದಾಹಗೊಳ್ಳು ; ಅತಿಯಾದ ತಾಪದಿಂದ ಕೂಡಿರು ; ಉತ್ಕಟವಾಗಿ ಕುದಿ : ಮೋಹ ಮದ ಸಮೂಹದಿಂದ ಡಾ[ಪಾಠಾಂ. ದಾ]ಹಿಸುತ್ತಮಿರ್ದೆನಯ್ಯ ದೇಹದಿಚ್ಚೆ ಹೆಚ್ಚಿ ಮಚ್ಚರಕ್ಕೆ ವೇಳೆಯಾದೆನಯ್ಯ (ಹಂಪರ. ಹ. ೫೧೦-೩೧). [ ಡಾಹ + - ಇಸು$_3$ ]

ಡಾಳ$_1$, ಡವಳ$_1$, ಡಾಲು$_1$, ಢವಳ, ಢಾಲು, ಢಾಳ$_1$, ಢಾಳು (ನಾ). ೧. ಹೊಳಪು ; ಪ್ರಭೆ ; ಕಾಂತಿ : "ತೊಳಗು, ಬೆಳಗು . . . ಡಾಳಂ, ಪೊಗರ್, ತೊಳಪಂ, ಮಸೆ–ಈ ೧೪ ಕಾಂತಿ" (ಕಶಸಾ. ೧೧-೩೧೨) ; "ಡಾಳ ಹಬೆ ಪೊಗರೆಂದೆನೆ ಕಳೆ ಪೊಳಪು . . . ಕಾಂತಿಯೆನಿಕ್ಕುಂ" (ಕವಿಕಂ. ೧೦೦) ; ಮಾಪೊ೯ಳೆದುವಾಕೆಯ ಡಾಳಮನಾಂತ ದಿಟ್ಟಿಗಳ್ (ಕಬ್ಬಿಕಾ. ೩೩೦); ಕನಸಿನ ಸಿರಿ ಕಾರ್ಮುಗಿಲೊಡ್ಡಿನ ಚಿತ್ರಂ ಸತಿಯರೊಲ್ಮೆ ಮಿಂಚಿನ ಡಾಳಂ ಜನಪತಿಯ ಕೂರ್ಮೆಯೆನಲಾತನೊಳಾಯ್ತಾ ಜನ ಸೌಖ್ಯಂ (ದಶಕು. ೫-೫೮) ; ಮಿಸುನಿಯೋಲೆಯ ಡಾ[ಪಾಠಾಂ. ಢಾ]ಳ ಕದಪಿನೊಳೆಸೆಯೆ (ನಳಚ. ೨-೬); ವ್ಯಾಲೋಲ ಖಡ್ಗಗಳ ಡಾಳದಿಂ ಮೇಳದಿಂ . . . ಪಡೆ ಪಡೆಪಿನಿಂ ನಡೆದುದು (ಚಬಪು. ೨೬-೧೦). ೨. ಅಂದ ; ಚಂದ : ಸೊಬಗು : "ಡಾಳಮನೆ ಲಾವಣ್ಯಂ" (ಭಾರನಿ. ೩೫) ; ಡಾಳದ ಕಣ್ಣ ನೀರ್ವನಿಗಳುಂ ಪೊಸಮುತ್ತುಗಳುಂ ನಭೋಂತರದೊಳ್ ಸಾಲಿಡಲ್ (ದಶಕು. ೧೨-೧೮೬) : ತೋರಮೊಲೆಗಳ ಡಾಳದಲಿ ಮಣಿಹಾರ ಮೆಱೆಯಲು (ಜೀವಂಡ. ೮-೯); ಥಳಥಳಿಸುವೆಳಮಿಾನ ಡಾಳವ ಗೆಲುವ ಕಂಗಳ (ಅಕ್ರೂಚ. ೪-೨೪). ೩. ರೀತಿ ; ಕ್ರಮ ; ಪದ್ಧತಿ ; ತರಹ : ಕಾಲದೇಶಾಗಮದ ನಿಗಮದ ಡಾಳವಱಿದೈಹಿಕಪರತ್ರ ವಿಟಾಳಿಸದೆ ನಡೆ ಕಂದ (ಕುವ್ಯಾಸ. ೧೫-೬೨). ೪. ಕುಂದು ; ಹಾನಿ ; ಭಂಗ : ಅಜ್ಜಮುತ್ತರ ತೆಱದಿ ನಡತೆಗಳೆಜ್ಜವಿರದೊಪ್ಪುದೊಲು ನಡೆತರುತೆಜ್ಜ ಸಾಸಿರ ಬಿದ್ದು ಡಾಳಗಳಾದವವಕೀಗ (ಬಿಜ್ಜಪು. ೬೭-೧೭). ೫. ಉಜ್ಜಿ ಹೊಳಪುಗೊಳಿಸುವುದು. 'ಡಾಳವಿಡಿ' ಪರಾ. ೬. ತೋರಿಕೆ ; ಥಳುಕು ; ಠಕ್ಕು. 'ಡಾಳೆ' ಪರಾ. ೭. ಥಳುಕಿನವನು ; ಡಾಂಭಿಕ ; ಮೋಸಗಾರ; ವಂಚಕ: ಕುಡದೆ ಕಾಡುವನಂ ರಸಬೋನವೆತ್ತು ಮಾಕಾಳಿಗೆ ಡಾ[ಪಾಠಾಂ. ಕಾ, ಗಾ]ಳನಂ ನೆಗಪು ಟಕ್ಕಿಪನಂ ತುಟಿ (ಲೀಲಾವ. ೨-೧೧೬) ; ಡಾಳಂಗಪ್ಪಯಿಸಿದುದು ಬಿಡಾಳಕ್ಕಂ ಪಾಲ ಕಾಪನಿತ್ತಪ್ಪೋಲಾಯ್ತೆಂದೀ ಲೋಕಮುಲಿಯೆ ನೀತಿಸುತಾಲೋಕನರಹಿತನಹಿತಚರಿತದೆ ನೆಗಟ್ದಂ (ಪಾರ್ಶ್ವಪು. ೩-೧೧೨). ಡವಳ$_1$ : ೭. ಢಾಳರನು ಡ[ಪಾಠಾಂ. ಢ]ವಳರನು ಠಕ್ಕಿನ ಠೌಳಿಕಾಱರನು (ಕುವ್ಯಾಗ. ೫-೧೧). ಡಾಲು$_1$: ೧ 'ಡಾಲುಹೊಡೆ' ಪರಾ. ಢವಳ : ಮೇಲಿನ 'ಕುವ್ಯಾಗ. ೫–೧೧'ರ ಪ್ರಯೋಗದ ಪಾಠಾಂತರವನ್ನು ನೋಡಿ. ಢಾಲು$_1$: ೮. [ಸಂಗೀತ] ದಾಟುಸ್ವರಗಳ ಪ್ರಯೋಗ : ಢಾಲು – ಸಪಾ, ಸಮಾ, ಸಗಾ, ಸರೀ ಎಂದು ಅನುಕ್ರಮಿಸುವ ದಾಟುಸ್ವರಗಳ ಪ್ರಯೋಗ (ಸಂಗೀಚಂ. ೨೮). ಢಾಳ$_2$: ೧. ಸರ್ವಾಂಗದೊಳ್ ಢಾಳಂ ನೆಟ್ಟನೆ ಪುಟ್ಟೆ ನಾಟ್ಯರಸದೊಳ್ ತೇಂಕಾಡುವಂತಾಡಿದರ್ (ಪಾರ್ಶ್ವಪು. ೧೪-೧೩೯) : ಎಳೆಯ ಮುತ್ತಿನ ಢಾಳವನು ಮುಕ್ಕುಳಿಸಿದಂಗಚ್ಛವಿಯ (ಕುವ್ಯಾಅ. ೬-೭೩) : ಭ್ರೂಲತೆಯ ಲಾವಣ್ಯನಿಧಿಯ ವಿಶಾಲ ಭಾಳದ ಢಾಳದಲಿ (ನಿಭಾಗ. ೨-೧-೨೬); ಸುಲಿಪಲ್ಲ ಢಾಳದಿ ಕರ್ಣಕುಂಡಲದಿ (ಶಂಕದಾ. ೫-೬೭): ಚೆಲ್ಲೆಕಂಗಳ ಢಾಳ (ಅಂಬಿಕಾ. ೩೪-೭೦). ೭. ಢಾಳರನು ಡ[ಪಾಠಾಂ. ಢ]ವಳರನು ಠಕ್ಕಿನ ಠೌಳಿಕಾಱರನು (ಕುವ್ಯಾಗ. ೫-೧೧). ೯. ಅಶುಚಿವಂತ ; ಶೀಲಗೇಡಿ (?) : ಖೂಳರಿಲ್ಲ ಜಾಣರುಂಟು ಗೆಲ್ವರಿಲ್ಲ ಒಲ್ವರುಂಟು ಢಾಳರಿಲ್ಲ ಶುಚಿಗಳುಂಟು ಹುಸಿವರಿಲ್ಲ ಸತ್ಯರುಂಟು (ಮಳರ. ಹ. ೨೨೦-೨೩). ೧೦. [ನಾಟ್ಯ] ಒಂದು ಬಗೆಯ ನೃತ್ಯ: ರೂಪುರೇಖೆ ಥಾಪಣೆ ತೂಕವಣೆಯಂಕೆ ಝಂಕೆ ಢಾಳ ಡಿಳ್ಳಾಯೆ ಚಂಡಣೆ ಚಳಬಳಿಕೆ ಉಲ್ಲಾಸದಚ್ಚರಿವಡೆಯೆ ನರ್ತಿಸುತ್ತುಮಿರೆಯುಂ (ಶಾಂತೀಶ್ವ. ೧೬-೭೭ ವ). ಢಾಳು : ೧. ನೂರು ಬಣ್ಣದ ಹೊಳಪನೊಳಗಾಂತು ಇವರ ತೆರವಿಂಥದೆನೆ ಮತ್ತೊಂದು ಢಾಳಿನಿಂದ ಕಂಗಳನು ಕೋರೈಸು ವಚ್ಚರಿಯ ಹೀರದಂತಿವನ ಬಗೆಗೆನ್ನ ಬಗೆಯಚ್ಚರಿಪುದು (ಗೋಕುನಿ. ೨೦-೨) : ಚಂದಕೆ ಮರುಳಾಗೆ ಕಣ್ಣಮುಚ್ಚಿಸಿತಪ್ಪ ನಿನ್ನ ಪರಿವಾರದ ಸುರರ ಢಾಳು (ಹಂಸದ. ೦೭೫-೧೭).

ಡಾಳಾಗು, ಢಾಳವಾಗು, ಢಾಳಾಗು = ೧. ಉಜ್ವಲವಾಗು ; ಪ್ರಕಾಶಮಾನವಾಗು; ಚೆನ್ನಾಗಿ ಪ್ರಕಾಶಿಸು ;ಪ್ರಜ್ವಲಿಸು: ದೀವಿಗೆಯು ಡಾಳಾಗಿ ಉರಿಯುತ್ತಿರಲಿಕ್ಕೆ ಬೇಕು (ಮುಂಬಯಿ. ೫-೧೬೨) : ಬರಬರುತ್ತ ಆ ಬೆಳಕು ಢಾಳವಾಗಿ ಖಿಂಡಿಯಿಂದ ಹೊರಚೆಲ್ಲಿ (ಗೀಚುಗ. ೦೦) ; ಅವನ ಕಣ್ಣಲ್ಲಿ ಸತ್ಯದ, ಬಂಧುತ್ವದ ದಿವ್ಯಜ್ಯೋತಿಯೊಂದು 'ಢಾಳಾಗಿ' ಉರಿಯುತ್ತಿತ್ತು (ಬರಹಾ. ೯೮); ವಿಶ್ವವಿದ್ಯಾನಿಲಯದ ಕೋಣೆಯಲ್ಲಿ ಇನ್ನೂ ದೀಪ ಢಾಳಾಗಿ ಉರಿಯುತ್ತಿದ್ದುದು . . . ಕಾಣುತ್ತಿತ್ತು (ದೀಪಹ. II, ೦೦೬). ೨. ಎದ್ದು ಕಾಣಂ; ಸುಸ್ಪಷ್ಟವಾಗು : ಭವ್ಯಮಂದಿರಗಳು ಮದರಾಸಿನಲ್ಲಿ ಬೀಚಿನ ಹತ್ತಿರವೇ ಢಾಳವಾಗಿ ಕಾಣುತ್ತಿವೆ (ಹೂಅರ. ೧೬) ; ಕೂರಿಗೆಗೆ ವಿಭೂತಿಯನ್ನು ಬಳಿದು ಢಾಳವಾಗಿ ಕುಂಕುಮ ಲೇಪಿಸಿದರು (ಮಚ್ಚಮ. ೩೫೬).

[ ದೇ.॥ ತೆಲು. ಡಾಲ./ಮರಾ. ಢಾಳ]

ಡಾಳ$_2$ 'ಡಾಲು$_2$' ನೋ.

ಡಾಳ$_3$ (ನಾ). (ಚಾಮರ ಮೊದಲಾದವನ್ನು) ಬೀಸುವಿಕೆ ; ಗಾಳಿ ಹಾಕುವಿಕೆ.

ಡಾಳಹಾಕು = ಬೀಸು ; ಇಕ್ಕು : ಡಾಳಹಾಕುವ ಚಾಮರದ ಪೊಡೆವ ಡೌಡೆಯ (ಹರಿಶ್ಚಂ. ೩-೩೩ ವ).

[ <ಪ್ರಾ. ಢಾಲ ]

**ಡಾಳಕ, ಧಾಳಕ** (ನಾ). ೧. ತೋರಿಕೆಯ ನಡೆನುಡಿಯುಳ್ಳವನು ; ಡಾಂಭಿಕ ; ಮೋಸಗಾರ : ಬೋಳೆಯನೆಂದು ನಂಬಬೇಡ ಡಾ[ಪಾಠಾಂ. ಧಾ]ಳಕನವನು ಜಗದ ಬಿನ್ನಾಣಿ (ಮಹಾದೇ. ಬ. ೧೦೯-೩೪೭) ; ನೆಱೆ ಡಾಳಕನಂ ತಗುಳ್ದು ಕೂರ್ತಂಗಜಕೇಳಿಯೊಳ್ ತೊಡರ್ದು (ಮನ್ಮವಿ. ೭-೫) ; ಮಾಲೆಯನೊಬ್ಬಗಿಕ್ಕಿದಳೆಂದರಾ ಹೆಣ್ಣ ಮೇಲಾಸೆ ನೃಪಗಾಗದೆಂದು ಡಾಳಕನಾ ಮಂತ್ರಿ ಮತ್ತೊಂದು ತಂತ್ರದಿ ಚಾಳಿಸಿ ನುಡಿದನೇನೆಂಬೆ (ಭರಚ. ೫೬-೫). ೨. ಕಪಟ ; ವಂಚನೆ ; ಮೋಸ. 'ಡಾಳಕವಂತ' ಪರಾ. **ಧಾಳಕ :** ೧. ಧಾಳಕರಿಗರ್ಥಾರ್ಥಿಗಳಿಗೆ ಪೇಳದಿರಸುಭವಾವ್ಯತವ (ಅಮೃತ. ೧೦-೩). ೨. ನಿರುದಯವು ನಿಷ್ಠುರವು ದುರುಳತ್ವ ಧಾಳಕವು (ಸುಸಾರ. ೧೨-೨). [ ಡಾಳ$_1$ + – ಕ$_3$ ]

**ಡಾಳಕತನ, ಧಾಳಕತನ** (ನಾ). ಥಳುಕು ; ವಂಚನೆ ; ಮೋಸ : ಕಾಳೆಗ ಕಿದಿರಾಗಿ ನಿಲ್ಲಲಾಱದೆ ಚಿಣ್ಣ ಡಾಳಕತನದೊಳೋಡುವನು (ಮೋಹತ. ೧೨-೫೧). **ಧಾಳಕತನ :** ನಾವು ನಮ್ಮಯ ಸೇವಕಾಂಗದ ಭಾವದಿಂದಿರ ಬೇಕೆನುತ ನಾನಾ ವಿಧದ ಧಾಳಕತನಂಗಳ ನುಡಿದನಲ್ಲಮನು (ಪ್ರಭುಲೀ. ೫-೩೬) ; ಕರ್ಕಶದಿಂ ಕಠಿಣನೆ ಯಮರಾಟ್ ಜನನಾದಿಯ ಧಾಳಕತನದಿಂ ಧಾಳಕಿಯೆ ದಿಟ ಮಾಯೆ (ಯೋಗಾಂವಿ. ೨-೩೩) ; ಠಕ್ಕು ಧಾಳಕತನ ಬಜುಬೋಸರಣೆ ಬೇಳಕ್ಕೆ ವೈಶಿಕಗಳೆಂಬಿವಕೆ ಸಿಕ್ಕುವರೇ ಕೋವಿದರು (ಕುರಾಸಾಂ. ೨೮-೭೦). [ಡಾಳಕ + – ತನ ]

**ಡಾಳಕವಂತ** (ನಾ). ತೋರಿಕೆಯ ನಡೆನುಡಿಯುಳ್ಳವನು ; ಮೋಸಗಾರ ; ವಂಚಕ : ನೇಣು ಕೊಂದಿತ್ತಂದಾ ದಾಯಗಾರಿಕೆಯಲ್ಲಿ ಹೋಹ ದರ್ಶನ ಡಾಳಕವಂತಂಗೆ (ಸರ್ವಪ. ೧೩೧-೬೬೦). [ ಡಾಳಕ + – ವಂತ ]

**ಡಾಳಕಿ, ಧಾಳಕಿ** (ನಾ). ಗಯ್ಯಾಳಿ ; ಮೋಸಗಾತಿ : ಸಗ್ಗಂಬಡೆದು ಬಂದ ಪ್ರತ್ಯಕ್ಷವಿಲ್ಲೆನಬಹುದೆ ಈ ಡಾಳಕಿ (ಸಮ್ಯಕೌ. ೪-೬೫). **ಧಾಳಕಿ :** ಕರ್ಕಶದಿಂ ಕಠಿಣನೆ ಯಮರಾಟ್ ಜನನಾದಿಯ ಧಾಳಕತನದಿಂಧಾಳಕಿಯೆ ದಿಟ ಮಾಯೆ (ಯೋಗಾಂವಿ. ೨-೩೩). [ ಡಾಳಕ + – ಇ$_2$ ]

**ಡಾಳಯಿಸು$_1$, ಡಾಳಯ್ಸು, ಡಾಳವಿಸು, ಡಾಳಿಸು$_1$, ಡಾಳೈಸು$_1$, ಧಾಳವಿಸು, ಧಾಳಿಸು$_1$, ಧಾಳೈಸು** (ಕ್ರಿ). ೧. ಮಿಂಚು ; ಹೊಳೆ ; ಮಿನುಗು ; ಥಳಥಳಿಸು. **ಡಾಳಯ್ಸು :** ೧. ಕದಪುಗಳು ನಿರ್ಮಳವೊದಗಿ ಡಾಳಯ್ಸು[ಪಾಠಾಂ. ಧಾಳೈಸು]ತಿಪ್ಪುವು ಲೋಲಲೋಚನೆಯ (ಬಸಪು. ೪-೨೩). **ಡಾಳವಿಸು :** ೧. ಡಾ[ಪಾಠಾಂ. ಧಾ]ಳವಿಪ ಸುಲಿಪಲ್ ಮುಗುಳ್ನಗೆ ಮೋಳವಿಸುವ ಮುಖಪ್ರಸನ್ನತೆ (ಬಸಪು. ೩-೨೭). **ಡಾಳಿಸು$_1$ :** ೧. ನೀಲದ ಸರ ಮಾಣಿಕದ ಕುಚ್ಚು ವಜ್ರದ ಮೇಲುಗೊಂಚಲು ವೈಡೂರ್ಯ ಡಾಳಿಸುತಿಹ ಬಲು ಪಸರದಂಗಡಿಗಳು ಸಾಲುಗೊಂಡೆಸೆದುವು (ಕಂನವಿ. ೬-೬೮) ; ಲೀಲೆಯಿಂ ನರಸಿಂಹನಂತೈದಿದ ರತ್ನ ಡಾಳಿಪೋಲಗದ ಚಾವಡಿಗೆ (ಕಂನವಿ. ೧೧-೧೨೫) ; ಭಾಸುರ ವೇದಮಾತೆ ಗಾಯತ್ರಿ ಡಾಳಿಸೆ ತಾಳ್ದು (ಕುಮಾಪು. ೧-೭೦). **ಡಾಳೈಸು$_1$ :** ೧. ಕದಪುಗಳು . . . ಡಾಳೈಸು[ಪಾಠಾಂ. ಡಾಳಯ್ಸಿ, ಧಾಳೈಸು]ತಿಪ್ಪವು ಲೋಲಲೋಚನೆಯ (ಬಸಪು. ೪-೨೩); ಎಳಲಿಟ್ಟು ಡಾಳೈಸುತಿಹ ಹಾರವೆಲ್ಲವುಂ ಸಂತೋಷದಿಂ ಪರಿದು ಪಸರಿಸಲು (ವೀಶೈಪು. ೩-೧೫-೭). **ಧಾಳವಿಸು:** ೧. ಧಾ[ಪಾಠಾಂ. ಡಾ]ಳವಿಪ ಸುಲಿಪಲ್ ಮುಗುಳ್ನಗೆ ಮೋಳವಿಸುವ ಮುಖ ಪ್ರಸನ್ನತೆ (ಬಸಪು ೩-೨೭). **ಡಾಳಿಸು$_1$:** ೧. ಶಾಲಿಯ ತೆರೆಯ ತಟ್ಟುಚ್ಚಿ ದೀಪದ ಕಾಂತಿ ಧಾಳಿಸುವಂತೆ ಲೋಕದೊಳು ಆ ಲಲಿತಾಂಗನ ತನುಕಾಂತಿ ಪೊದೆದದುಕೂಲದ ಹೊಱಗೆ ರಂಜಿಸಿತು (ಭರಚ. ೦-೪೫) ; ಮೇಲಿಪ್ಪ ಚಿನ್ನದ ಕಳಶದಿಂ ಗೋಪುರ ಧಾಳಿಸಿ ತುಡು ಕಿತಂಬರವ (ಕಂನವಿ. ೭-೮೪). ೨. ಪ್ರಕಾಶಗೊಳಿಸು; ಹೊಳಪುಮಾಡು; ಬೆಳಗಿಸು : ಬಾಲಶಶಾಂಕನಂದದ ಪುಲಿಯುಗುರನು ಧಾಳಿಪ ಬಂದಿ ರಂಜಿಸಿತು (ಅಂಚಚ. ೪-೪೪). ೩. ಉಜ್ಜಿ ಹರಿತವಾಗಿಸು ; ಮಸೆ : ಸಾಣೆಹಿಡಿ : ಕುಂತದ ಧಾರೆಗಳ ಧಾಳಿಸುವ ನೆಱೆ ಸೊಪ್ಪಾದ ಹಿಳುಕಿನ ಗಱಿಯ ಕೀಲಿಸುವ . . . ವೀರಭಟರೊಪ್ಪಿದರು (ಕುವ್ಯಾಘೀ. ೫-೩೮). **ಧಾಳೈಸು :** ೧. ನೀಲಗಿರಿಯೊಳಗಾಡುವ ಶಿಶುಗಳೆರಡಾಲಿಂಗಿಸಲು ಭೂಮಿಯ ಧಾಳೈಸುತಡರ್ದುರಿಗಳಿಂ ನಕ್ಷತ್ರಮಾಲೆ ಪಗಲೊಳ್ ತೋರ್ಪುದು (ಕೃಕವ. ೮೯-೩). [ ಡಾಳ$_1$ + – ಇಸು$_3$ ]

**ಡಾಳಯಿಸು$_2$** 'ಡಾಳಿಸು$_3$' ನೋ.

**ಡಾಳಯ್ಸು** 'ಡಾಳಯಿಸು$_1$' ನೋ.

**ಡಾಳವಿಡಿ** (ಕ್ರಿ). ಉಜ್ಜಿ ಬೆಳಗಿಸು ; ಮೆರುಗುಕೊಡು : ಬಗೆಗೊಳಿಪ ಡಾಳವಿಡಿದಿರ್ದ ಕಟ್ಟಾಣಿಮುತ್ತಿನ ಕಂಠಮಾಲೆ (ಸೌಂದಪು. ೪-೨೨). [ ಡಾಳ$_1$ + ಪಿಡಿ$_1$ ]

**ಡಾಳವಿಸು** 'ಡಾಳಯಿಸು$_1$' ನೋ.

**ಡಾಳಾಹಿ** (ಕ್ರಿ). ಹೊಳೆಯುವ ಮೈಯುನ್ನುಳ್ಳ ಹಾವು; ಕೃಷ್ಣಸರ್ಪ (?) : ಮೊಲೆಪುತ್ತುಗಳ ಬಳಿಯೊಳು ಡಾಳಾಹಿ ಕಣ್ಗೊಳಿಸದೆಯಿಪ್ಪ ನಿಕ್ಷೇಪ ನೆಲೆಯೆಂದು ವಿಟರು ಸೆಳ್ಳುಗುರ್ಗಳಿಂ ತೊ[ತೋ]ಡುವರೆಳ ಗಣಿಕೆಯರ ಕುಚವ (ಗೊಮ್ಮಚ. ೨-೯೩).

[ P ಇದು 'ಕಾಳಾಹಿ'ಯ ಅಪಲಿಖಿತವಿರಬಹುದು ]

**ಡಾಳಿ$_1$** (ನಾ). = ಡಾಳೆ : ಪ್ರಾಣೇಶನಂ ನೆರೆದಂತೆ ಕಳುಪಿ ತತ್ ಕಾಲರತಿ ಚಿಹ್ನಮಂ ಮತ್ತೊರ್ವನೊಳ್ ಪುಸಿದು ಡಾಳಿಯೊಲಿದಿಂತಿರ್ದಳು (ಚಿಬಸ. ೧೦-೬೪). [ ಡಾಳ$_1$ + – ಇ$_2$ ]

**ಡಾಳಿ$_2$** 'ದಾಱಿ' ನೋ.

**ಡಾಳಿಂಬ** 'ದಾಳಿಂಬ' ನೋ.

**ಡಾಳಿಂಬೆ** 'ದಾಳಿಂಬ' ನೋ.

**ಡಾಳಿಂಬ್ರ** 'ದಾಳಿಂಬ' ನೋ.

**ಡಾಳಿಮ** 'ದಾಳಿಂಬ' ನೋ.

**ಡಾಳಿಸು$_1$** 'ಡಾಳಯಿಸು$_1$' ನೋ.

**ಡಾಳಿಸು$_2$, ಡಾಳಯಿಸು$_2$, ಡಾಳೈಸು$_2$, ಧಾಳಯಿಸು, ಧಾಳಿಸು$_2$** (ಕ್ರಿ). ೧. (ಚಾಮರ, ಬೀಸಣಿಗೆ ಮುಂತಾದುವನ್ನು) ಬೀಸು ; ಗಾಳಿ ಹಾಕು : ಅಂಗಜನೃಪಂಗೆ ಬನವೆಂಬಂಗನೆ ಡಾಳಿಸುವ ಚಾರುಚಾಮರಮ ದೆನಲ್ . . . ಎಸೆದುದಲ್ಲಿ ಪೂಗಮಹೀಜಂ (ಉದ್ಭಟ. ೯-೦೬) ; ಚಕಚಕಿತಮಾಗಿ ಡಾಳಿಪ ಚಾಮರಂಗಳಿಂ (ಪದ್ಮರಾ. ೩-೫೧) ; ಗಾಯತ್ರಿ ಸಾವಿತ್ರಿಯರು ರಂಜಿಸಿದರಾ ಮಹಾದೇವನೆಡಬಲದಲ್ಲಿ ಡಾಳಿಸುತ ಚಾಮರವನೆಸಕದಿಂದ (ಸೌಂದಪು. ೧-೩೫) ; ನೀಲಗಿರಿಯ ಮೇಲೆ ಮುಸುಕಿದ ಸಿತಮೇಘಜಾಲವೆಂದೆನೆ ಡಾಳಿಸುವ ಮೇಲುಚವರಗಳು ಮೆಱೆದವು (ಕುರಾಸಾಂ. ೪೨-೪೪) ; ಬೆರಳ ಮುದ್ರಿಕೆಯ ಹೊಳಹು ದೋಱುತ ಶುಭ್ರಚಮರವ ಡಾಳಿಸುತೆಳೆವೆಂಗಳೆಸೆದರರ್ತಿಯಲಿ (ಕಂನವಿ. ೮-೨೪). ೨. ಸುತ್ತಲೂ ಬೀರು ; ಹರಡು ; ವ್ಯಾಪಿಸು : ಗಾಳಿಯಲಿ ಬೆಳಕು ಬಣ್ಣಗಳಲೆಯನೊಡಸಿ ಕಣ್ಕಟ್ಟು ಮೋಹನವ ಡಾಳಿಸುವ ನಾಡು (ದ್ರಾಕ್ಷಿದಾ. ೫-೫). ೩. (ಪಗಡೆಯ ದಾಳವನ್ನು) ಬೀಸಿ ಹಾಕು ; ಎಸೆ : ಉರುಳಿಸು : ಕಾಲೋಚಿತ ಕಿತವರನನ್ಯತಾಲಯರಂ ಪೊರೆಗೆ ಕರೆದು ಪಣಬಂದವನೊಲ್ದಾಳೋಚಿಸಿ ಡಾಳಿಸಿದಂ ಸೋಲಕ್ಕಿರ್ದಕ್ಷಯುಗಳವಂ ನಳಭೂಪಂ (ನಳಚಂ. ೫೦೫). **ಡಾಳಯಿಸು$_2$ :** ೧. ಇಕ್ಕೆಲದಾಲವಟ್ಟಂ ಚವರ ಕುಂಚಂ ಡಾ[ಪಾಠಾಂ. ಧಾ]ಳಯಿಸೆ ಗದ್ದುಗೆಯ ಮೇಲಿಹ ಬಿಜ್ಜಳನ ಕಂಡು (ಬಸಪು. ೬೧-೩೦) ; ಡಾಳಯಿಸುತಿಹ ಕನಕ ಚಾಮರದೋಳ್ (ಶಂಕದಾ. ೯-೨೨). **ಡಾಳೈಸು$_2$ :** ೧. ಬಾಲೆಯರು ಬಣ್ಣಿಸಿ ಚಮರವ ಡಾಳೈಸುತ ಬಂದರು (ಶ್ರೀಪಾಲ. ೧೩-೦೮೭). **ಧಾಳಯಿಸು :** ೧. ಚವರ ಕುಂಚಂ ಧಾ[ಪಾಠಾಂ. ಡಾ]ಳಯಿಸೆ (ಬಸಪು. ೩೧-೩೦). **ಧಾಳಿಸು$_2$ :** ೧. ಧಾಳ

ಸುವ ಚಮರಿ ಸೀಗುರಿಗಳೊಗ್ಗಿನ ಕುಱುಹುವಿಡಿದು ನಡೆದು (ಹಚಕಾ. ೮-೭೦) : ಲೋಚನಪುತ್ರಿಕೆಗಳು ಢಾಳಿಸುತಿರ್ಪ ಚಮರಗಳೆಂಬಂತೆ ಖೇಚರ ಭೂಚರಸತಿಯರ ಕಣ್ಣ ಮರೀಚಿಯೊಪ್ಪಿದುದುವೀಶ್ವರಗೆ (ಶ್ರೀಪಾಲ. ೧೯-೮೦) : ನಳಿನಮುಖಿಯರು ಚವರಗಳನೆಡಬಲದೊಳಗೆ ಢಾಳಿಸುತೆಯ್ತರಲು (ಕುರಾಸಾಂ. ೧೧-೭೦) : ಎತ್ತುವಾರತಿ ಸೇಸೆ ಇಡುವ ನಿವಾಳಿ ಢಾಳಿಸುವ ಚಾಮರಂಗಳಿಂ (ಭರತ. ೩-೮೧): ಚಂದ್ರಾದಿತ್ಯರುಭಯಚಾಮರಗಳಂ ಪಿಡಿದು ಢಾಳಿಸೆ (ಚಿಬಪು. ೨-೩೧). ೪. ಅಲುಬು; ತೊಳೆ; ಜಾಲಾಡಿ ಹೊಳೆಯುವಂತೆ ಮಾಡು : ಅಱಿವೆಂಬ ಮೂಸೆಯೊಳಗಿಟ್ಟು ಪರಮ ಜ್ಞಾನದಿಂ ಕರಗಿಸಿ ಸುಮನವೆಂಬ ನಿರ್ಮಲೋದಕದಲ್ಲಿ ಢಾಳಿಸಿದ ಶುದ್ಧ ಸುವರ್ಣ (ಅದವ. ೧೨೮). [ ಡಾಳ್$_3$ + – ಇಸು$_3$ ]

**ಡಾಳು** 'ಡಾಲ್ಯು' ನೋ.

**ಡಾಳೆ, ಢಾಳೆ** (ನಾ). ಮೋಸಗಾರ್ತಿ ; ವಂಚಕಿ ; ಥಳುಕುಗಾತಿ ; ಗಯ್ಯಾಳಿ : ಮೆಯ್ಮನೆ ಮಾಱುವಾಕೆ ಭವವಂ ಪೇೞ್ ಮಾಡಳೇ ಸಂತೆಯೊಳ್ ಧನಕಾನಾೞಿನಿವಳ್ಗೆ ದೈವವೞಿಗಿನ್ನೀ ಸೂಳೆಯಂ ಡಾಳೆಯಂ (ಲೀಲಾವ. ೨-೧೧೩) ; ಚಂಡಪ್ರದ್ಯೋತನೆಂಬರಸಂ ಆಕೆಯನೆೞೆದುಕೊಳ್ವೆನೆಂದು . . . ತನ್ನ ಪೆರ್ಗಡೆಗಳಂ ಡಾ[ಪಾಠಾಂ. ತಾ] ಳೆಯರಪ್ಪ ಸಬ್ಬವದ ಪೆಂಡಿರುಮಂ ಪುಥಾವತಿಯಲ್ಲಿಗಟ್ಟಿ (ಜೀವಸಂ. ೨೨೭-೩೪ ವ) : ಅೞ್ನೇಹವಂ ಮೆಱೆದು ಹೊಳ್ಳಿಸಿ ಬಿಟ್ಟಪೆನೆಂಬ ಡಾಳೆಯಂ ಸುಡುವುದು ಸುಟ್ಟು ತೂಱುವುದು ತೂಱಿದ ಬೂದಿಯ ಹಿಟ್ಟುಗುಟ್ಟಿ ಬೊಟ್ಟಿಡುವುದು (ಅನಂಪು. ೮-೫೬) ; ಕೂರಾನೆ . . . ದಾಂಟುವುದಿಡುಗುಡ್ಡೆಗಳ ಗಿರಿಗಳನಿಕ್ಕಿ ದಾಂಟುವ ಡಾಳೆಯಂದದೊಳು (ಭರತ. ೩೭-೭೫). **ಢಾಳೆ:** ಇಳಿಕೆಯ್ಯುದು ಹೊಳ್ಳಿಸಿ ತಿಂಬ ಢಾಳೆಯಂ (ಬಾಥಪು. ೧೫-೧೧೭) ; ಪುಸಿಯಳಿಪಂ ನಿವಿರ್ಚಿ ತಮಗಿಲ್ಲದ ಬೇಂಟಮನುಂಟುಮಾಡಿ . . . ಮುಟ್ಟಿದ ಮುನ್ನಮನ್ನರಂ ದೆಸೆವಲಿಗೆಯ್ವರೇನೋ ಕಡು ಢಾಳೆಯರೊಂದಿರುಳಲ್ಲಿ ಸೂಳೆಯರ್ (ಧರ್ಮನಾ. ೨-೧೧೩) ; ಮುತ್ತಿನ ಹಾರವ ಕಳ್ಳರೆಂದೆಮಗಾಪತ್ತನೆನೆಸಿದ ಢಾಳೆಯನು ಅತ್ತಿತ್ತ ಹೋಗದಂದದಿ ಕಾದುಕೊಂಡಿರಿ (ಪ್ರಭಂಚ. ೧-೧೭೯). [ ಡಾಳ್$_1$ + – ಎ$_3$ ]

**ಡಾಳೆವೆಂಡತಿ** (ನಾ). ಧೂರ್ತಳಾದ ಹೆಣ್ಣು ; ಹಾದರಗಿತ್ತಿ : ತೊಡಿಗೆ ಸುಸರ ಹಾರದ ಮುತ್ತಿನಂತೆ ಸರದೊಳಳವಡುವ ಡಾಳೆವೆಂಡತಿಯಂತೆ ಕೈಸನ್ನೆಯುಱಿವ ಜಾತಿ ಚಾಯಿಲಂಗಳಂ (ಅನಂಪು. ೨-೩೦ ವ). [ ಡಾಳೆ + ಪೆಂಡತಿ (<ಪೆಂಡಿತಿ) ]

**ಡಾಳೈಸು$_1$** 'ಡಾಳಯಿಸು$_1$' ನೋ.

**ಡಾಳೈಸು$_2$** 'ಡಾಳಿಸು$_2$' ನೋ.

**ಡಿಂಕಿಸು** (ಕ್ರಿ). (?) : ಉತ್ತರಗುಣಂಗಳಿವನಲ್ಪಮನಾಂ ಡಿಂಕಿಸದೆ ನೆನಪವಜೆ ನನಾಚಾರಂಗಳಂ (ರತ್ನಕ. ೨-೧೨). [ ? ]

**ಡಿಂಗರ** (ನಾ). ೧. ಸೇವಕ ; ಅಡಿಯಾಳು ; ಕಿಂಕರ ; ಭಕ್ತ : ಪಾರ್ವರಂ ದೊಡೆ ಪಾಪಂ ಬಿಡೆ ಪೋಪಂತದು ಪೇೞಾ ತುಡುಗುಣಿಯೋ ತಿರಿವ ಗೊರವನೋ ಡಿಂಗರನೋ [ಪಾಠಾಂ. ಪೇೞಿವಿದಂ] (ಸಮಪ. ೧೧-೮೪) : ಹರಶರಣೆಂಬಂ ಭಕ್ತರ ಕರುಣವೆ ಶರಣೆಂಬ ಶಿವನ ಡಿಂಗರನೆಂಬಂ ಹಿರಿಯಣ್ಣ ಸಾವಿದೇವನ ಪರಮಾನುಜ್ಞೆಯನೆ ತಾಳ್ದಿದಂ ಮುದ್ದರಸಂ (ಸೌಇಇ. IX-i, ೨೯೭-೭೦ ; 1177) : ಕುಲಮುಳ್ಳ ನರಂ ಪೆಱರೆಂಜಲನುಂಡಂದೆಲ್ಲಮವನ ಡಿಂಗರನೆಂಬರು ಸಲೆಯಡಗಂ ನಾಯೆಂಜಲ ನಲಿದಲಸದೆ ತಿಂದಂದು ನಾಯ ಡಿಂಗರನಲ್ತೆ (ಪಸಾರ. ೫೯೮-೧೪). ೨. ವಂಚಕ ; ಮೋಸಗಾರ ; ಠಕ್ಕ. ೩. ನೀಚ ; ಅಲ್ಪಮನುಷ್ಯ ; ಕ್ಷುದ್ರ. ೪. ಬೊಜ್ಜು ದೇಹವುಳ್ಳವನು ; ದಪ್ಪವಾದ ಶರೀರವುಳ್ಳವನು ; ಸ್ಥೂಲಕಾಯ ; ತೊಣಪ. [ ಸಂ. ]

**ಡಿಂಗರಿಗ** (ನಾ). = ಡಿಂಗರ ೧ : ನಿಮ್ಮ ಸಂಬಿದ ಶರಣರ ಡಿಂಗರಿಗ ನಾನಯ್ಯ (ಬಸವ. ೪೭೪) : ಶಿವನ ಡಿಂಗರಿಗನಡಗಿರ್ದ ಗುಹೆಯದು ನೋಡ (ಚಿಡರ. ೦೩೩-೨೨) ; ಸಕಲಕ್ಕೆ ರಾಜಾಧಿರಾಜನಾ ತ್ರ್ಯಂಬಕಂ ತ್ರಿಪುರಾರಿಯಾತಂಗೆ ಡಿಂಗರಿಗರಂಬುಜಭವಾಚ್ಯುತ ದ್ಯಮಿಪರು (ಪದ್ಮರಾ. ೧೦-೯೦) ; ಕೊಲುವ ಮನವೇ ಬಿಸುಡು ಚಕ್ರವನೆನ್ನ ಕಾಯದಲಿ ಅಳುಕಿ ಕೂದಲು ಹಱಿದುದಾದರೆ ಬಳಿಕ ನಾ ಡಿಂಗರಿಗನಲ್ಲ (ಕುವ್ಯಾಭೀ. ೬-೪೫) ; ಡಂಗುರವ ಸಾಱಿ ಹರಿಯ ಡಿಂಗರಿಗರೆಲ್ಲರು ಭೂಮಂಡಲಕೆ ಪಾಂಡುರಂಗವಿಟ್ಠಲ ಪರದೈವವೆಂದು (ಪುರಂದ. ೧-೩೩-೧) ; ಸಂಗೀತಲೋಲ ಶಿರಿ ವಿಜಯವಿಠಲರೇಯನ ಡಿಂಗರಿಗನಾಗದೆ ಸಕಲ ಸೌಖ್ಯ ಬಾರದು (ವಿಸಾಸು. ೮೭-೧) ; ಇಲ್ಲದ್ದರಲ್ಲಿ ಬಾಯಿಹಾಕುವ ಊರ ಡಿಂಗರಿಗ ಅವ (ಸಂಕಂಸ. ೪೩) ; 'ಶನಿಯ' ಎಂಬ ಅರ್ಧಮಾನುಷ ಕಿಂಕರನೂ ಕಿನ್ನರವರ್ಗಕ್ಕೆ ಸೇರಿದ ಒಬ್ಬ ಅತಿಮಾನುಷ ಡಿಂಗರಿಗನೂ ಇದ್ದರು (ಬಿಗಾಳಿ. ೮). [ ಡಿಂಗರ + – ಇಗ ]

**ಡಿಂಗಿ** (ನಾ). ದೋಣಿ ನಡೆಯಲು ಹಾಯಿಬಟ್ಟೆಯನ್ನು ಹಗ್ಗಗಳಿಂದ ಬಿಗಿಯಲು ಉಪಯೋಗಿಸುವ ಕೂವೆಮರ ; ಕೂಪಕ. 'ಡಿಂಗಿದೋಣಿ' ಪರಾ. [ ←ಪಾರ. ಡಿಂಗೀ ]

**ಡಿಂಗಿದೋಣಿ** (ನಾ). ಹಾಯಿ ಕಟ್ಟಿದ ದೋಣಿ; ಕೂವೆಮರವುಳ್ಳ ದೋಣಿ : ನದಿಯ ಮಧ್ಯೆ ಸರಿಯಾಗಿ ಒಂದು ಡಿಂಗಿದೋಣಿ ವೇಗ ಪ್ರವಾಹದಲ್ಲಿ ಓಡುತ್ತಿದೆ (ನಿಬಂಧ. II, ೨೦೭). [ ಡಿಂಗಿ + ದೋಣಿ$_3$ ]

**ಡಿಂಗು$_1$** (ನಾ). ಒಂದು ಕ್ಷುದ್ರ ದೇವತೆ: ಗಾಡಿಗ ಡಿಂಗು [ಪಾಠಾಂ. ಬು] ಗಂಗೆ ಚಿಕ್ಕು ಮುಟ್ಟಿಗೆ ಹಸುರಂಬಲಿ ಮುಟ್ಟಿಗೆ ಹುರಿಬುತ್ತಿಯ ಬೇಡಿ ಮನುಷ್ಯರ ಪಿಡಿದು ಪೀಡಿಸಿ ತಮ್ಮ ಬಸುರ್ಗೆ ಕಾಣದೆ ಈಡಾಡಿದ ಕೂಳಂಬಲಿಯನಾಯ್ದು ಕುಱುಕುವ ಹೇಸಿದೈವಂಗಳ ಬೇಡಿ ಬೇಡಿ ನಿರರ್ಥಕ ಕೆಡಬೇಡ (ಬಸವ. ೫೫೬). [ ? ]

**ಡಿಂಗು$_2$** 'ಧಿಂಗು' ನೋ.

**ಡಿಂಡ** 'ದಿಂಡ$_4$' ನೋ.

**ಡಿಂಡಲ** 'ದಿಂಡ$_1$' ನೋ.

**ಡಿಂಡಿಗ** 'ದಿಂಡ$_1$' ನೋ.

**ಡಿಂಡಿಮ** (ನಾ). ೧. (ಡಿಮ್, ಡಿಮ್ ಎಂಬ ಶಬ್ದಮಾಡುವ) ಒಂದು ಬಗೆಯ ಚರ್ಮವಾದ್ಯ ; ಡವುಡೆ : "ಡಿಂಡಿಮವನಲು ಮೊರೆವ ಡೌಡೆಯೆನಿಕ್ಕು" (ಮಂಗರಾ. ೨೪-೬) ; ಡಿಂಡಿಮಾರವದೊಳ್ ವನವೇತಂಡಮನೆಚ್ಚರಿಸುತಿರ್ಪವೊಲ್ (ಕಾದಂಪೂ. ೧೪೭) ; ಎಱಗನ ಗಂಡ ಡಿಂಡಿಮದ ಡಂಬರವೊಪ್ಪುವುದೀ ಧರಿತ್ರಿಯೊಳ್ (ಎಕ. V, ಅರಸೀ. ೦೩೮-೩೦; 1176) ; ಕೋಟಿ ಡಿಂಡಿಮಗಳನು ಬಾರಿಸೆ ಗೋಟು ತುಂಬಿತು ಜಗದ ಕವಿಗಳ ಪಾಟಿ ಹೊಟ್ಟಿತು (ಕಾಶಿರಾ. ೨೪-೪). ೨. [ಛಂದ] ಒಂದು ವೃತ್ತದ ಹೆಸರು : (+). [ ಸಂ. ]

**ಡಿಂಡೀರ** (ನಾ). ಕಡಲನಾಲಗೆ ; ನೊರೆ ; ಫೇನ ; ಬುರುಗು: "ಘನತರ ಫೇನಂ ಡಿಂಡೀರ ನಾಮಮಂ" (ವಸ್ತುಕೋ. ೨೨-೪). "ಡಿಂಡೀರಮೆನೆ ಫೇನಮೆನೆ ನೊರೆಯಕ್ಕು" (ಮಂಗರಾ. ೦೨೩-೦೨) ; "ಡಿಂಡೀರಃ, ಅಬ್ಧಿಕಫಃ, ಫೇನಃ – ಸಮುದ್ರದ ನೊರೆ" (ಸಿದ್ಧಾಂತಿ. ೨೬೨) ; ಡಿಂಡೀರಾವಳಿ ಶುಭ್ರವಲ್ಲರಿಯಿಂ . . . ವಿದ್ರುಮಂ ಚಂಡೌರ್ವಾನಲದೀಪ್ತಿಯಿಂ ದ್ವಿಗುಣಿಸುತ್ತಿರ್ಪಾ ಮಹಾಂಭೋಧಿಯಂ ಕಂಡು (ಜಗವಿ. ೭-೦೬) ; ಸಚರಾಚರವ್ರಾತ ತೋೞಿ ತೋೞಿಯಡುಗುವುವು ಡಿಂಡೀರನಿಕರದ ಪೋಲು (ನಿಭಾಗ. ೦೦-೦೪-೦೫) ; ಡಿಂಡೀರ ಪಿಂಡೌಘ ಮಂಜುಳೆಯಂ ಪೆಂಪಿನ ಲಂಪನಾಳ್ವ ಪೊಳೆಯಂ ಪೇಳ್ವಣ್ಣಿಸಲ್ಬರ್ಕುಮೇ (ರಾಜಶೇ. ೨-೯). [ ಸಂ. ]

**ಡಿಂಡೀರಪಾಂಡುರ** (ಗು). ನೊರೆಯಂತೆ ಬೆಳ್ಳಗಿರುವ,-ಬಿಳುಪಾದ : ನಿರವದ್ಯಾನ್ವಯನುದ್ಧಮುದ್ಧತ ಮಹಾಕ್ಷೀರಾಬ್ಧಿ ಡಿಂಡೀರಪಾಂಡುರಂ . . . ನೆಲೆಗೊಳ್ಗಾಗಚಂದ್ರತಾರಂಬರಂ (ಕವಿರಾ. ೩-೨೩೭). [ ಡಿಂಡೀರ + ಪಾಂಡುರ ]

**ಡಿಂಡೀರಪಿಂಡ** (ನಾ). ನೊರೆಯ ಮುದ್ದೆ,-ಉಂಡೆ ; ಫೇನರಾಶಿ : ಏಕಾವಳೀವಿಳಾಸಾಪಹಸಿತಾಮೃತ ಡಿಂಡೀರಪಿಂಡಪಾಂಡುರಂ (ಶಾಂತಿಪು. ೭-೧೩ ವ): ಕಂಡರಿಸಿ ಪಳುಕಿನಿಂದಮಖಂಡಿತಶೌಚಗುಣ ಸುರನದೀಸಮುಪಚಿತಂ ಡಿಂಡೀರಪಿಂಡಮೆನಿಸಿ ಕಮಂಡಲು ಸೊಗಯಿಪುದು ಬಾಳಚಂದ್ರವ್ರತಿಯಾ (ಮಲ್ಲಿಪು. ೧೦-೧೩೭). [ ಡಿಂಡೀರ + ಪಿಂಡ ]

**ಡಿಂಬ** (ಗು). ೧. ಅಲ್ಪವಾದ : ಸಣ್ಣದಾದ. 'ಡಿಂಬಾಹವ' ಪರಾ. (ನಾ). ೨.ಮೈ : ದೇಹ: ಶರೀರ: ಸಂಸಾರ ಮಾಯಾಪಾಶವ ಬಿಡಲೊಲ್ಲದೆ ಡಿಂಬವ ನೆಚ್ಚಿ ಕೆಟ್ಟೆಯಲ್ಲಾ ಹಂಸಾ (ಬಸಹೆ. ೧೦-೨೫): ಕುಂತೀಮಕ್ಕಳೆಂದೊಡೆ ಹರಹಿಕೊಂಬಿರಿ ಡಿಂಬವೆಮ್ಮಲಿ ಜೀವವವದಿರಲಿ (ಕುವ್ಯಾಉ. ೫-೧೮) ; ಎವೆ ಮಿಡುಕದವನಿಪರು ಪೀಠಾವಳಿಯೊಳಿರ್ದರು ಬಱಿಯ ಡಿಂಬದೊಳು (ಜೀವಂಚ. ೮-೭೦) ; ಕಂಬ ಮುಱಿದು ಡಿಂಬ ಬಿದ್ದು ಅಂಬರಕೆ ಹಾಱಿಹೋಯಿತು (ಪುರಂದ. ೧-೧೧೨-೬) : ಈಸು ಪೊತ್ತೇಕೆ ಪವಡಿಸಿದನೆಂದೆಬ್ಬಿಸಲ್ ಶ್ವಾಸವಿಲ್ಲದೆ ಡಿಂಬವಿರೆ ಕಂಡು (ಚಿಬಪು. ೬-೨೩) : ವಿಷಯಂಗಳಿಗೆ ಕಿವಿ ಜೋತುಬಿದ್ದು ಈ ಡಿಂಬವನ್ನು ಮೋಹಿಸದಿರೆಲವೊ ಪ್ರಾಣಿ (ವಿದಾಕ್ಯ. ೪೮-೭). ೩. ಎಳೆವಯಸ್ಸಿನ ಮಗು ಅಥವಾ ಪ್ರಾಣಿ ; ಶಿಶು. ೪. ವಿಪ್ಲವ ; ದಂಗೆ : ಲೂಟಿ. 'ಡಿಂಬಯುದ್ಧ' ಪರಾ. ೫. ಅತಿವೃಷ್ಟಿ, ಅನಾವೃಷ್ಟಿ, ಇಲಿಹೆಗ್ಗಣಗಳ ಕಾಟ, ಮಿಡಿತೆ, ಹಕ್ಕಿ ಮೊದಲಾದುವುಗಳ ಹಾವಳಿ ಮತ್ತು ಪರರಾಜರ ಮುತ್ತಿಗೆಗಳಿಂದಾಗುವ ತೊಂದರೆ ; ಈತಿಬಾಧೆ ; ಡಾಮರ: (*). ೬. ಗೋಲಾಕಾರದ ವಸ್ತು: ಉರುಳಿ; ಚೆಂಡು. ೭. ಮೊಟ್ಟೆ; ತತ್ತಿ. ೮. ದಿಬ್ಬ; ತಿಟ್ಟು (?): ತಲೆ ಕಾಮನಗುಡ್ಡದ ಬೊಂಬೆಗಲ್ಲ ಮತ್ತು ಡಿಂಬದ ಮೇಲೆ ಬಗುತನ ಕಟ್ಟೆಗೆ ಬ (ಎಕ. III, ತಿರುಮ. ೬೩-೪೫೯; 1748). [ ಸಂ. ]

**ಡಿಂಬಯುದ್ಧ** (ನಾ). ೧. ಸಣ್ಣ ಕದನ ; ಕ್ಷುಲ್ಲಕ ಕಲಹ : "ಸಣ್ಣ ಸಣ್ಣ ಅಥವಾ ಹೊರವಳಯದಲ್ಲಿರುವ ಸೈನಿಕ ಪಂಗಡಗಳಿಗೆ ಅನಿಯತವಾಗಿ, ಮುನ್ನಿರೀಕ್ಷೆಯಿಲ್ಲದೆ, ನಡೆಯುವ ಹೋರಾಟ; ಡಿಂಬಯುದ್ಧ; ಸಣ್ಣಕಾದಾಟ, ಅಲ್ಪ ಕದನ, ಹೊಡೆದಾಟ; (ಬುದ್ಧಿವಂತಿಕೆ, ತರ್ಕ,ಮೊ. ಗಳ) ವಾಗ್ಯುದ್ಧ" (Skirmish. ಇಂಕನಿ.). ೨. ದಂಗೆ : ಲೂಟಿ : ಕೊಳ್ಳೆ. 'ಡಿಂಬಾಹವ' ಪರಾ. [ ಡಿಂಬ + ಯುದ್ಧ ]

**ಡಿಂಬಾಹವ** (ನಾ). = ಡಿಂಬಯುದ್ಧ ೨ : (ರೀವ್). [ ಡಿಂಬ + ಆಹವ ]

**ಡಿಂಬು** (ನಾ). ೧. ಮೈ ; ದೇಹ ; ಶರೀರ : ಕುಂಭಿನಿಪತಿ ನಮ್ಮ ವಿಜಯವಿಠಲರೇಯ ಡಿಂಬಿನೊಳಗೆ ನಿಂದು ಪಾಲಿಸುವನು ನಿತ್ಯ (ವಿಸಾಸು. ೩೦-೪). ೨. ಸ್ವಲ್ಪ ಎತ್ತರವಾದ ಸ್ಥಳ ; ದಿಬ್ಬ ; ತಿಟ್ಟು : ಆ ಮಹಾ ರಭಸಕ್ಕೆ . . . ಪರ್ವತದಾ ಮಹಾಡಿಂಬಿನಲ್ಲಿ ಪಾಂಡುವಿನರಸಿ ನಡುಗಿದಳು (ಸಂಭವ ೧೫-೭೩). ೩. ದೀಪದ ಆಧಾರ ; ದೀಪವನ್ನಿಡುವ ಸಣ್ಣ ಪೀಠ : (*). [ <ಸಂ. ಡಿಂಬ ]

**ಡಿಂಬೆ** (ನಾ). ಮೂಗಿನ ಹೊರಳೆಗಳ ನಡುವಿನ ಸಿಂಬೆ (?) : ತುಂಬಿದ ಠಾಣಗಳಿರ ಬನ್ನಿ ರಾಯನ ತುಂಬಿದ ಬವರಿಗಳಂತೆ ಕೆಂಬಲ್ಲ ಥಾಳದಂತರಸನ ಮೂಗಿನ ಡಿಂಬೆಯಂತೆಂದು ಪಾಡಿದಳು (ಭರಚ. ೧೧-೭೧). [ ? ]

**ಡಿಂಭ** (ನಾ). ೧. ಆಗ ತಾನೆ ಹುಟ್ಟಿದ ಕೂಸು ಅಥವಾ ಪ್ರಾಣಿಗಳ ಮರಿ: ಒಗರು ಚಿಗುರುಗಳುಂಡ ಪಿಕ ಡಿಂಭಗಳು ಚದುರುತ ನುಡಿವವೋಲ್ (ಅನಂರಾ. ೨-೧-೩೮). ೨. ಮೈ ; ದೇಹ : ಶರೀರ : ಅಕ್ಕ ಮರುಳೌ ಚಿತ್ತವವಳಲಿ ಸಿಕ್ಕಿ ಬೇರ್ವರಿಯಿತ್ತು ಬರಿದೇ ಮಿಕ್ಕ ಡಿಂಭ[ಪಾಠಾಂ. ಬ]ಕೆ ಮದುವೆಯುಂಟೇ ಮನವ ಬೇಱಿರಿಸಿ (ಕುವ್ಯಾವಿ. ೨-೪೬) : ಡಿಂಭದೊಳು ಶಬ್ದ ಪಾಗಾದಿ ಶ್ರೋತ್ರಗಳಲ್ಲಿ ಇಂಬಾಗಿ ತತ್ವೇಶರೆಲ್ಲ ತುಂಬಿಹರೊ (ಪುರಂದ. ೧-೨೧೫-೪) : ಡಿಂಭದೊಳು ಕಾಂಬುದೆಂದಸಮಗ್ರವಲ್ಲವಿದು ಕುಂಭದೊಳಗಡಗಿದ್ದರೂ ಅಲ್ಪವಲ್ಲ (ಮುಳದೇ. ೩೭-೧). ೩. ತಿಳಿಗೇಡಿ ; ದಡ್ಡ : ಮೂರ್ಖ. ೪. ಗರ್ಭಾಶಯ ; ಗರ್ಭಕೋಶ : ಡಿಂಭಗಳನೊಡೆದು ಬನ್ನಿ ಕಂಭಗಳನೊಡೆದುಬನ್ನಿ (ಗರಿ. ೫೩-೧೧). [ ಸಂ. ]

**ಡಿಂಭಕ** (ನಾ). = ಡಿಂಭ. [ ಸಂ. ]

**ಡಿಂಭೆ** (ನಾ). ಮಗು : ಶಿಶು. [ ಸಂ. ಡಿಂಭಾ ]

**ಡಿಕಮಲಿ, ಡಿಕ್ಕಿಮಾಲೆ, ದಿಕಾಮಲಿ, ದಿಕ್ಕಾಮಲ್ಲಿ** (ನಾ). ಒಂದು ಬಗೆಯ ಮರ ಮತ್ತು ಆ ಮರದಿಂದ ತೆಗೆದ ಒಂದು ಗಂದಿಗದ್ರವ್ಯ: ಸೂರ್ತಿ ಚವಾಳಾ ಮಣದ ಮೇಲೆ ಕಿಮ್ಮತ್ತು ಇರತಕ್ಕ ಜಿನಸಗಳು . . . ಅಕ್ಕಲಖಾರ . . . ಡಿಕಮಲಿ (ಕಾರಿಂಗ) (ಮುಂಬವ್ಯಾ. ೦೨೫). **ಡಿಕ್ಕಿಮಾಲೆ:** ಕಡಲೆಕಾಳಿನಷ್ಟು ಡಿಕ್ಕಿಮಾಲೆಯನ್ನು ಹಾಲಲ್ಲಿ ತೇದು ಕುಡಿಸುವುದು (ಮನೆಮ. ೮). **ದಿಕಾಮಲಿ :** ಬಿಕ್ಕಿಗಿಡ. ದಿಕಾಮಲಿ, ಕಂಬಿಮೇಣ (ಮೈಜಿಗಿ. ೩೮-೭೬೦). **ದಿಕ್ಕಾಮಲ್ಲಿ :** (*). [ ←ಹಿಂ. ಡಿಕಾಮಾಲೀ; ಮರಾ.ಡಿಕಾಮಾಲೀ, ಡಿಕೇಮಾಲೀ, ಡಿಂಕೆಮಾಲೀ ]

**ಡಿಕರಿ** 'ಡಿಕ್ರಿ' ನೋ.

**ಡಿಕಾವು** 'ದಿಖಾವು' ನೋ.

**ಡಿಕ್ಕಿ, ಢಿಕ್ಕಿ** (ನಾ). ೧. ತಲೆಯಿಂದ ತಲೆಯನ್ನು ತಾಟಿಸುವಿಕೆ. 'ಡಿಕ್ಕಿಹೊಡೆ' ಪರಾ. ೨. ಒಂದು ವಸ್ತುವು ಇನ್ನೊಂದು ವಸ್ತುವನ್ನು ಜೋರಾಗಿ ತಾಗುವುದು, - ಅಪ್ಪಳಿಸುವುದು. - ಘಟ್ಟಿಸುವುದು : ಮುಂಬಯಿಯಲ್ಲಿ ಇಂತಹ "ಡಿಕ್ಕಿ"ಗಳು ದಿನಾಲೂ ನೂರಾರು ಆಗುತ್ತವೆ (ಎಡಹೆ. ೧). ೩. (ಆಲಂ) ಮಾತಿನಲ್ಲಿ ಹೊಂದಾಣಿಕೆಯಿಲ್ಲದಿರುವುದು: ವಿರೋಧದ ಮಾತು : ಬೆಳಗಿನ ಹೇಳಿಕೆಯು ಸಂಜೆಯ ಹೇಳಿಕೆಗೆ ಡಿಕ್ಕಿಯಾಗಲೇಬೇಕು (ಹನ್ನೊಂದ. ೬೭). **ಢಿಕ್ಕಿ :** 'ಢಿಕ್ಕಿಹೊಡೆ' ಪರಾ. [ < ಡೀ ]

**ಡಿಕ್ಕಿಕೊಡು** (ಕ್ರಿ). ೧. ಜೋರಾಗಿ ತಲೆಯಿಂದ (ಇನ್ನೊಬ್ಬನ) ತಲೆಯನ್ನು ಹಾಯು,-ತಾಗು,-ತಾಟಿಸು: ಅವನು ಓಡಿಬಂದು ನನ್ನ ತಲೆಗೆ ಡಿಕ್ಕಿಕೊಟ್ಟನು (ರೂಢಿ). ೨. ಇನ್ನೊಂದು ವಸ್ತುವನ್ನು ಜೋರಾಗಿ ತಾಗು,-ಅಪ್ಪಳಿಸು,-ಘಟ್ಟಿಸು : ನೋಡ ನೋಡುತ್ತಿದ್ದಂತೆ ವಾಹನಗಳೆರಡು ಡಿಕ್ಕಿಕೊಟ್ಟು ಕೆಳಕ್ಕೆ ಉರುಳಿದವು (ರೂಢಿ).

ಡಿಕ್ಕಾಡಿಕ್ಕಿಕೊಡು (ದ್ವಿರುಕ್ತಿ) : (*). [ ಡಿಕ್ಕಿ + ಕೊಡು₁ ]

**ಡಿಕ್ಕಿಮಾಲೆ** 'ಡಿಕಮಲಿ' ನೋ.

**ಡಿಕ್ಕಿಹೊಡಿಸು** (ಕ್ರಿ). ತಲೆಯನ್ನು ಜೋರಾಗಿ ತಾಗುವಂತೆ ಮಾಡು : ಘಟ್ಟಿಸುವಂತೆ ಮಾಡು: ಅವರು ಸಂತೋಷದಿಂದ ಆಡುತ್ತಿದ್ದಾಗ . . . ಜುಟ್ಟುಹಿಡಿದು ತಂದು ತಲೆತಲೆಗೆ ಡಿಕ್ಕಿಹೊಡಿಸುವನು (ವಚಧಾ. ೦೬). [ ಡಿಕ್ಕಿ + ಹೊಡಿಸು (<ಪೊಡೆಯಿಸು) ]

**ಡಿಕ್ಕಿಹೊಡೆ, ಢಿಕ್ಕಿಹೊಡೆ** (ಕ್ರಿ). ೧. = ಡಿಕ್ಕಿಕೊಡು ೧. 'ಡಿಕ್ಕಿಹೊಡಿಸು' ಪರಾ. ೨. = ಡಿಕ್ಕಿಕೊಡು ೨: ಒಂದು ದಿನ ಓದುತ್ತ ಹೋಗುತ್ತಿರುವಾಗ ದಾರಿಯಲ್ಲಿನ ಲೈಟು ಕಂಬಕ್ಕೆ ಡಿಕ್ಕಿ ಹೊಡೆದು ಹಣೆಯಲ್ಲಿ ಬೋರೆ ಬರಿಸಿಕೊಂಡ (ಶಾಲಿಮ. ೨೧೮) ; ನನ್ನ ಮುಖ ನೋಡ್ತಾ ಬಂದರೆ ಯಾರಿಗಾದರೂ ಡಿಕ್ಕಿಹೊಡೆಯುತ್ತೀರ (ದೂಬಟ್ಟ. ೪೯). **ಢಿಕ್ಕಿಹೊಡೆ:** ೧. ಢಿಕ್ಕಿಹೊಡೆದೆನು ಪಂಜರದ ಕಂಭ ಮಾಡಕ್ಕೆ (ನವ್ಯಧ್ಯ. ೮೫). ೨. ಮೇಲ್ವಾಯ್ದುದಟ್ಲಾಂಟಿಕಾಂಭೋಧಿ ಪೆಸಿಫಿಕಂಬುಧಿಯೊಡನೆ ಢಿಕ್ಕಿಹೊಡೆದುಕೆ (ಶ್ರೀರಾಮಾ. ೧೬೫-೩೫೭). [ ಡಿಕ್ಕಿ + ಹೊಡೆ₁ (<ಪೊಡೆ₁) ]

**ಡಿಕ್ರಿ, ಡಿಕರಿ** (ನಾ). (ನ್ಯಾಯಾಲಯದ) ತೀರ್ಪು,- ತೀರ್ಮಾನ : ಆದರೆ ಡಿಕ್ರಿಯು ಬೆಂಚಿನ ೩ ಜನ ಮೆಂಬರ ಹೆಸರಿನಲ್ಲಿಯೂ ಕೊಡಲ್ಪಡ ತಕ್ಕದ್ದು (ಗ್ರಾಮಾಶ. ೧೮). ಅಂತೂ ಕೋರ್ಟಿನಲ್ಲಿ ನಾಡಿದ್ದು ಆದು ಡಿಕ್ರೀ ಆಗಿಬಿಟ್ಟರೆ, ನನ್ನ ಹಣ ಪುನಃ ಸೆಟ್ಟಿ ಪೆಟ್ಟಿಗೇಲಿ ಸುರಕ್ಷಿತವಾಗಿರುತ್ತೆ (ಮಾಂಗಲ್ಯ. ೪೪); ಕೋರ್ಟಿನಲ್ಲಿ ವ್ಯಾಜ್ಯಮಾಡಿ ಡಿಕ್ರಿಮಾಡಿ ಸಾಲಿಗನ ಸರ್ವಸ್ವವನ್ನು ಸುಲಿದುಬಿಡುತ್ತಾರೆ (ಕು ರು ಶಾ. ೩೪) ; ಕೋರ್ಟಿನಲ್ಲಿ ವಿವಾಹವಿಚ್ಛೇದನವಾಗುವಂತೆ ಅರ್ಜಿದಾರಳ ಪರ ಡಿಕ್ರಿ ಬಗ್ಗೆ ಪ್ರಾರ್ಥನೆ- ಅಂತ ಅರ್ಜಿಯಲ್ಲಿದೆ (ಏಕಾಂಗಿ. ೨೦೪). **ಡಿಕರಿ :** ಮೋಸದಿಂದ ತನಗೆ ಬರಬೇಕಾಗಿಲ್ಲದ ಹಣಕ್ಕೆ ಡಿಕರಿ ಆಗುವಂತೆ ಮಾಡಿದರೂ (ಗ್ರಾಮಾಶ. ೬೪).

[ ←ಇಂ. Decree ]

**ಡಿಕ್ರಿದಾರ** (ನಾ). (ನ್ಯಾಯಾಸ್ಥಾನದಲ್ಲಿ) ತನ್ನ ಕಡೆಗೆ ತೀರ್ಪನ್ನು ಪಡೆದಿರುವ ವ್ಯಕ್ತಿ : ಸದರೀ ಸ್ವತ್ತನ್ನು ಹಿಡಿದು ಡಿಕ್ರೀದಾರನಿಗೆ ಒಪ್ಪಿಸು ವುದರ ಮೂಲಕ ಡಿಕ್ರಿಯನ್ನು ಜಾರಿಮಾಡಬಹುದು (ಗ್ರಾಮಾಶ. ೩೩).

[ ಡಿಕ್ರಿ + – ದಾರ₁ ]

**ಡಿಗರು** 'ದಿಗರು' ನೋ.

**ಡಿಗುರು** (ನಾ). ಸ್ತ್ರೀಯ ಜನನೇಂದ್ರಿಯ ; ಯೋನಿ : (+).

[<ಡೊಗರು ]

**ಡಿಗ್ರಿ** (ನಾ). ೧. (ಉಷ್ಣಮಾಪಕಯಂತ್ರದಲ್ಲಿ ಅಳೆಯುವ) ಉಷ್ಣದ ಅಳತೆ,-ಮಾನ : ನನ್ನ ತಮ್ಮನಿಗೆ ನೂರೆರಡು ಡಿಗ್ರಿ ಜ್ವರವಿದೆಯೆಂದು ಡಾಕ್ಟರು ಹೇಳಿದರು (ಮಧ್ಯಮ. ೧೬೩); ಜ್ವರ ಅಪರೂಪವಾಗಿ ೧೦೩ ಡಿಗ್ರಿಗಳಿಗಿಂತ ಹೆಚ್ಚಾಗಿ ಹೋಗುತ್ತದೆ (ಕಲರೋ. ೪೨). ೨. [ಗಣಿತ] ಕೋನವಮಾನ ; ಅಳತೆ ; ವೃತ್ತಪರಿಧಿಯ $\frac{೧}{೩೬೦}$ ನೆಯ ಭಾಗ : ಅವುಗಳ ಮೇಲೆ ಅಕ್ಷಾಂಶಗಳಂತೆ ಗುರುತು ಮಾಡಿರುವ ರೇಖೆಗಳು ಆಯಾ ಭಾವಗಳ 'ಡಿಗ್ರಿ'ಯನ್ನು ಸೂಚಿಸುತ್ತವೆ (ಸೌಂದಸ. ೧೯). ೩. ವಿಶ್ವವಿದ್ಯಾ ನಿಲಯಗಳು ಕೊಡುವ ಪಾಂಡಿತ್ಯಪದವಿ; ವಿದ್ಯಾಪ್ರಶಸ್ತಿ: ನಮ್ಮ ಹುಡುಗ ಕಾಲೇಜಿನಲ್ಲಿ ಓದಿ ಡಿಗ್ರಿ ಪಡೆದಿದ್ದಾನೆ (ರೂಢಿ). [←ಇಂ. Degree]

**ಡಿಟ್ಟಂ ಜಮಾಬಂದಿ, ದಿಟ್ಟಂಜಮಾಬಂದಿ** (ನಾ). "ಹುಜೂರು ಜಮಾ ಬಂದಿಗೆ ಮುನ್ನ ತಾಲ್ಲೋಕು ಅಮಲ್ದಾರರು (ತಹಸೀಲ್ದಾರರು) ಪೂರ್ವಭಾವಿಯಾದ ಲೆಕ್ಕಗಳ ತನಿಖೆಮಾಡಿ ಹುಜೂರು ಜಮಾಬಂದಿ ಲೆಕ್ಕಗಳನ್ನು ತಯಾರಿಸುವುದು" (ನನ್ನೂರು. ಕೋಶ) : ಡಿಟ್ಟಂ ಜಮಾ ಬಂದಿಯಲ್ಲಿ ಮತ್ತು ಹುಜೂರು ಜಮಾಬಂದಿಯಲ್ಲಿ ಎಲ್ಲಾ ಶಾನು ಭೋಗರ ಲೆಕ್ಕ ಚೆಕ್ಕಾದರೂ ನನ್ನೂರಿನ ಲೆಕ್ಕ ಇನ್ನೂ ಬಾಕಿ (ನನ್ನೂರು. ೧೭೨). **ದಿಟ್ಟಂಜಮಾಬಂದಿ:** ಚುಂಚನಕಟ್ಟೆ ಜಾತ್ರೆ, ಸ್ಪಾರ್ಕ್ಸ್ ಸಾಹೇಬರ ಆಗಮನ, ಕಸಬ ಹೋಬಳಿ ದಿಟ್ಟಂಜಮಾಬಂದಿ, ಇವುಗಳೆಲ್ಲಾ ಮುಗಿದ ಮೇಲೆ ನಾನು ಸಾಲಿಗ್ರಾಮಕ್ಕೆ ಹೋದೆ (ಕಲಿನ. ೧೫೦)

[ ಡಿಟ್ಟಂ₀ + ಜಮಾಬಂದಿ ]

**ಡಿತ್ಥ** (ನಾ). ೧. ಮರದಿಂದ ಮಾಡಿದ ಆನೆ ; ಮರದಾನೆ. ೨. ಒಂದು ಸಂಜ್ಞಾಶಬ್ದ ; ಒಬ್ಬ ವ್ಯಕ್ತಿಯನ್ನು ಕುರಿತು ಹೇಳುವ, ಅವ್ಯುತ್ಪನ್ನ ವಾದ ಸಂಕೇತ ಶಬ್ದ : ಇವನು ಹೋಗುವವನು ಇವನು ಡಿತ್ಥನು ಎಂಬ ಅನುಭವಗಳಿಗೆ ಅನುಸಾರವಾಗಿ ಕ್ರಮವಾಗಿ ಜಾತಿವಿಕಲ್ಪ, ದ್ರವ್ಯವಿಕಲ್ಪ, ಗುಣವಿಕಲ್ಪ, ಕ್ರಿಯಾವಿಕಲ್ಪ ಮತ್ತು ನಾಮವಿಕಲ್ಪ ಎಂದು ಐದು ವಿಧ (ಭಾತತ್ತ್ವ. ೩೮೬). [ ಸಂ. ]

**ಡಿಪೋ** (ನಾ). (ಮಾರಲಿರುವ) ವಸ್ತುಗಳನ್ನು ಸಂಗ್ರಹಿಸಿರುವ ಮಳಿಗೆ,- ಉಗ್ರಾಣ : ರೇಷನ್ ಡಿಪೋಗಳಲ್ಲಿನ ಜನಸಂದಣಿಯಂತೆ ಜನಗಳ ನೂಕು ನುಗ್ಗಲು ನೋಡಿದರೆ ನಮ್ಮ ಎದೆ ಒಡೆದು ಚೂರುಚೂರಾಗುತ್ತದೆ (ನಾಡಿಗೇ. ೩೦). [ ←ಇಂ. Depot ]

**ಡಿಫ್ತೀರಿಯ** (ನಾ).(ಸಾಮಾನ್ಯವಾಗಿ ಮಕ್ಕಳಿಗೆ ಬರುವ) ಒಂದು ಬಗೆಯ ರೋಗ; ಗಳಚರ್ಮರೋಗ; ಲೋಳೆ ಸಂಕೋಲೆ. ಗಂಟಲಿನಲ್ಲಿಯ ಶ್ಲೇಷ್ಮ ಚರ್ಮವು ಉದ್ದೀಪನಗೊಂಡು ಆದರಿಂದ ಹೊರಟ ಸ್ರಾವವು ಕೃತಕ ಚರ್ಮದಂತೆ ಪರಿವರ್ತನೆ ಹೊಂದುವ ಒಂದು ಭಯಂಕರ ವ್ಯಾಧಿ : ಡಿಫ್ತೀರಿಯದಿಂದ ನರಳುವ ಮಕ್ಕಳಿಗೆ ಧ್ವನಿ ಬದಲಾಯಿಸಿ, ಅವು ಏನೋ ವಿಚಿತ್ರವಾಗಿ ಅಳುತ್ತವೆ (ಗೃಹವಿ. ೦೪೩) : ಡಿಫ್ತೀರಿಯ ಮತ್ತು ಟೈಫಾಯ್ಡ್‌ಗಳಂತಹ ರೋಗಗಳು ಮೊಟ್ಟಮೊದಲನೆಯ ಬಾರಿ ಕಂಡ ರೋಗಿಗಳ ಮನೆಯ ವಾತಾವರಣವನ್ನು ಪರೀಕ್ಷಿಸಬೇಕು (ಕಲರೋ. ೪). [ ←ಇಂ. Diphtheria ]

**ಡಿಮ** (ನಾ). [ಕಾವ್ಯಮಿ] ಹತ್ತು ವಿಧವಾದ ರೂಪಕಗಳಲ್ಲೊಂದು : ನಾಟಕ, ಪ್ರಕರಣ, ಭಾಣ, ಪ್ರಹಸನ, ಡಿಮ, ವ್ಯಾಯೋಗ, ಸಮವಕಾರ, ವೀಥಿ, ಅಂಕ, ಈಹಾಮೃಗ – ಎಂದು ರೂಪಕಗಳು ಹತ್ತುವಿಧ (ಸಂನಾಟ. ೨೯) : ಡಿಮ – ಇದರ ವಸ್ತು ಪ್ರಖ್ಯಾತ ; ಮಾಯಾ, ಇಂದ್ರಜಾಲ, ಗ್ರಹಣ, ಯುದ್ಧಾದಿಗಳಿಂದ ತುಂಬಿರುತ್ತದೆ. (ಭಾರದ. ೫೭೨). [ ಸಂ. ]

**ಡಿಮಕಿ** 'ಡುಮುಕಿ₁' ನೋ.

**ಡಿಯ್ಯನಹಕ್ಕಿ** (ನಾ). ಒಂದು ಬಗೆಯ ಪಕ್ಷಿ ; ಟಿಟ್ಟಿಭ : "ಕೋಯಷ್ಟಿಕಃ, ಟಿಟ್ಟಿಭಕಃ – ಈ ೨ ಡಿಯ್ಯನಹಕ್ಕಿ" (ನಾಚಿರಾ. ೧೦೫).

[ ? + ಹಕ್ಕಿ₁ (<ಪಕ್ಕಿ₁) ]

**ಡಿಲ್ಲ** 'ಢಿಳ್ಳ' ನೋ.

**ಡಿಲ್ಲಿ** (ನಾ). ದಿಬ್ಬ : ಹತ್ತಿನೋಡ್ಯಾಳೇ ಡಿಲ್ಲೀಯಾ (ಹುಟ್ಯಾಹ. ೫೭). [ ? ]

**ಡಿವಿಡಿವಿ** (ನಾ). ೧. ಒಂದು ಬಗೆಯ ಮರ ; ಸುವಾಸನೆಯ ಹೂವನ್ನು ಬಿಡುವ ಒಂದು ವೃಕ್ಷ : (+). ೨. ಒಂದು ಬಗೆಯ ಸಸ್ಯ : ಸೀಮೆ ಅಲ್ಲೆಕಾಯಿ. ಡಿವಿಡಿವಿ (ಮೈಜಿಗಿ. ೧೫-೨೬೮). [ ? ]

**ಡಿಳ್ಳ** 'ಢಿಳ್ಳ' ನೋ.

**ಡಿಳ್ಳಯಿಸು** 'ಡಿಳ್ಳಿಸು' ನೋ.

**ಡಿಳ್ಳವಾಱು** (ಕ್ರಿ). ತಳಮಳದಿಂದ (ಎದೆ)ಹಾರು,-ಡವಡವ ಬಡಿದು ಕೊಳ್ಳು ; ಎದೆಗುಂದು : ಕಟ್ಟಿಗಂದಿದಾನನಂ ರಸಮಱಿತಧರಂ ಡಿಳ್ಳ [ಪಾಠಾಂ. ಳ್ಳ]ವಾಱದೆ ಬಿಸುಟಿಂದಂ ಪೊಱಪಾಯ್ದು ಸುಯ್ಗಳ್ (ವೃಷವಿ. ೨೯-೨೬). [ ಡಿಳ್ಳ (<ಢಿಳ್ಳ) + ಪಾಱು₁ ]

**ಡಿಳ್ಳವೋಗು, ಡಿಳ್ಳಹೋಗು** (ಕ್ರಿ). ಗಾಬರಿಗೊಳ್ಳು ; ಬೆದರು ; ಗಾಸಿ ಪಡು ; ಹೆದರಿಕೆಯಿಂದ ಎದೆ ಡವಡವನೆ ಬಡಿದುಕೊಳ್ಳು : ತಲ್ಲಣಿಸಿ ಹೋಗುತ ಬರುತ್ತದೆ ಡಿಳ್ಳವೋ[ಪಾಠಾಂ. ವಾ]ಗುತ್ತಿರನೆ ಲಕ್ಷ್ಮೀವಲ್ಲಭಂ ನಂದೀಶ್ವರನ ಪೇರುಸುರೊಳಗೆ ತೊಡಕಿ (ಬಸಪು. ೫೪-೯೦) : ತಳ್ಳವಾಱಿಸಿ ರಾಮನ ತಂದುಕೊಡುವೆನು ಡಿಳ್ಳವೋ[ಪಾಠಾಂ. ಡಿಳ್ಳಿಯೋ]ಗದಿರದೆ ಯೊಳಗೆ (ಕುರಾಸಾಂ.೨೫-೩೩). **ಡಿಳ್ಳಹೋಗು:** ಅಳ್ಳೆದೆಯವಳು ರೂಪಾಣಿ ಯೊಬ್ಬಳು ಲಜ್ಜೆಯಿಲ್ಲದೆ ನಿನಗೆ ಎರಗಿದಳೆಂದರೆ ಈ ಪದ್ಮಿನಿ ಡಿಳ್ಳಹೋಗು ವಳೇ (ಮಾಮಲ್ಲಿ. ೧೦೭). [ ಡಿಳ್ಳ (<ಢಿಳ್ಳ) + ಪೋಗು₁ ]

**ಡಿಳ್ಳಸ** (ನಾ). ದುರ್ಬಲತೆ ; ದೀನತೆ : ಕಳವಳವೊಳಗೆ ಹೊಱಗೆ ನವಾಯಿ ಡಿಳ್ಳಸವೊಳಗೆ ಹೊಱಗೆ ಸಘಾಡಮದ . . . ಮಹೀಶ ಹದನಿದು ನಿನ್ನ ನಂದನನ (ಕುವ್ಯಾಸ. ೨-೦). 'ಡೊಳ್ಳಾಸ' ಪರಾ. [ <ಢಿಳ್ಳ ]

**ಡಿಳ್ಳಾಯ₁, ಢಿಳ್ಳಾಯ** (ನಾ). [ನಾಟ್ಯ] ಒಂದು ಬಗೆಯ ನೃತ್ಯ : ತಾಳವಟ್ಟನಂ ನುಡಿವ ಮೆಲ್ಲಡಿಗಳೊಡನೊಡನೆ ಡಿಳ್ಳಾಯದಿಂ ಡೆಂಡಣಿಸ ತೊಡಗಿತು (ಸೌಂದಪು. ೮-೧೩) ; ಡಿಳ್ಳಾಯದುರುಕಾಲರವೆಯ[ರವದ] ಚೆಲ್ವಡರೆ (ರೇವಣ. ೩೨-೪೯). **ಢಿಳ್ಳಾಯ:** ಝುಂಕೆ ಥಾಳ ಢಿಳ್ಳಾಯ[ಪಾಠಾಂ. ಡಿಳ್ಳಾಯ]ಚಂಡಣೆ . . . ಉಲ್ಲಾಸದಚ್ಚರಿವಡೆಯೆ ನರ್ತಿಸುತ್ತುಮಿರೆಯುಂ (ಶಾಂತೀಶ್ವ. ೧೬-೭೭ ವ). [ <ಸಂ. ಡಿಲ್ಲಾಯಾ ]

**ಡಿಳ್ಳಾಯ್ಯ₂** (ನಾ). ಮೋಸಗಾರಿಕೆ ; ವಂಚಕತನ ; ಠಕ್ಕು : ನುಸುಳು ನೆಲೆ ಡಿಳ್ಳಾಯ [ಪಾಠಾಂ. ಡಿಳ್ಳಾಯ್ತು, ಡಿಳ್ಳಾಸ]ಪೈಸರ ಬೆಸುಗೆ ಬಿಗುಹುಳು ಕೊತ್ತು ಕಲೆಗಳ ರಸದ ಪಸರವನಟಿಯಬಾರದು ವಿಗಡ ವಿಟರುಗಳ (ಕುವ್ಯಾ.ಅ. ೧೫-೨೫). [ ? ]

**ಡಿಳ್ಳಾಯಿ** (ನಾ). = ಡಿಳ್ಳಾಯ್ಯ₁ : ನುಣ್ಪೋಳ ಡಿಳ್ಳಾಯಿಯಿಂ ಮೃದು ಹಸ್ತಾಯತದಿಂ . . . ಸಲೆ ರಾಗಮಂಜರಿ ಕರಂ ಮೇಳೈಸಿದಳ್ ಲಾಸ್ಯಮಂ (ದಶಕು. ೮-೧೬೪) ; ಪಯಪಾಡು ನಿಜ್ಜವಣೆ ಚಾಳೆಯ ಮು ಲ್ಲಾ ಸ ೦ ತಿರುಂಪು ತಡವಿತ್ತಡ ಮುನ್ನಯನವಿಶೇಷಂ ಡಿಳ್ಳಾ[ಪಾಠಾಂ. ಲ್ಲಾ]ಯಿಯ ಲುಳಿಪುರಿ ದುಸುರಮಸೆವಿನಂ ನರ್ತಿಸಿದಳ್ (ಧರ್ಮಪ ೨-೨೬).

[ ಸಂ. ಡಿಲ್ಲಾಯಿ? ]

**ಡಿಳ್ಳಿತ** (ನಾ). ಭಯಗೊಳಿಸಿದುದು ; ಬೆದರಿಸಿದುದಂ ; ಕುಗ್ಗಿಸಿದುದು: ಡಮರುಗಧ್ವತ ಡಾಮರನೆರ್ದೆಡಿಳ್ಳಿತ ತ್ರ್ಯೆವುಲಡೀಂಠಾಂಧಕ (ಪ್ರಭುಪು. ೫-೧೬೪). [ <ಥಿಳ್ಳ ? ]

**ಡಿಳ್ಳಿಸು, ಡಿಳ್ಳಯಿಸು, ಡಿಳ್ಳೈಸು, ದಿಳ್ಳಿಸು** (ಕ್ರಿ). ೧. ನಡುಗು; ಕಂಪಿಸು; ಹೆದರು; ಭಯಪಡು: ನುಣ್ಗೊರಳಂ ಕಂಡು ವಿಳಾಸದಿಂದೆ ಸರಿಯಾಯ್ತಿಲ್ಲೆಂಬ ಲಜ್ಜಾಭರಾತುರದಿಂದಂದೊಳಗೆಯ್ದಿ ಡಿಳ್ಳಿಸಿ ಜಲಂ ಪೊಕ್ಕಿರ್ದುದು . . . ಆ ಕಂಬು (ಬಾಧಪು. ೯-೭೧) ; ಡಿಳ್ಳಿಸಿದವಂ ಸ್ಖಲಿತನಾ ಪ್ರುಸ್ಕಂದನಕ್ಕು (ಮಂಗರಾ.೮೯-೩೯); ಕಳ್ಳನೊಳಗು ಡಿಳ್ಳಿಸಿ ಸರಿಯಲಾವ ಕಡೆಯೊಳು ಪೋಪು ಪಾಯವಟ್ಟಿಗಳಟಿಯದೆ (ಸಿಂಗಿರಾ. ೧೧-೧೨) ; ಜಲ್ಲಿದುಂಬಿಗಳ ಝಂಕಾರಕ್ಕೆ ಮುನಿಜನ ಡಿಳ್ಳಿಸಿತೇನ ಹೇಳುವೆನು (ಮೋಹತ. ೭-೧೧) ; ಹುಸಿಯಲ್ಲ ನನ್ನನಾಗಿನಿಸಪ್ಪುವಾಗ ಡಿಳ್ಳಿಸಿತೆದೆ ಜುಮ್ಮನೊಸರಿಸಿ (ಭರತ. ೯-೧೦೦). ೨. ಭಯದಿಂದ ನಡುಗಿಸು ; ಗಾಬರಿಗೊಳಿಸು ; ಎದೆಗುಂದಿಸು ; ಗಾಸಿಪಡಿಸು : ದಿಗಿಲು ಡಿಳ್ಳಿಸಿಯೆನ್ನ ಚಿಕ್ಕದೇವನೃಪನ ಬಗೆಯಲಿ ತಾಳ್ದ ಶ್ರೀರಂಗ ಬಲ್ಲಹನನಗಲದೆ ನೆರೆದಿರೆಂದಪುದೀ ಹದನ (ಮದಿಕ್ಕಾ. VI, ೧೬೨೯ ಶೃಂಗಾರ ಸೂಕ್ತೋದಾಹರಣ). ೩. ದುರ್ಬಲಗೊಳಿಸು;ಶಕ್ತಿಹೀನವಾಗಿಸು; ಕುಗ್ಗಿಸು. ಡಿಳ್ಳಯಿಸು : ೧. ರಾಜೇಂದ್ರ ಶಿಖಾಮಣಿ ತನ್ನಯ ಭೂರಿ ಬಳಂಬೆರಸು . . . ಧಾರಿಣಿ ಡಿಳ್ಳಯಿಸುವವೊಲ್ ಬಡಗಣ ದಾರಿವಿಡಿದು ನಡೆತಂದು (ಜಯಶಾ. ೯-೬). ಡಿಳ್ಳೈಸು : ೧. ಅಪಯಶಂಬಡೆದೆನೆಂದತಿ ನಯಂಗುಂದಿ ಕಂದಿತ್ತಲೆರ್ದೆ ಡಿಳ್ಳೈಸಿ ಗುರುಪದೋಚಿತ ಸಲಿಲಮಂ ಅತಿಶಯದೊಳಾಂತು (ಕೊಟ್ಟೂಬ. ೧೫-೬೨). ದಿಳ್ಳಿಸು : ೧. ಮೇಲಣ ಲೋಕ ದಿಳ್ಳಿಸುತಿಹುದಾ ಮಹಾವ್ಯಾಳ ತುಡುಕೆ ಬಿಲ್ಲ ಕೋಲ (ನಾಗಕು. ೧೦-೬). [ ಡಿಳ್ಳ (<ಥಿಳ್ಳ) + -ಇಸು₃ ]

**ಡಿಳ್ಳು** 'ಥಿಳ್ಳ' ನೋ.

**ಡಿಳ್ಳುಹೋಗು** 'ಡಿಳ್ಳವೋಗು' ನೋ.

**ಡಿಳ್ಳೈಸು** 'ಡಿಳ್ಳಿಸು' ನೋ.

**ಡೀ** (ನಾ). ಒಂದು ಅನುಕರಣ ಶಬ್ದ ; ಡಿಕ್ಕಿ. 'ಡೀಕೊಡು' ಪರಾ.

**ಡೀಕಾಡು** (ನಾ). ಸೇಡನ್ನಿಟ್ಟುಕೊಳ್ಳುವುದಂ ; ಜಿದ್ದು ; ಮಾತ್ಸರ್ಯ; "ಜಿದ್ದಾಟ" (ಜಾನಕೋ. ೬೩). [ ಡೀಕು₁ + ಆಡು₂ ]

**ಡೀಕು** 'ದೇಕು₁' ನೋ.

**ಡೀಕೊಡು** (ಕ್ರಿ).=ಡಿಕ್ಕಿಕೊಡು ೧ : ತಗರುಗಳು ಮಹಾರಭಸದಿಂದ ತಲೆ ತಲೆಗೆ ಡೀಕೊಟ್ಟು ಕಾದಿದುವು (ಭಾರವೀ. ೧೧೮). [ ಡೀ + ಕೊಡು₁ ]

**ಡೀಕೊಳ್ಳು** (ಕ್ರಿ). ಡಿಕ್ಕಿಹೊಡೆಸಿಕೊಳ್ಳು ; ತಿವಿಸಿಕೊಳ್ಳು: (*).

[ ಡೀ + ಕೊಳ್ಳು₁ (<ಕೊಳ್₁) ]

**ಡೀಗು** 'ಥೀಗು' ನೋ.

**ಡೀನ** (ಗು). ೧. ಆಕಾಶದಲ್ಲಿ ಹಾರಾಡಿದ,-ಸಂಚರಿಸಿದ. (ನಾ). ೨. ಹಾರುವಿಕೆ ; ಹಾರಾಟ. [ ಸಂ. ]

**ಡೀಲ** 'ಥಿಳ್ಳ' ನೋ.

**ಡೀಲಿ** 'ಡೇಲಿಯಾ' ನೋ.

**ಡೀಲು** 'ಥಿಳ್ಳ' ನೋ.

**ಡೀಹೊಡೆ** (ಕ್ರಿ).=ಡಿಕ್ಕಿಕೊಡು : (*).

[ ಡೀ + ಹೊಡೆ₁ (<ಪೊಡೆ₁) ]

**ಡುಂಡುಕ** (ನಾ). ೧. ಎರಡು ತಲೆಯ ಹಾವು ; ಡುಂಡುಭ. ೨. ವಿಷವಿಲ್ಲದ ನೀರುಹಾವು; ಒಳ್ಳೆ: ಭಾನುತೇಜವ ರಾಹು ಕೊಂಡಲ್ಲಿ ಸೋನೆಯ ಡುಂಡುಕ ತನ್ನಯ ಕೇಣವನೆತ್ತಿದಂತೆ (ಸುಂಕಬಂ. ೫೪). ೩. "ಹೆಮ್ಮರ; ತಿಗಡುಮರ" (ಅಮರ. ೮೬೪). ೪. ದುರ್ಗಸಿಂಹನ ಪಂಚತಂತ್ರದಲ್ಲಿ ಬರುವ ಒಂದಂ ತಿಗಣೆಯ ಹೆಸರು : ಡುಂಡುಕನೆಂಬ ತಿಗುಣೆ ಮಾಡಿದ ದೋಷದಿಂ ಮಂದವಿಸರ್ಪಿಣಿಯೆಂಬ ವಸ್ತ್ರಮೃಗಂ ಕೆಟ್ಟುದು (ಪಂಚತಂ. ೧೨೨-೧೬). [ ಸಂ. ]

**ಡುಂಡುಕೆ** (ನಾ). = ಡುಂಡಂಕ : "ಡುಂಡುಭಃ – ಡುಂಡುಕೆ" (ಒಪಧಿ. ೬೪).

[ ಸಂ. ಡುಂಡುಕ ]

**ಡುಂಡುಚಿ** (ನಾ). ಒಂದು ಬಗೆಯ ಚರ್ಮವಾದ್ಯ ; ಗೊರವರು ಬಾರಿಸುವ ವಾದ್ಯ; ಡಮರು: ಪಂಡಿತರುಂ ವಿವಿಧ ಕಳಾಮಂಡಿತರುಂ ಕೇಳತಕ್ಕ ಕೃತಿಯಂ ಕ್ಷಿತಿಯೊಳ್ ಕಂಡರೆ ಕೇಳ್ವೊಡೆ ಗೊರವರ ಡುಂಡುಚಿ[ಪಾಠಾಂ. ಡುಂಡುಂಚಿ]ಯೇ ಬೀದಿವಟಿಯ ಬೀರನ ಕತೆಯೇ (ಧರ್ಮನಾ. ೧-೩೬). 'ಗೊರವರ ಡುಂಡುಚಿ' ಯು ಪುರಾತನ ಕಾಲದಿಂದ ಹೆಸರಾಗಿದೆ (ಕರ್ನಾಪೂ. ೨೬).

[ ? ]

**ಡುಂಡುಬ** (ನಾ). ಒಂದು ಬಗೆಯ ನೀರು ಹಾವು ; ಒಳ್ಳೆ : "ಡುಂಡುಬ – ವಳ್ಳೆಹಾವು" (ಆಕಾನಿ. ೧೧-೧೦). 'ಡುಂಡುಕ' ಪರಾ.

[ <ಸಂ. ಡುಂಡುಭ ]

**ಡುಂಡುಭ** (ನಾ). ೧. ಎರಡು ತಲೆಯ ಹಾವು ; ಇರ್ತಲೆಗುಯ್ಯ ; ಉರಿಶಿಂಗಿ : "ರಾಜಿಲಃ, ಡುಂ[ಪಾಠಾಂ. ದುಂ]ಡುಭಃ-೨ ಎರಡು ತಲೆಗಳುಳ್ಳ ಶಿಖಂಡಿಯೆಂಬ ಸರ್ಪಭೇದದ ಹೆಸರುಗಳು. ಎರಡುತಲೆ ಉರಿಶಿಂಗಿ" (ಸಿದ್ಧಾಂತಿ. ೬೫). ೨. ನೀರುಹಾವು ; ಒಳ್ಳೆ: "ರಾಜಿಳಃ, ಡುಂಡುಭಃ- ಈ ೨ ಒಳ್ಳೆ" (ಹಲಾಯು. ೧೧೬-೨೦) ; ಒಂದು ಕೃಷ್ಣತರುಣೋರಗಂ ಬಂದು ಕೊರ್ಬಿಯಾಡುವ ಡುಂಡುಭಂಗಳಂ ಕಂಡು (ಪಂಚತಂ. ೦೨೩-೨೦). 'ದುಂಡುಭ' ಪರಾ. [ ಸಂ. ]

**ಡುಗಡುಗಿ, ಡುಗುಡುಗಿ** (ನಾ). (ಉಕ) ಆತಂಕ ; ಹೆದರಿಕೆ ; ಭೀತಿ : ನನ್ನ ವ್ಯಾಗ ಯಾವ ಏನು ಹೇಳತಾನೋ ಸರಕಾರಕ್ಕ ಅಂತ ಮೊದಲು ಡುಗಡುಗಿ ಇರ್ತಿತ್ತು (ಪ್ರೇಮಾಶ್ರ. ೨೬೬). ಡುಗುಡುಗಿ : ನೀ ಕಬೂರಾಗತ್ಯೋ ಇಲ್ಲೋ ಅಂತ ನನಗ ಡುಗುಡುಗಿ ಇತ್ತು (ದೀಪಹ. II, ೧೪).

[ ←ಮರಾ. ಡುಗಡುಗೀ, ಡುಗಡುಗ ]

**ಡುಗುಡುಗಿ** 'ಡುಗಡುಗಿ' ನೋ.

**ಡುಣ್ಣ** (ನಾ). ಒಂದು ಬಗೆಯ ನೆಲ್ಲು,-ಬತ್ತ : ಕೊಡಗು ಮಳಲಕಂತಿ ಹರಹಿನ ಡುಣ್ಣಗಳೊಡನೊಪ್ಪುತಿಹ ಬೈರಾವಳಿಯ ಕಡು ಸೊಬಗಾಂತಿಹ ಚಂದ್ರೋದಯ ಶಾಲಿಯೆಡೆವಿಡದೆಸೆದುವರ್ತಿಯಲಿ (ಕಂನವಿ. ೩-೭೧).

[ ? ]

**ಡುಬರಿ** (ನಾ). ೧. ಮೇಲಕ್ಕೆ ದುಂಡಾಗಿ ಉಬ್ಬಿರುವ ಸ್ಥಿತಿ: (*). ೨. ಒಂಟೆಯ ಬೆನ್ನಿನಲ್ಲಿರುವ ಉಬ್ಬು,-ಮೇಲಕ್ಕೆ ಎದ್ದಿರುವ ದುಂಡಗಿರುವ ಭಾಗ : ಅರಬೀ ದೇಶದ ಒಂಟೆಗಳ ಬೆನ್ನಮೇಲೆ ಒಂದೇ ಡುಬರಿ ಇರುವುದು (ಮುಂಬಯಿ. ೩-೬೪). 'ದಂಮ್ಮು' ಪರಾ.

[ ←ಮರಾ. ಡುಬರ, ಡುಬರಾ ]

**ಡುಬಲಿ** (ಗು). ಬೊಜ್ಜು ಬೆಳೆದ; ದಪ್ಪನಾದ ಶರೀರವುಳ್ಳ; ಸ್ಥೂಲ ದೇಹವುಳ್ಳ: ಸುಟ್ಟ ಮೋರೆಯ ಜನರು ನನಗೆ ಡುಬಲಿ ಅಜ್ಜ ಎಂದು ಕರೆಯುತ್ತಾರೆ (ಜಮೀನ್ದಾ. ೩೦).

[ ←ಮರಾ. ಢಬುಲಾ ]

**ಡುಬಾಯಿಸು** (ಕ್ರಿ). ೧. ನೀರಿನಲ್ಲಿ ಮುಳುಗು. ೨. ನೀರಿನಲ್ಲಿ ಮುಳುಗಿಸು. ೩. ಹಾಳುಮಾಡು; ನಾಶಮಾಡು: (ಽ).

[ ಡುಬಾ₀ (ℙ ←ಹಿಂ. ಡುಬಾನಾ) + – ಇಸು₃ ]

**ಡುಬುಕಿ, ಡುಮಕಿ, ಡುಮುಕ್ಕಿ₂** (ನಾ). ೧. ಮುಳುಗುವಿಕೆ. ೨. (ಆಲಂ) ಸೋಲು; ತೇರ್ಗಡೆಯಾಗದಿರುವುದು; ಅಪಜಯ. **ಡುಮಕಿ**: ೨. ಈ ಪಂದ್ಯದಲ್ಲಿಯೂ ಶಾಲೆಗೆ ಡುಮಕಿ (ಲೂಧಿ). **ಡುಮುಕ್ಕಿ₂**: ೨. ಪರೀಕ್ಷೆಯಲ್ಲಿ ಈ ಸಲವೂ ಡುಮುಕಿಯೇ (ಲೂಧಿ).

ಡುಬುಕಿಹೊಡೆ = (ಪರೀಕ್ಷೆ ಮುಂತಾದಂವುಗಳಲ್ಲಿ) ತೇರ್ಗಡೆಯಾಗದಿರು; ಸೋಲು; ಫೇಲಾಗು: ರಾಮುವಿಗೆ ತೇರ್ಗಡೆಯಾಯಿತು, ವೆಂಕಟೇಶ ಡುಬುಕಿಹೊಡೆದ (ಸಂಧ್ಯಾರಾ. ೫೩).

[ ←ಹಿಂ. ಮರಾ. ಡುಬಕೀ ]

**ಡುಬ್ಬ** 'ದುಮ್ಮು₁' ನೋ.

**ಡುಬ್ಬಕೆತ್ತು** (ಕ್ರಿ). ೧. ಬೆನ್ನಮೇಲಿನ ಚರ್ಮವನ್ನು ಸುಲಿ. ೨. (ಆಲಂ) ಸ್ವಲ್ಪವೂ ಬಿಡುವು ಕೊಡದೆ ದಂಡಿಸಿಕೊಳ್ಳು; ಬೊಜ್ಜನ್ನಿಳಿಸು: ಬಡ್ಡಿಯೊಳಗೆ ಡುಬ್ಬಾ ಕೆತ್ತುವ ಸಾವಕಾರ ನೀನಿರಬಹುದು (ಮನವಿ. ೫).

[ ಡುಬ್ಬ (<ದುಮ್ಮು₁) + ಕೆತ್ತು₃ ]

**ಡುಬ್ಬು** 'ದುಮ್ಮು₁' ನೋ.

**ಡುಬ್ಬುಕ** 'ದಬ್ಬುಕ' ನೋ.

**ಡುಮಕಿ** 'ಡುಬುಕಿ' ನೋ.

**ಡುಮುಕ್ಕಿ₁, ಡಿಮುಕಿ** (ನಾ). ಒಂದು ಬಗೆಯ ಚರ್ಮವಾದ್ಯ: ಎಲ್ಲಿಯೋ ಒಬ್ಬ ಹಳ್ಳಿಯ ಹುಡುಗನು ಡುಮುಕಿ ಬಾರಿಸುತ್ತ ಹಾಡುತ್ತಾನೆ(ಅಕ್ಕತಂ. ೭). 'ಟುಮುಕಿ' ಪರಾ. **ಡಿಮುಕಿ**: ಬುಡಬುಡಿಕೆ, ಡಿಕ್ಕಿ, ಡಿಮುಕಿ, ಝಾಲ್ರಿ, ಮದ್ದಳೆ, ಗೋಮುಖಾದಿ ವಾದ್ಯಗಳೂ ಉಂಟು (ಸಿದ್ಧಾಂಶಿ. ೫೫).

[ ←ಮರಾ. ಢುಮಕೀ ]

**ಡುಮುಕ್ಕಿ₂** 'ಡುಬುಕಿ' ನೋ.

**ಡುಮುಕು** (ನಾ). ದಪ್ಪ; ಡೊಳ್ಳು: ಡುಮುಕಾದ ಗಿಡ್ಡದೇಹ; ತೆಂಗಿನ ಕಾಯಿಗೆ ಎರಡೂ ಮಗ್ಗಲು ಮೀಸೆ ಹೊರಟಿದ್ದರೆ ಹೇಗೆ ಕಾಣಬಹುದೋ ಅಂತಹ ಮೋರೆ (ಕುರಿಹಿಂ. ೭೨). 'ಟುಮುಕ' ಪರಾ.

[ ←ಮರಾ. ಢುಮಕೀ ]

**ಡುಮ್ಮ** (ನಾ). ಹೊಟ್ಟೆ ಉಬ್ಬಿದವ. 'ಡುಮ್ಮಣ್ಣ' ಪರಾ.

[ಡುಮ್ಮು (<ದುಮ್ಮು₁) + – ಅ₇ ]

**ಡುಮ್ಮಣ್ಣ** (ನಾ). ಹೊಟ್ಟೆ ದಪ್ಪಾಗಿರುವವನು: ಕೈಕಾಲು ಸಣ್ಣ ಹೊಟ್ಟೆ ಡುಮ್ಮಣ್ಣ (ಗಾದೆ). [ ಡುಮ್ಮ + ಅಣ್ಣ₁ ]

**ಡುಮ್ಮಣ್ಣಿ** (ನಾ). ದಪ್ಪನಾಗಿರುವ ಹುಡುಗಿ; "ಲತ್ಥಮಂತ್ಥ ಹಂಡಿಗಿ" (ರಮಾಕಾಂ. ೨೬೭). [ ಡುಮ್ಮಣ್ಣ + – ಇ₂ ]

**ಡುಮ್ಮಿ** 'ದುಮ್ಮು₁' ನೋ.

**ಡುಮ್ಮು** 'ದುಮ್ಮು₁' ನೋ.

**ಡುರಕಿ** 'ಡುಂಬುಕು' ನೋ.

**ಡುರಕಿಹಾಕು** 'ಡುರುಕುಹಾಕು' ನೋ.

**ಡುರಕಿಹೊಡೆ** (ಕ್ರಿ). = ಡುರುಕುಹಾಕು: (ಽ).

[ ಡುರಕಿ (<ಡುಬುಕು) + ಹೊಡೆ₁ (<ಪೊಡೆ₁) ]

**ಡುರಿಕೆ** 'ಡುಂಬುಕು' ನೋ.

**ಡುರುಕಿಡು, ಡುರ್ಕಿಡು** (ಕ್ರಿ). = ಡುರುಕುಹಾಕು: ಉಭಯಕರ್ಣಂಗಳಂ ನಿಮಿರ್ಚಿ ನೆಲನ ವಡನೆ ಘ್ರಾಣಿಸುತ ಡುರುಕಿಡಲಜಾಂಡದ ಘಟಂ ನಡುಗಿತ್ತು (ನವಮೋ. ೭-೪೫). **ಡುರ್ಕಿಡು**: ಇರ್ಕಿಲದ ದಾನವರನಿಱಿವುತುಂ ಮುಱಿವುತುಂ ಡುರ್ಕಿಡುತ್ತಸುರರಂ ಕಿಡಿಪುತುಂ . . . ವೃಷಭಂ ಪ್ರಹಾರಿಸಿದನು (ಚಿಬಪು. ೪೪-೧೮). [ ಡುರುಕು (<ಡುಬುಕು) + ಇಡು₁ ]

**ಡುರುಕು** 'ಡುಂಬುಕು' ನೋ.

**ಡುರುಕುಹಾಕು, ಡರಿಕೆಹಾಕು, ಡುರುಕಿಹಾಕು, ಢುರುಕೆಹಾಕು** (ಕ್ರಿ). (ಎಮ್ಮೆ, ಗೂಳಿ, ಹಂದಿ, ಗೊಂಕರುಕಪ್ಪೆ ಮೊದಲಾದ ಪ್ರಾಣಿಗಳು) ಕರ್ಕಶ ಧ್ವನಿಮಾಡು; ಗುಟುರುಹಾಕು: ಹಂದಿ ಡುರುಕುಹಾಕಿದ ಶಬ್ದ ಕೇಳಿಸಿತು (ನಡೆದಾ. II, ೧೧೩೪). **ಡರಿಕೆಹಾಕು**: ಕಪ್ಪೆಗಳು ಎತ್ತುಗಳಿಗಿಂತ ಎತ್ತರವಾಗಿ ಡರಿಕೆಹಾಕಬಹುದು (ಪ್ರವಾತೋ. ೬೩). **ಡುರಕಿಹಾಕು**: ಎಮ್ಮೆಯೊಂದು ಮೈಯಲ್ಲಿ ತುಂಬಿದ್ದ ಸೊಳ್ಳೆಗಳೊಂದಿಗೆ, ಡುರಕಿಹಾಕುತ್ತ ಒಳಗೆ ನುಗ್ಗಿಬಿಟ್ಟಿತು (ಮಳಿನಾ. ೨೭); ಎತ್ತುಗಳು ಡುರಕಿಹಾಕುತ್ತವೆ (ಮುಂಬಯಿ. ೩-೧೮). **ಡುರುಕೆಹಾಕು**: ಎರಡು ಗೂಳಿಗಳು ಸೊಕ್ಕಿಗೆ ಬಂದು ಎರಡನೇ ದನಗಳನ್ನು ಇರಿಯುತ್ತ ಡುರುಕೇಹಾಕುತ್ತ (ಮುಂಬಯಿ. ೩-೯೦). [ ಡುರುಕು (<ಡುಬುಕು) + ಹಾಕು (<ಪಾಯ್ಯು₁) ]

**ಡುರುಕೆ** 'ಡುಂಬುಕು' ನೋ.

**ಡುರುಕೆಹಾಕು** 'ಡುರುಕುಹಾಕು' ನೋ.

**ಡುರ್ಕಿಡು** 'ಡರುಂಕಿಡು' ನೋ.

**ಡುರ್ಕು** 'ಡುಬುಕು' ನೋ.

**ಡುಲಿ, ಡುಳಿ** (ನಾ). ಹೆಣ್ಣಾಮೆ: "ಡುಲಿ[ಪಾಠಾಂ. ಢುಳಿ]ಯೆನಲು ಹೆಣ್ಣಾವೆಯಕ್ಕುಂ" (ಮಂಗರಾ. ೧೩೦-೮). **ಡುಳಿ**: 'ಡುಳಿರಾಜ' ಪರಾ.

[ ಸಂ. ]

**ಡುಳಿ** 'ಡುಲಿ' ನೋ.

**ಡುಳಿರಾಜ** (ನಾ). ೧. ಆಮೆಗಳ ಒಡೆಯ; ಕೂರ್ಮಪತಿ; ದೊಡ್ಡ ಆಮೆ. ೨. ವಿಷ್ಣುವಿನ ಅವತಾರಗಳಲ್ಲೊಂದಾದ ಮಹಾಕೂರ್ಮ; ಕವಂತ: ಡುಳಿರಾಜನಿಲ್ಲದೆಡೆ ಧರಣಿ ನಿಲ್ಲುವದುಂಟೆ ನಳಿನಾಪ್ತನಿಲ್ಲದಡೆ ನಡೆವುದೇ ಜಗವು (ದೇವೀಪ್ರ. ೩೭). [ ಡುಳಿ (= ಡುಲಿ) + ರಾಜ ]

**ಡುಳ್ಳಿ** (ನಾ). ವಂಚನೆ; ಸುಳ್ಳು: ತಲ್ಲಣಿಸಿ ನಿಲಲಾಜಿದಾ ಖಳಂ ಕೈಯೊಡನೆ ಡುಳ್ಳಿಯಿಂದಾ ಮುನಿಪನುರುಶಿರೋಲಕ್ಷ್ಮಿಯಂ ಕೊಳ್ಳೆಗೊಂಡೆಡಹುತಂ (ಶರಕು. ೩೫-೨೫); ಡುಳ್ಳಿಯೋ ಸತ್ಯಮೋ ಎಂದೆನೆ (ಹಾಲಾಸ್ಯ. ೩-೧೦-೦೩).

[ ? ]

**ಡುಳ್ಳಿಮನ** (ನಾ). ಸುಳ್ಳುಮನಸ್ಸು; ಕ್ಷುದ್ರಮನ (?): ಕಳ್ಳಕನ್ನಡಿ ಸಾಯಿ ಡೊಳ್ಳು ಕೋಮಟಿಗನಾ ಹುಳ್ಳಿ ನಯಶೂಲಯೇರಿವಾಯುಂಬಗಾದೆ ಡುಳ್ಳಿಮನವು ಯಿದು ಪಾಪವ ಮಾಡ್ವರೆ ಸುಳ್ಳಿಗೆ ಅತ್ಮಗೆಯೆಂದು ವೂಹಿಸುವರು (ಚಿದಾವ. ೧೧-೮). [ ಡುಳ್ಳಿ + ಮನ ]

**ಡುಱುಕೆ** 'ಡುಬುಕು' ನೋ.

**ಡುಱುಕಾರವ** (ನಾ). ಡುರುಕಿನ ಗಟ್ಟಿಯಾದ ಶಬ್ದ; ಗುಟುರು: ತೋರ ಹೋರಿಗಳ ಡುಱುಕಾರವಂ ಗಳದ ಘಂಟಾರವಂ ಪಶುಗಳಂಬಾರವಂ (ಚಿಬಪು. ೧೧-೦೭). [ ಡುಱುಕು + ಆರವ ]

**ಡುಱುಕು, ಡರಕೆ, ಡರಿಕೆ, ಡುರಕಿ, ಡುರಿಕೆ, ಡುರುಕು, ಡುರುಕೆ, ಡುರ್ಕು, ಡುಱುಕೆ** (ನಾ). ೧. (ಎಮ್ಮೆ, ಗೂಳಿ, ಹಂದಿ, ಗೊಂಕರುಕಪ್ಪೆ ಮೊದಲಾದ ಪ್ರಾಣಿಗಳು ಮಾಡುವ) ಒಂದು ಬಗೆಯ ಕರ್ಕಶ ಶಬ್ದ; ಗುಟುರು. 'ಡುಱುಕಿನ್' ಪರಾ. **ಡರಕೆ**: ೧. ಗೂಳಿಯ ಡರಕೆ (ಗುಟುರು) ಇವು ಶಬ್ದಾನುಕೃತಿಯೇ (ಕರ್ನಾಟ. ೩೩೪). **ಡರಿಕೆ**: ೧. 'ಡರಿಕೆಹಾಕು' ಪರಾ. **ಡುರಕಿ**: 'ಡುರಕಿಹಾಕು' ಪರಾ. **ಡುರಿಕೆ**: ೧.

ದೂರದಿಂದ ಡುರಿಕೆ ಕೇಳಿಸಿತು ಅದು ಕಾಡುಹೋರಿಯ ಡುರಿಕೆಯಾಗಿತ್ತು (ಬಂಗಾಹ. ೧೪). ೨. ನಿದ್ದೆಯಲ್ಲಿ ಮೂಗಿನಿಂದ ಹೊರಡುವ ಶಬ್ದ ; ಗೊರಕೆ : ಇಬ್ಬರೂ ಮಹಾ ಕುಡುಕರು . . . ವಿದ್ಯಾಬುದ್ಧಿಗಳ ಪರಿಚಯ ವಾದದ್ದು ಇಲ್ಲಿಯವರೆಗೆ ಇವರ ಡುರಿಕೆ ಮಾತ್ರ (ಕುರಿಹಿಂ. ೧೧೭). **ಡುರುಕು** : ೧. 'ಡುರುಂಕಿಡು', 'ಡುರುಕುಹಾಕು' ಪರಾ. **ಡುರುಕೆ** : ೧. 'ಡುರುಕೆಹಾಕು' ಪರಾ. **ಡುರ್ಕು** : ೧. 'ಡುರ್ಕಿಡು' ಪರಾ. **ಡುಬಿಕೆ** : ೧. ಬಸವನಾಗವಗಡಿಸುತೆದ್ದು ಪುಟನೆಗೆದು ಡುಬಿಕೆಯನಿಕ್ಕು ತವರ ಬಲವರುತ (ಗುರುಚಾ. ೧೧–೮೮).

**ಡುಬುಕೆನ್** (ನಾ). = ಡುರುಕುಂಹಾಕು : ಪಂದಿ ಡುಬುಕೆಂದೊಡೆ ತಾಂ ಡುಬುಕೆಂಬುದೆ ಮಹಾವನಕರಿಯುಂ ವಿದಾರಿಸುವ ಸಿಂಹಂ (ಗಿರಿಕ. ೧–೨೯) : ಪರಪ್ರತಿಭೆಯು ಗುಣ್ಪುಜಿಯದೆ ತಾಮುಂ ಕೆಮ್ಮಗೆ ಡುಬುಕೆಂಬುವು ಕುಕವಿಕೂಪಮಂಡೂಕಂಗಳ್ (ಅನಂಪು. ೧–೪೨) ; ಪಂದಿಯೊಂದು ಡುಬು ಕೆಂದೊಡೆ ಸಿಂಗವುಂಡಲೆವುದೆ (ರಾಮೂಶ್ಮ. ೨೫–೨೩).

[ ಡುಬುಕು + ಎನ್$_1$ ]

**ಡೂಗ** (ನಾ). ೧. ಗೂನುಬೆನ್ನಿನವನು; ಗೂನ ; ಬೆನ್ನುಬಾಗಿದವನು: ೧ನೇ ವಿಷ್ಣುವರ್ಧನನು ಇವನಿಗೆ ಕುಬ್ಜ ವಿಷ್ಣುವರ್ಧನನೆಂಬ ಹೆಸರಿದ್ದ ಕಾರಣ ಇವನು ಡೂಗನಿದ್ದಂತೆ ತೋರುತ್ತದೆ (ಕಥಾಗಿ. ೩೨೪) : ಏನಿಲ್ಲ, ಹಲ್ಲು ಬಿದ್ದಾವೆ, ಮೇಲಾಗಿ ಡೂಗನಿದ್ದಾನೆ (ದೇಯಾನಿ. ೧೫೨). (ಗು). ೨. ಬೆನ್ನು ಬಗ್ಗಿದ ; ಗೂನುಬೆನ್ನಿನ : ಆ ಡೂಗ ಹೆಂಗಸು ಅಂದಿನಿಂದಲೂ ಇಲ್ಲಿಯೇ ಇದ್ದಾಳೆ (ಹೊಸಕ್ಷ. ೧೮೯). [ ಡೂಗು$_2$ + – ಅ$_7$ ]

**ಡೂಗು$_1$** (ಕ್ರಿ). ಬಾಗು ; ವಕ್ರವಾಗು ; ಗೂನಾಗು.

**ಡೂಗಿಕೊಳ್** = ಬಗ್ಗಿಕೊಳ್ಳು ; ಬೆನ್ನನ್ನು ಬಗ್ಗಿಸು : ಅವರ ತಾಯಿ ವೆಂಕಮ್ಮ ಡೂಗಿಕೊಂಡೇ ಅಲ್ಪಸ್ವಲ್ಪ ಕೆಲಸಮಾಡುತ್ತ ಹೊರಗೇ ಇದ್ದಳು (ದಂಬನಾ. ೨). [ ? ]

**ಡೂಗು$_2$** (ನಾ). ಬೆನ್ನು ಬಗ್ಗಿರುವಿಕೆ ; ಗೂನು ; ಕುಬ್ಜತೆ.

**ಡೂಗಾಗು** = ಗೂನುಬೆನ್ನಿನಿಂದ ಕೂಡಿರು ; ಗೂನಾಗು : ಆದೇ ಹೆಂಗಸು ಇನ್ನೂ ಅಷ್ಟೇ ಡೂಗಾಗಿ ಬಿಲ್ಲಿನಂತೆ ಬಾಗಿ ನಡೆಯುತ್ತಿದ್ದಾಳೆ (ಹೊಸಕ್ಷ. ೧೮೮) ; ಯಾವಾಗಲೂ ಡೂಗಾಗಿ ಕೈಯೂರಿ ಇಲ್ಲವೇ ಗಾದಿ, ಗೋಡೆ ಕಂಬಳಿಗಾತು ಕುಳಿತದ್ದೇ ಕಂಡುಬರುವದು (ಬೃಹಜೀ. ೨೪).

[ <ಡೂಗು$_1$ ]

**ಡೆಂಕ** 'ಡಕ್ಕೆ' ನೋ.

**ಡೆಂಕಣ** 'ಡೆಂಕಣಿ' ನೋ.

**ಡೆಂಕಣಿ, ಡೆಂಕಣ, ಡೆಂಕಣೆ, ಡೆಂಕಳಿ, ಡೇಂಕಣೆ, ಢೆಂಕಣ, ಢೆಂಕಣಿ, ಢೇಂಕಣಿ, ಢೇಂಕಣೆ** (ನಾ). ೧. ಕೋಟೆಗೋಳಗದಲ್ಲಿ ಉಪಯೋಗಿ ಸುತ್ತಿದ್ದ ಒಂದು ಯಂತ್ರ; ಕಲ್ಲುಗುಂಡುಗಳನ್ನು ತೂರುವ ಯಂತ್ರ: ಪುದಿದಿರ್ದಟ್ಟಳೆ ಪೆಚ್ಚಿದಾಳ್ವೆಟಿಯುಗುರ್ವಾಗಿರ್ದ ಮೇಲ್ಗೊತ್ತಳಂ ಕದನ ಕೃದ್ಭುತಮಪ್ಪ ಡೆಂಕಣಿ (ಎಕ. V, ಅರಸೀ. ೫–೧೨ ; 1194) ; ಎತ್ತಿಡುತಿರ್ಪ ಡೆಂಕಣೆಗಳಾರ್ದುಟಿ ಪಾಯಿಪ ಗೆಗ್ಗೆ . . . ಪೊಯ್ವ ಲಗ್ಗೆವಟಿ ಬೊಬ್ಬಿಟಿವಬ್ಬರಮಾಗಳದ್ಭುತಂಬೆತ್ತುದು (ಕುಸುಮಾ. ೧೧–೪೧) : ಗೆಗ್ಗೆ ಡೆಂಕಣಿ ಗುಮ್ಮಂ ಪಡಿಗೋಂಟೆಯೆಂಬ ಬಹು ಕೋಟಾಯಂತ್ರ ಸಾಮಗ್ರಿ ತಿಂತಿಣಿಗೊಂಡಾಂತಿರೆ (ಅನಂಪು. ೧೧–೮೩); ತೂಳ್ದಿಡುವ ಡೆಂಕಣಿ ಪೊಯ್ಪುರಿ ಯೆಣ್ಣೆ ಕಾಸಿ ಸೂಸುವ ಮಳಲೆಂಬಿವೆತ್ತಲುಮಗುರ್ವಿಸೆ (ಪುಷ್ಪಪು. ೬–೭೪): ಸಡೆಡೆಂಕಣಿ ಸೂಸುಡೆಂಕಣಿ ಬಲುಗುಂಡನಿಡುವ ಡೆಂಕಣಿ ತೋಟಿದೆಡೆಗೆ ಸಿಡಿಪಡೆಂಕಣಿ ರಾಯಡೆಂಕಣಿಗಳ ಸಾಲು ಬಿಡದೊಪ್ಪಿದುವು (ಕುರಾಸಾಂ. ೪೨–೩೯) ; ತರತರದೊಳಿರಿಸಿರ್ದ ಬಲ್ಲೊಡಲೆಯ ಡೆಂಕಣಿಯ . . . ಮೊತ್ತಂ ಗಳಾಳ್ವೇರಿಯೊಳ್ ಪಸರಿಸಿದುವು (ಕಬಪು. ೪೨–೧೧). ೨. ಕೊತ್ತಳಗಳ ಮೇಲೆ ಪೊದರಿನಂತೆ ಒತ್ತೊತ್ತಾಗಿ ಅಳವಡಿಸಿ ನಿಲ್ಲಿಸುವ ಉದ್ದವಾದ ಸಬಳದಂತಹ ಒಂದು ಆಯುಧ ವಿಶೇಷ : ನಟ್ಟ ಡೆಂಕಣಿಗಳೋ ಹಗೆಗಳನು ದುರ್ಗವಟಿಯಟ್ಟಲೆತ್ತಿದ ಹಲವು ಕೈಯೊ (ಹದಕಾ. ೧–೩೭) ; ಅಟ್ಟಳೆಯಾಳ್ವೇರಿ ಕೊತ್ತಲಂಗೊಳಳವಟ್ಟಡೆಂಕಣಿ ಸಬಳಗಳು ನಟ್ಟರಂತೆಯದ ಕಂಭಗಳಿಂದಾ ದುರ್ಗ ಸೃಷ್ಟಿಗೆ ಪೊಸತಾಗಿಹುದು (ಜೀವಂಸಾಂ. ೮–೧೧) ; ದೇವತೆಗಳ ಮುಟ್ಟಿ ತಿವಿದ ಸಬಳಗಳೊಯೆಂದೆನಲಲ್ಲಿ ನೆಟ್ಟ ಡೆಂಕಣಿಗಳೆಸೆದವು (ಕುರಾಸಾಂ.೧೭–೧೪): ಕನ್ನಡದಲ್ಲಿಯ ಕೋಶಕಾರರೆಲ್ಲರೂ ಧ್ವಜಸ್ತಂಭ ಎಂಬ ಅರ್ಥ ಹೇಳಿರುವರು. ಆದರೆ ಕೋಟೆಗಾಳಗದಲ್ಲಿ "ಮಾರಿಮೊಗದಡೆಂಕಣಿ" ಮಾಡುವ ಹಿಂಸಾಕಾರ್ಯವನ್ನು ನೋಡಿದರೆ, ಅದೊಂದು ಭವ್ಯವಾದ ಆಯುಧ ವಿಶೇಷ (ಕರ್ಣಾಜ. ೫೭). 'ಡೊಂಕಣಿ' ಪರಾ. ೩. ಕೋಟೆಯ ಮೇಲಿನಬುರುಜು; ಬತ್ತೇರಿ: ಬಳಸಿದ ಕೊತ್ತಳಂ ಸೊಗಯಿಪಾಳ್ವರಿ ಡೆಂಕಣಿ ಸಾರವಾಗಿಯಗ್ಗಳಿಸುವ ಗೋಪುರಂ (ಗಿರಿಕ. ೨–೭೯); ಅಗಟು ಪ್ರಾಕಾರದಿಂ ಡೆಂಕಣಿಯಿನನುಪಮದ್ವಾರದಿಂ ಸತ್ಪತಾಕಾವಳಿಯಿಂದಾಳ್ವೇರಿ ಯಿಂ . . . ಬಗೆಗೊಳ್ಪಂ ಬೀಜು (ದಶಕು. ೬–೯) ; ಇತ್ತರದೊಳುದ್ದಕ್ಕೆ ಕೋಂಟೆಯಕೊತ್ತಳಂಗಳ ಸಂದಿಸಂದಿಯೊಳೆತ್ತಿಸಿದನಟ್ಟಣೆಗಳಂ ಡೆಂಕಣಿಗಳಂ (ಬಸಪು. ೧೭–೯); ಸಿದ್ಧ ಕಂಡನು ಮುಂದೆ ಮಾರ್ಗವ ಹೊದ್ದಿತೆನೆ ಕೊತ್ತಳದ ಡೆಂಕಣಿ ಚಿತ್ರುಕೆಲಸದಿ ಪಚ್ಚೆಲೋಹದಯೆಸೆವ ಕವಗಳನು (ರೇವಣ. ೩–೩): ಬಗೆವೆತ್ತ ಪವಳ ಡೆಂಕಣಿಗಳಿಂದಂ ಮುತ್ತು ಬಿಗಿದಟ್ಟಣಗಳಿಂದೆ . . . ಝಗಝಗಝಗಿಸುತೊರ್ಪಿದುದು (ಜೀರಮು. ೧–೩೨) ; ಗಗನಲಂಬಿತ ನೀಲ ದಟ್ಟಳೆಯ ಕಟ್ಟಳೆಯ ಮಣಿಮಯದ ಡೆಂಕಣಿಗಳ (ರುಕ್ಮಾಂಗ. ೬–೪) ; ಕ್ರಮದ ಡೆಂಕಣಿ ಕೋಟೆ ಗೋಪುರಗಳಿಂದ ಆಶ್ಚರ್ಯವಾದಂಥ ಅರಮನೆ ಗಳಿಂದ (ಯನಳ. ೯). ೪. ಕೋಟೆಯ ಮೇಲಿನ ಬುರುಜುಗಳ ಮೇಲೆ (ಸಾಮಾನ್ಯವಾಗಿ ಎಂಟು ಕಡೆಗಳಲ್ಲೂ) ನೆಟ್ಟಿರುವ ನಿಶಾನಿಯೊಡ ನಿರುವ ಅಥವಾ ನಿಶಾನಿಯಿಲ್ಲದ ಧ್ವಜಸ್ತಂಭ : ಕುಣಿವ ಪಲ್ಲವ ಝಲ್ಲರಿಯ ಡೆಂಕಣಿಯ ತಲೆ ಚಮರಿಗಳ ಗಗನಾಂಗಣವನೆಳೆವ ಪತಾಕೆಗಳ . . . ಲಗ್ಗೆವಟಿಗಳಲೆಸೆದುದಾ ದುರ್ಗ (ತೊರರಾ. ೬–೭–೧೭) ; ಎತ್ತಿದ ಛತ್ರ ಚಾಮರ ಚೌಕ ಡೆಂಕಣಿ ಮತ್ತು ಕಾಳಾಳ ಘರ್ಜನೆಯು (ದೇವಾಪು. ೩–೧೯೩) ; ಹವ್ಮಿನಲಿ ಸಗ್ಗಿಗರ ಕರೆವಂತೆ ಕೈಯೆತ್ತಿ ಗವ್ವನೆಯ ಡೇಂಕಣ ಗಳೆಸೆಯೆ (ಪ್ರಾಭರಾ. ೧–೩೭) ; ನೋಟಕರ ಕಣ್ಗೆ ಕಾಣಿಸಿದುವೆಣ್ಣೆಸೆವ ಡೆಂಕಣಿಯ ಪಳವಿಗೆಗಯ್ಗಳು (ಜ್ಞಮಿಥಾ. ೧೭–೯); ಕುಂಭಿನಿ ಕೈನೀಡಿ ಕರೆವೋಲು ಡೆಂಕಣಿ ಮುಂಬರಿದೆಸೆದುವರ್ತಿಯಲಿ (ಕಂನವಿ. ೬–೮) ; ಅಗಣ ತೋನ್ನತ ಹರಿಮಯದ ಡೆಂಕಣೆಗಳೊಪ್ಪಿದುವು (ಕೋಗಯು. ೬–೮) ; ಜೀವಮಾನದ ಕಟ್ಟಡದಲ್ಲಿ ಆ ಒಂದು ಕ್ಷಣದ ಬಾಳು ಗೋಪುರದ ತುದಿಯ ಕಳಶದ ಚಿನ್ನದ ಡೆಂಕಣಿಯಾಗಿ ಸ್ವರ್ಗದೊಡನೆ ಸರಸವಾಡಿತು (ಮಲೆವು. ೫೨). **ಡೆಂಕಣ** : ೧. ಇಡಿಸುವ ಡೆಂಕಣಕ್ಕೆ ನೆಲವಾಳಿಗೆ ಕೊತ್ತಳದಂಬು ಗಂಡಿಯಿಂದುಡುಗದೆ . . . ಗಡಣಿಸೆ ಕಾದುತಿರ್ದುದು ಮಹೇಂದ್ರ ಪದಾತಿನಿ ಮುತ್ತಿ ಸುತ್ತಲುಂ (ಚಂದ್ರಪು. ೫–೧೧೭). ೩. ಇರಲಿಯಿತ್ತೊಳ ಗೇಳುಕೋಟೆಯು ತೆರನು ಮರಕತ ಸುತ್ತು ಮೇಲುರುತರದ ಕಿಂಜಿನ ಸುತ್ತು ತೆನೆಗಳು ಡೆಂಕಣಟ್ಟಣೆಯೂ (ಜಿರಾಮಾ. ೨೪–೨೬). **ಡೆಂಕಣೆ** : ೧. ನಿಟಿಸಿದ ಬಸಿಯೊಳಂ ಪೂಸಿದ ಡೆಂಕಣೆಯೊಳಂ . . . ಮೊನೆಯಂ ಪೂಣಿಸಿದ ಕೊಂತದೊಳಂ ಕೈಗೆಯ್ದು ಕಟ್ಟಾಸುರವಾಗೆ (ಅನಂಪು. ೧೧–೮೨ ವ) ; ಡೆಂಕಣೆ[ಪಾಠಾಂ. ಣಿ]ಯ ಗವಣೆಗಳ ಕೋಟೆಯ ಕೊಂಕುಗಳ ಕೊತ್ತಳದ ತೆನೆಗಳ . . . ದುರ್ಗವನೀಕ್ಷಿಸುತ (ನಿಥಾಗ. ೧೧–೩೭–೩೫); ಡೆಂಕಣೆ ಕವಣೆ ಧ್ರುವಲೋಕವ ಪಾಯಲಿಡುವ ಮಕರಡಿಬ್ಬ ಕವಿದ ದುರ್ಗದೊಳೆಹವು (ಸೌಂದಕಾ. ೫–೩೪). **ಡೆಂಕಳಿ** : ೪. ಪಳಹರದ ಪಲ್ಲವದ ಸತ್ತಿಗೆಯಗಳ ವಿಡಾಯಿಯಯಲರಿಬಿರುದ ಡೆಂಕಳಿಯ ಸೀಗುರಿ ಪೊದರುಗಳ ತೋಮರದ

ಸಂದಣೆಯು (ಕುಮಾ.ದ್ರೌ. ೭೧೩. ಪರಿ. ೩೯೭). **ಡೇಂಕಣೆ :** ೩. ಮೂರು ಸುತ್ತಿನ ಪರಿಧಿ ತಾಂಬ್ರದಿ ತೋರೆ ತೆನೆ ಡೇಂಕಣೆಗಳಟ್ಟಣೆ (ಬಿಜ್ಜ.ಪು. ೨೦-೨೦).

**ಢೆಂಕಣ :** ೧. ವರ್ಗಚತುರ್ಥಾಕ್ಷರಂಗಳ್ಗೆ . . . ಢೊಂಕಣ. ಢೆಂಕಣ [ಪಾಠಾಂ. ಣಿ]ಅಥಾಳಂ (ಢಾಳಂ) (ಶಮದ. ೧೫ ಪ್ರಯೋ). **ಢೆಂಕಣಿ :** ೧. ಇಟ್ಟಿಡುವ ಢೆಂಕಣಿ ಶಿಲೋಚ್ಚಿರಮೆನಿಕ್ಕು (ಮಂಗರಾ. ೫೭-೫). **ಢೇಂಕಣಿ:** ೧. ಆತುರದಿಂ ಢೆಗ್ಗೆ ಢೇಂಕಣಿ ನೆಲಗುಮ್ಮ ಮಾತೇನು ಗಗನದಟ್ಟಳೆಯು (ಅನಂತ. ೧೮-೫೨). **ಢೇಂಕಣೆ :** ೧. ಕೆಲ್ಲೆ ಹೆಗ್ಗೊಬಿದುಜಿಯೆಣ್ಣೆ ಕಾಯ್ದ ಮಣಲಗ್ಗದ ಢೇಂಕಣೆ (ಸೌಇಇ. XX, ೧೨೬-೪ ; 1186).

ಡೆಂಕಣಿಯ ಗುಂಡು = ಡೆಂಕಣಿಯಂ ಯಂತ್ರದಿಂದ ಚಿಮ್ಮಿಸುವ ಇಡುಗುಂಡು : ಉಟ್ಟ ವಸ್ತ್ರವು ಬಳಸಿದ ಕೋಂಟೆಯಗಟಿನೆ ಕಟ್ಟದ ಕಟಿಸೂತ್ರವೆಸೆಯೆ ಬಟ್ಟಮೊಲೆಯು ಡೆಂಕಣಿಯ ಗುಂಡಿಂದಳವಟ್ಟ ಜಂಗಮ ದುರ್ಗದಂತೆ (ಅಂಜಚ. ೮-೮೪).

**ಡೆಂಕಣಿಕಾಜಿ** (ನಾ). ಡೆಂಕಣಿಯನ್ನು ಬಳಸುವುದರಲ್ಲಿ ನಿಯುಕ್ತ ನಾದವನು : ಕಾಳಗದಲಿ ಡೆಂಕಣಿಕಾಜಿ ಡಾವುದ (ದೊಂಕಲಾ. ೧೯೪೦, ಸಿರಿಸಿ. ೮೨-೮ ; ?). [ ಡೆಂಕಣಿ + – ಕಾಜಿ ]

**ಡೆಂಕಣಿಕುಲ** (ನಾ). ಡೆಂಕಣಿಗಳ ಸಮೂಹ,–ಗುಂಪು : ಇಡಂಗುಂಡು ಮೊದಲಾದುವನ್ನು ಚಿಮ್ಮುವ ಯಂತ್ರಗಳ ಸಮೂಹ : ಬೆಲೆಗೆಯ್ ಉಲನೆಯನೆಂಬುದು ವೇಶ್ಯಾವಲಿಯೊಳ್ ಕೊಲೆಗೈಯೆಂಬುದು ಡೆಂಕಣಿ ಕುಲದೊಳ್ (ಉದ್ಯದೀ. ೨-೧೩).

[ ಡೆಂಕಣಿ + ಕುಲ ]

**ಡೆಂಕಣಿಕ್ಕೈ** 'ಡೆಂಕಣಿಗೈ' ನೋ.

**ಡೆಂಕಣಿಗೈ, ಡೆಂಕಣಿಕೈ, ಡೆಂಕಣೆಗೈ** (ನಾ). ಗುಂಡನ್ನು ಚಿಮ್ಮಿಸಲು ಡೆಂಕಣಿಯಂತ್ರಕ್ಕೆ ತುದಿಯಲ್ಲಿ ಜೋಡಿಸಿರುವ ಮಾರಿಮೊಗದ ಅಥವಾ ಹಂದಿ ಮೊದಲಾದ ಪ್ರಾಣಿಗಳ ತಲೆಯ ರಚನೆ ಇರುವ ತೋಳಿನ ಆಕಾರದ ಕೈ : ಡೆಂಕಣಿಯಲ್ಲಿ ಅಳವಡಿಸಿರುವ ಚಿಮ್ಮು ಗೋಲು : ಬಲಿವ ಪಟಲ ಬೇಡಿ ಡೆಂಕಣಿ[ಪಾಠಾಂ. ಣೆ]ಗೈ ಪಂದಿದಲೆ ತಿರುಗುಣಿ ಭೀಮಗದೆಯ ಬಲಿದು ಕೆತ್ತುವ ಬಡಗಿ (ಕುರಾಸಾಂ. ೩೭-೫೮). **ಡೆಂಕಣಿಕೈ :** ಪಿಡಿಗುಂಡಿಟ್ಟು ಕವಣೆಯಾಂತ ಸತಿಯರ ನಿಡುದೋಳ್ಗ ಳೆಸೆದುವಾ ಕಂತು ಕಡುಮುಳಿಸಿಂ ಪಾಂಥರೆರ್ದೆಗೋಂಟೆಯ ಮುತ್ತಿಯಿಡುವ ಡೆಂಕಣಿಕೈಗಳಂತೆ (ಶ್ರೀಪಾಲ. ೧-೫೨) ; ಡೆಂಕಣಿಕೈ ಡೆಗ್ಗೆವರೆ ಪಾರೆ . . . ಶರಗಳ ಸಂಕುಳವೈದಿತು (ಕುರಾಸಾಂ. ೪೧-೩೧). **ಡೆಂಕಣೆಗೈ :** ಮೇಲಿನ 'ಕುರಾಸಾಂ. ೩.೭–೫೮'ರ ಪ್ರಯೋಗದ ಪಾಠಾಂತರವನ್ನು ನೋಡಿ.

[ ಡೆಂಕಣಿ + ಕೈ$_2$ (<ಕೆಯ್$_2$) ]

**ಡೆಂಕಣಿಜಂತ್ರ** (ನಾ). ಇಡುಗುಂಡುಗಳನ್ನು ಚಿಮ್ಮಿಸುವ ಯಂತ್ರ : ಗಿರಿಯ ಡೆಂಕಣಿಜಂತ್ರವನು ತರಹರಿಸುವವರಾರರಸ (ಕುಮಾ.ಕ. ೩೩-೩೬).

[ ಡೆಂಕಣಿ + ಜಂತ್ರ ]

**ಡೆಂಕಣೆ** 'ಡೆಂಕಣಿ' ನೋ.

**ಡೆಂಕಣೆಗೈ** 'ಡೆಂಕಣಿಗೈ' ನೋ.

**ಡೆಂಕಳಿ** 'ಡೆಂಕಣಿ' ನೋ.

**ಡೆಂಕೆ$_1$** 'ಡಕ್ಕೆ' ನೋ.

**ಡೆಂಕೆ$_2$** (ನಾ). ಗೋಡೆಗಳ ಮೇಲೆ ಅಥವಾ ಕಂಬಗಳ ಮೇಲೆ ಮನೆಯ ಮಾಡನ್ನು ಹೊರಲು ಹಾಕಿದ ಮರದ ಅಡ್ಡೆ ; ಜಂತೆ : ಮೃಗ ಲಕ್ಷ್ಮನುದಯದೊಳ್ ನಿಲಿಸುಗೆ ಕಂಬಮನಿಂದುಸುತನ ಲಗ್ನಂಬರೆ ಪಟ್ಟುಗೆ ಡೆಂಕೆ[ಪಾಠಾಂ. ಜಂತೆ]ಗಳಂ (ಲೋಕೋಪ. ೩-೨೬) ; ಢಕಾರಕ್ಕೆ ಡಕಾರಂ– ಗಾಢ–ಗಾಡ ; ಢಕ್ಕಾ–ಡಕ್ಕೆ ; ಢೆಂಕಾ–ಡೆಂಕೆ (ಶಮದ. ೨೫೫ ಪ್ರಯೋ).

[<ಪ್ರಾ. ಢೇಂಕಾ = ಬಾವಿಯ ಮೇಲಿನ ಅಡ್ಡತೊಲೆ ]

**ಡೆಂಕೆಬರ** (ನಾ). ಭಯಂಕರವಾದ ಕ್ಷಾಮ ; ಬರಗಾಲ : ಭರಮಪ್ಪ ನಾಯಕನ ಆಳಿಕೆಯಲ್ಲಿ ವೀರಕ್ಷಾಮ ಪ್ರಾಪ್ತವಾಯಿತು. ಇದಕ್ಕೆ 'ಡೆಂಕೆಬರ' ವೆನ್ನುತ್ತಾರೆ (ಚಿತ್ರಪಾ. ೮, ಉಪೋದ್ಘಾತ). 'ಡೋಗಿಬರ' ಪರಾ.

[ ಡೆಂಕೆ$_0$ + ಬರ$_1$ (<ಬಱ) ]

**ಡೆಂಗಿಜ್ವರ** (ನಾ). "ಮೈಮೇಲೆ ಗುಳ್ಳೆಗಳೆದ್ದು ಜ್ವರಬಂದು ಕೀಲುಗಳಲ್ಲಿ (ಸಂಧಿಗಳಲ್ಲಿ) ತೀವ್ರಯಾತನೆಯಾಗುವ ಸೋಂಕುರೋಗ: 'ಡೆಂಗಿ ಜ್ವರ" (Dengue. ಇಂಕನಿ.). [ ಡೆಂಗಿ$_0$ + ಜ್ವರ ]

**ಡೆಂಚಾ** (ನಾ). ಒಂದು ಬಗೆಯ ಗಿಡ : ಸಣಬು (Sunhemp), ಕಳಂಜಿ. ಡೆಂಚಾ ಮೊದಲಾದ ಗಿಡಗಳನ್ನು ಬೆಳೆಯಿಸಿ ಅವುಗಳನ್ನು ನೆಲದೊಳಕ್ಕೆ ಉತ್ತುಬಿಟ್ಟರೂ ಆಯಿತು (ಬಾಲಪ್ರ. I, ೩೯೧). [ ? ]

**ಡೆಂಚೆಯ** (ನಾ). ಆನೆಯ ಬೆನ್ನಮೇಲೆ ಕುಳಿತುಕೊಳ್ಳಲು ಹಾಕುವ ಮಂಟಪ ; ಅಂಬಾರಿ ; ಹೌದ : ವಿಕ್ರಮಪಾಳಪಾವುಸ ಶಿರಃಕಂಜಂ ಗಳಲ್ಲಾಡುತಿರ್ದುವು ತನ್ನಾನೆಯ ಹೊನ್ನ ಡೆಂಚೆಯದ ಚಂಚತ್ಕೇತುದಂಡಂ ಗಳೊಳ್ (ಎಕ. XI, ದಾವಣ. ೩೫–೫೯; 1224); ಡೆಂಚೆಯನವಮರಿದೇಣಿಯೊಳ ಮೆಟ್ಟಗಡಿಯಿಟ್ಟನು . . . ಕರಿಯಿಂದ ಧರೆಗೆ (ಸಿಂಗಿರಾ. ೩೭-೯).

[ P ಇದು 'ಜೆಂಚೆಯ' ಎಂಬುದರ ಅಪಲಿಖಿತವಿರಬಹುದು ]

**ಡೆಂಡಣಿಸು** 'ಟೆಂಟಣಿಸು' ನೋ.

**ಡೆಂಡೆಣಿಸು** 'ಟೆಂಟಣಿಸು' ನೋ.

**ಡೆಂಡೆಲಿ** (ನಾ). ೧. ಆನೆಯ ಮೇಲೆ ಹಾಕುವ ಪಕ್ಷರಕ್ಷೆ; ಹಕ್ಕರಿಕೆ: ಜೂಲು. ೨. ಮದಿಸಿದ ಆನೆ: ಡೆಂಡೆಲಿಯೆಂಬ ಶಬ್ದಂ – ಗುಟಿದಲ್ಲಿಯುಂ ಮತ್ತವಾರಣದಲ್ಲಿಯುಂ (ಶಮದ. ಮ. ೩೦೭). [ ? ]

**ಡೆಂಢಣಿಸು** 'ಟೆಂಟಣಿಸು' ನೋ.

**ಡೆಂಢಳಿಸು** 'ಟೆಂಟಣಿಸು' ನೋ.

**ಡೆಂಢೆಣಿಸು** 'ಟೆಂಟಣಿಸು' ನೋ.

**ಡೆಂಬಕ** (ನಾ). (?) : ದಿಟಪುಟಥಕುತಿಸಂಪುಟ ನೆಲೆಗೊಳ್ಳದಾಗಿ ಡೆಂಬಕ [ಪಾಠಾಂ. ಟಿಂಬಕ, ಟಿಂಬನ, ಟೆಂಬಕ ]ನನಾಡಿಸುತ್ತಿದ್ದಿತಯ್ಯಾ ನಿನ್ನ ಮಾಯೆ (ಬಸವ. ೧೪). [ ? ]

**ಡೆಕ್ಕು** (ನಾ). ಹಡಗಿನ ಹೊರಮೈಯಲ್ಲಿರುವ ವೇದಿಕೆ,–ಅಂತಸ್ತು: ಡೆಕ್ಕಿನ ಮೇಲೆ ಒಬ್ಬಳೇ ನಿಂತು ಮಂದಾಕಿನಿ ಸಮುದ್ರದ ತೆರೆಗಳನ್ನು . . . ನೋಡುತ್ತ ನಿಂತಿದ್ದಾಳೆ (ಹೊಸಕ್ಷ. ೧೩೩). [ ←ಇಂ. Deck ]

**ಡೆಕ್ಕರಿಕ್ಕೆ** (ನಾ). ಒಂದು ಬಗೆಯ ಜಟ್ಟಿವರಸೆ: ಮಲ್ಲಯುದ್ಧದಲ್ಲಿ ಒಂದು ಪಟ್ಟು : ಮೈಲಾಗಿನಲಿ ತೆಕ್ಕೆಯಲಿ ಸವಡಿಯ ಡೆಕ್ಕರಿಕ್ಕೆಯಲಿ . . . ಭೀಮಜೀಮೂತಗಳು ಹಳಚಿದರು (ಕುಮಾ.ವಿ. ೭೧೩. ೪-೭೬). 'ಡೊಕ್ಕರ$_2$' ಪರಾ. [ ? ]

**ಡೆಗ್ಗೆ, ಡಗ್ಗೆ** (ನಾ). ಕಾಳಗದಲ್ಲಿ ಕೋಟೆಯ ತೆನೆಗಳನ್ನು ದೂಡಿ ಉರುಳಿಸಲು ಬಳಸುತ್ತಿದ್ದ ಉದ್ದವಾದ ಮರದ ದಿಮ್ಮಿ : ನಡೆಸಾರಂ ನೆಲವಾಳಿಗೆ ಪಡಕೆಡಪುವ ಡೆಗ್ಗೆ ಬದ್ದಿರಂಗಳ್ (ತ್ರಿಪುವಿ. ೫-೦೦) ; ನಡೆ ಚಪ್ಪರದ ಮರ ಬದ್ದರ ಡೆಂಕಣಿ ಸುಡುವ ಪಟಲು ಕೋಟೆಯನು ಕೆಡಪುವ ಡೆಗ್ಗೆ[ಪಾಠಾಂ. ಗೆ] (ಕುರಾಸಾಂ. ೩೭-೬೭); ಕೋಟೆಯ ತೆನೆಗಳನು ಕೆಡಪಲು ನಿಡುವ ಡೆಗ್ಗೆಗಳಿಂದ (ಡಂಪ್ರಸಾಂ. ೮-೪) ; ಡೆಗ್ಗೆಯಿಂದುದಿರ್ದುವು ಕಲ್ಲ ಕೋಟೆಯ ಗುಂಡು ಮೆಗ್ಗಳ ಬಿದ್ದುದು ಪಟಲ (ಅನಂತ. ೧೮-೬೧). 'ಡೆಗ್ಗೆವರ' ಪರಾ. **ಡಗ್ಗೆ:** ತಳಿ ನಡೆ ಚಪ್ಪರ ಡಗ್ಗೆ ಬದ್ದರಗಳ ಬಳಿಸಂದು ಭಟರು ಸಂದಣಿಸಿ ಬಳಿಸಿ ಕೋಟೆಯ ಲಗ್ಗೆಯೊಳು (ಕುರಾಸಾಂ. ೪೫-೨) : ಡಗ್ಗೆ ನೆಲಗುಮ್ಮಗಳ ತರಹೇಳಿ (ಪ್ರಹ್ಲಾಚ. ೫-೪೧). [ ? ]

**ಡೆಗ್ಗೆವರ** (ನಾ).=ಡೆಗ್ಗೆ : ನಡೆಚಪ್ಪರವನು ನಡೆಯಿಸಿ ಡೆಗ್ಗೆವರಗಳಂ ಜಡಿದು ಹೊಯಿಸುವ ಭರವಸಕ್ಕೆ ಬದ್ದರಗಳೊಳಗಡಗಿ ಗುದ್ದಲಿಹಾರೆಯಿಂದಗೆವ

ರಭಸಕ್ಕೆ (ಸಮ್ಯಕ್ಕಾ. ೮-೩೭): ತುಡುಕಲೆಂದೆನುತ ಮಾಮಸಕದಿಂ ಬಹುರೂಪುವಡೆದು ತಾಗುವ ರಾಹುಕೇತುವೋ ಯೆಂಬಂತೆ ಗಡಿಯಿಲ್ಲದಲ್ಲಲ್ಲಿ ಹಾಯಿಸುವ ಡೆಗ್ಗೆವರನತಿಭೀಕರಂಬಡೆದವು (ಸಮ್ಯಕ್ಕಾ. ೮-೪೦).

[ ಡೆಗ್ಗೆ + ಮರ$_1$ ]

**ಡೆಬ್ಬೆ$_1$** 'ದಬ್ಬೆ$_1$' ನೋ.

**ಡೆಬ್ಬೆ$_2$** 'ದಬ್ಬೆ$_2$' ನೋ.

**ಡೆಮ್ಮಿ** (ನಾ). ಬರೆಯುವ ಮತ್ತು ಗ್ರಂಥಗಳ ಮುದ್ರಣಕ್ಕೆ ಉಪಯೋಗಿಸುವ ಕಾಗದದ ಅಳತೆಯ ಒಂದು ಪ್ರಮಾಣ; (ಬರೆಯುವ ಕಾಗದ, ೧೫½" × ೨೦"; ಮುದ್ರಣಕಾಗದ, ೧೭½" × ೨೨½"): ಡೆಮ್ಮಿ ೧೮ ಪೌಂಡು ಎಂದರೆ, ಡೆಮ್ಮಿ ಅಳತೆಯ ಐನೂರು ಹಾಳೆಗಳುಳ್ಳ ಒಂದು ರೀಮಿನ ತೂಕ (ಮುದ್ರಕ. ೮೩). [ ← ಇಂ. Demy ]

**ಡೆಳ್ಳೆ** (ನಾ). ಬಿದಿರಿನ ಬುಟ್ಟಿ: ಕಳಶಂ ಶುಕ್ತಿಕೆ ವರ್ತುಲಂ ಪಟಲಕಂ ವೈಸ್ನಾಳಿ ನೀರಾಜನಂ ವಿಳಸತ್ ಕುಂಡಿಕೆ ಡೆಳ್ಳೆಯೆಂಬೆಡೆಗಳೊಳ್ ಸಂಪೂರ್ಣ ತೋಯಾದಿ ಮಂಗಳವಸ್ತುಪ್ರಕರಕ್ಕದೇಂ ಶಚಿಯು ಕೆಯ್ಯುಂ ಕಣ್ಣುಮೋರಂದನಗ್ಗಲಿಸುತ್ತಿರ್ದುದು ಪೂಜೆಗುಜ್ಜುಗಿಸಿ ತನ್ನಂ ನೋಡೆ ಸಕ್ರಂದನಂ (ಅನಂಪು. ೧೦-೪೭); ನಾನಾ ನವೀನ ಕೋಮಳ ಪಕ್ವಫಳಂಗಳಿಂ ತುಂಬಿದ ಡೆಳ್ಳೆಗಳ ಬಳಗಂಗಳಂ ತಂದವಟಯಿಸಿ ನೀಡುವುದುಂ (ಶಾಧಪು. ೧೭-೩೩೯ ವ). [ <ಪ್ರಾ. ಡಲ್ಲ, ಡಲ್ಲಗ ]

**ಡೇಂಕಣೆ** 'ಡೆಂಕಣಿ' ನೋ.

**ಡೇಕು** 'ದೇಕು$_1$' ನೋ.

**ಡೇಗು$_1$** 'ತೇಗು$_2$' ನೋ.

**ಡೇಗು$_2$** 'ತೇಗು$_3$' ನೋ.

**ಡೇಗೆ** (ನಾ). ೧. ಹದ್ದಿನ ಜಾತಿಗೆ ಸೇರಿದ ಒಂದು ಬಗೆಯ ಪಕ್ಷಿ; ಗಿಡುಗ: ಒಂದು ದಿನ ಡೇಗೆಯುಂ ಪಾರಿಸುತ್ತಿರೆ ಪಾರಿ ಬಂದು ಕಿರಿಯಮ್ಮನರ ಮನೆಯುಂ ಪೊಗಲ್ಕೆ (ಗುರುಚಾ. ೧೩-೪೧); ಈಟಿ ಭಲ್ಲೆಯ ಸರಳು ಕವಲಂಬುಗಳು ಬಡಿಗೋಲುರುವ ಸಾಳುವ ಡೇಗೆ ಸಿವ್ವಂಗಿಗಳು (ಅನಂರಾ. ೩-೩-೬); ಡೇಗೆಯೆದುರೊಳು ಕಂಡ ಲಾವುಗೆ ಬಾಗುವೋಲ್ (ಜೆನಭಾ. ೭೨-೯); ಮರಗಳ ಮೇಲೆ . . . ಗಿಳಿ, ಕೋಗಿಲೆ, ಡೇಗೆ ಮತ್ತೊಂದು ಎಂದು ಸಾವಿರ ಜಾತಿಗಳಿವೆ (ಸ್ವಪ್ನಹೂ. ೦೨). [ ದೇ.॥ ತೆಲು. ಡೇಗ ]

**ಡೇಗೆಕಣ್ಣು** (ನಾ). ೧. ಗಿಡುಗನ ಕಣ್ಣು. ೨. (ಆಲಂ) ಸೂಕ್ಷ್ಮದೃಷ್ಟಿ; ತೀಕ್ಷ್ಣದೃಷ್ಟಿ: ಅದರ ಡೇಗೆಕಣ್ಣಿಗೆ ಮೀನು ಕಾಣಿಸಿದೊಡನೆಯೇ ಬಾಣದಂತೆ ನೀರೊಳಗೆ ನುಸುಳಿ ಕೊಕ್ಕಿನಲ್ಲಿ ಆದುಮಿ ಬಂಡೆಗಲ್ಲಿನ ಮೇಲೆ ಕುಳಿತು ನುಂಗುತ್ತದೆ (ಬಾಳಿಗಿ. ೮೫); ಅದಕ್ಕಾಗಿ ಬೀರನೊಡನೆ ಸುಬ್ಬನೂ ಒಂದು ಡೇಗೆಕಣ್ಣು ಮಾಡಿ ಕುಳಿತುಕೊಳ್ಳುವನು (ಮುಂಗಾಮು. ೫೮).

[ ಡೇಗೆ + ಕಣ್ಣು (<ಕಣ್) ]

**ಡೇಗೆಬೇಗ** (ನಾ). ಗಿಡುಗನ ರಭಸ; ಬಹಳ ವೇಗ; ಅತಿರಭಸ: ಹೊಲದ ಹೊದರೊಳು ಹುದುಗಿ ಹೊಂಚುತಿಹ ಹೊರಸಿಗೆರಗುವ ಡೇಗೆಬೇಗದಲಿ (ಶ್ರೀರಾಮಾ. ೫೯೫-೨೦೦). [ ಡೇಗೆ + ಬೇಗ ]

**ಡೇರ** 'ಡೇರೆ$_1$' ನೋ.

**ಡೇರಾ$_1$** 'ಡೇರೆ$_1$' ನೋ.

**ಡೇರಾ$_2$** 'ಡೇಲಿಯಾ' ನೋ.

**ಡೇರಿ** 'ಡೈರಿ$_2$' ನೋ.

**ಡೇರೆ$_1$, ಡೇರ, ಡೇರಾ$_1$** (ನಾ). ಬಟ್ಟೆಗಳನ್ನು ಹೊದಿಸಿ ತಯಾರಿಸಿದ ತಾತ್ಕಾಲಿಕ ವಸತಿಗೃಹ; ಗುಡಾರ; ಬಿಡದಿ: ಜಗವು ಸರ್ಕಸ್ಸಿನ ಡೇರೆ (ಚಂದ್ರವೀ. ೦೪-೫೪): ಈ ರಾತ್ರಿ ಕಳೆಯಲು ಒಂದು ಡೇರೆ ಸಿಕ್ಕಿದ್ದರೆ ಚೆನ್ನಾಗಿತ್ತು (ಮತಸ. ೫೯): ಈ ಬಯಲಾಟದವರು. ಡೇರೆ ಹಾಕಿಕೊಂಡು ಟಿಕೇಟಿನ ಮೂಲಕ ಆಟವಾಡುವ ರೂಢಿಯು ಬಂದಿದೆ (ಯಕ್ಷಬ. ೨೦). **ಡೇರ:** ಮುಂದೆ ನೋಡು ದಾರಿ ಸಾವಿರಾರು ಮೈಲಿದೂರ, ಸಾಲುಸಾಲು ಡೇರ (ನಡಬಂ. ೨-೨). **ಡೇರಾ:** ದೂಳುತುಂಬಿದ ಡೇರಾ ಬಟ್ಟೆಯ ಮೇಲ್ಛಾವಣಿ ಕಟ್ಟಿದಂತೆ . . . ಆಕಾಶದಲ್ಲಿ ಮೋಡಕಟ್ಟುವುದು (ಬಾಲಪ್ರ. II, ೧೧೬೦). [ ← ಹಿಂ. ಡೇರಾ [

**ಡೇರೆ$_2$** 'ಡೇಲಿಯಾ' ನೋ.

**ಡೇಲಿಯಾ, ಡಾಲಿಯಾ, ಡೀಲಿ, ಡೇರಾ$_2$, ಡೇರೆ$_2$, ಡ್ಯಾಲಿಯಾ** (ನಾ). ಒತ್ತೊತ್ತಾಗಿ ಎಸಳುಗಳುಳ್ಳ, ಬಣ್ಣಬಣ್ಣದ ದುಂಡಗಿನ ಹೂವುಗಳನ್ನು ಬಿಡುವ ಒಂದು ವಿಧದ ಗಿಡ ಮತ್ತು ಆದರ ಹೂವು: (ಮೈಜಿಗಿ. ೨೮-೫೪೪). **ಡಾಲಿಯಾ:** ಮೂಡಿದೀ ಡಾಲಿಯಾ ಗಿಡದ ಹಸುರು ಕೈಯಲ್ಲಿ ಜಗದ ಅಮ್ಮ ಬಿಸಿಲು ಗಾಳಿಯನಿಡಲು ಮೆಲ್ಲನೆಯೆ (ಅನಿಕೇ. ೩೯-೧). **ಡೀಲಿ:** "ಬಣ್ಣಬಣ್ಣದ ಸುತ್ತು ಹೂವುಗಳು ಬಿಡುವ ಮೆಕ್ಸಿಕೊ ತವರಿನ ಒಂದು ಜಾತಿಯ ಗೆಡ್ಡೆಯ ಗಿಡ: ಡೀಲಿ"(Dahlia.ಇಂಕನಿ.). **ಡೇರಾ$_2$:** ಮನೆಯ ಮುಂದೆ ಚಮನ್, ರೋಜಾ, ಡೇರಾ ನಂದಿಬಟ್ಟಲು ಗಿಡಗಳ ಮಧ್ಯೆ ಪನ್ನೇರಿಳೆ ಹಣ್ಣಿನ ಮರ (ಹೊಸಕ್ಷಿ. ೧೩೩). **ಡೇರೆ$_2$:** ಡೇರೆಯ ಗಿಡದಿಂದ ಹೂದೋಟಕ್ಕೆ ಕಳೆ ಹೆಚ್ಚುತ್ತದೆ (ರೂಢಿ). **ಡ್ಯಾಲಿಯಾ:** ತೊಳಗುತ್ತಿವೆ ತೋಟದಲಿ ತೆರತೆರ ಗುಲಾಬಿಹೂ ಡ್ಯಾಲಿಯಾ ಬೋಗೇನವಿಲಿಯ (ಸುನೀತ. ೬-೬). [ ← ಇಂ. Dahlia ]

**ಡೈನಮೊ, ಡೈನಾಮೊ** (ನಾ). "ತಾಮ್ರದ ತಂತಿಯ ಸುರುಳಿಗಳನ್ನು ಕಾಂತ ಕ್ಷೇತ್ರದಲ್ಲಿ ವೇಗವಾಗಿ ತಿರುಗಿಸುವುದರಿಂದ ಯಾಂತ್ರಿಕಶಕ್ತಿಯನ್ನು ವಿದ್ಯುಚ್ಛಕ್ತಿಯನ್ನಾಗಿ ಮಾರ್ಪಡಿಸುವ ಯಂತ್ರ" (Dynamo. ಇಂಕನಿ.): ಆ ತಂತಿಯ ಮತ್ತೊಂದು ಅಂಚನ್ನು ಒಂದು ಡೈನಮೋವಿನ ಋಣಧ್ರುವಕ್ಕೆ ಲಗತ್ತಿಸಬೇಕು (ಮುದ್ರಕ. ೫೯). **ಡೈನಾಮೊ:** ತಿರುಗುವ ಚಕ್ರಗಳಿಗೆ ವಿದ್ಯುತ್ತನ್ನು ಹೊರಡಿಸುವ ಡೈನಾಮೋವನ್ನು ಜೋಡಿಸುವರು (ಬಾಲಪ್ರ. I, ೪೦). [ ← ಇಂ. Dynamo ]

**ಡೈನಾಮೊ** 'ಡೈನಮೊ' ನೋ.

**ಡೈನಾಮೈಟ್** (ನಾ). ಪ್ರಬಲವಾದ ಸಿಡಿಮದ್ದು; ತೀವ್ರ ಸ್ಫೋಟಕ: ಬಾವಿ ತೋಡುವಾಗ ಸಿಕ್ಕ ಬಂಡೆಯನ್ನು ಡೈನಾಮೈಟ್ ಉಪಯೋಗಿಸಿ ಒಡೆಸಿದರು (ರೂಢಿ). [ ← ಇಂ. Dynamite ]

**ಡೈರಿ$_1$** (ನಾ). ದಿನಚರಿ ಬರೆಯುವ ಪುಸ್ತಕ: ಕುಳಿತೆ ಕುರ್ಚಿಯ ಮೇಲೆ ತೆರೆದು ಹಳೆ ಡೈರಿಯನ್ನು ಮಗುಚುತ್ತ ನಡೆದೆ ಒಂದೊಂದೆ ಪುಟವ (ಮೋಹಬ. ೮೩): ಓ. ಅದೇ ಡೈರಿ ಬರೆದಿದ್ದೇನಪ್ಪ (ಚಂಡಮು. ೩೩-೨೦).

[ ← ಇಂ. Diary ]

**ಡೈರಿ$_2$, ಡೇರಿ** (ನಾ). ಹಾಲು, ಮೊಸರು, ಬೆಣ್ಣೆಗಳನ್ನು ತಯಾರಿಸುವ ಸ್ಥಳ; ಹೈನುಶಾಲೆ: ಬೆಂಗಳೂರು ಡೈರಿಯ ಹಾಲನ್ನು ಕೊಳ್ಳುತ್ತಿದ್ದೇವೆ (ರೂಢಿ). **ಡೇರಿ:** ಸಹಕಾರಿಸಂಘಗಳು ಡೇರಿಗಳನ್ನು ನಡೆಸುತ್ತಿವೆ (ರೂಢಿ).

[ ← ಇಂ. Dairy ]

**ಡೊಂಕ$_1$** (ನಾ). ೧. ವಕ್ರವಾದುದು; ಕೊಂಕಿದುದು: ಕರ್ಕಂಡುಮರಕ್ಕೆ ನಿತು ಮುಳ್ಳೆಂಬುದು ಡೊಂಕನೊ ಸಸಿನವೊಯೆಂಬಂದಂ (ಪುಣ್ಯಾಸ್ರ. ೩-೦೫ ವ). ೨. ಬಾಗಿಸುವವನು (?): ತೊಡರ್ದರ ಡೊಂಕ . . . ಸಟ್ಟುಕಗಂ (ಎಕ. IX (S), ಕಾನಕಾ. ೭೮-೮; 1319). (ಗು). ೩. ಕೊಂಕಿದ; ಬಾಗಿದ; ವಕ್ರವಾದ. [ ಡೊಂಕು$_2$ + – ಅ$_7$ ]

**ಡೊಂಕ$_2$** (ನಾ). ಒಂದು ಕುಲದ ಹೆಸರು (?): ಶರಣಾಗತಜನಮಂ ನಿತ್ತರಿಪೆಡೆಯೊಳ್ ವಜ್ರಪಂಜರಂ ತಾನೆನೆ ಡೊಂಕರ ಮಾದಿರಾಜವಿಭು ತೊಡರ್ದರ ಡೊಂಕಿಯೆನಿಪ್ಪ ಬಿರುದನಿರದೆತ್ತಿಸಿದಂ (ಮುಂಬರಾ. X, ೨೬೪-೨೭; 1229).

[ ? ]

**ಡೊಂಕಣ** ‘ಡೊಂಕಣೆ’ ನೋ.

**ಡೊಂಕಣೆ, ಡೊಂಕಣ, ಡೊಂಕಳಿ, ಢೊಂಕಣೆ** (ನಾ). ಒಂದು ಬಗೆಯ ಆಯುಧ ; ಸಬಳ : “ಕೊಂತಂ, ಡೊಂಕಣೆ–ಈ ೨ ಸಬಳಂ” (ಕಶಸಾ. ೧೪-೨೬೬) ; “ಡೊಂಕಣೆಯುಂ ಕೊಂತ ಸಬಳಮೆನಿಕ್ಕುಂ” (ಕವಿಕಂ. ೧೨೮) ; ಕೂರ್ಪಿನ ಡೊಂಕಣೆಯಲ್ಲಿ ಜುಂಜನಂತಿರೆ ಮಿಳಿರ್ದಾಡುತಿರ್ಪ ಪೊಸಚೌರಿಯ ದಿಟ್ಟಿಗಳುಕ್ಕೆ (ಕಬ್ಬಿಕಾ. ೨೬೩) ; ಹೆಣನ ಹೋಳಿನ ಸಿಡಿದಡಗು ಡೊಂಕಣೆಯೊಳೆಸೆದುವು ಕಾಲನಾರೋಗಣೆಗೆ ಮಿಗೆ ಪಡಿಸಣವ ನೋಡದೆ ಮಾಣವೆಂಬಂತೆ (ಕುವ್ಯಾಭೀ. ೪-೪೪) : ಪರಶು ಗದೆ ಚಕ್ರ ಡೊಂಕಣೆ . . . ಮೊದಲಾಗಿರ್ದ ಕೈದುಗಳ ಪರಿವಿಡಿಯೊಳುರವಣಿಸಿ ಪೊಯ್ದಂ (ಜೈಮಿಭಾ. ೧೨-೨೪). **ಡೊಂಕಣ :** ಡೆಂಕಣಿಕ್ಕೈ ಡೆಗ್ಗೆವರ ಪಾರೆ ಗುದ್ದಲಿ ಡೊಂಕಣ ಸಬಳ ಶರಗಳ ಸಂಕುಳವೆಯ್ದಿತು (ಕುರಾಸಾಂ. ೪೧-೫೧). **ಡೊಂಕಳಿ:** “ಡೊಂಕಳಿ = ೧. ಬತ್ತಳಿಕೆ. ೨. ಈಟಿಯ ಗಣೆ” (ಗಂಗಾಮ. ೧೪೫). **ಢೊಂಕಣೆ :** “ವರ್ಗಚತುರ್ಥಾಕ್ಷರಂಗಳ್ಗೆ . . . ಢೊಂಕಣೆ, ಢೆಂಕಣ ಅಢಾಳಂ (ಢಾಳಂ) (ಶಮದ. ೧೫ ಪ್ರಯೋ). ‘ಡೆಂಕಣಿ’ ಪರಾ.

[ ←ತೆಲು. ಡೊಂಕನಿ ]

**ಡೊಂಕಣೆಕಾರ** ‘ಡೊಂಕಣೆಕಾಱ’ ನೋ.

**ಡೊಂಕಣೆಕಾಱ, ಡೊಂಕಣೆಕಾರ** (ನಾ). ಸಬಳವನ್ನು ಹಿಡಿದು ಯುದ್ಧ ಮಾಡುವವನು ; ಭರ್ಜಿಯವನು : ಕಡುನಿಮಿರ್ದು ಪೊಳೆವ ಪೊಸ ಪೂಗುಡಿಯೆಂಬಗ್ಗಳಿಕೆವಡೆದ ಸಬಳಮನೊಲವಿಂ ಪಿಡಿದು ಬರುತಿರ್ದುದೆತ್ತಂ ಕಡು ಸೊರ್ಕಿದ ತುಂಬಿಯೆಂಬ ಡೊಂಕಣೆಕಾಱರ್ (ಕಬ್ಬಿಕಾ. ೨೧೫); ಧುರದೊಳಗೆ ಬಿಲುಗಾಱರೊಗ್ಗಿನ ಹಲಗೆಕಾಱರು ಹಲಗೆಯವರುಬ್ಬರದ ಡೊಂಕಣೆಕಾಱರಾಂತು ಕೃತಾಂತನಾಲಯವ ಥರಥರದಿ ತೀವಿದರು (ಕುವ್ಯಾಭೀ. ೪-೪೬). **ಡೊಂಕಣೆಕಾರ:** ಧುರದೊಳಗೆ ನಿಂದರ್ರೈ ಹರಿಗೆಕಾರರು ಹಲಗೆಯವರು ಡೊಂಕಣೆಕಾರರು (ತುರಂಗ. ೫೨-೩). ‘ಡೆಂಕಣಿಕಾಱ’ ಪರಾ. [ ಡೊಂಕಣೆ + – ಕಾಱ ]

**ಡೊಂಕತನ** ‘ಡೊಂಕುತನ’ ನೋ.

**ಡೊಂಕಬಂಕ** (ನಾ). ೧. ಬಹಳ ಕುಟಿಲಸ್ವಭಾವದವನು; ಅತಿವಕ್ರ. (ಗು). ೨. ಅಂಕುಡೊಂಕಾದ : ಕೃತ್ರಿಮವಾದ ಅವಯವಗಳಿಂದ ಸ್ತ್ರೀಪಾತ್ರವನ್ನು ಡೊಂಕಬಂಕನಾಗಿ ಅಭಿನಯಿಸುವವನನ್ನು ನೋಡಿ (ಸಾಹಿಜೀ. ೨೧). [ ಡೊಂಕ$_1$ + ಬಂಕ$_3$ ]

**ಡೊಂಕಳಿ** ‘ಡೊಂಕಣೆ’ ನೋ.

**ಡೊಂಕಿ$_1$** (ನಾ). ೧. ಬಾಗಿಸುವವನು: ಕಾವೇರೀವಲ್ಲಭ ಕರದೀವ ದಾನಿ ಮಱ$^3$ ಪೊಕ್ಕರೆ ಕಾವ ತೊಡೆದರ ಡೊಂಕಿ ಬಿರಿಪರ ಬಾಯ ಬೊಂದಿಗೆ . . . ಮಾದಿಗದೇವನೊಡನೆ (ಎಕ. IX, ಕಾನಕಾ. ೧೦೭-೫ ; 1293). ೨. ಗಾಳದ ಮಿಾನಿನ ತುದಿಯ ಕೊಕ್ಕೆ; ಗಾಳದ ತುದಿಯಲ್ಲಿ ಅಳವಡಿಸಿದ ಕೊಕ್ಕೆ,–ಮುಳ್ಳು (?): ಗಾಳದ ಡೊಂಕಿಯುಗ್ರಮನೆ ಬಾಳರಸಂ ಪಿಡಿದಿರ್ದ . . . ಶಬರರ್ಕಳಿನೊಪ್ಪಿದುದೊಂದು ಪಕ್ಕಣಂ (ಕುಸುಮಾ. ೧೦-೧೪೮).

[ ಡೊಂಕು$_2$ + – ಇ$_3$ ]

**ಡೊಂಕಿ$_2$** (ನಾ). ಒಂದು ಬಗೆಯ ತೆರಿಗೆ : ದೇವರಗಾಣಕ್ಕೆ[ತ]ಱ$^3$ಬಣ್ಣಗೆ ಡೊಂಕಿ ಬೀರವಣ ಸರ್ವ್ವಬಾಧಪರಿಹಾರವಾಗಿ ಬಿಟ್ಟರು (ಸೌಇಇ. XI-II, ೧೫೮-೨೬ ; 1109). [ ? ]

**ಡೊಂಕಿವಣ, ಡೊಂಕೆವಣ** (ನಾ). ಡೊಂಕಿಯ ತೆರಿಗೆಯ ಹಣ : ನನ್ದಾದೀವಿಗೆಗೆ ಡೊಂಕಿವಣ ಮಾನೆಣ್ಣೆಸಹಿತಂ ಬಿಟ್ಟ ಗಾಣವೊಂದು (ಕಇ. II, ೧೦-೩೭ ; 1181). **ಡೊಂಕೆವಣ :** ವರ್ಷಸಂಪ್ರತಿಯಾಗಿ ನಡಸುವ ಗದ್ಯಾಣವೆರಡು ಒಂದು ಗಾಣದ ಡೊಂಕೆವಣ ಕಾರುಕದೆಱ$^3$ . . . ಕೊಟ್ಟರು (ಕಇ. IV, ೧೩-೬೫ ; 1165). [ ಡೊಂಕಿ$_2$ + ಪಣ$_3$ ]

**ಡೊಂಕಿಸು** (ಕ್ರಿ). ಓರೆಯಾಗು; ವಕ್ರವಾಗು : ಬಡಗಣ ಹಿಮಗಿರಿಯೊಳು ಹುಟ್ಟಿ ತೆಂಕ ಬಂದೊಡನೆ ಡೊಂಕಿಸಿ ಮೂಡ ಹರಿದು ಕಡಲ ಕೂಡಿದ್ದುದಾ ಗಂಗೆ (ಭರಚ. ೨೩-೫೯). [ ಡೊಂಕು$_1$ + – ಇಸು$_3$ ]

**ಡೊಂಕು$_1$** (ಕ್ರಿ). ಓರೆಯಾಗು ; ವಕ್ರವಾಗು : ಬಾಗು : ಡೊಂ[ಪಾಠಾಂ. ಕೊಂ]ಕಿದ ದೇಹಮನುರುಗಿಸಿ ನಡೆವುತೆ (ಭೃಂಗೀರ. ಹ. ೪೭೩-೨೪): ಆಗುಳಿಸುತೆದ್ದೊಂದು ಕಾಲಲಿ ಡೊಂಕಿ ನಡೆವುತ್ತೆ (ಬಸಪು. ೫೯-೨೨): ನಗುವರಾರಾನೊಂದು ಬಿನದವ ಮಾಡಲ್ಕೆ ಮೊಗಗಳು ಡೊಂಕುವವು (ಭರಚ. ೪೬-೧೪೦) ; ಮಧುವಾಣಿಯ ಮೋಱ$^3$ ಚಚ್ಚರದಿ ಡೊಂಕಿತು (ಭರಚ. ೪೬-೧೪೩). [ ದೇ.II ತೆಲು. ಡೊಂಕು, ಟೊಂಕು ]

**ಡೊಂಕು$_2$** (ನಾ). ೧. ಬಾಗಿರುವಿಕೆ; ನೆಟ್ಟಗಿಲ್ಲದಿರುವಿಕೆ; ಸೊಟ್ಟಾಗಿರುವಿಕೆ ; ಓರೆಯಾಗಿರುವಿಕೆ ; ವಕ್ರತೆ : ತೆಂಗಿನ ಪೊಸನೇಣಿಂದಱು ದಿಂಗಳ್ವರಮುಡಸಿ ಕಂಬಿಯಿಂ ಕಟ್ಟಿದೊಡಂ ತಾಂ ಗಡ ಬಿಟ್ಟೊಡೆ ಮತ್ತಂ ಪಿಂಗದು ಡೊಂಕೆಂಬ ನಾಯ ಬಾಲದ ತೆಱದಿಂ (ಧರ್ಮಾಮೃ. ೨-೯೨) : ಹಾವಿನ ಡೊಂಕು ಹುತ್ತಕ್ಕೆ ಸಸಿನ (ಬಸವ. ೧೪೪): ಕಬ್ಬಿಗೆ ಡೊಂಕಲ್ಲದೆ ಮಧುರಕುಂಟೆ ಡೊಂಕು (ನಗಮಾ. ೬೦) : ನರಪತಿಗಿದಿರಾಗಿ ನಲಿದು ತಿರುಗಿದರಾಗಲೆ ಡೊಂಕನಳಿದು ಗಂಗೆ ಹರಿವಂತೆ ನೇರದೊಳಿತ್ತ (ಭರಚ. ೧೩-೯೭): ಡೊಂಕು ಹಣ್ಣುಗಳಲ್ಲಿ ಡೊಂಕು ಬಾಳೆಯ ಹಣ್ಣು ಡೊಂಕುಂಟು ಒಳಗೆ ರುಚಿಯುಂಟು ಸಜ್ಜನರ ಡೊಂಕು ಲೇಸು (ಸರ್ವಜ್ಞ. ೮೧೨). ೨. ಓರೆಯಾದುದು ; ಸೊಟ್ಟಾಗಿರುವುದು ; ವಕ್ರತೆಯುಳ್ಳದು : ನೋಡುವ ಡೆಂಟೆಡೆ ಡೊಂಕು (ಪುಣ್ಯಾಸ್ರ. ೩-೨೦) : ಕತ್ತಿಯ ಬಾಯಿ ತಾ ಡೊಂಕಾದ ಮಾತ್ರಕ್ಕೆ ಕತ್ತರಿಸಿದ ಕಬ್ಬು ಡೊಂಕೆ (ಇಂಪಾಪ. ೭೧-೪೭) ; ಬಿಂಬಾಧರವು ಡೊಂಕು ಚುಂಬನವದು ಡೊಂಕೆ ರಸಿಕಾ ಪೇಳೋ (ಗರಿ. ೩೨-೧೧) : ಒಂದು ಎಲೆಯಂತೆ ಇನ್ನೊಂದಿಲ್ಲ . . . ಕೆಲವು ಸೊಟ್ಟು, ಡೊಂಕು (ರಾಮಾನಿ. ೧೧೫) ; ಕಬ್ಬು ಡೊಂಕಾದರೆ ಸವಿ ಡೊಂಕೇ ? (ಗಾದ). ೩. ಬಾಗಿರುವ ಸ್ಥಳ ; ಸೊಟ್ಟಾಗಿರುವ ಪ್ರದೇಶ : ಡೊಂಕಿಸಿ ಮೂಡ ಹರಿದು ಕಡಲ ಕೂಡಿದ್ದುದಾ ಗಂಗೆಯುದಱ ಡೊಂಕಿನೆಡೆಯೊಳು ಬಿಟ್ಟನಾ ಚಕ್ರಿ (ಭರಚ. ೨೩-೫೯). ೪. ಅಡ್ಡಿ ; ಅಡಚಣೆ ; ತೊಂದರೆ : ಬೆಂಕಿಯನುರುಹು ಕಟ್ಟಿಗೆಯ ಹಾಕಿವರವರಂ ಕರೆಯಿಾಗಾಗಲೆಂಬ ಡೊಂಕಿಲ್ಲ (ಭರಚ ೨೩-೮೮). ೫. (ಆಲಂ) ನೇರವಲ್ಲದ ಮಾತು ; ಕೊಂಕುಮಾತು : ಸಜ್ಜನರ ಡೊಂಕು ಲೇಸೆಂದ (ಸರ್ವಜ್ಞ. ೮೧೨). ೬. (ಆಲಂ) ಕೊಂಕು ನಡತೆ: ಅವಗುಣ ; ವಕ್ರಸ್ವಭಾವ ; ದೋಷ : ಲೋಕದ ಡೊಂಕ ನೀವೇಕೆ ತಿದ್ದುವಿರಿ . . . ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ (ಬಸವ. ೧೨೪) : ಎನ್ನ ಮನದ ಡೊಂಕ ತಿದ್ದಿಸೊ (ಪುರಂದ. ೭-೧೦೫ ಪಲ್ಲವಿ) : ಬಿಂಕದ ಕಡಲೊಳಿಪ್ಪವರೊಳು ಪೊಡವಿಯ ಡೊಂಕನಿಂತುಸುರ್ವುದು ಸೊಕ್ಕೆ (ಭರಚ. ೨೪-೪೭); ತನ್ನ ಡೊಂಕನು ತನಗೆ ತಿಳಿಯದೆ ಅನ್ಯರಿಗೆ ಆಡಿಕೊಳುವಗೆ ಶುನಕೆ ಬುದ್ಧಿಯೊಳು ಬೆರೆದಗೆ ಭಕ್ತಿಯೋಗ್ಯವಲ್ಲೆಂದ (ತಾರನಿ. ೨-೩) : ಆವನ ನುಡಿಯಲ್ಲಿ ಎರಡಿರಲಿಲ್ಲ ನಡೆಯಲ್ಲಿ ಡೊಂಕಿರಲಿಲ್ಲ (ಮಚಿಸ. ೬೨). ೭. ವಕ್ರಸ್ವಭಾವವುಳ್ಳದು ; ಕೀಳುವರ್ತನೆಯುಳ್ಳದು : ಮನೆ ಡೊಂಕು ಮನಸು ಡೊಂಕಾದರು ನಿಮ್ಮ ಶಿಷ್ಯನ ಮೇಲಣ ಪ್ರೀತಿಯಿಂದ ಜಿನಕಲ್ಪರಿರ ಬಿಜಯಂಗೈದಿರಿ (ಭರಚ. ೩-೬೧). (ಗು). ೮. ಕೊಂಕಾದ; ವಕ್ರವಾದ ; ನೇರವಲ್ಲದ; ಕುಟಿಲವಾದ: ಡೊಂಕುಬಾಲದ ನಾಯಕರೆ ನೀವೇನೂಟವ ಮಾಡಿದಿರಿ (ಪುರಂದ. ೨-೯೦ ಪಲ್ಲವಿ) : ಯೋಗಿ ಹಳದಿಯ ಚಿಂದಿಬಟ್ಟೆಯನ್ನು ಧರಿಸಿದ್ದ ಕೈಯಲ್ಲಿ ಒಂದು ಡೊಂಕುಕೋಲಿತ್ತು (ಬಾಣಅ. ೩೮೭). ‘ಡೊಂಕುಗೋಣು’ ಪರಾ.

**ಡೊಂಕುಡೊಸುಕು** = ಓರೆಕೋರೆ : (ಕ). **ಡೊಂಕುಪಂಕು** = ಡೊಂಕುಡೊಸುಕು : (ಕ). [ <ಡೊಂಕು$_1$ ]

**ಡೊಂಕುಗ** (ನಾ). ವಕ್ರಸ್ವಭಾವದವನು; ವಂಚಕ: "ಕುಟಿಲಂ=ಡೊಂಕುಂ, ಡೊಂಕುಗನುಂ" (ಕಾಶಕ. ೨೨೭) [ ಡೊಂಕು$_2$ + – ಗ$_2$ ]

**ಡೊಂಕುಗಾಲು** (ನಾ). ಡೊಂಕಾದ ಕಾಲು; ಸೊಟ್ಟಗಾಲು: ಕುಸಿದ ನಡುವಿನ ಹೊರಟ ಬೆನ್ನಿನ ಬೀಸುಗೈಗಳ ಡೊಂಕುಗಾಲುಗಳ . . . ತೋರ ಕಾರೊಡಲ ಕುಱುಬನು (ಬಸವು. ೨೦-೧೧).
[ ಡೊಂಕು$_2$ + ಕಾಲು$_1$ (<ಕಾಲ್$_1$) ]

**ಡೊಂಕುಗೋಣು** (ನಾ). ಓರೆಯಾದ ಕುತ್ತಿಗೆ; ಸೊಟ್ಟ ಕತ್ತು: ವಕ್ರವಾದ ಕಂಠ: (ಕ). [ ಡೊಂಕು$_2$ + ಗೋಣು (<ಗೋಣ್) ]

**ಡೊಂಕುತನ, ಡೊಂಕತನ** (ನಾ). ೧. ಬಾಗಿರುವಿಕೆ: ಓರೆಯಾಗಿರುವಿಕೆ; ವಕ್ರತೆ: (ಕ). ೨. ವಕ್ರಸ್ವಭಾವ. **ಡೊಂಕತನ**: ೧. "ನಮ್ರತೆ" (ಗುವಿವೋ). [ ಡೊಂಕು$_2$ + – ತನ ]

**ಡೊಂಕುನಡೆ** (ನಾ). ಓರೆಯಾಗಿ ನಡೆಯುವಿಕೆ; ವಕ್ರಗಮನ; ಸೊಟ್ಟ ನಡಿಗೆ: "ಸರ್ಪಣಂ=ಡೊಂಕುನಡೆ" (ಕಾಶಕ. ೭೬): "ಕುಟಿಲಾಯಾಂ ಗತೌ, ಡೊಂಕುನಡೆಯೊಳ್" (ಕಾಶಕ. ೧೩೯). [ ಡೊಂಕು$_2$ + ನಡೆ$_2$ ]

**ಡೊಂಕುವೆಱು** (ಕ್ರಿ). ಓರೆಯಾಗು: ವಕ್ರತ್ವವನ್ನು ಪಡೆ: ಬಿರಿದಡಿ ಡೊಂಕುವೆತ್ತ ಬೆರಲೋರೆಯು ಪೇರ್ದೊಡೆ ವಕ್ರಮಧ್ಯಮುಬ್ಬರಿಸಿದ ಪೇರ್ಬಸಿಱ್ (ವೃಷವಿ. ೧೧-೬೦). [ ಡೊಂಕು$_2$ + ಪೆಱು$_1$ ]

**ಡೊಂಕುಹೋಗು** (ಕ್ರಿ). ಬಾಗು: ಸೊಟ್ಟಾಗು: ವಕ್ರವಾಗು: ಈ ಯೊಡಲು ಕೈಕಾಲು ಶಿರವಯ್ಯೋಯಿವೀಗಳೆ ಡೊಂಕುಹೋಹವು (ಬಸವು. ೦೭-೪). [ ಡೊಂಕು$_2$ + ಹೋಗು$_1$ (<ಪೋಗು$_1$) ]

**ಡೊಂಕೆವಣ** 'ಡೊಂಕಿವಣ' ನೋ.

**ಡೊಂಗಱ, ಡೊಂಗುಱ, ಡೊಕ್ಕರ$_1$, ಡೊಗರು, ಡೊಗಱು, ಡೋಱ್, ಡೋಱು, ದೊಂಗರ, ದೊಗರು, ದೋಱು** (ನಾ). ೧. (ಗುಹೆ, ಮರ ಮೊದಲಾದುವುಗಳ ಒಳಗಿನ) ರಂಧ್ರ; ಬಿಲ; ಪೊಟರೆ: ಪರಿವಿಡಿಯಿಂದೆಯ್ದಿ ಗುಹೆಯ ಸಾರ್ದದಱ ಡೊಂಗಱದಲ್ಲಿ ಸೊಸೆಯರ ಳುಕುತ ಬರಲೇಕೆ (ಭರಚ. ೪೪-೪೩). ೨. ಹಳ್ಳ; ಕುಳಿ; ತಗ್ಗು: ಕುಳಿಯೊಳೊರ್ಗುಡಿಸಿ ಡೊಂಗಱನನೇಱ ಸರವುಗಳೊಳಿಳಿದದಟುಗೆಟ್ಟು ಬೆಂಡಾದಸುಖಿಗಳನು (ಹಡಕಾ. ೯-೩೩); ಇಡುಕುಱು ಡೊಂಗಱ ಘಟ್ಟ ಬೆಟ್ಟದ ಸಿಕ್ಕು ತಡೆಕಟ್ಟು ಸಮತಳವಾಗೆ (ಭರಚ. ೨೮-೫೮). **ಡೊಂಗುಱ**: ೨. ಬಳ್ಳಿಗುರುವಿನ ಕೈ ಬಳ್ಳಿಗುರುಡ ಪಿಡಿದು ಕಾಣದೆ ಡೊಂಗುಱವ ಬಿದ್ದಂತೆ ಗುರುಶಿಷ್ಯರೆಂಬುಭಯರು ಯಮಗೊಂಡವಲ್ಲಿ ಬೀಳುವರು (ವಚಸಂ. ೧೨೭-೧೧೭). **ಡೊಕ್ಕರ$_1$**: (ಕ). **ಡೊಗರು**: ೧. ಡೊಗರಿನಿಂದ ಆಹಾರಾನ್ವೇಷಣೆಗಾಗಿ ಆಗ ತಾನೆ ಹೊರಗೆ ಬಂದಿದ್ದ ಕಾರೇಡಿಯೊಂದು ತನ್ನ ಬಳಿಗೆ ಕರಿಯ ಕೋಲು ಬರುತ್ತಿದ್ದುದನ್ನು ಕಂಡು ಬೆದರಿ . . . ಡೊಗರಿನ ಕಡೆಗೆ ಓಡತೊಡಗಿತು (ಕಾನೂರು. ೨೦); ಬಹಳ ಹೊತ್ತು ಹುಡುಕಿದ ಮೇಲೆ ಒಂದು ಡೊಗರು ಸಿಕ್ಕಿತು (ಪಂಜಾಮ್ಮ. ೧೦೦): ಇಕ್ಕಟ್ಟಾದ ಬಂಡೆಯ ಡೊಗರಿನಲ್ಲಿ ಒಬ್ಬರ ಹಿಂದೆ ಒಬ್ಬರು ಮೇಲೆ ಹತ್ತಲಾರಂಭಿಸಿದರು (ಭಾರವೀ. ೦೦೩). ೨: ಮುದುಕಿ ಬಿದ್ದವಳೆ ಡೊಗರಲ್ಲಿ (ಹಳ್ಳಿಯ. ೧೬೬). **ಡೊಗಱು**: ೧. ಒಂದು ದಿವಸದೊಳು ತಾನಿರ್ಪ ನೆಲದ ಡೊಗಱೊಳಗೆ ಹೊಕ್ಕುಗೆಯುತ್ತುವಿರೆ (ಸಮ್ಯಕಾ. ೨-೪೩). **ಡೋಱ್**: ೨. ಸುಳಿದಲೆಯ ಕೆವಿಸ್ಮಾಸೆಗಳಮಿಗೆ ಬೆಳದ ಮುಡುಗುಗಳೊಡ್ಡಿದುರದುಚ್ಚಳಿತ ರೋಮದ ನೊಸಲ ಡೋಱಿಯು. . .ಕದನ ಪ್ರಚಂಡರ ಕಂಡು ಬೆಱಗಾದ (ಕುವ್ಯಾಉ. ೨-೩೧); ಮುಱಿದ ಮೂಗುಗಳ ನೊಸಲ ಡೋಱಿಯು. . . ಯಮದೂತರಂದಾಗಸಕೆ ನೆಗಹಿದ ಪಾಶಹಸ್ತರು ಬಂದರಾಕ್ಷಣಕೆ (ನಿಭಾಗ. ೬-೧-೧೯). **ಡೋಱು**: ೧. ಮದಹಸ್ತಿಯಿಱಿದ ಘಾಯಂಗಳ ವರಾಹನೆತ್ತಿದ ಡೋಱು[ಪಾಠಾಂ. ಣಿ]ಗಳ . . . ಕಡವೆ ತುಳಿದ ಹೆಜ್ಜೆಗಳ ಚಿಹ್ನದ ಬೇಡನಾಯಕರು ನೆರೆದರು (ಹಡಕಾ. ೫-೫); ಮಾದ್ರಪತಿಯೆದೆಡೋಱಿನಲಿ ಡಾವರಿಸಿದವು ರಕ್ತಾಂಬುಧಾರೆಗಳು (ಕುವ್ಯಾಶ. ೩-೬೮): ಆರಾರ್ ಶರಂಗಳಿಂದೆಚ್ಚವರ ತನುಗಳಂ ಡೋಱಿನಿಸಿ (ಜೈಬವು. ೪೯-೨೨). 'ಡೋಱುಗಳೆ', 'ಡೋಱುವೋಗು' ಪರಾ. **ದೊಂಗರ**: ೨. ಸಿದ್ಧನಹಳ್ಳಿಯ ಬಳಿ ಒಂದು ದೊಡ್ಡ ದೊಂಗರವಿತ್ತು. ಅದನ್ನು ಹಾದರೆ ಮುನೇಶ್ವರನ ಗುಡಿಯವರೆಗೂ ನಿರ್ಜನವಾದ ದಿನ್ನೆ, ಕೊರಕಲು ಪ್ರದೇಶ (ಊರುಕ. ೧೩೦). **ದೊಗರು**: ೧. ಅಷ್ಟರಲ್ಲಿ ನಾಯಿ ದೊಗರಿನ ಬಾಯಿಗೆ ಮೂತಿಯನ್ನು ತುರುಕಿ ಉಸಿರು ಎಳೆಯುತ್ತಾ ತನ್ನ ಮುಂಗಾಲುಗಳಿಂದ ಬಿಲದ ಬಾಯಿಯನ್ನು ಪರಪರನೆ ಕೆರೆಯತೊಡಗಿತು (ಮುಗಮಾಂ. ೩೭). **ದೋಱು**: ೧. 'ದೋಱುವೋಗು' ಪರಾ.
[ ದೇ.॥ ತಮಿ. ಟೊಱ್ಱು; ತೆಲು. ಡೊಂಗು, ದೊಂಗು ]

**ಡೊಂಗು** (ಕ್ರಿ). "ಕಂಪಿಸು; ನಡುಗು" (ಬಾಧವು. ಕೋಶ): ರವಿಬಿಂಬು ಪ್ರತಿಬಿಂಬಿಸಿರ್ದದಱೊಳಂ ತೋಱುತ್ತಿರಲ್ ಕಂಡು ಮದ್ಯಮನಾಸ್ವಾದಿಸುತಿರ್ದವಳ್ . . . ಪೋಗುಪೋಗೆಂದು ಡೊಂಗುವ ಕೈಯಂ ಮಿಗೆ ನೀಡಿ ಮತ್ತೆ ಬಲಿದೌಡಂ ಕಚ್ಚುತಂ ನೂಂಕಿದಳ್ (ಬಾಧವು. ೧೦-೧೩೫).
[ <ಡೊಂಕು$_1$ ? ]

**ಡೊಂಗುಱ** 'ಡೊಂಗಱ' ನೋ.

**ಡೊಂಡೊಂಡೆ** (ನಾ). ದಿಂಡುರುಳಿಕೆ (?): ಡಂಭಕ ಭಕ್ತಿಗೆ ಮೆಚ್ಚಿಕೊಡನು ಕೃಷ್ಣ ಡೊಂಬಲಾಗವು ಹಾಕಿ ಡೊಂಡೊಂಡೆ ಹೊರಳಿದರಿಲ್ಲ (ಪುರಂದ. ೫-೧೩೮ ಅನುಪಲ್ಲವಿ). [ ? ]

**ಡೊಂಬ$_1$** 'ದೊಂಬ' ನೋ.

**ಡೊಂಬ$_2$** 'ದಂಬ' ನೋ.

**ಡೊಂಬಕಾಗೆ** (ನಾ). ಒಂದು ಬಗೆಯ ಕಾಗೆ: "(ಕಪ್ಪು ಗರಿಗಳೂ ಒರಟು ಧ್ವನಿಯೂ ಉಳ್ಳ, ಮುಖ್ಯವಾಗಿ ಮಾಂಸವನ್ನು ತಿಂದು ಜೀವಿಸುವ. ಅನೇಕ ವೇಳೆ ಸಾಕಿ ಪಳಗಿಸಿದ ಮತ್ತು ಜನಬಳಕೆಯಲ್ಲಿ ದುಶ್ಶಕುನ ಸೂಚಕವೆಂಬ ಭಾವನೆಯುಳ್ಳ) ಕಾಗೆಜಾತಿಯ ಒಂದು ದೊಡ್ಡ ಹಕ್ಕಿ" (Raven. ಇಂಕನಿ.): ಮೊಲ ಮತ್ತು ನರಿಗಳನ್ನು ನಾಯಿಗಳಿಂದ ಬೇಟೆಯಾಡದೆ, ಡೊಂಬಕಾಗೆ, ಡೇಗೆ, ಕಾಗೆ ಮತ್ತು ರಣಹದ್ದುಗಳಿಂದ ಬೇಟೆಯಾಡುತ್ತಾರೆ (ಪ್ರವಾಇ. I, ೧೩).
[ ಡೊಂಬ$_1$ (<ದೊಂಬ) + ಕಾಗೆ ]

**ಡೊಂಬಕಾಣಿಕೆ** (ನಾ). ಒಂದು ಬಗೆಯ ತೆರಿಗೆ (?): ಯಿವಿರ್‍ಗೆ ಚಪರ ಕಾಣಿಕೆಯಿಲ್ಲ ಮರ್‍ಕಾಣಿಕೆಯಿಲ್ಲ ಡೊಮ್ಬಕಾಣಿಕೆಯಿಲ ಲಿಂಗಕಾಣಿಕೆಯಿಲ (ಎಕ. XVI, ಗುಬ್ಬಿ. ೬೯-೩೩ ; ?).
[ ಡೊಂಬ$_1$ (<ದೊಂಬ) + ಕಾಣಿಕೆ (<ಕಾಣ್ಕೆ) ]

**ಡೊಂಬತಿ** 'ದೊಂಬಿತಿ' ನೋ.

**ಡೊಂಬರಗೆ** (ನಾ). (ಉಕ) ಎತ್ತಿನ ಗಾಡಿಯ ತೋಳು: ಗುಜ್ಜುಗಳ ಮೇಲ್ಭಾಗದಲ್ಲಿ ಕೂಡಿಸಿದ ಬಿದಿರಬೊಂಬು. [ ? ]

**ಡೊಂಬವಱಿ$^3$** (ನಾ). ಡೊಂಬರು ತಮ್ಮ ಆಟದಲ್ಲಿ ಬಾಜಿಸಲು ಬಳಸುವ ಒಂದು ಬಗೆಯ ಚರ್ಮವಾದ್ಯ: ದಡ್ಡಸ: "ದಡ್ಡಸ–ಡೊಂಬವಱಿ" (ಶಮದ. ಪರಿ. ೨); "ದಡ್ಡಸವೆಂದು ಡೊಂಬವಱಿ" (ಕರ್ನಾನಿ. ೦೮).
[ ಡೊಂಬ$_1$ (<ದೊಂಬ) + ಪಱಿ$^3_1$ ]

**ಡೊಂಬವಿದ್ದೆ** (ನಾ). ಯಕ್ಷಿಣೀ ವಿದ್ಯೆ; ಬೇರೆಬೇರೆ ವೇಷವನ್ನು ಧರಿಸುವ ಮಾಯಾ ವಿದ್ಯೆ: ಮೋಸಗಾರಿಕೆ; ವಂಚಕತನ: ಏನಾನಾವೆ ಪಂದಿಯೆಂದೆನಿತಾನುಂ ತೆಱನಾಗಿ ಡೊ[ಪಾಠಾಂ. ದೊ]ಂಬವಿದ್ದೆಯನಾಡಲ್ ನೀನಱಿವೆಯುಱದಿರ್ಚಿದೊಡಾನಱಿವೆಂ ನಿನ್ನನಿಲ್ಲಿ ದೆಸೆವಲಿಗೆಯ್ಯಲ್ (ಪಂಪಭಾ. ೬-೫೭). [ ಡೊಂಬ$_2$ (<ದಂಬ) + ವಿದ್ದೆ ]

**ಡೊಂಬಿ$_1$** 'ದೊಂಬಿ' ನೋ.

**ಡೊಂಬಿ$_2$** 'ದಂಬ' ನೋ.

**ಡೊಂಬಿಗ$_1$** 'ದೊಂಬಿಗ' ನೋ.

**ಡೊಂಬಿಗ$_2$** (ನಾ). ಒಣಹೆಮ್ಮೆಯನ್ನು ತಾಳಿದವನು : ಆಡಂಬರಕಾರ : ಡಾಂಭಿಕ : 'ರಣಡೊಂಬಿಗ' ಪರಾ.

[ ಡೊಂಬು$_2$ (<ದಂಬ) + – ಇಗ ]

**ಡೊಂಬಿಗಾರ** 'ದೊಂಬಿಗಾರ' ನೋ.

**ಡೊಂಬಿಗೈ** (ಕ್ರಿ). ಗುಂಪುಸೇರು : ಒಟ್ಟಾಗು : ಡೊಂಬಿಗೈದಲ್ಲಲ್ಲಿ ದನಿಗೈವ ಕಾರಂಡಚಕ್ರದಿಂ (ವೆಂಕಾರಾ. ೨-೧೪-೨೩).

[ ಡೊಂಬಿ$_1$ (<ದೊಂಬಿ) + ಗೈ (<ಕೆಯ್$_1$) ]

**ಡೊಂಬಿತಿ$_1$** 'ದೊಂಬಿತಿ' ನೋ.

**ಡೊಂಬಿತಿ$_2$** (ನಾ). ಮಾಯಾವಿನಿ : ಕೆಟ್ಟವಳು ; ಧೂರ್ತೆ : ಪೆಂಪಿನಾಲಡ್ಡುಗೆಯುಂ . . . ಡೊಂಬಿತಿ ಜೋಡೆ ಸೋಲದಿಂ ಬಡ್ಡಿಸಿದಪ್ಪಳೆಂದು ನೆಱೆ ದೂಱುವರೆನ್ನನವಜ್ಞೆಯಿಂ ಪೆಱರ್ (ಧರ್ಮಾಮ್ಮ. ೧೦-೨೦೨).

[ ಡೊಂಬ$_2$ (<ದಂಬ) + – ಇತಿ$_1$ ( <– ಇತ್ತಿ) ]

**ಡೊಂಬಿದೈವ** (ನಾ). ವಂಚನೆಯ ದೈವ : ಮೋಸಗಾರ ದೇವರು : ಕೊಂಬು ಹೋತ ಕುಱಿ ಕೋಣನ ಬಲಿಗೊಂಬ ಡೊಂಬಿದೈವಗಳ ಭಜಿಸದಿರು ಮನವೆ (ಕನಕ. ೧೭೩-೨). [ ಡೊಂಬಿ$_2$ (<ದಂಬ) + ದೈವ ]

**ಡೊಂಬಿಬೀಸು** (ನಾ). ಕತ್ತಿವರಸೆಗಳಲ್ಲೊಂದು ; ಖಡ್ಗ ಬೀಸುವಿಕೆಗಳಲ್ಲಿ ಒಂದು ವಿಧಾನ (?) : ಆ ಸ್ಥಾನದಲ್ಲಿ ದೇಹಭ್ರಮಣಉ ಅಲ್ಪವಾಗಿಯಿದ್ದಂಥಾ ಪಾದಗಳ ಗಮನಉ ಬಂಡಿಕೋಲಿನ ಭ್ರಮಣವು ಆವದು ಅದು ಡೊಂಬಿಬೀಸುಯೆಂದು ತಿಳಿವರು (ಖಡ್ಗಟೀ. ೫-೨೯).

[ ಡೊಂಬಿ$_0$ + ಬೀಸು$_2$ ]

**ಡೊಂಬಿಮಾಡು** 'ದೊಂಬಿಮಾಡು' ನೋ.

**ಡೊಂಬಿವರಿ** (ಕ್ರಿ). ಗುಂಪಾಗಿ ನುಗ್ಗು ; ಒಟ್ಟಿಗೆ ಧಾವಿಸು ; ಮೊತ್ತವಾಗಿ ಮುಂದೆ ಸಾಗು: ಡೊಂಬಿವರಿದಿಱಿದಾಡಿ ಸೂತ್ರದ ಬೊಂಬೆಯಂದದಿ ಕೆಡೆದರಥಟರು (ಸಾಳ್ವಭಾ. ೨೩-೨೪).

[ ಡೊಂಬಿ$_1$ (<ದೊಂಬಿ) + ಪರಿ$_2$ ]

**ಡೊಂಬಿಸು** (ಕ್ರಿ). ಮೋಸಮಾಡು ; ವಂಚಿಸು : ಡೆನಮುಳ್ಳನಂ ಕರಂ ಡೊಂಬಿಸಿ ತಿಂಬರ್ (ಜೀವಸಂ. ೭೯-೧೪).

[ ದೊಂಬು$_2$ (<ದಂಬ) + – ಇಸು$_3$ ]

**ಡೊಂಬು$_1$** 'ದೊಂಬಿ' ನೋ.

**ಡೊಂಬು$_2$** 'ದಂಬ' ನೋ.

**ಡೊಂಬುಮಾಡು** 'ದೊಂಬಿಮಾಡು' ನೋ.

**ಡೊಂಬೆ$_1$** 'ದೊಂಬಿ' ನೋ.

**ಡೊಂಬೆ$_2$** (ನಾ). ಮೋಸಗಾತಿ : ವಂಚಕಿ : ಒಡಿದನೊಳ್ ಪರಾಂಗನೆಯೊಳೋತೊಡಗೂಡಿದನೊಳ್ ಸರಾಗದಿಂ ಕೂಡುವಳೆಂಬ ಡೊಂಬೆ ಸಿರಿ ಪಾತಕಿ ನಾಣಿಲಿ ಕೆಟ್ಟ ಬೂತು ನಾಟಿಸ್ಸೋಡೆಯುವಳ್ಗದಕ್ಕುಮುಟಿದಾವಳು ವೊಲ್ವಳಿ ಕೀರ್ತಿಯೆಂಬವಳ್ಸೋಡಳು ನಿಂದು ಬೀರಸಿರಿ ಕೀಳಳವಂದಿರ ಮಾತನಪ್ಪಡಂ (ಬಂಹರಿ. ೧೧-೦೦೪).

[ ಡೊಂಬ$_2$ (<ದಂಬ) + – ಎ$_2$ ]

**ಡೊಕ್** (ನಾ). (ಆಯುಧದಿಂದ ತಿವಿಯುವುದು ಮೊದಲಾದ ಸಂದರ್ಭದಲ್ಲಿ ಬಳಸುವ ಒಂದು ಅನುಕರಣ ಶಬ್ದ : 'ಡೊಕ್ಕನೆ' ಪರಾ.

**ಡೊಕ್ಕನೆ** (ಅ). ಡೊಕ್ ಎಂಬುದಾಗಿ : ಡೊಕ್ಕನೆ ಸುರಿಗೆಯೊಳುರಮಂ ಬಿಕ್ಕನೆ ಬಿರಿಯಿಱಿದು (ಪಂಪಭಾ. ೧೨-೧೫೩). [ ಡೊಕ್ + – ಅನೆ$_1$ ]

**ಡೊಕ್ಕರ$_1$** 'ಡೊಂಗಱ' ನೋ.

**ಡೊಕ್ಕರ$_2$, ಡೊಕ್ಕರೆ, ಢಕ್ಕರ, ಢೊಕ್ಕರ, ದೊಕ್ಕರಿ** (ನಾ). ೧. ಬಲವಾದ ಹೊಡೆತ; ಒದೆತ; ಮುಷ್ಟಿಯ ಪೆಟ್ಟು; ಗುದ್ದು : "ಡೊಕ್ಕರ[ಪಾಠಾಂ. ಳ] ಗುದ್ದುಂ" (ಭಾರನಿ. ೫೭). ೨. ಮಲ್ಲಯುದ್ಧದ ಒಂದು ಪಟ್ಟು. P ಪ್ರತಿಮಲ್ಲನ ಕೊರಳ ಹಿಂಭಾಗವನ್ನು ಒಂದು ಕಂಕುಳಲ್ಲಿ ಇರಿಸಿಕೊಂಡು. ಕುತ್ತಿಗೆಯನ್ನು ಮುಂಗೈಯಿಂದ ಅದುಮುತ್ತ ಇನ್ನೊಂದು ಕೈಯಿಂದ ಮೊಣಕಾಲ ಸಂಧಿಗಳನ್ನು ಗಟ್ಟಿಯಾಗಿ ಹಿಡಿದೆಳೆದು ದೇಹವನ್ನು ಹುದುಗಿಸಿ ಕಾಲುಗಳೆಡೆಗೆ ಹೊಟ್ಟೆಯನ್ನು ಎರಡು ತೊಡೆಗಳಿಂದ ಪೀಡಿಸುತ್ತ ಅವನಿಗೆ ಪ್ರಾಣಾಂತಕವಾದ ನೋವನ್ನೊದಗಿಸುವ ಜಟ್ಟಿಕಾಳಗದ ಒಂದು ಪಟ್ಟು: ಸ್ಫುರಿತ ಕೃಪಾಣಪಾಣಿಗಿದಿರಂ ನಡೆದಟ್ಟುಳಿ ತೊಟ್ಟುಮಾಯ್ದು ಡೊಕ್ಕರದೊಳೆ ಮಿಕ್ಕ ದಿಕ್ಕರಿಯನಿಕ್ಕುವಪೊಲ್ ನೆಲಕಿಕ್ಕಿ (ಪಂಪಭಾ. ೧೧-೧೦೪) : ತಗುಳ್ದು ಪತ್ತಿಸುವ ಮಾನಸಗೋಳಮೆನಿಪ್ಪ ಡೊ[ಪಾಠಾಂ. ಢ]ಕ್ಕರಕಿಕ್ಕಿದ ವಜ್ರಲೇಪಮೆನೆ (ಚಂದ್ರಪು. ೩-೮೦); ಆಂ ಪಿಡಿದುದೆ ಕತ್ತರಂ ಕರವಳಂ ಸೆರವಟ್ಟಣೆ ಹತ್ತೆ ಡೊಕ್ಕರಂ . . . ಮುಹಡಂ ದಣುವಟ್ಟೆ ಪಟ್ಟಿಸಂ ಎಂದು ಮಲ್ಲಮಾತಂ ಮಾಡಿ (ಅನಂಪು. ೨-೨೭) : ಸಿಕ್ಕಿದವು ಹೆದ್ದೊಡೆಗಳುರಗನ ತೆಕ್ಕೆಯುಲಿ ಡೆಂಡಣಿಸಿ ಫಣಿಪತಿ ಡೊಕ್ಕರಕೆ ಹಬ್ಬಿದನು ಬಿಗಿದನು ಭಟನ ಪೇರುರವ (ಕುವ್ಯಾಅ. ೧೩-೩೩) : ಅಥಟಿಂದಂ ಮೂಱುಂ ಲಗ್ಗದ ನಾಲ್ಕು ಸ್ಥಾನಮುಯ್ದು ಡೊಕ್ಕರದ ಮಹೋಗ್ರದ ಮೂವತ್ತೆರಡು ಬಿನ್ನಣದೊದವಂ ಪಲತೆಱದ ಪಾತಮಂ ನೆಱೆ ಮೆಱೆದರ್ (ತ್ರಿಪುವಿ. ೨೭-೧೭) : ಆಯತಿಕೆ ಬಂಧಂ ಡೊಕ್ಕರಂ (ಶಬಶಂ. ೪-೭೭) ; ಜಟ್ಟಿಗರ ಡೊಕ್ಕರಂ ಗಳಹತ್ತಂ ಮೊದಲೆನಿಸಿದ ಪಲವುಂ ಪಟ್ಟುಗಳ್ (ಮರಾಜ. ೨೦೭-೪೯). **ಡೊಕ್ಕರೆ :** ೨. ವೀರ ಚಿಕದೇವಂ ನೋಟಕರ್ ಮೆಚ್ಚೆ ಮಲ್ಲಗೆಯೊಳ್ಡೊಕ್ಕರೆಯೊಂಟೆ ಮಂಡಿ ಕರಲಂ . . . ಮಗುಟ್ಟಿಂತೀ ಗತಿಭೇದದಿಂ ತೊಡಕಿ ತೋರ್ಕುಂ ಸಾಧಕಪ್ರೌಢಿಯಂ (ಚಿಕವಿ. ೪-೦೪೭). **ಢಕ್ಕರ:** ೨. ನಾಲ್ಕುಂ ಸ್ಥಾನದೊಳಂ ಮೂಱುಂ ಲಗ್ಗದೊಳಂ ಐದುಂ ಢ[ಪಾಠಾಂ. ಡೊ]ಕ್ಕರದೊಳಂ . . . ಪಲತೆಱದ ಪಾತಂಗಳೊಳಂ ನೆಱೆದು (ಚಂದ್ರಪು. ೫-೭೭ ವ). **ಢೊಕ್ಕರ :** ೨. ವರ್ಗ ಚತುರ್ಥಾಕ್ಷರಂಗಳ್ಗೆ. . .ಢೆಂಕೆ, ಢೊಕ್ಕರಂ (ಶಮದ.೧೩ ಪ್ರಯೋ). ಕತ್ತರಂ ಕರವಡಂ ಸೀವಟ್ಟಣಂ ಢೊಕ್ಕರಂ ಪಸರಂ ಸಂದಣುವಟ್ಟೆ . . . ಎಂದು ಮಲ್ಲಮಾತುಮಂ ನುಡಿದು (ಬಾಧಪು. ೧೭-೧೯). **ದೊಕ್ಕರಿ :** 'ದೊಕ್ಕರಿಗೊಳ್' ಪರಾ. [ ?. / ತೆಲು. ಡೊಕ್ಕರ ]

**ಡೊಕ್ಕರ$_3$, ಡೊಕ್ಕಾರ** (ನಾ). ಒಂದು ದೇಶದ ಹೆಸರು : ಕ್ಷಾರಕರ ಹೂಣಕರ ಡೊಕ್ಕರಪಾರಕರ ಬಾರಸಹಣ ಭೂಪರೊಳಾರುಭಟೆಯುಲಿ ಕಾದಿ (ಕುವ್ಯಾಸ. ೩-೨೮). **ಡೊಕ್ಕಾರ :** ಅಂಗ ವಂಗ ಕಳಿಂಗ . . . ಡೊಕ್ಕಾರ ತುರುಷ್ಕ ಮರುಪ್ರಭೃತಿಭೂಪಾಲಕರಿಂ ಭಯಾನಕರಸಮುಂ . . . ನೆಗಟುತ್ತುಮಿರೆಯಿರೆ (ಜಗವಿ. ೨-೬೯ ವ). [ ? ]

**ಡೊಕ್ಕರಂಗೊಳ್, ದೊಕ್ಕರಿಗೊಳ್** (ಕ್ರಿ). ೧. ಒದೆತದಿಂದ ಅಥವಾ ಮುಷ್ಟಿಯ ಪೆಟ್ಟಿನಿಂದ ನಜ್ಜುಗುಜ್ಜಾಗು : ಅಂತಿಕ್ಕಿ ಡೊಕ್ಕರಂಗೊಂಡುರಸ್ಥಳ ಪರಿವಿಷ್ಟರನಾಗಿರ್ದ ಕೃಷ್ಣನಂ ದಕ್ಷಿಣದಿಕ್ಪಾಲಕಂ ನಿರೀಕ್ಷಿಸಿ (ಜಗವಿ. ೭-೨೯ ವ). ೨. ಡೊಕ್ಕರವೆಂಬ ಮಲ್ಲಯುದ್ಧದ ಪಟ್ಟನ್ನು ಹಾಕು ; ಡೊಕ್ಕರಪಟ್ಟಿನಿಂದ ಆಕ್ರಮಿಸಿ ಹಿಡಿ : ಕೋಡ ಕೆಯ್ಯ ಕಾಲೆಡೆಗಳೊಳ್ ಬಣ್ಣಮಂ ಪೆಣೆವಂದದಿಂದೇರ್ದು ಡೊಕ್ಕರಂಗೊಂಡು ಕುರುಕ್ಷೇತ್ರದಿಂದತ್ತ ಪನ್ನೆರಡುಯೋಜನಬರಮೊತ್ತುವುದುಂ (ಪಂಪಭಾ. ೧೦-೭೪ ವ). **ದೊಕ್ಕರಿಗೊಳ್:** ೨. ಭುವನೈಕಮಲ್ಲಂ ಮೋಹಮಲ್ಲನೆಕ್ಕತುಳದಿಂದಕ್ಕುಳಿಸದೆ ದೊ[ಪಾಠಾಂ. ಡೊ]ಕ್ಕರಿಗೊಂಡು ನೆಟ್ಟನೆ ಮುಱಿದಿಕ್ಕಿ ಗೆಲ್ದ ವಿದ್ಯಾಧರಕಳನಿದು (ಪಾರ್ಶ್ವಪು. ೧೭-೧೦ ವ).

[ ಡೊಕ್ಕರ$_2$ + ಕೊಳ್$_1$ ]

**ಡೊಕ್ಕರಣೆ** (ನಾ). = ಡೊಕ್ಕರ$_2$ ೨ : ಲಗಡಿಯಲಿ ಲಟಕಟಿಸುವಂತರ ಲಗಡಿಯಲಿ ಲಾಲಿಸುವ ಡೊಕ್ಕರಣೆಗಳ ಬಿಗುಹಿನ ಬಿಡೆಯ ಬಿನ್ನಾಣದಲಿ ಹೆಣಗಿದರು (ಕುವ್ಯಾಕ. ೧೯-೪೩). [ ಡೊಕ್ಕರ$_2$ + – ಅಣೆ$_4$ ]

**ಡೊಕ್ಕರಪಟ್ಟು** (ನಾ). = ಡೊಕ್ಕರ$_2$ ೨ : ಒಂದೇ ಸಮನಾಗಿ ಭೀಮ ಜರಾಸಂಧರು ಡೊಕ್ಕರಪಟ್ಟು, ಲಗಡಿ, ಕತ್ತರಿವಟ್ಟು, ನಾಗಬಂಧ ಮುಂತಾದ ಹಲವು ಪಟ್ಟುಗಳನ್ನೊಡ್ಡಿ ಕಾಳಗ ನಡೆಸಿದರು (ರಾಜಸೂ. ೨೩). [ ಡೊಕ್ಕರ$_2$ + ಪಟ್ಟು$_1$ ]

**ಡೊಕ್ಕರವಾಯ್** (ಕ್ರಿ). ೧. (ಕುತ್ತಿಗೆಯನ್ನು) ತೋಳುಗಳಿಂದ ಬಳಸಿ ಬಿಗಿಯಾಗಿ ಹಿಡಿದುಕೊಳ್ಳು : ಕೊರಳ ಡೊಕ್ಕರವಾಯ್ದು ಹಣೆಯಿಂದೊರಸಿ ಹಣೆಯನು . . . ಮೋಹದಲೊಸೆದು ಮುಂಡಾಡಿ (ತೊರರಾ. ೨-೩-೪೦). ೨. = ಡೊಕ್ಕರಂಗೊಳ್ ೨ : ಹಾವು ಹದ್ದಿನ ಪದಹತಿಗೆ ನೆಱೆ ನೋವವೊಲು ನೆಲಕೊಱಗಿ ರಕ್ಕಸನಾ ವಿಘಾತಿಯೊಳೆದ್ದು ಡೊಕ್ಕರವಾಯ್ದನಗ್ನಿಜನ (ತೊರರಾ. ೬-೧೯-೬೦). [ ಡೊಕ್ಕರ$_2$ + ಪಾಯ್$_1$ ]

**ಡೊಕ್ಕರವಿಕ್ಕು** (ಕ್ರಿ). = ಡೊಕ್ಕರಂಗೊಳ್ ೨ : ಹೊಯ್ದು ತುಱುಬನು ಹಿಡಿದು ತಡೆಗಾಲ್ವೊಯ್ದು ಕೆಡಹಿದನಸಬಡಿದು ಹೊಯ್ ಹೊಯ್ದು ಬಿಡೆ ಬೊಪ್ಪರಿಸಿ ಡೊಕ್ಕರವಿಕ್ಕಿ ರಾಘೆಯಲಿ (ಕುವ್ಯಾಕ. ೧೯-೪೮). [ ಡೊಕ್ಕರ$_2$ + ಇಕ್ಕು ]

**ಡೊಕ್ಕರಿ** (ನಾ). ಜಲಕ್ರೀಡೆಯಲ್ಲಿ ವಿನೋದಕ್ಕಾಗಿ ಒಬ್ಬರ ಮೇಲೊಬ್ಬರು ನೀರನ್ನೆರಚಲು ಬಳಸುವ (ವಿವಿಧಾಕಾರದ) ಜಲಯಂತ್ರ ; ಜೀರುಕೊಳವೆ ; ಪಿಚಕಾರಿ : ಡೊಕ್ಕರಿಗಳಿಂ ಮೊಗೆದೊರ್ಬರೊಳೊರ್ಬರಾಗಳ್ . . . ಪೊಯ್ದರೊಲವಿಂ ವಿಜಯಾವತಿಯುಂ ನರೇಂದ್ರನುಂ (ಕು ಸು ಮಾ. ೫-೧೩೫) : ಸುಧಾಂಶುಕಳೆಗಳಿವೆನೆ ಕಣ್ಗೊಳಿಪಿಂದುಶಿಲೆಯ ಡೊಕ್ಕರಿಗಳನಾಗಳೆ ಕೊಂಡು (ಶಾಂತೀಶ್ವ. ೧೦-೧೬೦). [ ? ]

**ಡೊಕ್ಕರಿಸು, ದೊಕ್ಕರಿಸಂ** (ಕ್ರಿ). ೧. ಹೊಡೆ; ಒದೆದು ಕೆಳಕ್ಕೆ ಅಪ್ಪಳಿಸು; ಗುದ್ದು : ಮಚ್ಚರಂ ಬೇಡೆಱಗಿಂ ನೀಮೆಂಬವೊಲ್ ಡೊಕ್ಕರಿಸಿ ದಿಗಿಭಹಸ್ತಂಗಳಂ (ಅರ್ಧನೇ. ೮-೯೧) : ಧಿಕ್ಕರಿಸಿ ಡೊಕ್ಕರಿಸಿ ಝಂಕಿಸಿ ಸುರಪನಗ್ನಿ . . . ಧನದನೀಶಾನ್ಯರೆಂಬವರ (ಹಡಕಾ. ೧-೪೩) ; ಹರಿ ಮದೋತ್ಕಟ ದಂತಿಯನು ಡೊಕ್ಕರಿಸಿ ಡಾವರಿಸುವವೊಲು (ಕುವ್ಯಾಕ. ೧೯-೪೯) ; ವಾಮಕರತಳದೆರಡು ಬೆರಳಿಂದ ಡೊಕ್ಕರಿಸುತಸುರೆಯಂ (ವಂಕಾರಾ. ೫-೩-೧೬). ೨. ಹಿಸುಂಕು ; ನಜ್ಜುಗುಜ್ಜು ಮಾಡು ; ಸದೆಬಡಿ ; ಸಾಯುಂವಂತೆ ಬಡಿ : ಕುರುಸೂನುವನಿರದಿಕ್ಕಿ ಮೆಟ್ಟಿ ಡೊಕ್ಕರಿಸಿದಪೆಂ (ಗದಾಯು. ೬-೨೫) ; ಪೊಡೆವೆಂ ಕಾಲನನಿಕ್ಕಿ ಡೊಕ್ಕರಿಸುವೆಂ ದೈತೇಯನಂ (ಜಗವಿ. ೩-೨೧) ; ಇಕ್ಕಿ ಕೆರಳ್ದು ಡೊಕ್ಕರಿಸಿ (ವಿಷ್ಣುಪು. ೫-೫-೬೪). ೩. ಡೊಕ್ಕರಪಟ್ಟಿನಿಂದ ಬಿಗಿಹಿಡಿ : ಓರೊರ್ವರನುರವಣೆಯಿಂದಿಕ್ಕುವೋರೊರ್ವರಂ ಡೊಕ್ಕರಿಸುತ್ತೋರೊರ್ವರಂ ಚಾಳಿಸುವ ಪದದೊಳ್ (ಜಗವಿ. ೬-೬೪) : ಚೊಕ್ಕೆಯುದನುಮಾನದೊಳು ಡೊಕ್ಕರಿಸಿ ಪಿಡಿವರಿಬಿರುದಿನ ಕಲ್ಲಮಾನಿಸರಂತಿರ್ಪ ಮಲ್ಲರ ನೆರವಿಗಳೊಳಂ (ಗಿರಿಕ. ೨-೧೦೫ ವ) : ತಡೆದರೆ ತಡೆದೊಪ್ಪ ರೊದ್ದೆಱಕೆಯೊಳಿಟ್ಟು ಹೊಡೆದರೆ ಹೊಡೆದು ಡೊಕ್ಕರಿಸಿ ಕೆಡೆದರೆ ಕೆಡೆದು ಗುರ್ಗಳೊಳೊತ್ತಿ ಭೀಕರವಡೆದು ಹೊಯ್ದಾಡಿದುವೆರಡು (ಮೋಹತ. ೩೮-೨೮). ೪. (ಆಲಂ) ಕೊರಳನ್ನು ಬಿಗಿ ಹಿಡಿ; ಉಸಿರಾಟವನ್ನು ತಡೆ: ಬಿಕ್ಕುಳಿಯ ತಾಳಿಗೆಯ ಮೂಗಿನೊಳೊಕ್ಕು ರುಧಿರದ ಧಾರೆ ಬಿಗಿದುಱೆ ಡೊಕ್ಕರಿಸಲಸು ನೀಗಿತಸುರನ ತನುವ ನಿಮಿಷದಲಿ (ಕುವ್ಯಾಅ. ೧೦-೩೮). **ದೊಕ್ಕರಿಸು** : ೧. ಮರಳಿ ಸುಗ್ರೀವನು ರಿಪುವ ದೊಕ್ಕರಿಸಿ ತಿವಿದನು (ಅರಾಮಾ. ೪-೨-೩). ೩. ತುಡುಕಿ ಪಿಡಿದು ತೊಡೆಗಳಿಂ ನಡುವಂ ದೊಕ್ಕರಿಸಿ ಬಾಹುಗತ್ತರಿಯಿಂ ಗಳಮನೊತ್ತುವುದುಂ (ಮಹಾನೀ. ೬-೭೫ ವ). [ ಡೊಕ್ಕರ$_2$ + – ಇಸು$_3$ ]

**ಡೊಕ್ಕರೆ** ‘ ಡೊಕ್ಕರ$_2$ ’ ನೋ.

**ಡೊಕ್ಕಾರ** ‘ಡೊಕ್ಕರ$_3$’ ನೋ.

**ಡೊಕ್ಕು$_1$** ( ? ) (ಕ್ರಿ). (?) : ಪರವೇದಮದು ಕರ್ತೃವಲ್ಲದೊಡೆ ಡೊಕ್ಕುದುರುಕರ್ಮದಿಂದೊಗೆದ ಸತ್ಪುಣ್ಯನಿಕರಮಂ ಪರಪರ ಸ್ವರ್ಗಾಪವರ್ಗಮಂ (ಆರಾಚ. ೩-೨). [ ←ತೆಲು. ಡೊಕ್ಕು = ನಾಶವಾಗಂ ]

**ಡೊಕ್ಕು$_2$** (ನಾ). ಒಂದು ಅನುಕರಣ ಶಬ್ದ : ಹಿಮದ ಹೊಯ್ಲಿಗೆ ಹೊದಕೆಗೊಂಬನೆ ತಮವಿರೋಧಿ ವಿಲೋಕನದಲುಭ್ರಮಿಸೆ ಹಳಚಿತು ಡೊ[ಪಾಠಾಂ. ಹೊ]ಕ್ಕು ದಡದುಡ ದೊಪ್ಪು ದಿಪ್ಪೆನಲು (ತೊರರಾ. ೬-೪೫-೫೦).

**ಡೊಕ್ಕೆ, ದೊಕ್ಕೆ** (ನಾ). ೧. ಮೈ ; ದೇಹ ; ಶರೀರ : “ಒಡಲು ಮೈ ಡೊಕ್ಕೆ” (ಶಬ್ದಮಂ. ೭೨); ಡೊ[ಪಾಠಾಂ. ದೊ]ಕ್ಕೆ ಬೇಱಾತ್ಮ ಬೇಱೆಂದಱ ವಿಡದೆ ಕಣ್ಣಿಕ್ಕಿ ಜಾನಿಸುವ ತಾಪಸಗೆ (ಭರಚ. ೩-೪೨): ನಿನ್ನಯ ಡೊಕ್ಕೆಯುಂ ಸಿಗಿದು ರಣಬಲಿಯನೀಯದೊಡಾನು ಕಕ್ಕಸದ ಬಲುಗೆಯ್ಮ ವೀರನೆ (ಘೋರಾಸು. ೧೩) : ಈ ಡೊಕ್ಕೆ ಬೀಳಲು ಸುರರ ಸೇರಿಸಲು ನೀವೆ ಗತಿಮತಿ (ತುರಂಗ. ೨೫-೨೩) ; ಶರಹತಿಯಿನನಿಬರ ಡೊಕ್ಕೆಗಳಂ ಡೋಱು ಗಳೆದನಾ ನೃಪತಿಲಕಂ (ಕೆಳನೃ. ೨-೧೪). ೨. ಹೊಟ್ಟೆ; ಉದರ: “ಡೊಕ್ಕೆಯೆನಲುದರ ” (ಕಶರ. ೧೨೪) ; ಮನದೊಳಗೆ ಕೌರವನ ತಿಕ್ಕಿ ತನಿಗರುಳ ರಕ್ತಂಗಳಂ ಶಾಕಿನಿಗೆ ಡೊಕ್ಕೆಯುಂ ತುಂಬಿಸುವೆವೆಂದು ಭೀಮಾರ್ಜುನರು ನಿಂದಿರಲು (ತುರಂಗ. ೨೪-೨೦) ; ಭೂತಗಣಕೆ ಡೊಕ್ಕೆ ತುಂಬಿತು (ತುರಂಗ. ೪೫-೯). ೩. (ಆಲಂ) ಮನಸ್ಸು ; ಅಂತರಂಗ : ಎನಗೆ ಈತ ಮಿತ್ರನುಯಿತ ಸೇವಕನುಯಿತ ಗುಣಸಾಧುವೆಂದು ಡೊಕ್ಕೆಯೊಳಗಿರಿಸದಿರು ಬೆಳಸದಿರು ಮುಂದೆ ವಿಷವಕ್ಕು . . . ಪಾಂಡವರ ನೆಳಲಿವರು (ತುರಂಗ. ೨೫-೨೯). ೪. ಒಂದು ಬಗೆಯ ಪಾತ್ರೆ (?) : ಡೊಕ್ಕೆಯೊಳಗಣ ಕಸುರ ಪರುಪೆನಗೆ ನೀಡೆ (ಕರಿಕ. ೭೯-೯). **ದೊಕ್ಕೆ** : ೧. ಇಕ್ಕಿದಳು ಬಲೆಯ ಕೃಶತರಗಾತ್ರನಾದೆ ಬರಿ ದೊಕ್ಕೆಯನ್ನುಡಿ[ಳಿ]ಸಿ ಫಲವೇನು(ತುರಂಗ. ೨-೨೩). [ ದೇ.॥ ತೆಲು. ಡೊಕ್ಕ; ಕೂ. ಡಕಿ = ಎದೆ, ಎದೆಮೂಳೆ; ಕುವಿ. ಡೋಕ್ಕು = ಅಸ್ಥಿಪಂಜರ ]

**ಡೊಗರು** ‘ಡೊಂಗಱ’ ನೋ.

**ಡೊಗರುಬೀಳು, ದೋಱುವೀೞ್** (ಕ್ರಿ). ೧. ತೂತುಬೀಳು ; ರಂಧ್ರವುಂಟಾಗು ; ಛಿದ್ರವುಂಟಾಗು. ೨. (ಆಲಂ) ಅವಿಶ್ವಾಸವುಂಟಾಗು : ನಂಬಿಕೆಕೆಡು: ಅಂತಃಪುರದಲ್ಲಿಯೂ ಎಲ್ಲಿಯಾದರೂ ಡೊಗರುಬಿದ್ದಿದೆಯೋ . . . ಎಂಬ ಬಗ್ಗೆ ಒಮ್ಮೆಯಾದರೂ ಪರೀಕ್ಷಿಸಿ ನೋಡಬೇಕೆಂದು ಭೂಪತಿಯ ಮನಸ್ಸಿಗೆ ಹೊಳೆದಿರಲೇ ಇಲ್ಲ (ಇಪ್ಪಕ. ೨೭೬). **ದೋಱುವೀೞ್** : ೧. ಪೆರ್ಬುಲಿ ಪಾಯ್ದುಗಿಯಲ್ಕೆ ದೋಱುವಿರ್ದುರದ ಸಿವುಟ್ದಿ [ಪಾಠಾಂ. ಡೋಣಿವಿರ್ದುರದ ಪಿಸುಟ್ದಿ] ಪೆರ್ದೊಡೆಯ ನುರ್ಗಿದ ದಂಡೆಯ ಭಂಗಿ ರೌದ್ರಮಾಗಿರೆ (ಜಗವಿ. ೧೬-೩೧). [ ಡೊಗರು (<ಡೊಂಗಱ) + ಬೀಳು$_1$ (<ಬೀೞ್$_1$) ]

**ಡೊಗರುಹಾಯು** (ಕ್ರಿ) .=ಡೊಗರುಬೀಳು ೧: ದಕ್ಷಿಣದ ಗೋಡೆಯ ಒಂದು ಮೂಲೆಯು ಡೊಗರುಹಾಯ್ದಿತ್ತು (ಜಾಬಲ. ೧). [ ಡೊಗರು (<ಡೊಂಗಱ) + ಹಾಯು (<ಪಾಯ್$_1$) ]

**ಡೊಗಱು** ‘ಡೊಂಗಱ’ ನೋ.

**ಡೊಗೆ** ‘ಡೋವಿ’ ನೋ.

**ಡೊಗ್ಗಾಲಿಕ್ಕು** (ಕ್ರಿ). ೧. ಮೊಣಕಾಲನ್ನು ನೆಲಕ್ಕೆ ಊರು ; ಮಂಡಿಯೂರು: ಕ್ರೈಸ್ತರು ದೇವಮಂದಿರದಲ್ಲಿ ಡೊಗ್ಗಾಲಿಕ್ಕಿ ಪ್ರಾರ್ಥನೆ ಮಾಡುತ್ತಾರೆ (ರೂಢಿ). ೨. (ಆಲಂ) ರಭಸದಿಂದ ಬರು (?): ಕರದಿ ಖಂಡೆಯವನ್ನು ಜಡಿವುತ ಭರದಿ ಡೊಗ್ಗಾಲಿಕ್ಕಿ ಪ್ರಳಯದ ಶರಧಿಯೋಲ್ ದಂಡೆತ್ತಿ ಬರುವರ್ (ದೇವೀಪ್ರ. ೬೧). [ ಡೊಗ್ಗಾಲು + ಇಕ್ಕು ]

**ಡೊಗ್ಗಾಲು, ದೊಗ್ಗಾಲು** (ನಾ). ಊರಿದ ಮೊಣಕಾಲು. 'ಡೊಗ್ಗಾಲು ಸಲಾಂ' ಪರಾ. **ದೊಗ್ಗಾಲು:** ದೊಗ್ಗಾಲಿಟ್ಟು ಸಸಿನದಿ ಹಾರಿ ಅಂತರ ಬಿಟ್ಟಿಯೊಳಗಬ್ಬಿಯನು ಮುಟ್ಟಲುಯಿಳಿದು (ಜಿರಾಮಾ. ೩೬೦-೭೦).

**ಡೊಗ್ಗಾಲು ಕೃಷ್ಣ**=ಮಂಡಿಯೂರಿದ ಕೃಷ್ಣ ; ಅಂಬೆಗಾಲಿನ ಕೃಷ್ಣ. **ಡೊಗ್ಗಾಲುಹಾಕು**=(ಆಲಂ)ಬಹಳ ಶ್ರಮಪಡು: ಹಪ್ಪಳಾ ಮುರಿಯೋಕೆ ಡೊಗ್ಗಾಲು ಹಾಕಬೇಕೇ? (ಗಾದೆ). [ ಡೊಗ್ಗು + ಕಾಲು$_1$(<ಕಾಲ್$_1$) ]

**ಡೊಗ್ಗಾಲುಸಲಾಂ** (ನಾ). ೧. ಮೊಣಕಾಲನ್ನು ಊರಿಕೊಂಡು, ಬಲಗೈಯಿಂದ ಮೂರುಸಲ ಹಣೆಯನ್ನು ಮುಟ್ಟುತ್ತ ಮಾಡುವ ವಂದನೆ. ೨. ಬೀಳ್ಕೊಡುಗೆ : ಸುಬ್ರಹ್ಮಣ್ಯದ ಸೀಮೆಗೆ 'ಡೊಗ್ಗಾಲುಸಲಾಂ' ಹೊಡೆಯುತ್ತಿದ್ದೆ (ಬಿಟ್ಟಜೀ. ೫೮). [ ಡೊಗ್ಗಾಲು + ಸಲಾಂ ]

**ಡೊಗ್ಗಾಲೂರು, ದೊಗ್ಗಾಲೂರು** (ಕ್ರಿ). ೧. ಮೊಣಕಾಲನ್ನು ನೆಲದ ಮೇಲೆ ಊರು : ಮೊಣಕಾಲನ್ನೂರು. ೨. (ಆಲಂ) ಸೋಲು ; ಪರಾಜಯಹೊಂದು: ಈ ಸಲ ಪರೀಕ್ಷೆಯಲ್ಲಿ ಡೊಗ್ಗಾಲೂರುವ ಪ್ರಸಂಗ ಎಲ್ಲಿ ಬರುತ್ತದೋ ಎಂದು . . . ಚಿಂತಿಸುತ್ತಿದ್ದ (ಸಮಜೀ. ೩೯೦) ; ಅವನು ಡೊಗ್ಗಾಲೂರಿ ಅಸಹಾಯನಾಗಿದ್ದ (ಸಮಜೀ. ೧೨೦೫). **ದೊಗ್ಗಾಲೂರು :** ೧. ತಿಟ್ಟಿನಲ್ಲಿ ಬುಡಿಯನ್ನೆಳೆಯಲಾರದೆ ಎತ್ತುಗಳು ದೊಗ್ಗಾಲೂರಿದವು (ರೂಢಿ). [ ಡೊಗ್ಗಾಲು + ಊರು$_1$ (<ಊಱು$_1$) ]

**ಡೊಗ್ಗಿಸು** (ಕ್ರಿ). ಬಾಗುವಂತೆ ಮಾಡು ; ಬಗ್ಗಿಸು : ನೀವು ಎಲ್ಲಾರಂಗ ಸಂಸಾರ ಮಾಡಿಕೊಂಡು ಇದ್ದು ತೋರಿಸಿದರ ಸಮಾಜ ನಿಮಗ ತಲೀ ಡೊಗ್ಗಿಸಿ ಸಲಾಮು ಹೊಡಿತದ (ಅಪನಾ. ೧೯೦).

[ ಡೊಗ್ಗು + – ಇಸು$_3$ ]

**ಡೊಗ್ಗಿಱು** (ಕ್ರಿ). ಬಾಗಿ (ಬೋರಲಾಗಿ) ಬೀಳು : ಸುಖ ಬೇಸಱಂ ನುಡಿಪೊಡೊಬ್ಬರ ಕಾಣೆನೊಂದು ಹೊರಸಿನೊಳೊಬ್ಬಳೇ ಡೊಗ್ಗಿಱಿದು ಕೆಡೆವೆಂ (ಸಮ್ಯಕೌ. ೫-೩೨). [ ಡೊಗ್ಗು + ಇಱು$_1$ ]

**ಡೊಗ್ಗು** (ಕ್ರಿ). ೧. ಬಾಗು ; ಬಗ್ಗು : ಆಗ ನೀವು ಡೊಗ್ಗಿ ಮುಜರೆ ಮಾಡುತ್ತಿದ್ದಿರಿ (ಹಬ್ಬಿಬ. ೨೦೦). ೨. ವಂದಿಸು ; ನಮಸ್ಕರಿಸು : ಕ್ಷೀರಾಬ್ಧಿಗಂ ಪೋಗಿ ಡೊಗ್ಗಿದರು ಮುರವೈರಿಗಂ ಸುರರು ಪುಯ್ಯಲಿಡುತ (ತುರಂಗ. ೪-೨೭). ೩. ಜಗ್ಗು ; ಕುಗ್ಗು ; ಸೋಲು : ಡೊಗ್ಗುವನೆ ಕಲಿಪಾರ್ಥ ಸರಳುಗಳ್ಪಂಪರಿಸಿ ನುಗ್ಗಿದನು (ತುರಂಗ. ೪೭-೪೭); ಡೊಗ್ಗುವನೆ ಷಡ್ರಥರಿಗಂ ಬಾಲಂ (ತುರಂಗ. ೫೩-೧೨).

**ಡೊಗ್ಗಿ ನಡೆ** = ವಿಧೇಯವಾಗು ; ಆಜ್ಞಾವರ್ತಿಯಾಗು : ಹಿಂಗ ಡೊಗ್ಗಿನಡೆದರೆ ನನ್ನ ಗುಮಾಸ್ತಿಕೆ ನಡದ್ಹಾಂಗಾತು (ಪ್ರೇಮಾಶ್ರ. ೧೨) ; ಗುರುಗಳಿಗೆ ಡೊಗ್ಗಿ ನಡೆಯಬೇಕು (ರೂಢಿ).

[ ದೇ.॥ ತುಳು. ಡೊಗ್ಗು, ದೊಗ್ಗು ; ತೆಲು. ಡೋಗು. ದೋಗು ]

**ಡೊಣಗ** 'ದೊಣ್ಣೆಗ' ನೋ.

**ಡೊಣೆ$_1$** 'ಟೊಣೆ' ನೋ.

**ಡೊಣೆ$_2$** 'ದೊಣೆ$_1$' ನೋ.

**ಡೊಣೆ$_3$** 'ತೊಣೆ$_2$' ನೋ.

**ಡೊಣೆಗಣ್ಣು** (ನಾ). (ಉಕ) ಕುಳಿಬಿದ್ದ ಕಣ್ಣು ; ಗುಳಿಗಣ್ಣು: (+).

[ ಡೊಣೆ$_2$ (<ದೊಣೆ$_1$) + ಕಣ್ಣು (<ಕಣ್) ]

**ಡೊಣೆಗತ್ತಿ** (ನಾ). ಒಂದು ಬಗೆಯ ಕತ್ತಿ : ಡೊಣೆಗತ್ತಿ ಕೊಂಗತ್ತಿ ಧರಿಸಿ ವಾಲಗದಿ ನಿಂದಿಹರು (ಸೌಂದಕಾ. ೩-೧೧೧).

[ ಡೊಣೆ$_1$ (<ಟೊಣೆ) + ಕತ್ತಿ ]

**ಡೊಣೆಗೆ** (ನಾ). (?) : ಪಗೆಗಳ ಶೃಂಗಲುಮಂ ಡೊಣೆಗೆಗೆತ್ತಿ ತತ್ಪುರವರೇಶನಾನಂದಲತಾಳಿಗೆಗಳ ಪರ್ಚಿಪುದೆಂತುಂ ಬಗೆಗೆನಿತುಂ ಬಿಂಕದಿಂದೆ ನಿಡು ಡಂಕಣಿಗಳ್ (ದಶಕು. ೧-೩೫). [ ? ]

**ಡೊಣೆನಾಯಕ** 'ದೊಣೆನಾಯಕ' ನೋ.

**ಡೊಣೆಯುಪ್ಪು** (ನಾ). ಒಂದು ಬಗೆಯ ಉರುಟಾದ ಉಪ್ಪು : "ಊಷರಕಂ– ಅಟ್ಟುಪ್ಪು, ಡೊಣೆಯುಪ್ಪು " (ಒಷಧಿ. ೧೭) ; " ಪಾಕ್ಯಂ, ಬಿಡಂ – ಈ ೨ ಕೃತಕ ಅಟ್ಟುಪ್ಪಿನ ಹೆಸರು. ತೋಳೆದು ಕಾಯಿಸಿ ತೆಗೆದ ಉಪ್ಪು, ಡೊಣೆಯುಪ್ಪು ಮತ್ತು ಪೆಟ್ಲುಪ್ಪು ಮುಂತಾದ ಅಡಿಗೆಯಿಳಿಸಿದ ಕೃತ್ರಿಮ ಲವಣಕ್ಕೂ ಬಿಡಾಲವಣಕ್ಕೂ ಪೆಸರುಗಳು " (ಸಿದ್ಧಾಂತಿ. ೧೯೫).

[ ಡೊಣೆ? + ಉಪ್ಪು$_1$ ]

**ಡೊಣೆವು** (ನಾ). (ಗಾಯದ) ಬಿರುಕು ; ದೊಗರು ; ತೋಡು (?) : ಅಂಬಿನ ಬುಬಲೊಳಂ ಜೋಡಾಗಿ ಕೋಡನೂಱಿ ಕೆಡೆದ ಗಜವ್ರಜಂಗಳ ಡೊಣೆವು[ಪಾಠಾಂ. ಣವು, ಣೆವು]ಗಳಿಂದೊಱ್ತು ಪರಿವ ನೆತ್ತರ ಕಡಲ್ಗಳುಂ (ಪಂಪಭಾ. ೧೧-೧೧೬ ವ). [ ? ]

**ಡೊಣೆವೋಗು** 'ದೊಣೆವೋಗು' ನೋ.

**ಡೊಣ್ಣಪ್ಪ** (ನಾ). ೧. ದಪ್ಪವಾಗಿರುವವನು; ಸ್ಥೂಲದೇಹದ ವ್ಯಕ್ತಿ : ಅವನೊಬ್ಬ ಡೊಣ್ಣಪ್ಪ (ರೂಢಿ). ೨. ಸೋಮಾರಿ ; ಆಲಸಿ : ಉಂಬೋಕೆ ಉಣ್ಣೋಕೆ ಅಣ್ಣಪ್ಪ, ಕೆಲಸಕ್ಕೆ ಮಾತ್ರ ಡೊಣ್ಣಪ್ಪ (ಗಾದೆ).

[ ಡೊಣ್ಣೆ$_1$ (<ದೊಣ್ಣೆ) + ಅಪ್ಪ$_1$ ]

**ಡೊಣ್ಣೆ$_1$** 'ದೊಣ್ಣೆ' ನೋ.

**ಡೊಣ್ಣೆ$_2$** 'ದೊಣ್ಣೆ' ನೋ.

**ಡೊಣ್ಣೆ$_3$** 'ತೊಂಡೆ$_2$' ನೋ.

**ಡೊಣ್ಣೆಕಾಟ** 'ತೊಂಡೆಕೇತ' ನೋ.

**ಡೊಣ್ಣೆಕೇತ** 'ತೊಂಡೆಕೇತ' ನೋ.

**ಡೊಣ್ಣೆಗ** 'ದೊಣ್ಣೆಗ' ನೋ.

**ಡೊಣ್ಣೆಮುಳ್ಳು** 'ದೊಣ್ಣೆಮುಳ್ಳು' ನೋ.

**ಡೊಣ್ಣೆಮೂಗು** 'ದೊಣ್ಣೆಮೂಗು' ನೋ.

**ಡೊಣ್ಣೆಸಣ್ಣಕ್ಕಿ** (ನಾ). ಮಧ್ಯಮಗಾತ್ರದ ಒಂದು ಬಗೆಯ ಅಕ್ಕಿ: (+).

[ ಡೊಣ್ಣೆ$_1$ (<ದೊಣ್ಣೆ) + ಸಣ್ಣ + ಅಕ್ಕಿ$_1$ ]

**ಡೊಣ್ಣೆಹುಳು** (ನಾ). ಸಗಣಿಯಲ್ಲಿ ಹುಟ್ಟಿ ಬೆಳೆಯುವ ಒಂದು ಬಗೆಯ ದಪ್ಪ ಹುಳು ; ಗೊಣ್ಣೆಹುಳು: (+).

[ ಡೊಣ್ಣೆ$_1$ (<ದೊಣ್ಣೆ) + ಹುಳು$_2$ (<ಪುೞು$_1$) ]

**ಡೊಪ್ಪೆ, ದೊಪ್ಪ** (ನಾ). ದಪ್ಪ ದೊಣ್ಣೆ : (+). **ದೊಪ್ಪೆ :** (+).

[ ದೇ.॥ ತೆಲು. ಡೊಪ್ಪ, ದೊಪ್ಪ ; ಕೊಲಾ. ಡೊಂಪಾ, ಡೊಂಪ ; ನಾಯ್ಕಿ. ಡೊಪ್ಪ ; ಪರ್ಜಿ. ಗೊಂಡಿ. ಡೊಪ್ಪೋ ]

**ಡೊವಿಗೆ** 'ಡೋವಿ' ನೋ.

**ಡೊಳುಹೊಟ್ಟೆ** 'ಡೊಳ್ಳುಹೊಟ್ಟೆ' ನೋ.

**ಡೊಳ್ಳ** (ನಾ). ೧. ದೊಡ್ಡ ಹೊಟ್ಟೆಯವನು ; ಬೊಜ್ಜು ಬೆಳೆದ ಹೊಟ್ಟೆಯುಳ್ಳವನು. ೨. (ಆಲಂ) ಸೋಮಾರಿ ; ಆಲಸಿ : ಕಳ್ಳರಿಗೆ ಸುಳ್ಳರಿಗೆ ಡೊಳ್ಳರಿಗೆ ಡೊಂಬರಿಗೆ ಸುಳ್ಳುಗೊರವರಿಗೆ ಕೊಡುವವರು ಧರ್ಮಕ್ಕೆ ಎಳ್ಳಷ್ಟು ಕೊಡರು (ಸರ್ವಜ್ಞ. ೭೭೩).

[ ಡೊಳ್ಳು$_1$ (<ಟೊಳ್ಳು) + – ಅ$_7$ ]

**ಡೊಳ್ಳಾಸ, ದೊಳ್ಳಾಸ** (ನಾ). ೧. ಮೋಸ ; ವಂಚನೆ ; ಕಪಟ : "ಡೊಳ್ಳಾಸಮೆ ವೈಸಿಕಮೆನಿಪ್ಪುದು" (ಚತುನಿ. ೨೦); "ಡೊ[ಪಾಠಾಂ. ದೊ]ಳ್ಳಾಸಮೆನಲ್ ಕಪಟ" (ಭಾರನಿ. ೩೫); ಬಹಳಾಭ್ಯಾಸಿಗಳು ಡಾವರಿಸಿದರು ಡೊಳ್ಳಾಸವೋ ರಿಪುಸೇನೆ ಕಾಣದು ಚಿತ್ರಪಯಗತಿಯ (ಕುವ್ಯಾ.ಗ. ೭-೮) ; ಹುಸಿ ನುಸಿಳು ಡೊಳ್ಳಾಸ ಹಿಂಸಾವ್ಯಸನವು . . . ಎಂಬಿವರೆಸಕ ಹೊದ್ದ ದಯೋಧಿಪನ ಧರಣೀತಳಾಗ್ರದಲಿ (ತೊರರಾ. ೧-೩-೨೭) ; ವಂಚನೆ ಚಾಟು ಚೆಲ್ಲ ಡೊಳ್ಳಾಸ ಬೆಡಂಗು (ಯಾದವ. ೩-೯೩). ೨. ಬೆಡಗು ; ಒಯ್ಯಾರ ;

ಬಿನ್ನಾಣ; ವಿಲಾಸ. 'ಡೊಳ್ಳಾಸಕಾತಿ' ಪರಾ. ೩. ವಿಸ್ತಾರ; ವ್ಯಾಪಕತೆ; ಅತಿಶಯ: ಡೊ[ಪಾಠಾಂ. ದೊ]ಳ್ಳಾಸದಲಿ ಡಾವರಿಸಿದವು ಕಿಡಿ ಧೂತ ಧೂಮದಲಿ (ಕುವ್ಯಾ.ಆ. ೨೦-೭೦); ಇಕ್ಕಡಿಯ ಬಸುಬುಚ್ಚುಗಳ ನರಸೊಕ್ಕು ಡೊ[ಪಾಠಾಂ. ದೊ]ಳ್ಳಾಸದ ಮಹಾಭಯವೆಕ್ಕಸರದಲಿ ಕಾಣಲಾದುದು ವೈರಿಬಲದೊಳಗೆ (ಕುವ್ಯಾದ್ರೋ. ೧೭-೨೬). **ದೊಳ್ಳಾಸ:** ೧. ತವಕದ ತವರ್ಮನೆ ವಿಲಾಸದ ನಿವಾಸವು . . . ವೈಸಿಕದ ನಿವಹ ದೊಳ್ಳಾಸದಾಗರ ಜೊತ್ತಿನಿಕ್ಕೆ ಕೈತವ ಕಟಕಿಗಳ ಮಂದಿರ (ಸೌಂದಪು. ೭-೫೦); ತೊಡರ್ದ್ ದೊಳ್ಳಾಸಂ ಸುರೆಯುದ್ವಿವಿಸಿದ ದೇಶವಿದೆನೆ ಸೂಳೆಗೇರಿ ಕಣ್ಗೆಸೆದಿರ್ಕುಂ (ವೀರವಿ. ೬-೯೬). ೩. ದೊ[ಪಾಠಾಂ. ಡೊ]ಳ್ಳಾಸದಲಿ ಡಾವರಿಸಿದವು ಕಿಡಿ ಧೂತ ಧೂಮದಲಿ (ಕುವ್ಯಾ.ಆ. ೨೦-೭೦).

**ಡೊಳ್ಳಾಸಕಾತಿ** (ನಾ). ಬಿನ್ನಾಣಗಾತಿ; ಬೆಡಗಿ; ಒಯ್ಯಾರ ಮಾಡುವವಳು: ಡೊಳ್ಳಾಸಕಾತಿಯರಾ ವಿಬುಧಪತಿಯೋಲಗವ ಹೊಕ್ಕರು ನವಾಯಿಯಲಿ (ಕುವ್ಯಾ.ಆ. ೭-೯೦). [ಡೊಳ್ಳಾಸ + -ಕಾತಿ]

**ಡೊಳ್ಳಾಸವಿದ್ಯೆ** (ನಾ). ಮೋಸದ ವಿದ್ಯೆ; ಕಪಟವಿದ್ಯೆ: ನಿಮ್ಮ ಬಿಬುನುಡಿಯಲಗಿನಲಿ ಡಾವರಿಸಿದಿರಿ ಡೊಳ್ಳಾಸವಿದ್ಯೆಯಲಿ (ತೊರರಾ. ೩-೪-೨೦). [ಡೊಳ್ಳಾಸ + ವಿದ್ಯೆ]

**ಡೊಳ್ಳಿಗ** (ನಾ). ಡೊಳ್ಳು ಹೊಟ್ಟೆಯವನು; ಉಬ್ಬಿದ ಹೊಟ್ಟೆಯುಳ್ಳವನು: ಮುಂದೆ ಕುಳ್ಳಿರ್ದ ಸೆಟ್ಟಿ ಡೊಳ್ಳಿಗನಪ್ಪುದಱಿಂ ಪರೀಕ್ಷಿಸದೆ ಪೋದರ್ (ಧರ್ಮಾಮೃ. ೦೨-೭೫). [ಡೊಳ್ಳು$_1$ (<ಟೊಳ್ಳು) + -ಇಗ]

**ಡೊಳ್ಳು$_1$** 'ಟೊಳ್ಳು' ನೋ.

**ಡೊಳ್ಳು$_2$** 'ಡೋಲು' ನೋ.

**ಡೊಳ್ಳುಗ** (ನಾ). ೧. = ಡೊಳ್ಳಿಗ. ೨. (ಆಲಂ) ಪರಾಕ್ರಮವಿಲ್ಲದವನು: ಆಳ್ಕೆದೆಯ ಮನ್ನೆಯರನೊಗ್ಗಿನ ಡೊಳ್ಳುಗರ ಕಟವಾಯ ಕೊಯ್ (ಕುವ್ಯಾದ್ರೋ. ೩-೨೦). [ಡೊಳ್ಳು$_1$ (<ಟೊಳ್ಳು) + -ಗ$_2$]

**ಡೊಳ್ಳುಹೊಟ್ಟೆ, ಡೊಳುಹೊಟ್ಟೆ** (ನಾ). ದೊಡ್ಡದಾಗಿ ಮುಂದಕ್ಕೆ ಚಾಚಿಕೊಂಡಿರುವ ಹೊಟ್ಟೆ; ಬೊಜ್ಜು ಬೆಳೆದಿರುವ ಹೊಟ್ಟೆ: ಡೊಳ್ಳು ಹೊಟ್ಟೆಗೆ ಸಾಲದಿನ್ನುಂ ಕೊಂಡು ಬಾ (ಬಸಪು. ೫೯-೦೦): ಕುಕ್ಕುಱಿಸಲೊಡನಾ ಡೊಳ್ಳುಹೊಟ್ಟೆಯಿಬ್ಬಗಿಯಾಗಿ (ವೀಕ್ಷಿಪು. ೩-೪-೨೬): ಡೊಳ್ಳುಹೊಟ್ಟೆಯನೆತ್ತಿಕೊಂಡೋಡಲಾಱದೆ ಹಳ್ಳಕೊಳ್ಳದಲಿ ಮುಗ್ಗರಿದು (ಕಂನವಿ. ೧೭-೩೫). **ಡೊಳುಹೊಟ್ಟೆ:** ಒಣಕಲು ಗೌರಿಯನಿಣಿಕಿಣಿಕಿ ನೋಡಿದ ನೆಮ್ಮೂರ ಡೊಳುಹೊಟ್ಟೆ ಮಾದ (ಇಂಜಾಪ. ೧೧೪-೫೯); ಡೊಳುಹೊಟ್ಟೆಗೆ ನಾಗರ ಬಿಗಿದವನೇ (ಗಡೀಶ. ೦-೦೨).

[ಡೊಳ್ಳು$_1$ (<ಟೊಳ್ಳು) + ಹೊಟ್ಟೆ$_1$ (<ಪೊಟ್ಟೆ$_1$)]

**ಡೊಳ್ಳುಹೊಟ್ಟೆಗ** (ನಾ). ೧. ಹೊಟ್ಟೆ ದೊಡ್ಡದಾಗಿ ಮುಂದಕ್ಕೆ ಚಾಚಿಕೊಂಡಿರುವವನು. ೨. ಲಂಬೋದರ; ಗಣಪತಿ: ನುಡಿದಂತೆ ಕೂರ್ಗೋಲ ಕೊರತೆಕ್ಕೊ ಎಂದೆನುತಿಡಿದನು ಡೊಳ್ಳುಹೊಟ್ಟೆಗನು (ವೋಹತ. ೩೮-೫೦). [ಡೊಳ್ಳುಹೊಟ್ಟೆ + -ಗ$_2$]

**ಡೊಳ್ಳೆ** 'ಟೊಳ್ಳು' ನೋ.

**ಡೊಳ್ಳೊಡಲು** (ನಾ). ದೊಡ್ಡದಾಗಿ ಮುಂದಕ್ಕೆ ಚಾಚಿದ ಹೊಟ್ಟೆ: ರಾಹುಮುಖನು ದೊಡ್ಡ ಕಂಗಳವನು ದೀರ್ಘದೇಹಿ ಡೊಳ್ಳೊಡಲ ಕರಿಕನು (ಭರವ. ೨೫-೫೬). [ಡೊಳ್ಳು$_1$ (<ಟೊಳ್ಳು) + ಒಡಲು (<ಒಡಲ್)]

**ಡೋಂಗಾ** (ನಾ). "ತಾಳೆಮರದ ತುಂಡಿನಲ್ಲಿ ತೋಡಿ ತಯಾರಿಸಿರುವ ಒಬ್ಬರು ಅಥವಾ ಇಬ್ಬರು ಹೋಗಲು ಅನುಕೂಲಿಸುವ ಸಣ್ಣ ದೋಣಿ" (ನಿಬಂಧ. I, ೩೨೩ ಅಡಿಟಿ): ಆಚೆಯ ತೀರದಲ್ಲಿರುವ ಡೋಂಗಾ ಒಂದನ್ನು ತೋರಿಸಿಕೊಡುವುದಾಗುತ್ತದೆ (ನಿಬಂಧ. I, ೩೨೩).

[←ಹಿಂ. ಮರಾ. ಡೋಂಗಾ]

**ಡೋಂಗಿ** 'ಢೋಂಗಿ' ನೋ.

**ಡೋಂಗು** 'ಢೋಂಗಿ' ನೋ.

**ಡೋಕಾ** 'ಧೋಕಾ' ನೋ.

**ಡೋಕಾರಿ** (ನಾ). (ಉಕ) ೧. ಕಪಟ; ಮೋಸ; ವಂಚನೆ: ಅನ್ನವಿಲ್ಲದ ಸಾಯುತ್ತಾಳಂತೆ. ಪ್ರಭೂ, ಇದೆಲ್ಲವೂ ಢೋಂಗಿ ಢೋಂಗಿ, ಡೋಕಾರಿ (ಹನ್ನೊಂದ. ೬೫). ೨. ಅಪಾಯಕ್ಕೆ ಒಳಗಾದಂತೆ ಸೋಗುಹಾಕಿ ಅಳುವ ವ್ಯಕ್ತಿ; ನೋಯಿಸದಿದ್ದರೂ ನೋವಾದಂತೆ ನಟಿಸುತ್ತ ಕೂಗಾಡುವ ವ್ಯಕ್ತಿ: ಮಾತುಮಾತಿಗೆ ಅಳುತ್ತೀಯಲ್ಲೇ ಡೋಕಾರಿ (ಅರಗಿ. ೮೫). [?]

**ಡೋಕಾರಿಗ** (ನಾ). ಮೋಸಗಾರ: ಗೊಲ್ಲರ ಕೂಡಲಿ ಬೆಳದು ಆಕಳನು ಕಾಯ್ದು ಕಾಕುಲಾತಿಯಿಂದ ಡೋಕಾರಿಗನಾಗಿ ನೂಕಲು ಭಯ ಬಡದೆ (ವೋಕ್ಷದೀ. ೨೦-೨). [ಡೋಕಾರಿ + -ಗ$_2$]

**ಡೋಕಾರಿತನ** (ನಾ). ನೋವಾದಂತೆ ನಟನೆಮಾಡಿ ಅಳುವಿಕೆ; ಅಪಾಯವಿಲ್ಲದೆಯೇ ಗದ್ದಲವೆಬ್ಬಿಸುವ ಸ್ವಭಾವ: ಇಲ್ಲದ ಗಾಬರಿಯನ್ನು ತೋರಿಸುವುದು: ಡೋಕಾರಿತನವಮಾಡಿ, ನಿನ್ನ ಕೆಲಸ ಮಂದೀ ಮೈ ಮೇಲೆ ಹಾಕುವ ಹಂಚಿಕೆ ಮಾಡುತ್ತೀ (ಮುಂಬಯಿ. ೪-೦೩೪); ಉರವಲದ ಹೊಗೆಯ ಬಾಣತಿ ಬಿಳುಪಿನಾ ಬೇನೆ; ಡೊಂಕುತನ, ಡೋಕಾರಿತನದ ತಂಬಾಕುಹೊಗೆ (ದ್ಯಾವಾಪೃ. ೭-೯): ಡೋಕಾರಿತನಕ್ಕೆ ಡಾಕ್ಟರೇನು ಔಷಧಿ ಕೊಡುತ್ತಾರೆ, ವಣ್ಣಾ (ಹುಚ್ಚಾಟ. ೨೬). [ಡೋಕಾರಿ + -ತನ]

**ಡೋಗಿ** 'ಡೋವಿ' ನೋ.

**ಡೋಗಿಬರ, ಡೌಗಿಬರ** (ನಾ). ಆಹಾರವಿಲ್ಲದೆ ಸತ್ತ ಪ್ರಾಣಿಗಳ ಮತ್ತು ಮನುಷ್ಯರ ತಲೆಬುರುಡೆಗಳು ದಿಕ್ಕುದಿಕ್ಕುಗಳಲ್ಲಿ ಉರುಳಾಡುತ್ತಿದ್ದ ಭಯಂಕರವಾದ ಬರಗಾಲ: ಸನ್ ೧೮೭೧ನೇ ವರ್ಷದ ಬರಕ್ಕೆ "ಡೋಗೀಬರ" ವೆಂಬ ಹೆಸರು ಬಿದ್ದದೆ; ಮನುಷ್ಯರ ತಲೆ ಡೋಗಿಗಳು ದಿಕ್ಕಿಲ್ಲದೆ ಉರುಳಾಡುತ್ತಿದ್ದದರಿಂದ ಅದರ ಸ್ಮರಣೆ ಜನರೊಳಗೆ ಇನ್ನೂ ಪೂಳಿತಾಗಿ ಇರುತ್ತದೆ (ಕಥಾಗಿ. ೨೬೬). **ಡೌಗಿಬರ:** ಹಲವು ವರ್ಷಗಳ ಹಿಂದೆ 'ಡೌಗೀಬರ'ದಲ್ಲಿ ಅವನ ಸವಿಾಪದ ಸಂಬಂಧಿಕರೆಲ್ಲರೂ ತೀರಿಹೋಗಿದ್ದರು (ಪಾತರ ೧೮); ಹಿರಿಯರು ಡೌಗಿಬರದಲ್ಲಿ ದಿನನಿತ್ಯ ಬಡವರಿಗೆಲ್ಲ ಕಾಳು ಹಂಚಿದ ಮೇಲೆ ತಾವು ಊಟ ಮಾಡುತ್ತಿದ್ದರಂತೆ (ಗ್ರಾವಿಾಯ. ೧೭೫). [ಡೋಗಿ (<ಡೋವಿ) + ಬರ$_1$ (<ಬಱ)]

**ಡೋಣಿ$_1$** 'ದೊಣೆ$_1$' ನೋ.

**ಡೋಣಿ$_2$** 'ದೋಣಿ$_3$' ನೋ.

**ಡೋಣಿಡು** (ಕ್ರಿ). ನೀರು ತುಂಬುವ ದೋಣಿಯನ್ನು ಮುಂದೆ ಇಡು,- ಇರಿಸು: ಡೋಣಿಟ್ಟು ವನಕ್ಕೆ ನೀರೆಱೆವ ಸಂಭ್ರಮಮುಣ್ಮಿದುದೂರ ಪಕ್ಕದೊಳ್ (ಸೂಕ್ತಿಸು. ೧೦-೯೩).

[ಡೋಣಿ$_2$ (<ದೋಣಿ$_3$) + ಇಡು$_1$]

**ಡೋಣಿವಟ್ಟೆ** (ನಾ). (ನಡೆದಾಟದಿಂದ ಸವೆದು) ತಗ್ಗುಬಿದ್ದ ದಾರಿ: ನಡನಡೆದು ವಿಾಗೆ ಡೋಣಿವಟ್ಟೆ ಬಿದ್ದಿರ್ದಪ್ಪುದು (ಸೌಂದಪು. ೦೫-೬೩).

[ಡೋಣಿ$_1$ (<ದೊಣೆ$_1$) + ಬಟ್ಟೆ$_1$]

**ಡೋಣಿವೀಟ್** (ಕ್ರಿ). ದೊಗರು ಬೀಳು; ಹಳ್ಳವುಂಟಾಗು; ಕುಳಿಯಾಗು: ಕರಿ ಪೊಣರ್ದೆಕ್ಕಲಂ ಮಲೆತು ಪೆರ್ಬುಲಿ ಪಾಯ್ದುಗಿಯುಳ್ಕೆ ಡೋಣಿವಿಟ್ಟುರದ[ಪಾಠಾಂ. ದೋಣಿಉವಿರ್ದುರದ]ಪಿಸುಟ್ಟ ಪೆರ್ದೊಡೆದು ನುರ್ಗಿದ ವಂಡೆಯ ಭಂಗಿ ರೌದ್ರಮಾಗಿರೆ (ಜಗವಿ. ೦೬-೨೦).

[ಡೋಣಿ$_1$ (<ದೊಣೆ$_1$) + ಬೀಟ್$_1$]

**ಡೋಣಿವೋಗು** 'ದೊಣೆವೋಗು' ನೋ.

**ಡೋಬಿ** 'ಧೋಬಿ' ನೋ.

**ಡೋಬಿಕಜ್ಜಿ** (ನಾ). ಒಂದು ಬಗೆಯ ಚರ್ಮರೋಗ್ಗ,-ಕಜ್ಜಿ ; ೯ ಅಗಸನು ಚರ್ಮರೋಗಿಯ ಬಟ್ಟೆಯೊಡನೆ ಸೇರಿಸಿ ಒಗೆದಿರುವ ಬಟ್ಟೆಯನ್ನು ಉಪಯೋಗಿಸುವುದರಿಂದ ಅಂಟುವ ಒಂದು ಬಗೆಯ ಕಜ್ಜಿ: ಎಲ್ಲರ ಮನೆಯ ಬಟ್ಟೆಗಳನ್ನು ಒಟ್ಟಿಗೆ ಸೇರಿಸಿ ಒಗೆಯುವ ಕಾರಣ, ಕಜ್ಜಿ, ಕುರು, ಡೋಬಿಕಜ್ಜಿ (Doby's itch) ಮುಂತಾದ ಚರ್ಮರೋಗಗಳು . . . ಅಗಸರ ಮನೆಯಿಂದ ಬಂದ ಮಡಿಬಟ್ಟೆಗಳಿಂದ ಒಬ್ಬರಿಂದ ಒಬ್ಬರಿಗೆ ಹರಡಬಹುದು (ಗೃಹವಿ. ೮೨). [ ಡೋಬಿ (<ಧೋಬಿ) + ಕಜ್ಜಿ ]

**ಡೋಮೆ** (ನಾ). ಒಂದು ಬಗೆಯ ದೊಡ್ಡ ಡೋಲು : "ಯಶಃಪಟಃ, ಢಕ್ಕಾ – ೨ ಢವಣೆ ಹೆಸರು. ಅಂದರೆ ಡೋಮೆ" (ಸಿದ್ಧಾಂತಿ. ೩೪). 'ಡವಣೆ' ಪರಾ. [ ? ]

**ಡೋಯಿಗೆ** 'ಡೋವಿ' ನೋ.

**ಡೋರಿಗೊರೆ** 'ಡೋಜುಗೋಜು' ನೋ.

**ಡೋರೆ** 'ದೋರ್ರೆ$_1$' ನೋ.

**ಡೋಲ** (ಗು). ೧. ಚಂಚಲವಾದ ; ಓಲಾಡುವ. (ನಾ). ೨. [ನಾಟ್ಯ] ಹದಿಮೂರು ಸಂಯುತ ಹಸ್ತಗಳಲ್ಲೊಂದು ; ಎರಡು ಕೈಗಳನ್ನೂ ಸೇರಿಸಿ ಅಭಿನಯವನ್ನು ಮಾಡುವಾಗ ಉಪಯೋಗಿಸುವ ಒಂದು ವಿಧದ ಹಸ್ತಮುದ್ರೆ ; ದೋಲ : ನಾಟ್ಯಶಾಸ್ತ್ರದಲ್ಲಿ ಹೇಳಿರುವ ಸಂಯುತ ಹಸ್ತಗಳು ಯಾವುವೆಂದರೆ – ೧. ಅಂಜಲಿ . . . ೮. ಡೋಲ . . . ೧೩. ವರ್ಧಮಾನ (ಅಭಾನ್ಯ. ೪೮). [ ಸಂ. ]

**ಡೋಲಕ** (ನಾ). ಒಂದು ಬಗೆಯ ಚರ್ಮವಾದ್ಯ : ನೃತ್ಯಕಾಲದಲ್ಲಿ ಒಂದಲ್ಲ ಒಂದು ಬಗೆಯ ಡೋಲು, ಡೋಲಕ, ಡಮರು, ತಮಟೆ ಮೊದಲಾದುವನ್ನು ಬಳಸುತ್ತಾರೆ (ಯಕ್ಷಬ. ೯೧). [←ಹಿಂ. ಢೋಲಕ್./ಸಂ. ಢೋಲಕ]

**ಡೋಲಪಾದ** (ನಾ). ೧. [ನಾಟ್ಯ] ಮಾರ್ಗ ಆಕಾಶಚಾರಿಗಳ ಅತಿಕ್ರಾಂತವೇ ಮೊದಲಾದ ೧೬ ಭೇದಗಳಲ್ಲೊಂದು ; ಒಂದು ಕಾಲನ್ನು ಕುಂಚಿತಮಾಡಿ, ಎತ್ತಿ, ಎರಡು ಪಾರ್ಶ್ವಗಳಲ್ಲೂ ತೂಗಿಸಿ ಹಿಮ್ಮಡಿಯನ್ನು ತನ್ನ ಪಾರ್ಶ್ವದಲ್ಲಿ ನೆಲದ ಮೇಲಿಡುವುದು : ಎತ್ತಿರೆ ಕುಂಚಿತ ಪದಮಂ ಬಿತ್ತರದಿಂದೆರಡು ಕೆಲಕೆ ಡೋಲದ ಪಾಂಗಿಂ ಮತ್ತೆ ಹಿಮ್ಮಡದೆ ಕಡೆ[ಪಾಠಾಂ. ತೊಡೆ]ಯಂ ತೆತ್ತಿಸಿದೊಡೆ ಡೋಲಪಾದಚಾರಿಯೆನಿಕ್ಕುಂ (ಲಾಸ್ಯರಂ. ೭–೪೮). ೨. [ನಾಟ್ಯ] ನೂರೆಂಟು ಕರಣಗಳಲ್ಲೊಂದು ; ಊರ್ಧ್ವಜಾನು ಮತ್ತು ಡೋಲಪಾದಚಾರಿಗಳನ್ನು ಮಾಡಿ ದೋಲ ಹಸ್ತವನ್ನೂ ಮಾಡುತ್ತ ಅಭಿನಯಿಸುವುದು : ಸಮದೂರ್ಧ್ವಜಾನು ಪದದಿಂದಮ ನಿಂದುಂ ಡೋಲಪಾದಚಾರಿಯನೆಸಗಲ್ ಕ್ರಮದಿಂದೆ ಡೋಲ ಕರಮಂ ಸಮನಿಸಲದು ಡೋಲಪಾದಕರಣಮೆನಿಕ್ಕುಂ (ಲಾಸ್ಯರಂ. ೪–೦೧೭). [ ಡೋಲ + ಪಾದ ]

**ಡೋಲಫಲ** (ನಾ). ಒಂದು ಬಗೆಯ ಮರ ಮತ್ತು ಅದರ ಹಣ್ಣು : ಕೋಲ ಚಂಪಕ ತಿಲಕ ಮುನಿ ತಕ್ಕೋಲ ಲುಂಗ ಲವಂಗ ಧಾತ್ರೀಡೋಲಫಲ ಭಲ್ಲಾತಕೀಕುಜಗಳು ವಿರಾಜಿಪವು (ಅನಂರಾ. ೪–೪–೨೭). [ಡೋಲ್ಯ+ಫಲ]

**ಡೋಲಾಗೃಹ** (ನಾ). ಉಯ್ಯಾಲೆಯ ಮನೆ : ಇದೇ ಪದ್ಮಸರೋವರವು ಇದೇ ಡೋಲಾಗೃಹವು ಇದೇ ಕೃತಕಾದ್ರಿಯು (ಪುರುಷ. ೬–೩೭). [ ಸಂ. (ಡೋಲಾ + ಗೃಹ) ]

**ಡೋಲಿ** (ನಾ). ಮನುಷ್ಯರು ಹೊರುವ, ತೊಟ್ಟಿಲಿನಂತಹ ಒಂದು ವಿಧವಾದ ವಾಹನ: ಇವರಲ್ಲಿ ಕೆಲವರು . . . ಡೋಲಿ ಮತ್ತು ಮೇನಾಗಳನ್ನು ಸಾಗಿಸುವುದಕ್ಕೂ ನೇಮಕವಾಗಿದ್ದರು (ಮಹಾವಂ.II, ೨೦): ಕೊನೆಗೆ ಬೀಳಲುಗಳಿಂದ ಒಂದು ಡೋಲಿಯನ್ನು ಮಾಡಿ, ದೊಡ್ಡನನ್ನು ಮಲಗಿಸಿ ಕೆಲವರು ತಲೆಗೊಟ್ಟು ಹೊತ್ತು ಮುಂದೆ ನಡೆದರು (ಕಾಲೂರ.೭, ಕಥಾಸಾರ). [ ←ಮರಾ. ಡೋಲೀ ; ಹಿಂ. ಡೋಲೀ, ಡೊಲಾ./ಸಂ. ದೋಲೀ ]

**ಡೋಲು, ಡೊಳ್ಳು$_2$, ಡೋಳು, ಢೋಲು, ಢೋಳು, ದೋಲು, ದೋಳ್ಳು$_1$** (ನಾ). ಎರಡು ಮಗ್ಗುಲಲ್ಲೂ ಬಾರಿಸುವ ಒಂದು ಬಗೆಯ ದೊಡ್ಡ ಚರ್ಮವಾದ್ಯ : "ಡೋಲು (ದೋಲು)–ಢೋಲ= ಒಂದು ಮಹಾವಾದ್ಯ" (ತದ್ಭಕೋ. ೧೬) ; ಆಗ ಬಡಿಯಿತು ಡೋಲು ಬಡಬಡ (ಕಏಪು. ೩೮–೬) ; ಡೋಲು, ಶಹನಾಯ್, ಕಾಳೆಗಳು ಸೊಕ್ಕಿ ಹಿಮ್ಮೇಳ ಒದಗಿಸುತ್ತವೆ (ಭಾರಜಾ. ೧೯೯) : ನೃತ್ಯಕಾಲದಲ್ಲಿ ಒಂದಲ್ಲ ಒಂದು ಬಗೆಯ ಡೋಲು, ಡೋಲಕ, ಡಮರು, ತಮಟೆ ಮೊದಲಾದುವನ್ನು ಬಳಸುತ್ತಾರೆ (ಯಕ್ಷಬ. ೯೧). **ಡೊಳ್ಳು$_2$:** ಧಡಲ್ಬಾಜಿ ಸಪ್ಪಳವ ಬೇಡುವದು ಡೊಳ್ಳು ಡೊಂಬರಾಟ (ಅರಳು. ೩೧೩–೪): ಲಗ್ನದ ದಿವಸ ಗಂಡಸರೂ ಹೆಂಗಸರೂ ಸಿಂದಿಯ ಕುಡಿದು ಕೊಳಲು ಡೊಳ್ಳುಗಳೊಂದಿಗೆ ಕುಣಿದ ಬಳಿಕ ಮದಿಮಕ್ಕಳ ಮೇಲೆ ಅಕ್ಕೀಕಾಳು ಹಾಕುವರು (ಕಥಾಗಿ. ೩೨೪) : ಆ ಸೋಮವಾರ ಬೆಳಗಿನ ಝಾವದಲ್ಲಿ ಝುಗಂಝುಳ್ಳು ಝುಗಂಝುಳ್ಳು ಎಂಬ ಡೊಳ್ಳುಗಳ ನಿನಾದವು ಗಂಗನಹಳ್ಳಿಯನ್ನು ಜಾಗೃತಗೊಳಿಸಿತು (ಹಬ್ಬಿಬ. ೬೨). **ಡೋಳು :** ಕಹಳೆಗಳುನ್ನತ ಡೌಡಿ ನಿಸ್ಸಾಳ ಸನ್ನೆ ಡೋಳು . . . ಒದಱಿದವು (ಅಂಜಿಚ. ೬–೭೫) ; ಭೇರಿ ತಂಬಟ ಡೋಳು ಮುಂತಾದ ಬಹು ವಾದ್ಯ ಭೂರಿ ಚೊಂಬಾಳ ದೀವಿಗೆಯ ಪಾರಿಯ ಪಟುಭಟರುಗಳು (ವೋಹಚ. ೧೦–೨೦) ; ಡೋಳಿನ ಕುದುರೆ ಡಮಾನದ ಮದಕರಿ (ಕಂಸವಿ. ೧೯–೩೩) ; ಡೋಳು ಮೊದಲಾದಖಿಳವಾದ್ಯವ ಸೂಳವಿಸುತ (ಪ್ರಭ್ಯಾಚ. ೯–೦೦) ; ಸಿಡಿಲನೊಂದು ಕೈಲಿ ಹಿಡಿದು ಬಾನ ಡೋಳ ಬಡಿಯುತ (ಪಾಂಚಜ. ೯–೨೦). **ಢೋಲು :** ಕಪ್ಪತರವಾದ ಹೆಜ್ಜೆಗಳನ್ನು ಹಾಕಿ, ಢೋಲಿಗೆ ತಕ್ಕುದಾಗಿ ಕುಣಿಯುವುದುಂಟು (ಅಭಾನ್ಯ. ೦೧೩). **ಢೋಳು :** ಬೊಂಬುಳಿ ಢೋ[ಪಾಠಾಂ. ಡೋ]ಳು ನಿಸ್ಸಾಳ ಬೊಬ್ಬೆಯ ದನಿ ತುಂಬಿ ದುದೆಣ್ದೆಸೆಯನು (ಸೊಬಸೋ. ೩–೪೨). **ದೋಲು :** ಉಳಿದವರು ದೋಲು ಇತ್ಯಾದಿಗಳನ್ನು ಹಿಡಿದುಕೊಂಡಿದ್ದರು (ರಕ್ತರೂ. ೦೨) : ತಾಳ ಬದ್ಧವಾಗಿ ಒಂದು ಕಡೆಯಿಂದ ದೋಲನ್ನೂ ಕಿಂಕಿಣಿಯನ್ನೂ ಬಾರಿಸ ತೊಡಗಿದರೆ (ಬಾಲಪ್ರ. II, ೯೧೭). **ದೋಳ್ಳು$_1$ :** ದೋಳು ಬಡಿದು ಗೆರಸಿ ಮುಚ್ಚಿದ ಹಾಗೆ (ಗಾದೆ). [ <ಸಂ. ಢೋಲ ]

**ಡೋಲೆ** (ನಾ). ಉಯ್ಯಾಲೆ : ಝುಗಝುಗಿಪ ಡೋಲೆಯೊಳ್ ಕಾಮಿನಿಯ ರಾಗ ಲೀಲಾವಿನೋದದಿಂ ತೂಗಲು (ಸಾನಂಗ. ೩೭). [ ಸಂ. ಡೋಲಾ ]

**ಡೋಲೋತ್ಸವ, ಡೋಳೋತ್ಸವ** (ನಾ). ದೇವರನ್ನು ಉಯ್ಯಾಲೆ ಮೇಲೆ ಕೂಡಿಸಿ ಮಾಡುವ ಉತ್ಸವ : ಇವೊತ್ತು ಊರದೇವರ ಡೋಲೋತ್ಸವ ಇದೆ (ರೂಢಿ). **ಡೋಳೋತ್ಸವ :** ಶ್ರೀಹಯಗ್ರೀವ ಲಕ್ಷ್ಮೀನಾರಾಯಣ ದೇವರವರ ಡೋಳೋತ್ಸವದ ಬಗ್ಗೆ (ವ್ಯಾಆರಿ. ೦೯೩೪, ೨೭–೨ ; 1816). [ ಸಂ. (ಡೋಲಾ + ಉತ್ಸವ) ]

**ಡೋವಿ, ಡವಿಗೆ, ಡವುಗೆ, ಡೊಗೆ, ಡೊವಿಗೆ, ಡೋಗಿ, ಡೋಯಿಗೆ, ಡೋವಿಗೆ, ಡೋವೆ, ಡೌಗಿ, ಡೌಗೆ** (ನಾ). ೧. ತಲೆಯ ಚಿಪ್ಪು ; ತಲೆಬುರುಡೆ ; ಕರೋಟಿ : ವೇದಂಗಳಂ ಕೇಳು ನಂಬದೊಡೆ ಬಱುನುಡಿಯೊಳಾದ ಫಲವೇನು ನಾಲಗೆಯ ಸಡಗರ ಡೋವಿಗಾದುದವವ್ಯಾತ್ಮ (ಲಶಿಚಂ. ೮–೬). **ಡವಿಗೆ :** ೧. ಪಾಕ ಮಾಡುವ ಭಾಂಡ ಸೋಣಗನ ಡ[ಪಾಠಾಂ. ಡೊ]ವಿಗೆಯಯ್ಯಾ (ಬಸವ. ೭೦೪); ಜೋಡುಗ್ಗೈಯೊಳಗೆ ಡವಿಗೆಯನು ಹಿಡಿಯುತಲಿ ಬೇಡಿ ಉಂಡವನೆ (ಕನ್ನಶಾ. ೩೦೫) : ಅಲ್ಲೊಂದು ಮನುಷ್ಯ ಡವಿಗೆ ಕಂಡಿತು (ಮೊಪಾಸಾ. ೨೦). ೨. ಟೊಳ್ಳಾದ ದಪ್ಪ ಬಿದಿರು : "ಡವಿಗೆ – ದೊಡ್ಡ ತೊಳ್ಳು ಬಿದಿರು" (ಜಾನಕೋ. ೬೨). **ಡವುಗೆ :** ೧. ಯೇಸುವಿನ ಚಿತ್ರದಲ್ಲಿ ಯೇಸುವಿನ ಕಾಲ ಬುಡದಲ್ಲಿ ಒಂದು ತಲೆಯ ಡವುಗೆ ಇದೆ (ಗೊಲ್ಗೊಥಾ. ೦೪, ಟಿಪ್ಪಣಿ) ; ಅದು ಪ್ರಾಚೀನಕಾಲದ ಒಬ್ಬ ಮನುಷ್ಯನ ಡವುಗೆಯಾಗಿರಬಹುದೆಂಬ ತಿಳಿವಳಿಕೆ ಇದೆ (ಮತಂಪ. ೨೨).

**ಡೊಗೆ:** ೧. ಒಟ್ಟೆಯೆಲುಗಳ ಕುಂಡಲಗಳಿಂದೆ ಕರಿಶಿರದ ಡೊಗೆಯ ಸಲಿಲದ ಕಮಂಡಲದಿಂದೆ (ಜೈಮಿಭಾ. ೧೬-೨೪); ಆನೆಯ ತಲೆಯ ಡೊಗೆಯೇ ಅವನ ಕಮಂಡಲು (ಬಿದುರಿ. ೭೭). **ಡೊವಿಗೆ:** ೧. ಡೊವಿಗೆ ಮೃತ್ಯುವಿನ ಸುಡಿಗೊಳಗಾಯಿತ್ತು (ಬಸವ. ೫೬೯). **ಡೋಗಿ:** ೧. ಕೊರಳಿಗೊಂದಿದ ಗಂಡಮಾಲೆ ಡೋಗಿಯ ಹುಣ್ಣು ಶಿರಕೆ ಬೆನ್ನಿಗೆ ಜರಡಿಹುಣ್ಣು (ಮಲ್ಲಚ. ೧೦-೨೮). **ಡೋಯಿಗೆ:** ೧. ಆಯುಧದ ಹರಹುಗಳ ತಲೆಗಳ ಡೋ[ಪಾಠಾಂ. ದೋ]ಯಿಗೆಯ ಕಡಿಖಂಡಮಯದ ಮಹಾಯತದ ರಣದೊಳಗೆ ಬಂದನು ಭೀಷ್ಮನಿದ್ದೆಡೆಗೆ (ಕುವ್ಯಾದ್ರೋ. ೧-೨೦). **ಡೋವಿಗೆ:** ೧. ನೆಲಕ್ಕೊಲೆವ ಡೋವಿಗೆ . . . ದರ್ಪವಳಿದವಯವಂ ಮೆಱೆವ ಘೋರತಪದಚಲಿತರನೀಕ್ಷಿಸಿದನವನೀಶನು (ಹಚಕಾ. ೬-೩೫). **ಡೋವೆ:** ೧. ಹೊರಕುಲದವನಂತೆ ಶಿರದ ಡೋವೆಯೊಳು ತಾ ತಿರಿದು ತಿಂಬುವನೆಂದು ಹರನ ಜರಿದು (ಮೈಲಾರ. ೧೦೬-೨೨). **ಡೌಗಿ:** ೧. ಪ್ರತಿಯೊಂದು ನಾಟಕದಲ್ಲಿ ಕೆಲವು ದಿಂಡಗಳೂ ಹಲವು ಡೌಗಿಗಳೂ ಬರುತ್ತಿದ್ದವು (ಜನನಾ. VII, ಪ್ರಸ್ತಾವನೆ). 'ಡೌಗಿಬರ' ಪರಾ. ೨. 'ಡೌಗಿಕೊಳವಿ' ಪರಾ. **ಡೌಗೆ:** ೧. "ಓಡು = ೧. ಒಡಕ ಗಡಿಗೆ. ೨. ತಲೆಯ ಡೌಗೆ" (ಗಂಗಾಮು. ೫೯).

**ಡೋಗಿಯ ಬರ = ಡೋಗಿಬರ :** ತುಸು ದಿವಸಗಳಲ್ಲಿ ದೇಶದಲ್ಲಿ ಡೋಗಿಯ ಬರವು ಪ್ರಾಪ್ತವಾಯಿತು (ಗುರುಪ್ರ. ೬).

[ ←ಮರಾ. ಡೋಈ ]

**ಡೋವೆ** 'ಡೋವಿ' ನೋ.

**ಡೋಹ** 'ಡೋಹರ' ನೋ.

**ಡೋಹರ, ಡೋಹ, ಡೋಹಾರ, ಢೋರ** (ನಾ). ಚಂಡಾಲ ಜಾತಿಯವನು : ಅಪ್ಪನು ನಮ್ಮ ಮಾದರ ಚನ್ನಯ್ಯ ಬೊಪ್ಪನು ನಮ್ಮ ಡೋಹರ ಕಕ್ಕಯ್ಯ (ಬಸವ. ೩೪೮) ; ಬೇಡಂಗೆ ಡೋಹ[ಪಾಠಾಂ. ಹಾ]ರಂಗೆ ಹೊಲೆಯಂಗೆ ರೂಢಿಗೀಶ್ವರನೊಲಿದ ಪರಿಯ ನೋಡ (ಅಂಬಿವ. ೪೦೨-೧೦೦); ವರ ಡೋಹರ ಕಕ್ಕಯ್ಯಂ ಚರಗುರು ಶಿವಲಿಂಗಭಕ್ತನೀ ವಸುಮತಿಯೊಳ್ (ವೃಷವಿ. ೩೮-೧೧೪). **ಡೋಹ :** ಪೇಸಿಕೆಯಿಲ್ಲದಾ ಪೊಲೆಯ ಮಾದೆಗ ಕೀಲಿಗ ಡೊಂಬ ಡೋಹನತ್ಯಾಸುರಕರ್ಮಿ ಕಳ್ಳಗಡುಹಿ ತೊನ್ನರೊಳಾದೊಡುರುಳ್ವ . . . ಸೂಳೆ (ಕಾವ್ಯಸಾ. ೧೧೦೨) ; ಮಾದಾರ ಕೇರೆಲ್ಲ ಮೊದಲಿಗೆ ಹೊರಟೀತು ಅದು ನೋಡಿ ಡೋಹರೆಲ್ಲರು ನುಗ್ಗಿದರು (ಸಿದ್ಧಪು. ೪-೭೪). **ಡೋಹಾರ:** ಸೆಟ್ಟಿಯೆಂದೆಂಬೆನೆ ಸಿರಿಯಾಳನ ಮಡಿವಾಳನೆಂದೆಂಬೆನೆ ಮಾಚಯ್ಯನ ಡೋಹಾರನೆಂದೆಂಬೆನೆ ಕಕ್ಕಯ್ಯನ(ಬಸವ. ೩೪೪); ಈತನೆ ಮೇದಾರ ಕೇತಯ್ಯನೆಂಬಾತನೀತನೇ ಡೋಹಾರ ಕಕ್ಕಯ್ಯನೆಂಬಾತನು (ಚಿಬಪು. ೫೭-೫೭). **ಢೋರ:** ಪೂರ್ವದ ಋಷಿಗಳೆಲ್ಲರು ಕಮ್ಮಾರ, ಮಚ್ಚಿಗಾರ, ಢೋರ, ಕಬ್ಬಲಿಗ, ನಾಯಿದ ಮೊದಲಾದ ಕುಲದಲ್ಲಿ ಹುಟ್ಟಿದವರಾದಾಗ್ಯೂ (ಕೃಷಿಪ್ರ. ೨೯೬); ಚರ್ಮಕ್ಕೆ ಕರೆ ಹಾಸುವುದೇ ಢೋರರ ಮುಖ್ಯ ಹೋರೆಯು (ಕಭಾಗ. ೨೦೯).

[ ←ಮರಾ. ಡೋಹರ್, ಡೋಹಾರ್, ಢೋರ್ ]

**ಡೋಹಾರ** 'ಡೋಹರ' ನೋ.

**ಡೋಳಾಕೇಳಿ** (ನಾ). ಉಯ್ಯಾಲೆಯ ಆಟ : ಡೋಳಾಕೇಳಿಯ ಕಂದುಕಕೇಳಿಯ . . . ಬಿನದದೊಳೆ ಸತಿಯನವರೊಸೆಯಿಸಿದರ್ (ಪುಷ್ಪಪು. ೯-೮೨).

[ ಸಂ. ಡೋಲಾಕೇಲಿ (ಡೋಲಾ + ಕೇಲಿ) ]

**ಡೋಳು** 'ಡೋಲು' ನೋ.

**ಡೋಳೋತ್ಸವ** 'ಡೋಲೋತ್ಸವ' ನೋ.

**ಡೋಱ್** 'ಡೊಂಗಱು' ನೋ.

**ಡೋಱ್ಗಳೆ** 'ಡೋಱುಗಳೆ' ನೋ.

**ಡೋಱ್ಗೊಱ್** 'ಡೋಱುಗೊಱ್' ನೋ.

**ಡೋಱ್ದಲೆ** (ನಾ). ಡೊಗರು ಬಿದ್ದ ತಲೆ: ಕುಳಿಬಿದ್ದ ತಲೆ : ಶರಧಿಯೊಳಿ ಹುಟ್ಟಿರ್ದ ವಿಷದಲಿ ಕರಿಕುದಲೆಯಾದವರು ಅಂಧಾಸುರನ ಬಿಡಿಸಲು ಹರನು ಹೊಡೆದಾ ಡೋಱ್ದಲೆಯವರು (ಕಾಶಿರಾ. ೨೧-೧೬).

[ ಡೋಱ್ (<ಡೊಂಗಱು) + ತಲೆ$_1$ ]

**ಡೋಱ್ವೋಗು** 'ಡೋಱುವೋಗು' ನೋ.

**ಡೋಱು** 'ಡೊಂಗಱು' ನೋ.

**ಡೋಱುಗಲೆ** (ನಾ). ಸೀಳಿದ ಗುರುತು : ಗಾಯದ ಚಿಹ್ನೆ : ಸುರಪತಿಯ ಮೋಱ್ಯಲೀತನೆಱಗಿದ ಡೋಱುಗಲೆ[ಪಾಠಾಂ. ಳೆ]ಯದೆ ಭೂತಳಾಧಿಪ ನೋಡು ದೇವಾಂತಕ ನಿಶಾಚರನ (ತೊರರಾ. ೬-೨೦-೬೮).

[ ಡೋಱು (<ಡೊಂಗಱು) + ಕಲೆ$_2$ ]

**ಡೋಱುಗಳೆ, ಡೋಱ್ಗಳೆ** (ಕ್ರಿ). ೧. ಸೀಳು ; ತೂತುಮಾಡು ; ಕೊರೆ: ಕತ್ತರಿಸು : ಐದಾಱು ಶರದಲಿ ಕರ್ಣನೆದೆಯನು ಡೋಱುಗಳೆಯಲು ಬಳಲಿದನು ಪೂರಾಯ ಘಾಯದಲಿ (ಕುವ್ಯಾದ್ರೋ. ೫-೨೮) ; ತೊಡೆಯನು ಡೋಱುಗಳೆವ ಪುಳುವಿಗಿನಸುತನು ಬಳಲಿ ಮೈಮಱೆದೊಱಗಿದ ರಾಮಗೆ ನಿದ್ರೆಯುಳಿವುದೆಂದು ಚಿಂತಿಸಿದ (ಕರ್ಣವೃ. ೪-೮) ; ಪಾರ್ಥಿಯ ಶಿಲೀಮುಖಾಳಿ . . . ಸ್ಯಂದನವಿತಾನವಂ ಡೋಱುಗಳೆದುದು (ಜೈಮಿಭಾ. ೨೨-೪೨). ೨. ಸೀಳಿ ಹೋಗು : ಬಿರಿ ; ಭಂಗಹೊಂದು : ಡೊಗರುಬೀಳು : ಎದೆ ಡೋಱುಗಳೆವಂತೆ ಶಿವಿದುರುಳಿಸಿದ (ಭೈರವೇ. ೩-೧೩). **ಡೋಱ್ಗಳೆ:** ೨. ಡೋಱ್[ಪಾಠಾಂ. ಱು]ಗಳೆದುದು ಗರ್ವಪರ್ವತಂ (ಲಶಿಚಂ. ೩೩-೨೬).

[ ಡೋಱು (<ಡೊಂಗಱು) + ಕಳೆ$_1$ ]

**ಡೋಱುಗೊಱ್, ಡೋರಿಗೊರೆ, ಡೋಱ್ಗೊಱ್** (ಕ್ರಿ). ತೂತುಕೊರೆ: ರಂಧ್ರ ಮಾಡು ; ಸೀಳು ; ಛಿದ್ರಿಸು : ರಕ್ತಮಾಂಸಾಹಾರಿಯಾದ ದುಷ್ಕೀಟಕವೊಂದೈತಂದು ಕರ್ಣನ ತೊಡೆಯಂ ಡೋಱುಗೊಱ್ದು ರಕ್ತಮನೀಂಟಿ ಮಾಂಸಮಂ ಭಕ್ಷಿಸುತ್ತಿರಲಾಗಿ(ಭಾರಶಾಂ. ೩). **ಡೋರಿಗೊರೆ:** ಕಿನಿಸಾಂತು ಶರವರ್ಷಮಂ ಕರೆಯಲಸುರರಂ ತನುಗಳಂ ಡೋರಿಗೊರೆಯಲ್ಕಮಮ ದೈತ್ಯರನುಪಮಿತ ಖಡ್ಗ ತೋಮರ ಗದೆಗಳಿಂದಂತವಂ ಖಂಡಿಸುತಾಗಳು (ಘೋರರಾಸು. ೬). **ಡೋಱ್ಗೊಱ್:** ಕುಂತವೆರ್ದೆಯನು ಡೋಱ್ಗೊಱ್ದಂತೆ (ಚಿಕಸ. ೨೬).

[ ಡೋಱು (<ಡೊಂಗಱು) + ಕೊಱ್$_1$ ]

**ಡೋಱುನೊಸಲು** (ನಾ). ಕುಳಿಯಾದ ಹಣೆ ; ಹಳ್ಳವಿರುವ ಹಣೆ; ತಗ್ಗಿರುವ ಲಲಾಟ : ಏಳನೆಯ ಬಾಗಿಲಲಿ ಡೋಱುನೊಸಲಿನ ಕಿಱುಬೆಮರ ಕಾಹೇಱ್ದಕ್ಷಿಯ ಸರಭಸದ ಪಡಿಹಾಱರಿಬ್ಬರು ನಿಂದಿರಲು (ನಿಭಾಗ. ೩-೬-೮).

[ ಡೋಱು (<ಡೊಂಗಱು) + ನೊಸಲು (<ನೊಸಲ್) ]

**ಡೋಱುಮೈ** (ನಾ). ಗೂಡುಬಿದ್ದ ಮೈ ; ಜೀರ್ಣವಾದ ದೇಹ: ಡೋಱುಮೈಯಾದ ಮುದುಕಿಹೋಹುದಱಿಂದ ಕಾಱ್ಕೊಂಡುಣ್ಣೊ (ಸರ್ವಜ್ಞ. ೧೭೯೭). [ ಡೋಱು (<ಡೊಂಗಱ್) + ಮೈ (<ಮೆಯ್) ]

**ಡೋಱುವೋಗು, ಡೋಱ್ವೋಗು. ದೋಱುವೋಗು** (ಕ್ರಿ). ಡೊಗರು ಬೀಳು ; ಹಳ್ಳವಾಗು ; ಕುಳಿಬೀಳು ; ಸೀಳಿಹೋಗು ; ಬಿರಿ : ಕೀಱ್ ಕಾಲಿಡೆ ದಿಕ್ಕರಿಗಳೆದೆ ಡೋಱುವೋಗಲು ಸರ್ವ ಲಗ್ಗೆಯಲೇಱ್ತೀ ದಳ (ಕುವ್ಯಾಕ. ೧೫-೨೦); ಬಿದ್ದನು ಘಾತಿಯಲಿ ಧರೆ ಶೈಲ ವನ ಸಹಿತ ಡೋಱು ವೋಗಲು (ನಿಭಾಗ. ೧೦-೩೨-೧೪). **ಡೋಱ್ವೋಗು:** ಡೋಱ್ವೋದುವು ತೋಳು ನೆತ್ತರ ಕಾಱ್ ರಾವಣ ಗಂಡುಗೆಟ್ಟನು (ಕಾಶಿರಾ. ೨-೩೧) ; ಬೀಸಿ ಬಾಲದಿ ಗೋಣ ಬಿಗಿದನು ಸಾಸಿಗನ ಶಿರ ಡೋಱ್ವೋದುವು (ಕಾಶಿರಾ. ೨೨-೧೧). **ದೋಱುವೋಗು:** ಮೀಱ್ ಪೊಗುವ ಅಂಗಜನ ಶರದಲಿ ದೋಱು ವೋಯಿತು ಹೃದಯ (ಕುವ್ಯಾವಿ. ೨-೧೦).

[ ಡೋಱು (<ಡೊಂಗಱು) + ಪೋಗು$_1$ ]

**ಡೋಜಾಹೃದಯ** (ನಾ). ಸೀಳಿದ ಎದೆ; ಡೊಗರುಬಿದ್ದ ಎದೆ: ಪೋರುಗಳೆದಕ್ಷಿಯಿಂ ಡೋಜಾಹೃದಯಂಗಳಿಂ (ಲಶಿಚಂ. ೩೭-೨೬).

[ ಡೋಜು (<ಡೊಂಗಲು) + ಹೃದಯ ]

**ಡೋಜಿನಿಸು** (ಕ್ರಿ). ಪೋಳಾಗಿಸು: ಸೀಳಿಹೋಗುವಂತೆ ಮಾಡು; ಡೊಗರು ಬೀಳಿಸು: ಶರಗಳಿಂದೆಚ್ಚವರ ತನುಗಳಂ ಡೋಜಿನಿಸಿಯುತ್ತ್ವ ಸಾರಥಿ ತೇರ್ಗಳಂ ತಿರುವನೇಜಿಸಿದ ಬಿಲ್ಗಳಂ ಕಡಿಕಡಿದು (ಚಿಬಪು. ೪೯-೨೨).

[ ಡೋಜು (<ಡೊಂಗಲು) + ಎನಿಸು$_1$ ]

**ಡೌಗಿ** 'ಡೋವಿ' ನೋ.

**ಡೌಗಿಕೊಳವಿ** (ನಾ). ಟೊಳ್ಳಾದ ದಪ್ಪ ಬಿದಿರಿನಿಂದ ಮಾಡಿದ ಕೊಳವೆ; ದಪ್ಪಬಿದಿರಿನ ಅಂಡೆ: ಹೆಪ್ಪುಹಾಕಿ ಬೆಣ್ಣೆತೆಗೆಯಲು ಚರ್ಮದ ಚೀಲ, ಡೌಗಿಕೊಳವಿಯನ್ನೂ, ಚಹಾ ತಯಾರಿಸಲು ದನ, ಕುರಿ, ಮನುಷ್ಯರುಗಳ ಪಿಕ್ಕೆಗಳನ್ನೂ ಉರಿಹಚ್ಚುತ್ತಾರೆ (ಕೈಲಾಸ. ೩೨).

[ ಡೌಗಿ (<ಡೋವಿ) + ಕೊಳವಿ (<ಕೊಟವಿ) ]

**ಡೌಗಿಬರ** 'ಡೋಗಿಬರ' ನೋ.

**ಡೌಗೆ** 'ಡೋವಿ' ನೋ.

**ಡೌಡೆ** 'ಡವುಡೆ$_1$' ನೋ.

**ಡೌಡೆವಜಿ** (ನಾ). ೧. ಡವುಡೆಯೆಂಬ ಚರ್ಮವಾದ್ಯ. ೨. ಡವುಡೆ ವಾದ್ಯದ ಶಬ್ದ: ನೆರೆದು ಪಳಂಚುವ ಕಾಲುಂಗುರದ ರವಂ ಮುಂದೆ ಡೌಡೆವಜಿಯುಂ ಪೋಲುತ್ತಿರೆ (ಗಿರಿಕ. ೭-೫೧).

[ ಡೌಡೆ (<ಡವುಡೆ$_1$) + ವಜಿ$_1$ ]

**ಡೌಲು, ಡವಲು, ಡವುಲು** (ನಾ). ೧. ರೀತಿ; ಪ್ರಕಾರ. ೨. ಬಿಂಕಹೆಮ್ಮೆ; ಬರಿಯ ಬಡಾಯಿ; ಆಡಂಬರ: ಅಲ್ಲೊಂದು ಇಲ್ಲೊಂದು ಬಣ್ಣದ ನೂಲು ಬೆತ್ತಲೆ ಬದುಕ ಸುತ್ತಿ ತೋರಿಸುತ್ತಿದೆ ಡೌಲು (ನೆಲಮು. ೩೧-೧): ಇದರೊಳಗೆ ನಾನು ಮನಸ್ಸಿಗೆ ಹಚ್ಚಿಕೊಳ್ಳತಕ್ಕದ್ದೇನೂ ಇಲ್ಲ ಎಂದು ಡೌಲಿನ ಮಾತು ಹೇಳಿ (ಮುಂಬಯಿ. ೩-೯೩). ೩. ದೊಡ್ಡಸ್ತಿಕೆ; ಘನತೆ; ವೈಭವ: ಬೆಳಗಿನ ಸ್ವಚ್ಛಂದ ಗಾಳಿಯಲ್ಲಿ ಡೌಲಿನಿಂದ ಹಾರತೊಡಗಿದ ಆ ತ್ರಿವರ್ಣಧ್ವಜವನ್ನೆ ಅರೆಕ್ಷಣ ಪ್ರೀತಿ ಅಭಿಮಾನಗಳಿಂದ ನಿಟ್ಟಿಸುತ್ತಿದ್ದ (ಆಗಸ್ಟ್. ೧೮): ದೊಡ್ಡ ಸಂಬಳ ತೆಗೆದುಕೊಂಡು, ಮೂರಂಗುಲ ಜರತಾರಿ ರುಮಾಲು ಹಾಕಿಕೊಂಡು, ಡೌಲಿನಲ್ಲಿ ಅಮಲ್ದಾರರುಗಳು ಕಾಲಹಾಕುತ್ತಿದ್ದರು (ನಟಸಾ. ೨). ೪. ದರ್ಪ; ಠೀವಿ: ಪಂಡಿತರ ಸಭೆಗೆ ಓರ್ವನು ಬಹಳ ಡೌಲಿನಿಂದ ವಸ್ತ್ರಾಲಂಕಾರಭೂಷಿತನಾಗಿ ಬಂದನಂತೆ (ಸಾಲಂಸಾ. ೬೮). ಡವಲು: ೫. ಅಂದಾಜು; ಊಹೆಮಾಡುವಿಕೆ. 'ಡವಲುಕಟ್ಟು' ಪರಾ. ಡವುಲು: ೨. 'ಡವುಲುಕೊಚ್ಚು', 'ಡವುಲುದಾರ' ಪರಾ. ೫. 'ಡವುಲಂದಾಜು', 'ಡವುಲುಜಮಾಬಂದಿ' ಪರಾ. ಡೌಲು: ೨. ಈಗ ನನ್ನ ಮ್ಯಾಗೆ ಡೌಲ ಬಡೀತಾನ (ಪುರುಷ. ೧೦೯).

[←ಅರ. ಹಿಂ. ಮರಾ. ಡೌಲ್]

**ಡೌಳಿ** 'ಟವಳಿ' ನೋ.

**ಡ್ಯಾಲಿಯಾ** 'ಡೇಲಿಯಾ' ನೋ.

**ಡ್ರಮ್ಮು** (ನಾ). ಪೀಪಾಯಿ: ಈ ಕೆಳಗಿನ ಇನ್ನೂ ಹತ್ತಾರು ತದ್ಭವಗಳನ್ನು ಈ ವರ್ಗಕ್ಕೆ ಸೇರಿಸಬಹುದು. ಉದಾ . . . ಬಾಟ್ಲಿ; ಆಸ್ಪತ್ರೆ; ಡ್ರಮ್ಮು (ಭಾಷಾಶಾ. ೦೭೭). [ ←ಇಂ. Drum ]

**ಡ್ರಾಮು** (ನಾ). ಮದ್ಯ ಮೊದಲಾದ ದ್ರವಗಳ ಒಂದು ಸಣ್ಣ ಅಳತೆ: ನಾಲ್ಕು ಡ್ರಾಮು ಸೆರೆ ಎಂಟು ಡ್ರಾಮು ಕೋಪ (ಬೆಂಗಬ. ೧೧).

[←ಇಂ. Dram ]

**ಡ್ರಿಲ್ಲು** (ನಾ). ಕವಾಯಿತು; ವ್ಯಾಯಾಮ ಶಿಕ್ಷಣ: ಕರಡಿ ಕಪಿಗಳಿಗಲ್ಲಿ ನಡೆಯುತಿದೆ ಡ್ರಿಲ್ಲು (ಕೋಗಿಲೆ. ೨-೪೬).

[ ←ಇಂ. Drill ]

**ಡ್ರೈವರು** (ನಾ). ಮೋಟಾರುಬಂಡಿ ಮೊದಲಾದುವನ್ನು ನಡಸುವವನು; ಸಾರಥಿ; ಚಾಲಕ: ನಮ್ಮ ಕಾರಿಗೆ ಒಬ್ಬ ಡ್ರೈವರು ಬೇಕಾಗಿದ್ದಾನೆ (ರೂಢಿ). [ ←ಇಂ. Driver ]

❋

# ಢ

**ಢ** (ನಾ). ೧. ಕನ್ನಡ ವರ್ಣಮಾಲೆಯ ಮೂವತ್ನಾಲ್ಕನೆಯ ಅಕ್ಷರ. ೨. [ಗಣಿತ] ನಾಲ್ಕು ಎಂಬ ಸಂಖ್ಯೆಯ ಸಂಕೇತ: "ಘಢಭವಂ ನೆಜಿ ನಾಲ್ಕು" (ಮಂಗರಾ. ೧೦೪-೧೦).

**ಢಂ** (ನಾ). ಒಂದು ಅನುಕರಣ ಶಬ್ದ; ಪಟಾಕಿ ಮೊದಲಾದ ಸಿಡಿಮದ್ದುಗಳು ಸಿಡಿಯುವಾಗ ಅಥವಾ ಕೋವಿ, ಫಿರಂಗಿ, ಪಿಸ್ತೂಲು ಮೊದಲಾದುವುಗಳಿಂದ ಗುಂಡು ಹಾರಿಸುವಾಗ ಉಂಟಾಗುವ ಶಬ್ದ.

**ಢಂಕೃತಿ** (ನಾ). ಢಂ ಎಂಬ ಧ್ವನಿ: ಹೈದರನಿಗೆ ಈ ಫಿರಂಗಿಗಳ ಢಂಕೃತಿಯು ಆಶ್ಚರ್ಯವನ್ನು ಮಾಡಿತು (ಒಡಕ. ೮೫). [ ಸಂ. ]

**ಢಕಲಪಟ್ಟಿ, ದಕಲುಪಟ್ಟಿ, ಧಕಲ್ಪಟ್ಟಿ** (ನಾ). (ಉಕ) ೧. ಕೆಲಸವನ್ನು ಮುಂದೂಡುವುದು. ದಕಲುಪಟ್ಟಿ: ೨. ಚಕ್ಕರು; ತಪ್ಪಿಸುವಿಕೆ: ಬರುತ್ತೇನೆ ಎಂದು ಹೇಳಿ ದಕಲುಪಟ್ಟಿ ಕೊಟ್ಟ (ರೂಢಿ). ೩. ನೂಕುವಿಕೆ; ದಬ್ಬಿ ಹೊರಗೆ ಹಾಕುವಿಕೆ; (ಕೆಲಸದಿಂದ) ವಜಾ ಮಾಡುವಿಕೆ; ಅವನಿಗೆ ದಕಲುಪಟ್ಟಿಯನ್ನು ಕೊಟ್ಟುಬಿಡುತ್ತಿದ್ದರು (ಬಂಗಾಡಾ. ೬೧). ಧಕಲ್ಪಟ್ಟಿ: ೩. ರಂಗಣ್ಣನಿಗೆ ಹೊಸಹಳ್ಳಿಯಲ್ಲಿ 'ಧಕಲ್ಪಟ್ಟಿ,' ಹೊನ್ನಹಳ್ಳಿಯಲ್ಲಿ ಅರ್ಧಚಂದ್ರಪ್ರಯೋಗ (ದುಂಬಿಕ ೦೭೦).

[ ←ಮರಾ. ಢಕಲ್‌ಪಟ್ಟೀ ]

**ಢಕಲಾಯಿಸು** (ಕ್ರಿ). ಮುಂದಕ್ಕೆ ತಳ್ಳು; ನೂಕು; ದೂಡು: ಪೆಟ್ರೋಲು ಮುಗಿದು ಕಾರನ್ನು ಢಕಲಾಯಿಸಬೇಕಾಯಿತು (ರೂಢಿ).

[ ಢಕಲಾ$_0$ (P ←ಮರಾ. ಢಕಲಣೇ) + - ಇಸು$_3$ ]

**ಢಕಾಯಿತ** 'ಡಕಾಯಿತ' ನೋ.

**ಢಕಾಯಿತಿ** 'ಡಕಾಯಿತ' ನೋ.

**ಢಕಾರ** (ನಾ). ಢ ಎಂಬ ಅಕ್ಷರ. [ ಸಂ. ]

**ಢಕ್ಕ** (ನಾ). = ಡಕ್ಕೆ ೧: ಮುರಜೆ ಢಕ್ಕಂ ವೀಣೆ ಡಮರು ಕಾಳಂ ಮೇಳಂ (ಸಿದ್ಧಕಾ. ೮-೯). [ ಸಂ. ಢಕ್ಕಾ ]

**ಢಕ್ಕರ** 'ಡೊಕ್ಕರ್‍ರ' ನೋ.

**ಢಕ್ಕಾಮುಕ್ಕಿ** 'ಧಕ್ಕಾಮುಕ್ಕಿ' ನೋ.

**ಢಕ್ಕಾರವ** (ನಾ). ಢಕ್ಕೆಯ ಶಬ್ದ : ದಳದ ಬಂಭಾರವಂ ರಣ ಕಿಲಕಿಲಾರವಂ ಪಟಹ ಢಕ್ಕಾರವಂ ಪುದಿದ ನಾನಾರವಂ (ಜೈಮಿಭಾ. ೨೨-೪). [ ಸಂ. (ಢಕ್ಕಾ + ರವ)]

**ಢಕ್ಕುಳಿ** (ನಾ). ಇಂದು ಮಾಡಬೇಕಾದ ಕೆಲಸವನ್ನು ನಾಳೆಗೆ ನೂಕುವುದು ಅಥವಾ ತಾನು ಮಾಡಬೇಕಾಗಿ ಬಂದ ಕೆಲಸವನ್ನು ಉಪಾಯದಿಂದ ಇನ್ನೊಬ್ಬನ ಮೇಲೆ ಹೇರುವುದು: ಕಾಲಯವನನು ಪಾಯದಿಂದವೆ ಬೀಳಿಸಿದೆ ಮಾಗಧನನಾ ಪರಿ ಸೀಳಿಸಿದೆ ಭೀಷ್ಮಾದಿಗಳ ಸೋಲಿಸಿದೆ ಸಾಮದಲಿ ಡಾಳನತಿ ಢಕ್ಕುಳಿಯ[ಪಾಠಾಂ. ಡೊಂಕಣಿಯ] ಠಕ್ಕಿನ ಠೌಳಿಕಾಟಿನು ನಿನ್ನ ಮಾಯೆಯ ಹೇಳಲಮ್ಮೆನು ಕೃಷ್ಣ ಕರುಣಿಸು ಕರ್ಣನಾರೆಂದ (ಕುಮ್ಯಾಕ. ೨೬-೨೬). [ ← ಮರಾ. ಢಕಲ್ ]

**ಢಕ್ಕೆ** (ನಾ).=ಡಕ್ಕೆ ೧ : ಢಕ್ಕೆ ಡಮರುಗ ಮೊಳಗಿದವು (ತೊರರಾ. ೬-೨೦-೪೫): ಇಂತಷ್ಟವರಣದೊಳಗೊಂದೊಂದನೇ ನಂಬಿ ಕಂತುಹರನೊಲವ ಪಡೆದವರು ಪಲಕೆಲರುಂಟು ಸಂತಸದಿ ತಿಳಿದು ನಂಬುವುದೆಂದು ಸಾಱುತ್ತ ಢಕ್ಕೆಯುಂ ಬಾಜಿಸುತ್ತ (ಪ್ರಾಥರಾ. ೬-೪೧) ; ಪಟಹ ತಮ್ಮಟ ಢಕ್ಕೆ ಡವುಡೆ ಕಹಳಾಸಮುತ್ಕಟ ನಾದಮಳ್ಳಿಱಿಯೆ (ಚಬಪು. ೧೬-೧೩). [ ಸಂ. ಢಕ್ಕಾ ]

**ಢಕ್ಕೆವಾಜಿಸು** (ಕ್ರಿ). ೧. ಡಕ್ಕೆಯನ್ನು ಬಾರಿಸು. ೨. (ಆಲಂ) ಭಯದಿಂದ ಎದೆಯಲ್ಲಿ ಡಬಡಬ ಎಂಬ ಶಬ್ದ ಉಂಟಾಗು; ಎದೆಗುಂಡಿಗೆ ಡವಡವನೆ ಬಡಿದುಕೊಳ್ಳು : ದೆಸೆಯೊಳ್ ನಿಶ್ಚಳಮಿರ್ಪ ದೇವರರ್ದೆ ಢಕ್ಕಾಧ್ವಾನದಿಂ ಢಕ್ಕೆವಾಜಿಸೆ . . . ವೀರಾರಿನೃಪಾಳರಂ ಬರಿಸಿದಂ ಮೂಾವಿಟ್ಟಿಗಂ ಬಿಟ್ಟಿಗಂ (ಎಕ. XI, ದಾವಣ. ೨೫-೨೩ ; 1224). 'ಡಕ್ಕೆವಾಜಿಸು' ಪರಾ. [ ಢಕ್ಕೆ + ಬಾಜಿಸು ]

**ಢಗೆ** 'ದಗೆ₁' ನೋ.

**ಢಗೆವಡೆ** (ಕ್ರಿ). ಸೆಕೆಯನ್ನು ಹೊಂದು; ಉಷ್ಣತೆಯನ್ನು ಪಡೆ; ಕಾವೇರು: ಢಗೆವಡೆದೊಡಲೊಳು ಸ್ಫೋಟಕವೆದ್ದು ನಾಲಗೆ ನುಡಿಗೆಟ್ಟುವೆ (ಮೋಹತ. ೯-೧೪). [ ಢಗೆ (<ದಗೆ₁) + ಪಡೆ₁ ]

**ಢಣ** (ನಾ). ಒಂದು ಅನುಕರಣ ಶಬ್ದ ; ಘಂಟೆ, ಜಾಗಟೆ ಮೊದಲಾದುವುಗಳನ್ನು ಬಡಿದಾಗ ಹುಟ್ಟುವ ಧ್ವನಿ.

ಢಣಢಣ (ದ್ವಿರುಕ್ತಿ) : ವೀರಫಳಕದ ಘಂಟೆ ಢಣಢಣಂ ಢಣಮೆನಲು (ಏಕಾರ. ದೇ. ೧೧೬-೨೦).

**ಢಣಢಣಿಸು** (ಕ್ರಿ). ಢಣಢಣ ಎಂದು ಶಬ್ದಮಾಡು : ಜಾಗಟೆ-ಗಂಟೆಗಳು ಢಣಢಣಿಸುವುವು (ಕನ್ನಜಾ. ೦೩). [ <ಢಣ + - ಇಸು₃ ]

**ಢಣತ್ಕೃತ** (ನಾ). ಢಣಢಣ ಎಂಬ ಶಬ್ದ ; ಘಂಟೆ ಮೊದಲಾದುವುಗಳ ಶಬ್ದ : ಉಲಿವ ಘಂಟೆಯ ಢಣತ್ಕೃತಮೊಗೆಯೆ (ಚಬಪು. ೪೬-೩೬). [ ಸಂ. ]

**ಢಣಾಡಂಗುರ, ಡಣಾಡಂಗುರ, ಡಾಣಾಡಂಗರ, ಡಾಣಾಡಂಗುರ, ಢಾಣಾಡಂಗುರ** (ನಾ). ಘಂಟಾಘೋಷವಾಗಿ ಸಾರಿದುದು ; ಎಲ್ಲರಿಗೂ ತಿಳಿದ ವಿಷಯ; ಬಹಿರಂಗವಾದುದು; ಪ್ರಚಾರವಾದುದು: ಇವಳ ಪವಿತ್ರ ಕತೆ ಇಡೀ ಗುಜ್ಜರಬೆಟ್ಟಿನಲ್ಲೆ ಢಣಾಡಂಗುರವಾಗಲಿಲ್ಲವೇ? (ಹೊಸಕ್ಕಿ. ೫೬). **ಡಣಾಡಂಗುರ** : ಇದು ಡಣಾಡಂಗುರವಾಗಿ ಸಾರುವ ವಿಷಯವಲ್ಲ (ರೂಢಿ). **ಡಾಣಾಡಂಗರ** : ರಾಯರಿದ್ದರ ನಾ ಹ್ಯಾಂಗ ಬರತಿದ್ದೆ ಆಚಾರ ಡಾಣಾಡಂಗರಾಗಿ ? (ದೀಪನಿ. ೪೬). **ಡಾಣಾಡಂಗುರ** : ಬ್ರಿಟಿಶ್‌ಕೋರ್ಟನ್ನು ನಾವು ಮನ್ನಿಸುವುದಿಲ್ಲವೆಂದು ಡಾಣಾಡಂಗುರವಾಗಿ ಸಾರಿ (ಮಹಾಯೋ. ೦೪೯) ; ಬಸವಂತಿ ಡಾಣಾಡಂಗುರ ಮೋಟರಿನಲ್ಲಿ ಬಂದು ವಾಡೆಯಲ್ಲಿ ನಿಂತು ಬಿಡಲಿ (ದೀಪಹ. II, ೧೩೦) ; ಹೆಸರಿಗೆ ಮಾತ್ರ ಮುತ್ತೈದೆಯಾಗಿರುವುದಕ್ಕಿಂತ ಡಾಣಾಡಂಗುರವಾದ ವೈಧವ್ಯವೇ ಲೇಸು (ಸ್ತ್ರೀಶಿಜಿ. ೬). **ಢಾಣಾಡಂಗುರ** : ಅವನ ಕಿಡಿಗೇಡಿತನ ಹಳ್ಳಿಹಳ್ಳಿಯಲ್ಲೂ ಢಾಣಾಡಂಗುರವಾಗಿದೆ (ರೂಢಿ). [ <ಢಣ + ಡಂಗುರ ]

**ಢಣಿರು** (ನಾ). ಒಂದು ಅನುಕರಣ ಧ್ವನಿ; ಘಂಟೆ ಮೊದಲಾದುವುಗಳ ಶಬ್ದ : ಬಿರುದಿನ ಬಿಲ್ಗಂಟೆ ಢಣಿರೆನೆ ಕೊಂಡ ಕಾರ್ಮುಕವ (ವೀರಹಳ. ೩೪-೨೯).

**ಢಣಿಲನೆ** (ಅ). ಢಣಿಲ್ ಎಂದು ಶಬ್ದವಾಗುವಂತೆ ; ಬೇಗನೆ ; ಪಕ್ಕನೆ : ಗಣಮಧ್ಯದೊಳು ತ್ರಿಣೆಯ ಹೃದಯಕವಾಟವ ಢಣಿಲನೆ ತೆಗೆದು ತೋರಲ್ಕೆ (ಕೋಡದಜ. ೧-೧೧೪). [ ಢಣಿಲ್₀ + - ಅನೆ₁ ]

**ಢಪ್ಪಳ** 'ಡಪಳೆ' ನೋ.

**ಢಪ್ಪಳಸೀರೆ** (ನಾ). ಒಂದು ವಿಶಿಷ್ಟ ತರದ ನೆಯ್ಗೆಯುಳ್ಳ ಸೀರೆ: ಯಾಕೇನು. ತಾ ಯಾವಾಗರ ಉಡೋ ಢಪ್ಪಳಸೀರೆ ತಂಗಿ ಉಟ್ಟಳೂ ಅಂತ (ವೃನಿ. ೨೭೧). [ ಢಪ್ಪಳ (<ಡಪಳೆ) + ಸೀರೆ₂ ]

**ಢಬ್** (ನಾ). ಒಂದು ಅನುಕರಣ ಶಬ್ದ : ಕಟಕದವರೆಲ್ಲ ಕಟಕಿಯ ನುಡಿವಂತೆ ಛಿಟಿಲು ಛಿಟಿಲು ಢಬ್ಬೆಂದು (ಜಂಪ್ರಸಾಂ. ೮-೪೫).

**ಢಬಕು** (ನಾ). ನಟನೆ; ಕಪಟ; ವಂಚನೆ; ಮೋಸ: ಶಾಂತಿಸಮ್ಮೇಳನದಲ್ಲಿ ಭಾರತ ಭಾಗ ವಹಿಸಿತು ಎನ್ನುವುದು ಸತ್ಯದ ಅಪಭ್ರಂಶ ; ಬರೀ ಢಬಕು (ಎಡ್ಡಸಾ. ೮೦). [ ←ಹಿಂ. ಢಬಕ್ = ಉಪಾಯ, ಯುಕ್ತಿ ]

**ಢಮಢಮ** (ನಾ). ಒಂದು ಅನುಕರಣ ಶಬ್ದ ; ಡಕ್ಕೆ ಮೊದಲಾದ ಚರ್ಮವಾದ್ಯಗಳನ್ನು ಬಾರಿಸುವಾಗ ಹುಟ್ಟುವ ಧ್ವನಿ. 'ಢಮಢಮತ್ಕಾರ', 'ಢಮಢಮಿಸು' ಪರಾ.

**ಢಮಢಮತ್ಕಾರ** (ನಾ). =ಢಮಢಮ : ತೇರುಗಳ ಚೀತ್ಕಾರ ಪಟು ರಣಭೇರಿಗಳ ಭಾಂಕಾರ ಭಟರ ಕಠೋರತರ ಹೂಂಕಾರ ಢಕ್ಕಾ ಢಮಢಮತ್ಕಾರ (ಅನಂರಾ. ೬-೧೦-೪೫). [ ಸಂ. ]

**ಢಮಢಮಿಸು** (ಕ್ರಿ). ಢಮಢಮ ಎಂದು ಶಬ್ದಮಾಡು : ಡೋಲಾಬು ಮಾನವಾಗಿ ಡೋಲಿನವನು ಢಮಢಮಿಸಿದ (ಮಾಮನಿ. ೨೧೯). [ ಢಮಢಮ + - ಇಸು₃ ]

**ಢಮಣಿ** 'ದಮಣಿ' ನೋ.

**ಢಮಾವಿ** 'ಡಮಾವಿ' ನೋ.

**ಢಮಾರ್** (ನಾ). ಒಂದು ಅನುಕರಣ ಪದ: ಸಿಡಿಮದ್ದು ಸಿಡಿದು ಢಮಾರ್ ಎಂದಿತು (ರೂಢಿ).

**ಢಮಾರ** (ನಾ). [ಸಂಗೀತ] ಒಂದು ಬಗೆಯ ತಾಳ : ನಮ್ಮ ದೇಶದ ಸಂಗೀತದಲ್ಲಿ ರೂಪಕ (ದಾದರಾ), ಆದಿ (ತ್ರಿಪಟ), ಝಂಪೆ, ಧ್ರುಪದ, ತ್ರಿಪುಡೆ (ಢಮಾರ), ಧೂಮಾಳಿ, ಏಕ್ಕಾ ಎಂಬ ಹಲವು ತಾಳಪದ್ಧತಿಗಳಿರುವುವು (ಬಾಲಪ್ರ. II, ೧೧೪೧). [ ←ಹಿಂ. ಮರಾ. ಧಮಾರ್ ]

**ಢಮಾರನೆ** (ಅ). ಥಟ್ಟನೆ ; ಸ್ವಲ್ಪವೂ ವಿಳಂಬವಿಲ್ಲದೆ ; ಕೂಡಲೆ : ನಾನು ಕೇಳಿದರೆ ಢಮಾರನೆ ಉತ್ತರ ಕೊಟ್ಟಳು (ನಾಡಿಗೇ. ೫೩). [ ಢಮಾರ್ + - ಅನೆ₁ ]

**ಢಮ್ಮನೆ** (ಅ). ಢಮ್ ಎಂಬ ಶಬ್ದವಾಗುವಂತೆ : ಅನುಕರಣಕ್ಕೆ- ಖಣಿಲ್ಲನೆ . . . ಢಮ್ಮನೆ, ಧೊಪ್ಪನೆ (ಶಮದ. ೧೪ ಪ್ರಯೋ). [ ಢಂ + - ಅನೆ₁ ]

**ಢರಕಿ** 'ಡರಕಿ' ನೋ.

**ಢರಕಿಹಾಕು** (ಕ್ರಿ). ಢರ್ ಎಂದು ತೇಗು : ಭೋಜನಮಾಡಿ ಬಂದದ್ದರಿಂದ ಅವನು ಐದು ನಿಮಿಷಗಳಲ್ಲಿ ಹತ್ತುಸಾರೆ ಢರಕಿಹಾಕಿದನು (ಮಕ್ಕಿಮು. ೧೩೬). [ ಢರಕಿ (<ಡರಕಿ) + ಹಾಕು (<ಪಾಯ್ಕು₁) ]

**ಥರಕೆ** 'ದರಕೆ' ನೋ.

**ಥಲಾಯಿತ** 'ದಲಾಯಿತ' ನೋ.

**ಥವಣೆ** 'ದವಣೆ' ನೋ.

**ಥವರಿ** (ನಾ). (?) : ಬವರಿದಿರುಗುವ ತಿರುಗಿ ನಡೆವ ನಡೆದೊಡಲುಬ್ಬಿ ಥವರಿಸುವ ಥವರಿಸಿ ಕುಸಿವ ಕುಸಿದು ಥವರಿ[ಪಾಠಾಂ. ಥವರಿ, ದಡಸಿ] ಬೀಸುವ ಬೀಸಿ ಕೈವಿಡಿವ . . . ಕರಿನಿವಹವತ್ಕಾಡಂಬರಂ ಮಿಕ್ಕು ಹಣ್ಣಿ ನಿಂದವು ಬಲದ ನಟ್ಟನಡುವೆ (ಸೋಮಪಡಿ. ೫-೨೯). [ ? ]

**ಥವರಿಸು** (ಕ್ರಿ). (?) : ಬವರಿದಿರುಗುವ ತಿರುಗಿ ನಡೆವ ನಡೆದೊಡಲುಬ್ಬಿ ಥವರಿಸುವ ಥವರಿಸಿ ಕುಸಿವ ಕುಸಿದು ಥವರಿ ಬೀಸುವ ಬೀಸಿ ಕೈವಿಡಿವ . . . ಕರಿನಿವಹವತ್ಕಾಡಂಬರಂ ಮಿಕ್ಕು ಹಣ್ಣಿ ನಿಂದವು ಬಲದ ನಟ್ಟನಡುವೆ (ಸೋಮಪಡಿ. ೫-೨೯). [ ಥವರಿ + – ಇಸು$_3$ ]

**ಥವಳ** 'ಡಾಳ್$_1$' ನೋ.

**ಥವಳಾರ** 'ಧವಳಾರ$_2$' ನೋ.

**ಥವಳಿಸು** (ಕ್ರಿ). ಅಲುಗಾಡಿಸು : ಅರೆಗಣ್ಣು ಮುಚ್ಚಿ ನಸುನಗುತ ಸಣ್ಣ ಬೆರಳು ಬಾಯೊಳು ಥವಳಿಸುತ ಪನ್ನಗಶಯನ ನಾಟಕದಿ ನಿನ್ನ ಮಗನ ಮುದ್ದು ನೋಡೆನುತ ಗೋಪಿ ತನ್ನ ಪತಿಗೆ ತೋಱಿದಳು (ಪುರಂದ. ೫-೦೩೫-೨). [ ಥವಳ್$_0$ (P ←ಮರಾ. ಥವಳಣೇ) + – ಇಸು$_3$ ]

**ಥಳಾಯತ** 'ದಲಾಯಿತ' ನೋ.

**ಥಳಾಯಿತ** 'ದಲಾಯಿತ' ನೋ.

**ಥಳ್ಳಿಸು** (ಕ್ರಿ). ಪ್ರಕಾಶಮಯವಾಗು ; ಕಾಂತಿಯಿಂದ ಮೆರೆ (?) : ಭದ್ರ ಲಕ್ಷಣದಿ ಶೋಭಿಸುವ ಗಾತ್ರಕನುಪಮ ರತ್ನಮಾಲೆಯಾಭರಣ ಜಗನ್ನೇತ್ರಭೃಂಗನಾಮಣಿಯುರಂತೆ ಪಲ್ಲಕ್ಕಿಯೊಳ್ ಬರಲು ಸಭೆ ಥಳ್ಳಿಸುವೊಲು (ಜಿನಮು. ೪-೩೧). [ <ಥಾಳಿಸು$_1$ ? ]

**ಥಟ್ಟನೆ** (ಅ). ಥರ್ ಎಂಬ ಶಬ್ದದೊಡನೆ: ಬಿಡದೆ ಥಟ್ಟನೆ ತೇಗಿ ನೆರವಿಯಂ ಬಯ್ವ ಬಿಱುನುಡಿಯ ಕಲಿವೀರಬಾಹುಕ (ಹರಿಶ್ಚ. ೧೧-೧೮). [ ಥಟ್$_0$ + – ಅನೆ$_1$ ]

**ಥಾಕಿನಿ** 'ಡಾಕಿಣಿ' ನೋ.

**ಥಾಕು** 'ಡಾಕು$_1$' ನೋ.

**ಥಾಕುಗೆಡಿಸು** (ಕ್ರಿ). ಕೆಚ್ಚನ್ನು ಕಳೆ ; ಎದೆಗುಂದಿಸು ; ಧೈರ್ಯಗೆಡುವಂತೆ ಮಾಡು : ಪಾಕಶಾಸನನೈದಿ ವೃತ್ರನ ಥಾಕುಗೆಡಿಸಿ ದಧೀಚಿಯುಸ್ಥಿಯಲಾಕಿ ಹೊಯ್ಕಲು (ಕುವ್ಯಾಉ. ೪-೧೦೬). [ ಥಾಕು (<ಡಾಕು$_1$) + ಕೆಡಿಸು$_1$ ]

**ಥಾಣ** (ನಾ). ಹಾಳು ; ವ್ಯರ್ಥವಾದುದು.

ಥಾಣಾಗು=ಹಾಳಾಗು ; ವ್ಯರ್ಥವಾಗು ; ನಿರುಪಯುಕ್ತವಾಗು : ನೀ ಬರೋಬರಿ ಮಾಡ್ಲಿಲ್ಲಾ ಅಂದ್ರು ಎಲ್ಲಾ ಕೆಲಸ ಕೆಟ್ಟು ಥಾಣಾಗಿ ಹೋಗ್ತಾವ (ಸಿಶೂರ. ೨). [ ←ಮರಾ. ಥಾಣ=ತೇವವುಳ್ಳ, ಕೆಸರಾದ ]

**ಥಾಣಾಡಂಗುರ** 'ಢಣಾಡಂಗುರ' ನೋ.

**ಥಾಣೆ$_1$, ಡಾಣೆ, ಡಾಣ್ಕೆ$_2$, ದಾಣಾ, ದಾಣ್ಕೆ$_2$, ದಾಣ್ಕೆ$_3$** (ನಾ). ೧. ಒಂದು ಬಗೆಯ ಆಯುಧ; ಗದೆ: ನೆರೆದುದಭವನ ಕಿಲಬಲದಲುಬ್ಬರದ ಬೊಬ್ಬಿಯ ಜಡಿವ ಖಡ್ಗದ ಬೆರಳ ಚಕ್ರದ ಭವಣಿಗಳ ಥವಣಿಸುವ ಥಾಣೆಗಳ . . . ವರ ಮಹಾಗಣನಿಕರ ವೊದಗಿತು(ಕುವ್ಯಾಕ. ೭-೧೩). 'ನೆಗೆಹುಥಾಣೆ' ಪರಾ. ಡಾಣೆ : ೨. ದಪ್ಪಕೋಲು ; ಬಡಿಗೆ ; ದೊಣ್ಣೆ ; "ಲಗುಡ; ದಂಡ" (ನಾಚಿರಾ. ೬). ಡಾಣ್ಕೆ : ೧. ಬೀಸುವ ಡಾಣೆಗೆ ತಲೆಯೊಡ್ಡುವಂತಿ ರೊಡ್ಡಿದನಲ್ತೆ (ಪಾರ್ಶ್ವಪು. ೩-೧೧೩); ಕಡುಪಿಂ ಪಿಡಿದಿರ್ಪ ಡಾಣೆಯಂ ಜಡಿ (ದಶಕು. ೫-೪೨). ೨. ಸತ್ತಿರ್ದನಡ್ವಾಹನಂ ಕಂಡದಟಿ ಪೊಡೆಯಂ ಡಾಣೆಯಿಂ ಪೊಯ್ಯಲ್ಕೆ (ಪಂಚತಂ. ೧೯-೧೩) : ದುಷ್ಕೃತ ತಸ್ಕರನ ಪಿಡಿದಿರ್ಪ ಡಾಣೆ [ಪಾಠಾಂ. ದಾಣಿ]ಗಳರವಿಂದಾಕ್ಷಿಯರ್ (ಧರ್ಮಾಮೃ. ೭-೧೩೩) : ಬನ್ನಿಯ ತರು ಡಕ್ಕೆಗೆ . . . ಚೆನ್ನಂಗಿಯ ತರು ಡಾಣೆಗೆ (ಕವಿರ. ೬೨ ಪ್ರಯೋ) : ಕೊಡಲಿ ಕತ್ತಿ ಈಳಿಗೆ ಕುಡುಗೋಲು ಸುರಿಗೆಯಡ್ಡಾಯುಧ ಕುಠಾರ ಕೊಂತ ಡಾಣೆ ಮೊದಲಾದಾಯುಧಂಗಳ್ (ಪಸಾರ. ೬೨೭-೧೦) ; ಡಾಣೆ ಯಿಂದ ಕಂಡಕಂಡವರಿಡಲಿಳಿದಲ್ಲಿಂ ಕಾಲುಗೊಂಡೋಡೆ (ನೇಮಿಸ೦. ೭-೧೧೧೧); ನೀವೆಮ್ಮ ಮನೆಯ ಹೊಗಬೇಡ ಹೊಕ್ಕೊಡೆ ಒಡಿದ ಡಾಣೆಯಿಂ ನಿಮ್ಮೆಲ್ಲರಂ ಬಡಿವೆನು (ಸಮ್ಯಕೌ. ೪-೪೭) ; ಗದೆ ದಂಡ ಡಾಣೆ ಕಬ್ಬಿನ ಕೋಲು . . . ಜವನ ದಾಡೆಗಳಿಂ (ಅನಂಡ. ೨೪-೨೬). ದಾಣಾ : (ಗು). ೩. ದಪ್ಪನೆಯ; ಸ್ಥೂಲ. 'ದಾಣಾದಡಿ' ಪರಾ. ದಾಣ್ಕೆ: ೧. "ಸರ್ವಲಾ. ತೋಮರಃ – ೨ ಮರದ ಸಿಳ್ಳೆ, ದಾಣೆ ಮುಂತಾದ ಆಯುಧಕ್ಕೆ ಹೆಸರು" (ಸಿದ್ಧಾಂತಿ. ೨೨೮). ದಾಣ್ಕೆ$_3$ : ೨. ಕತ್ತೆಯನು ದಾಣೆಯುನು ಇಕ್ಕಿಯೆ ಉತ್ತಮಾಶ್ವವ ಮಾಡ್ವೆನೆಂದರೆ ಆಗುವುದೆ (ಜ್ಞಾನಸಿಂ. ೧-೪೫). ೩. 'ದಾಣೆದಡಿ' ಪರಾ. [ ←ಮರಾ. ಥಾಣಾ ]

**ಥಾಣ್ಕೆ$_2$** 'ದಾಣ$_2$' ನೋ.

**ಥಾನ** (ನಾ). (?) : ಮುತ್ತಿನ ಥಾನವ ಮೂಗು ನುಂಗಿತ್ತ ಕಂಡೆ ಕಂಗಳು ಹಸಿದು ವಜ್ರವ ನುಂಗಿತ್ತ ಕಂಡೆ (ಪದಗೋ. ೧೧೧-೧೪). [ ? ]

**ಥಾಲ** (ನಾ). = ಡಾಲು$_2$೧ : "ಡಾಲು–ಥಾಲ=ಅಡ್ಡಣ" (ತದ್ಭಕೋ. ೦೬). [ ಸಂ. ]

**ಥಾಲು$_1$** 'ಡಾಳ್$_1$' ನೋ.

**ಥಾಲು$_2$** 'ಡಾಲು$_2$' ನೋ.

**ಥಾವಣಿ** 'ದಾವಣಿ$_2$' ನೋ.

**ಥಾವಣಿಗಿರಿ** (ನಾ). ಸಾಲಾದ ಬೆಟ್ಟ ; ಪರ್ವತಗಳ ಪಂಕ್ತಿ ; ಪರ್ವತ ಶ್ರೇಣಿ : ಗಿರಿಯ ಡೆಂಕಣಜಂತ್ರವನು ತರಹರಿಸುವವರಾಕರಸ ಥಾವಣಿ [ಪಾಠಾಂ. ಧಾರುಣಿ]ಗಿರಿಯ ಥಾಳಿಗೆ ಧಾತುಗೆಟ್ಟುದು ಪಾಂಡುಸುತ ಸೇನೆ (ಕುವ್ಯಾಕ. ೨೩-೩೬). [ ಥಾವಣಿ (<ದಾವಣಿ$_2$) + ಗಿರಿ$_1$ ]

**ಥಾವರಿಸು** 'ದಾವರಿಸು' ನೋ.

**ಥಾಳ$_1$** 'ಡಾಳ್$_1$' ನೋ.

**ಥಾಳ$_2$** 'ದವಳ$_1$' ನೋ.

**ಥಾಳ$_3$** 'ದಾಳ$_1$' ನೋ.

**ಥಾಳ$_4$** 'ದಾಳ$_2$' ನೋ.

**ಥಾಳಂಬಡೆ** (ಕ್ರಿ). ಪ್ರಕಾಶವನ್ನು ಪಡೆ ; ಬೆಳಗು ; ಉಜ್ವಲವಾಗು : ಜಲಜಲಿಸಿ ಥಾಳಂಬಡೆದುದಡವಿಗಿಚ್ಚು (ಸಮ್ಯಕೌ. ೧೧-೨೪). [ ಥಾಳ$_1$ (<ಡಾಳ$_1$) + ಪಡೆ$_1$ ]

**ಥಾಳಕ** 'ಡಾಳಕ' ನೋ.

**ಥಾಳಕತನ** 'ಡಾಳಕತನ' ನೋ.

**ಥಾಳಕಿ** 'ಡಾಳಕಿ' ನೋ.

**ಥಾಳಯಿಸು** 'ಡಾಳಿಸು$_2$' ನೋ.

**ಥಾಳವಿಸು** 'ಡಾಳಯಿಸು$_1$' ನೋ.

**ಥಾಳಿಸು$_1$** 'ಡಾಳಯಿಸು$_1$' ನೋ.

**ಥಾಳಿಸು$_2$** 'ಡಾಳಿಸು$_2$' ನೋ.

**ಥಾಳು** 'ಡಾಳ$_1$' ನೋ.

**ಥಾಳಿ** 'ಡಾಳಿ' ನೋ.

**ಥಾಳಿಗೊಂಟಣಿ** (ನಾ). ವಂಚಕಿಯಾದ ಕುಂಟಣಿ : ಮತ್ತಮಾ ಭೋಗಿನಿ ಗೃಹಮಾಲೆಯೊಳಾಳಾಪಿಸುವ ಥಾಳಿಗೊಂಟಣಿಯರಾಳಾಪವಮಂ (ಮಹಾನೀ. ೧೪-೮೫ ವ). [ ಥಾಳಿ (<ಡಾಳಿ) + ಕೊಂಟಣಿ (<ಕುಂಟಣಿ) ]

**ಥಾಳೈಸು** 'ಡಾಳಯಿಸು$_1$' ನೋ.

**ಥಿಕ್ಕಿ** 'ಡಿಕ್ಕಿ' ನೋ.

**ಢಿಕ್ಕಿಯಾಡು** (ಕ್ರಿ). ಡಿಕ್ಕಿಹೊಡೆಯುವ ಆಟವನ್ನು ಆಡು; ಡಿಕ್ಕಿ ಹೊಡೆ: ನೂರು ಮದ್ದಾನೆಗಳು ಇರುಳ ಬಾನಿಗೆ ನುಗ್ಗಿ ಢಿಕ್ಕಿಯಾಡಿವೆ (ನಲಮು. ೫೯-೫). [ಢಿಕ್ಕಿ (<ಡಿಕ್ಕಿ) + ಆಡು₁]

**ಢಿಕ್ಕಿಹೊಡೆ** 'ಡಿಕ್ಕಿಹೊಡೆ' ನೋ.

**ಢಿಳ್ಳ, ಡಿಲ್ಲ, ಡಿಳ್ಳ, ಡಿಳ್ಳು, ಡೀಲ, ಡೀಲು, ದಿಳ್ಳ** (ನಾ). ೧. ಶಿಥಿಲತೆ; ಸಡಿಲು: ಬಲ್ಲಾಳ್ಗಳ್ ಬೀಟ್ಟುದುಂ ಕೋಂಟೆ ಢಿ[ಪಾಠಾಂ. ಡಿ]ಳ್ಳ ಮಾದೊಡಳ್ಕಿರ್ದಗಳ್ ಕೆಲಬರ್ ಬಾಳಂ ಬಿಟ್ಟು ಬಾಟನಾಸೆಗೆಯ್ಮೆಯುಂ (ಪಾರ್ಶ್ವಪು. ೩-೧೫೩ ವ). ಡಿಲ್ಲ: ೨. ಸುಲಭವಾಗಿ ತಿಳಿಯಲು ಶಕ್ಯವಿಲ್ಲದುದು; ಕ್ಲಿಷ್ಟವಾದುದು: ಡಿಲ್ಲವಹ ವೇದಾಂತದರ್ಥವ ಸೊಲ್ಲಿಸಲು ಸೂರಿಗಳ ವಾರ್ತೆಯನೆಲ್ಲ ಮನುಜರು ದಾಂಟಿದಂದದಲಿರ್ದು ಮುತ್ತರವು (ನಿಭಾಗ. ೧೦-೨೮-೨೮). ಡಿಳ್ಳ: ೧. ಜಲಪಕ್ಷಿಯಂ ಜಡಿದು ನಾಣ್ಣಡಿ ಡಿಳ್ಳಮನೈದೆ ನಲ್ಮೆಯಿಂ ಮಿಸುಪಥರಾಗ್ರುವಂ ಸವಿದಳಂಗನೆ (ದಶಕು. ೬-೦೫೭). ೩. ದಿಗಿಲು; ಭಯ; ಹೆದರಿಕೆ; ತಳ್ಳಂಕ; ಅಧೈರ್ಯ: "ಡಿಳ್ಳ[ಪಾಠಾಂ. ದಿಳ್ಳ]ಮನಲ್ ತಲ್ಲಣಮದು" (ಭಾರನಿ. ೫೭). ೪. "ಬರಡು; ವ್ಯರ್ಥ" (ಸಿರಿಕೋ. ೨೦೦). ೫. ಅಧೈರ್ಯ ವುಳ್ಳುದು; ಕೈಲಾಗದುದು; ಭಯಗೊಂಡುದು: ನೀ ನಗುವವೋಲ್ನ ಮ್ಮೊಳಗು ಡಿಳ್ಳವೆ ರಪಣವಿದೆಲಾ ಬಹಳ ಭಂಡಾರ (ಕುವ್ಯಾಸ. ೧೯-೩). ಡಿಳ್ಳು: ೩. 'ಡಿಳ್ಳುಹೋಗು' ಪರಾ. ಡೀಲ: ೧. ಸಡಿಲವಾದ; ಡೀಲಬಿಟ್ಟ (Slack. ಇಂಕನಿ.). ಡೀಲು: ೧. "ಡೀಲು – ಸಡಿಲು" (ಜಾನಕೋ. ೬೩). ದಿಳ್ಳ: ೩. "ದಿ[ಪಾಠಾಂ. ಡಿ]ಳ್ಳಮೆನಲ್ ತಲ್ಲಣಮದು" (ಭಾರನಿ. ೫೭).

ಡಿಳ್ಳಮಾಗು, ಡಿಳ್ಳವಾಗು = ೧. ದುರ್ಬಲವಾಗು; ಶಕ್ತಿಗುಂದು: ನಡೆ ತಡಮಾಗೆ ನುಣ್ಣುಡಿ ತೊದಳ್ಗೊಳೆ ಝೊಂಪಿಸೆ ಕೆಂಪನಾಳ್ದು ಕಣ್ಗುಡಿ ತನು ಡಿಳ್ಳಮಾಗೆ ಮಧುಪಾನ ವಿನೋದದಿನಾದ ಸೋಂಕು ಚೆಲ್ವಿಡಿದಿರೆ ಬರ್ಪ ಗೋಪಿ (ಸೂಕ್ತಿಸು. ೧೩-೫). ೨. ಅಧೈರ್ಯಗೊಳ್ಳು; ಬೆದರು; ಗಾಬರಿಯಾಗು: ನೋಡು ಲಕ್ಷ್ಮಣ ದುರ್ನಿಮಿತ್ತಂಗಳಂ ಪಥದೊಳು ಡಿಳ್ಳಮಾದಪುದೀಗಳೆನ್ನ ಮನಂ (ಜೈಮಿಭಾ. ೧೯-೩): ಪೂಗೊಳಲೆಂದು ಬಂದ ವಿಟಸಂತತಿಯುಳ್ಳಿರ್ದ ಡಿಳ್ಳವಪ್ಪಿನಂ ಪೂಗಣೆಯುರ್ಚಿ ಮೂರ್ಛೆ ಗೊಳಗಾಗಲೊಡಂ(ದಶಕು. ೦-೪೦). ೩. ಅಸಮರ್ಥವಾಗು; ವ್ಯರ್ಥವಾಗು: ಡಿಳ್ಳಮಾದುದೆ ಯೌವನಾಶ್ವ ಭೂಪತಿಯ ಬಲಂ (ಜೈಮಿಭಾ. ೪-೨೧); ಝಲ್ಲೆಂದ ಹೃದಯದ ಜೊಳ್ಳುನಾದವ ಕೇಳಿ ಡಿಳ್ಳವಾಯಿತು ಬಾಳು ನಾನೆಂದೆನೇ (ಸಹೀಗೀ. ೪೦-೪೦೪). ೪. ಸಡಿಲವಾಗು: ಅಮರ್ದ ಕಂಚುಳಿಕೆ ಪೆರ್ವೊಲೆಯಾಕೆಗೆ ಡಿಳ್ಳವಾಗಲ್ದೊಡವುಗಳಟ್ಟಿಯಿಂದುಲಿಯಲ್ (ನಳಚಂ. ೪೭೭). [<ಪ್ರಾ. ಢಿಲ್ಲ. / ಮರಾ. ಢಿಲ್, ಢಿಲಾ, ಢೀಲ್]

**ಢಿಳ್ಳಾಯ** 'ಡಿಳ್ಳಾಯ್ಯ₁' ನೋ.

**ಢೀಗು, ಡೀಗು** (ನಾ). ಹೊರೆ; ರಾಶಿ; ಸಮೂಹ: ಕೆಳಗೆ ಮೇಲೆ ಸಾಮಾನಿನ ಢೀಗು (ಅನ್ನ. ೧೦೩); ಫೈಲುಗಳ 'ಢೀಗಿ'ನ ಕೆಳಗೆ ಸಿಕ್ಕುಬಿದ್ದ (ಜೀಪಾಠ. ೪೯). ಡೀಗು: ಕುಳ್ಳಿನ ಡೀಗ ತಂದು ಅಗಸಿ ಮುಂದಿನ ಬಯಲೆಲ್ಲ ತುಂಬಿ ಬಿಡತೇವು (ಗ್ರಾಮಾಯ. ೨೨೯). [←ಮರಾ. ಢೀಗ್]

**ಢುಲಿ** (ನಾ). =ಡುಲಿ: "ಕಮಠೀ, ಢುಲೀ – ೨ ಹೆಣ್ಣು ಆಮೆ ಪೆಸರುಗಳು, ಅಂದರೆ ಸ್ತ್ರೀಕೂರ್ಮ" (ಸಿದ್ಧಾಂತಿ. ೬೫). [ಸಂ. ಢುಲೀ]

**ಢೆಂಕಣ** 'ಡೆಂಕಣ' ನೋ.

**ಢೆಂಕಣೆ** 'ಡೆಂಕಣಿ' ನೋ.

**ಢೆಂಕೆ** 'ಡಕ್ಕೆ' ನೋ.

**ಢೆಂಢಣಿಸು** 'ಟೆಂಟಣಿಸು' ನೋ.

**ಢೇಂಕಣಿ** 'ಡೆಂಕಣಿ' ನೋ.

**ಢೇಂಕಣೆ** 'ಡೆಂಕಣಿ' ನೋ.

**ಢೊಂಕಣಿ** 'ಡೊಂಕಣಿ' ನೋ.

**ಢೊಕ್ಕರ** 'ಡೊಕ್ಕರ₂' ನೋ.

**ಢೊಣೆ** 'ದೊಣೆ₁' ನೋ.

**ಢೋಂಗಿ, ಡೋಂಗಿ, ಡೋಂಗು, ಢೋಂಗು** (ನಾ). ಮೋಸ: ಸುಳ್ಳು; ವಂಚನೆ: ಅನೇಕರ ಹಾಗೆ "ಢೋಂಗೀ ಬ್ರಹ್ಮಚಾರಿ" ಯಾಗಿರಲಿಲ್ಲ (ನಾಪೂಲೀ. ೨೫೭); ಅನ್ನವಿಲ್ಲದೆ ಸಾಯುತ್ತಾಳಂತೆ. ಪ್ರಭೂ, ಇದೆಲ್ಲಾ ಢೋಂಗಿ ಢೋಂಗಿ ಡೋಕಾರಿ (ಹನ್ನೊಂದ. ೬೫). ಡೋಂಗಿ: ನಮ್ಮ ಹತ್ತಿರ ನಿಮ್ಮ ಡೋಂಗಿ ತೆಗೀತೀರಾ (ಡಂಗೂಲಿ. ೯). ಡೋಂಗು: ಪಕ್ಕಾಸುಳ್ಳು, ಢೋಂಗು, ವಿಪರೀತ ಸುಳ್ಳು (Rouser. ಇಂಕನಿ.). ಢೋಂಗು: ಈ ಢೋಂಗು ನಮ್ಮ ಮುಂದೆ ನಡೆಯುವಂತಿಲ್ಲ (ಹುಚ್ಚಾಟಿ. ४०): ನಾನು ನಿಮ್ಮಂತೆ ಈ ಢೋಂಗಿಗೆ ಮೋಸ ಹೋಗುವವಳಲ್ಲ (ಸ್ಮೃತಿಚಿ. ೬೨೯); ಆದರ ಬರೇ ಢೋಂಗ ಮಾಡತೀದಿ ಆತು (ಮಿಂಚಿಡು. ೬೫); ನಿನ್ನ ಮನಸಿನಾಗೂ ಎಲ್ಲಾ ಆದೇ ಮದವೀ ಮಾಡಿಕೊಬೇಕು ಅಂತ. ಆದರ ಬರೇ ಢೋಂಗ ಮಾಡತೀದಿ (ತಿದುಗು. ೩೯): ತೀರ ಮರಥಾವ್ರುಂಗ ಢೋಂಗ ಮಾಡತೀ (ದೀಪಹ. II, ೧೭೧).

ಡೋಂಗಿ ಹೊಡೆ = ಸುಳ್ಳುಹೇಳು: ನನ್ನ ಮುಂದೆ ಡೋಂಗಿ ಹೊಡೆಯ ಬೇಡ (ರೂಢಿ). ಢೋಂಗಿ ಬಿಡು, ಡೋಂಗಿ ಬಿಡು = ಡೋಂಗಿಹೊಡೆ: ಬಹಳ ದೊಡ್ಡ ವಿದ್ವಾಂಸರು ಎಂದು ಯಜಮಾನರು ಒಂದು ಢೋಂಗಿ ಬಿಟ್ಟರು (ನವನೀ. ೬೧): ಹುಡುಗರು ಡೋಂಗಿ ಬಿಡುತ್ತಿದ್ದಾರೆಯೋ ಏನೋ ನೋಡಬೇಕೆಂದು ದೇವಯ್ಯ ಅವರೆಲ್ಲರ ಕೈಗಳನ್ನೂ ಮೂಸಿ ಮೂಸಿ ಹುಬ್ಬೇರಿಸಿ ಕಣ್ಣರಳಿಸಿ ಬೆರಗಾದನು (ಮಲೆಮ. ೫೦೭). [←ಹಿಂ. ಮರಾ. ಢೋಂಗೀ, ಢೋಂಗ್ = ಕಪಟಿ, ಮೋಸಗಾರ]

**ಢೋಂಗು** 'ಢೋಂಗಿ' ನೋ.

**ಢೋಕಾ** 'ಧೋಕಾ' ನೋ.

**ಢೋರ** 'ಡೋಹರ' ನೋ.

**ಢೋಲಕೆ** (ನಾ). =ಡೋಲಕ: ತಾಳ, ಢೋಲಕಗಳ ಗಡಚಿಕ್ಕುವ ಆವಾಜನಲ್ಲಿ ಮಾಸ್ತರರ ದನಿ ಅವರಿಗೆ ಕೇಳಿಸಲಿಲ್ಲ (ಮೂರುದಾ. ೬೩). [ಸಂ. ಢೋಲಕ]

**ಢೋಲು** 'ಡೋಲು' ನೋ.

**ಢೋಳು** 'ಡೋಲು' ನೋ.

❋

# ಣ

ಣ (ನಾ). ೧. ಕನ್ನಡ ವರ್ಣಮಾಲೆಯ ಮೂವತ್ತೈದನೆಯ ಅಕ್ಷರ. ೨. [ಗಣಿತ]ಐದು ಎಂಬ ಸಂಖ್ಯೆಯ ಸಂಕೇತ : "ಜಣಮಶಮದ್ಯೈದು" (ಮಂಗರಾ. ೧೦೪-೧೦).

ಣಕಾರ (ನಾ). ಣ ಎಂಬ ಅಕ್ಷರ : ಭಿನ್ನಪದದೊಳಂ ಸಮಾಸ ಪದದೊಳಂ ಣಕಾರಕ್ಕೆ ಪರಮಾದ ನಕಾರಂ ಣಕಾರಮನೆಯ್ದುಗುಂ (ಶಮುದ. ೧೫೮ ವೃತ್ತಿ). [ ಸಂ. ]

ಣತ್ವ (ನಾ). = ಣಕಾರ : ಸಂಧಿಸಿದ ನಕಾರಂ ಣತ್ವಂ ಪ್ರಸಿದ್ಧಂ (ಶಮುದ. ೧೫೮). [ ಸಂ. ]

ಣವೋ (ನಾ). ನಮಸ್ಕಾರ : ವಂದನೆ : ಣವೋ ಸಿದ್ಧಾಣಂ ಣವೋ ಅರಿಹಂತಾಣಂ (ಜೀವಲ. ೫೯-೫).

ಣವೋಣವೊ (ದ್ವಿರುಕ್ತಿ) : ಣಮ್ಮಣ ಣಮ್ಮಣ ಶಬ್ದದಿಂ ಕೂಡಿದ ವೀರಣಮ ನುಡಿಸುತೆ ಸಭೆಯೊಳಗೆ ಣವೋಣವೊಯೆಂಬ ಪ್ರಾಕೃತರ ನೀಕ್ಷಿಸುವ ಪ್ರಣಮರೂಪ ನಿನಗೆಱಗುವೆನು (ಶತಸಾಂ. ೭೦-೫೭). [ <ಪ್ರಾ. ಣವೋ ]

ಣವೋಕಾರ (ನಾ). ನಮಸ್ಕಾರ : ಕೇಳಿದಿರೊ ದಿವ್ಯಧ್ವನಿ ಜೀವದ ಣವೋಕಾರ ಕನ್ನಡದ ಟಂಕಾರ : ಧರ್ಮಸಾರ (ಜೀವಲ. ೫೯-೮). [ <ಪ್ರಾ. ಣವೋಕ್ಕಾರ ]

ಣಾಂತ (ನಾ). ಣಕಾರವು ಕೊನೆಯಲ್ಲಿರುವ ಶಬ್ದ : ನೆಗೞ್ದರ್ದ ರೇಫಱಟನಾಂತಗಾಂತಸಾಂತೋತ್ವದಿದಿರ ವತ್ವಂ ಪತ್ವಂ ಪುಗುಗುಂ . . . ನಾಂತ ಣಾಂತಂ ಬತ್ವಂ (ಶಮುದ. ೨೩೨). [ ಣ + ಅಂತ$_2$ ]

❋

# ತ

ತ$_1$ (ನಾ). ೧. ಕನ್ನಡ ವರ್ಣಮಾಲೆಯ ಮೂವತ್ತಾರನೆಯ ವರ್ಣ ; ತಕಾರ. ೨. [ಗಣಿತ] ಆರು ಎಂಬ ಸಂಖ್ಯೆಯ ಸಂಕೇತ : "ಚತಷ ಮಾಱು" (ಮಂಗರಾ. ೧೦೪-೧೦). ೩. [ಛಂದ] ಅಕ್ಷರಗಣಗಳಲ್ಲಿ ಒಂದು; ಎರಡು ಗುರು ಮತ್ತು ಒಂದು ಲಘುವುಳ್ಳ ಗಣ; ತಗಣ: (– – ∪) ; ಮಯರಸತಜಭನಲಗವಿನಿಜಯಮೆಂಬಿವು ನಿಯಮದಿಂ ಗಣಾಕ್ಷರಮಕ್ಕುಂ (ಛಂದೋಂಬು. ೧-೩೬).

–ತ$_2$ (ಪ್ರ). ಒಂದು ಕೃದಂತ ಭಾವನಾಮ ಪ್ರತ್ಯಯ : ತಕಾರಕ್ಕೆ– ಅಱಿತಂ, ಕಡಿತಂ, ಉಱಿತಂ (ಶಮುದ. ೨೧೦ ಪ್ರಯೋ).

ತಉಡಿಮಾನ್ಯ (ನಾ). ಒಂದು ಬಗೆಯ ಮಾನ್ಯ : ವೀರ ಪಣ್ಣಾಳ ವಿತ್ತಿಯೊಳ ಆರು ಸತ್ತಡು ತಉಡಿಮಾನ್ಯ ಆ ನಾ × × ಳುವ ದೇವರ ಮಕ್ಕಳಿಗೆ ಸಲುವಉದು ಮಕ್ಕಳಿಲ್ಲದಿದ್ದಡೆ ಅಣ್ಣ ತಮ್ಮಂಗೆ (ಎಕ. IX, ಕಾನಕಾ. ೮೧-೧೦ ; 1306). [ <ತವುಡಿ$_1$ + ಮಾನ್ಯ ]

ತಂ$_1$ 'ತಣ್$_2$' ನೋ.

ತಂ$_2$ (ನಾ). [ಸಂಗೀತ] ಒಂದು ಗೀತಾಕ್ಷರ : ತಂ ಹ ಯ ಎ ಆ ದ ತಿನಂ ನಿತ ನಿತ ಗೀತಾಕ್ಷರೋಪಲಕ್ಷಿತಮುಂ ಗಮಕರಮಣೀಯಮುಂ ನಿಖಿಳಗೀತ ವಸ್ತ್ವಾದಿರೂಪಮುಮಪ್ಪಾಲಾಪಿಯೊಳಂ (ಚಂದ್ರಪ್ರ. ೧೫-೭೨ ವ). [?]

ತಂಗಡಲೆ (ನಾ). ಹಸಿ ಕಡಲೆ ; ನೆನೆದ ಕಡಲೆ : ತಂಗಡಲೆಯ ಮೆಯ್ಸಿ ನೀರನೂಡಿಸುತೆ ವಿಹಂಗ ಸಂತೋಷದಿ ತಮ್ಮ ಪುಂಗಟ್ಟಿದ ಮುದ್ದು ಮಱಿಗಳ್ಗೆ ಗುಟುಕೀಯೆ (ಮೋಹತ. ೪-೧೯). [ತಂ$_1$ (<ತಣ್$_2$)+ಕಡಲೆ]

ತಂಗಡಿ, ತಗಟೆ (ನಾ). ಗೊಂಚಲು ಗೊಂಚಲಾಗಿ ಹಳದಿ ಹೂವುಗಳನ್ನು ಬಿಡುವ ಒಂದು ಬಗೆಯ ಕುರುಚಲು ಗಿಡ ; ಆವರಿಕೆ ಗಿಡ ; ಹೊನ್ನಾವರಿಕೆ : ಪಳಸಂತತಿಯಿಂದೊಲೆದುಯ್ಯಲಾಡಿ ತೂಗಾಡುವ ತೆಂಗು ತಂಗಡಿಗಳಂ ಬೆಳದಿದ್ದ ಸುಗಂಧ ಸಾಳಿ ನಾಡಾಡಿಯರೂಡಿಯೂರ್ಗ್ಗಳೆಳವಲ್ಲದು ಮೊಪ್ಪುವ ಹೊನ್ನವಳ್ಳಿ ತಾಂ (ಎಕ. XII, ತಿಪಟೂ. ೧೨೮-೫೮ ; 1202) ; ತಂಗಡಿಹೂವ ಸುಟ್ಟು ಕರಕು ಮಾಡಿ ಹುಣ್ಣಿಗೆ ಮೇಲೆ ಹಾಕುವುದು (ವಿಷ್ಣುವಿ. ೧೭೫) ; ಗದ್ದೆ ಅಡಕೆತೋಟ ತೆಂಗು ತಂಗಡಿಯ ಭೂಮಿ ಪುಷ್ಪದ ತೋಟದ ಭೂಮಿ . . . ನಾಲು ಮಹತ್ತಿನ ಮಟಕ್ಕೆ ಸಿವಾರ್ಪ್ಪಿತವಾಗಿ ಕೊಟ್ಟೆಉ (ಎಕ. XIV, ಎಳಂದೂ. ೭೩-೩ : ?). ತಗಟೆ : ಪಲ್ಲವ ಸತ್ತಿಗೆಯವನಲ್ಲ ತಗಟೆ[ಪಾಠಾಂ. ಟಿ]ಯ ಬಲ್ಲೆಯದವನಲ್ಲ . . . ನೃಪನು (ಮದೇಪು. ೨೦-೫೯); ಒಂದು ತಗಟೇಗಿಡವ ಊರಲು ಒಂದು ಜತೆ ಘನ ಅಮೃತ ಹಸ್ತವ ಕಳುಹೊ ದೇವಾ (ಆರರೋ. ೨). [ ದೇ.॥ ತೆಲು. ತಂಗೆಡು, ತಂಗೇಡು ]

ತಂಗಣೆ (ನಾ). ತಂಗುವಿಕೆ; ಉಳಿದುಕೊಳ್ಳುವುದು: ಮೊದಲ ತಂಗಣೆಯ ಅವಧಿಯಲ್ಲಿ ನೈಕ್ಲದೋವ್ ಮತ್ತು ಕಾತ್ಯೂಷಾರ ಬಾಂಧವ್ಯ ಹೀಗೆಯೇ ಬೆಳೆಯಿತು (ಪುನರು. ೫೮) ; ಪೀಟರ್ಸ್‌ಬರ್ಗ್ ನಗರದಲ್ಲಿ ಅವನ ತಂಗಣೆಗೆ ಆ ದಿನ ಕೊನೆಯ ಗಡುವಾಗಿತ್ತು(ಪುನರು. ೩೮೪). [ ತಂಗು$_1$ + – ಅಣೆ$_4$ ]

ತಂಗದಿರ್ 'ತಣ್ಗದಿರ್' ನೋ.

ತಂಗದಿರ 'ತಣ್ಗದಿರ' ನೋ.

ತಂಗದಿರದಲೆಯ (ನಾ). ಚಂದ್ರನನ್ನು ತಲೆಯಲ್ಲಿ ಧರಿಸಿದವನು : ಚಂದ್ರಶೇಖರ; ಶಿವ: ಗೋತ್ರಸುತೆ ದಯಾಪಾಂಗದಿಂ ನೋಡಿ ತಕ್ಕೈಸುತ್ತ ತಂಗದಿರದಲೆಯನಿಂಗಿತವನಱಿದು (ಪ್ರಾಥರಾ. ೬-೬೨). [ ತಂಗದಿರ (<ತಣ್ಗದಿರ) + ತಲೆ$_1$ + – ಅ$_7$ ]

ತಂಗದಿರ್ಗಲ್ 'ತಣ್ಗದಿರ್ಗಲ್' ನೋ.

ತಂಗದಿರ್ವಕ್ಕಿ 'ತಣ್ಗದಿರ್ವಕ್ಕಿ' ನೋ.

ತಂಗದಿರ್ವಟ್ಟ (ನಾ). ತಂಪಾದ ಕಿರಣಗಳ ಮಂಡಲವುಳ್ಳವನು; ಚಂದ್ರ: ಅದಟಿಂದಡಸಿ ಪಿಡಿದು ತಂಗದಿರ್ವಟ್ಟನ ಲೇಖೆಗರ್ಚೆ ಧರೆಗಿಱಿವ ವಿಧುಂತುದನೆನೆ ಘೀಱಿಡುತುಂ ಬಿದ್ದ್ರಡು ನಿಡುಗೋಡೂಱಿ ಮತ್ತ ಕುಂಜರನಾಗಳ್ (ಉದ್ಭಟ. ೨-೫೮) : ತಂಗದಿರ್ವಟ್ಟನಿಂಗದಿರ್ದೊಂಗಲಂ ಪಿಂಗದೆ ಕಡಿದು ಕಂಡರಸಿ ಕರುವಿಟ್ಟು ಪೊಂಗಿ ತೊಳ್ಪೆ ಬೆಳ್ವೆಳಗನುಗುೞ್ವೆಳೆ ಮುತ್ತಿನ ಮಾಡುವೆಟ್ಟುಗಳಿಂ ವಿರಾಜಿಪ್ಪುದ್ಯಾನಮಂ (ಉದ್ಭಟ. ೯-೩೦ ವ) [ ತಂಗದಿರ್ (<ತಣ್ಗದಿರ್) + ಬಟ್ಟು$_1$ (<ಬಟ್ಟೆ$_1$) + – ಅ$_7$ ]

ತಂಗರಗ 'ತಣ್ಗರಗ' ನೋ.

ತಂಗಲ್ 'ತಣ್ಗಲ್' ನೋ.

**ತಂಗಲು** (ನಾ). ಹಸಿ ; ಒದ್ದೆಯಾಗಿರುವಿಕೆ ; ತೇವ.

**ತಂಗಲ ಭೂಮಿ**=ನೀರುಂಡ ಭೂಮಿ ; ತೇವವುಳ್ಳ ನೆಲ : ಅಂಡಜವೆಂದು ತತ್ತಿಯಲ್ಲಿ ಹುಟ್ಟುವ ಪ್ರಾಣಿಗಳು . . . ಉದ್ಭಿಜವೆಂದು ತಂಗಲ ಭೂಮಿಯಲ್ಲಿ ಹುಟ್ಟುವ ಪ್ರಾಣಿಗಳು ಜರಾಯುಜವೆಂದು ಮಾಸಿನಲ್ಲಿ ಹುಟ್ಟುವ ಪ್ರಾಣಿಗಳು ಈ ನಾಲ್ಕು ಪ್ರಕಾರದಲ್ಲಿ ಹುಟ್ಟುವ ಎಂಭತ್ನಾಲ್ಕು ಲಕ್ಷ ಜೀವರಾಶಿಗಳು (ಗಣಧಾ. ೪೮-೧).

[ ತಂ$_1$ (< ತಣ್$_2$) + – ಕಲು$_2$ (< – ಕಲ್$_4$) ]

**ತಂಗಲ್ಲು** 'ತಣ್ಗಲ್' ನೋ.

**ತಂಗಳನ್ನ** (ನಾ). ೧. ಆರಿದ ಅನ್ನ; ತಣ್ಣಗಾದ ಅನ್ನ. ೨. ಹಿಂದಿನ ದಿವಸ ಮಾಡಿದ ಅನ್ನ : ರಾತ್ರಿ ಊಟಮಾಡಿ ಉಳಿದ ತಂಗಳನ್ನವನ್ನು ಬೆಳಗ್ಗೆ ತಿಂದು ಎಲ್ಲರೂ ಹೊರಟರು (ರಕ್ತರೂ. ೬೦).

[ ತಂಗಳು (< ತಣ್ಗೂಟ್) + ಅನ್ನ$_3$ ]

**ತಂಗಳು** 'ತಣ್ಗೂಟ್' ನೋ.

**ತಂಗಳುತತ್ವ** (ನಾ). (ಅಲಂ)ಕೇಳಿ ಕೇಳಿ ಹಳೆಯದಾದ ನಿಷ್ಪ್ರಯೋಜಕ ತತ್ತ್ವ; ಗೊಡ್ಡು ತತ್ತ್ವ : ನಾವು ತಿಳಿಯುವುದೊಂದು ದೈವ ಬಗೆಯುವುದೊಂದು ಎಂದು ಅವಳಿಗೆ ಮುದುಕಿ ತಂಗಳುತತ್ವವನ್ನು ಉಪದೇಶಿಸಿದ್ದಳು (ಹಳ್ಳಿಹಾ. ೯೯). [ ತಂಗಳು (< ತಣ್ಗೂಟ್) + ತತ್ವ$_1$ ]

**ತಂಗಳುತತ್ವಜ್ಞಾನ** (ನಾ).=ತಂಗಳುತತ್ವ : ಊರವರು 'ಒಳ್ಳೆಯವರಿಗೆ ದೇವರು ಕಷ್ಟ ಕೊಡುವುದು ಹೆಚ್ಚು' ಎಂದು ತಂಗಳುತತ್ವಜ್ಞಾನ ಹೇಳುವಂತಾಯಿತು (ಕಂಬಹು. ೧೧೯). [ತಂಗಳು (< ತಣ್ಗೂಟ್)+ತತ್ವಜ್ಞಾನ]

**ತಂಗಳುಹಿಟ್ಟು** (ನಾ). ಹಿಂದಿನ ದಿವಸ ಮಾಡಿದ ರಾಗಿಮುದ್ದೆ; ಆರಿದ ಹಿಟ್ಟು : ತಂಗಿ ಬಡವಳಾದರೆ ತಂಗಳುಹಿಟ್ಟಿಗೂ ಗತಿಯಿಲ್ಲವೇ ? (ಗಾದೆ).

[ ತಂಗಳು (< ತಣ್ಗೂಟ್) + ಹಿಟ್ಟು$_1$ (< ಪಿಟ್ಟು) ]

**ತಂಗಳೂಟ** (ನಾ). ಹಿಂದಿನ ದಿವಸ ಮಿಕ್ಕ ಅನ್ನದ ಊಟ; ತಂಗಳನ್ನದ ಊಟ : ಸೂರ್ಯನು ನಾಲ್ಕಾಳುದ್ದ ಮೇಲಕ್ಕೇರಿದನು. ತಂಗಳೂಟದ ಹೊತ್ತಾಯಿತು (ಚಂಗಾಳ್ಯ. ೨೪); ದ್ಯಾವಮ್ಮಂದು ಇನ್ನೂ ತಂಗಳೂಟ ಆಗಲಿಲ್ಲವ ? (ಹೊಸಕ್ಷ. ೪೮). [ ತಂಗಳು (< ತಣ್ಗೂಟ್) + ಊಟ ]

**ತಂಗಟ್** 'ತಣ್ಗೂಟ್' ನೋ.

**ತಂಗಾನ** (ನಾ). ತಂಪಾದ ಕಾಡು : ಅಂದಿನ ಹೂಗಳಿಲ್ಲ ನಲಿವಕ್ಕಿಗಳಿಲ್ಲ, ಕೊಳಂಗಳಿಲ್ಲ ತಂಗಾನಗಳಿಲ್ಲ (ಗೀಮಿಂ. ೦೦೮-೧).

[ ತಂ$_1$ (< ತಣ್$_2$) + ಕಾನ$_1$ (< ಕಾನ್) ]

**ತಂಗಾರ** (ನಾ). ಹಿತಕರವಾದ ಕಾರ : ವೀಳೆಯದೆಲೆ ಗಿಂಡಿ ತಂಗಾರದಡಕೆಲೆ [ಪಾಠಾಂ. ಮಡುಪನು ಕೊಡುತಿಹ ಕೆಲ]ಯೊಳಿಗ ಪದ್ಮಿನಿಯರಿಗೆ ಕಾಳಂಜಿ ಕೈದುವ ಹಸ್ತಿನಿಯರುರು ಪಿಡಿದೋಲೈಸಲೆಸೆದನಾ ಮದನ (ಭರಚ. ೪೭-೬೦). 'ತಣ್ಗಾಚು' ಪರಾ. [ ತಂ$_1$ (< ತಣ್$_2$) + ಕಾರ$_2$ ]

**ತಂಗಾಲ** (ನಾ). ತಂಪಿನ ಕಾಲ ; ಚಳಿಗಾಲ ; ಮಾಗಿಯ ಕಾಲ : ಮಾಟ ಕೂಟವೆಂಬ ಹೊಲದಲ್ಲಿ ಪಾಪಪುಣ್ಯವೆಂಬ ಬೀಜದ ಬಿತ್ತಿಕೆಲ್ಲ ತಂಗಾಲಕ್ಕೆ ಬೆಳೆದು ಮಳೆಗಾಲಕ್ಕೆ ತಗ್ಗಿ ಹೊಲದ ಒಳಹರಿಯಲ್ಲಿ ಜಲ ನಿಂದು ಹೋಯಿತ್ತು (ಮೋಳಿಮಾ. ೧೧೪-೪೦೩). [ ತಂ$_1$ (< ತಣ್$_2$) + ಕಾಲ ]

**ತಂಗಾಳಿ** 'ತಣ್ಗಾಳಿ' ನೋ.

**ತಂಗಿ$_1$** 'ತಂಗೆ' ನೋ.

**ತಂಗಿ$_2$** 'ತಗ್ಗಿ' ನೋ.

**ತಂಗಿಲ್ವಾಸು** (ನಾ). ಉಪಯೋಗಿಸಿದ ಹಾಸುಗೆ ; ಹಾದರದ ಶಯ್ಯೆ : ನೋಟದೊಳೊಬ್ಬನ ನೆಜಿ ಚೇಟಿಯಿಂದೊಬ್ಬನ ಬರಿಸಿ ನೀಟಿನ ಮನ ತಂಗಿಲ್ವಾಸೊಳು ವಂಚನೆ ಕೂಟದ ಹೆಂಗಳೊಪ್ಪಿದರು (ಕಂನವಿ. ೬-೧೨೪).

[ ? + ಪಾಸು$_2$ ]

**ತಂಗಿಸು** (ಕ್ರಿ). ತಂಗುವಂತೆಮಾಡು ; ವಿಶ್ರಮಿಸುವಂತೆ ಮಾಡು ; ನೆಲಸುವಂತೆ ಮಾಡು ; ನಿಲ್ಲಿಸು : ಬೆಂಗದಿರ ರಕ್ತಿಯನು ತಂಗದಿರ ಸಕ್ತಿಯನು ತಂಗಿಸಿತೊ ಮಳೆ ಮಂಜಿನೊಲವ ಮಧುರಾವ್ನದೊಳು (ಸೌಂದಸ. ೩೩); ತಂಗಿಯ ಮನೆಗೆ ಹೋಗಿ, ತಂಗದೆ ಹೋಗುತಿದ್ದಾನೆ. ಆದುದರಿಂದ ತಂಗಿಸಿ ಕೊಡು (ಹಳ್ಳಿಚಾ. ೩೩) : ಎರಡು ದೊಡ್ಡ ನಿಲುವುಗನ್ನಡಿಗಳನ್ನು ಅಲ್ಲಿ ಗೋಡೆಗೆ ತಂಗಿಸಲಾಗಿತ್ತು (ಹೇಮಂತ. ೪೦೭).

[ ತಂಗು$_1$ + – ಇಸು$_3$ ]

**ತಂಗು$_1$** (ಕ್ರಿ). ಇಳಿದುಕೊಳ್ಳು ; ಉಳಿ ; ಇರು ; ನಿಲ್ಲು ; ವಸತಿ ಮಾಡು: ಬಿಡದಿಯ ಮನೆಯಲ್ಲಿ ಬೀಗರು ತಂಗಲು ಏರ್ಪಾಡುಗಳಾಗಿದ್ದುವು (ಭೂರಾಚ. ೬೪) : ಸಂಜೆಗೆಂಪಿನ ಹೂವು, ಕಂಗಳು ತಂಗುವ ಸೊಗಸಿನ ರೇವು (ಮಾಂದಳಿ. ೧೩-೫) : ಒಳ್ಳೆಯ ಹವೆಗಾಗಿ ಕಾಯುತ್ತಾ ಇಲ್ಲಿ ಆರು ತಿಂಗಳು ತಂಗಬೇಕಾಯಿತು (ಪ್ರವಾಇ. II, ೧೯೧).

[ ದೇ.॥ ತಮಿ. ತಙ್ಕು; ಮಲ. ತಙ್ಙು; ತೆಲು. ತಕ್ಕು;
ಕೊಲಾ. ನಾಯ್ಕಿ. ತಕ್ ]

**ತಂಗು$_2$** (ನಾ). ೧. ಉಳಿಯುವುದು ; ಬಿಡಾರ ಮಾಡುವುದು ; ವಸತಿ ; ಬಿಡಾರ: "ಅಧಿವಾಸಃ = ತಂಗು" (ಕಾಶಕ್ಕ. ೧೬೧). "ವಸ್ತಿಃ = ತಂಗು" (ಕಾಶಕ್ಕ. ೧೭೧). ೨. ಆಧಾರ ; ಆಶ್ರಯ. 'ತಂಗೊಡೆ' ಪರಾ.

[ < ತಂಗು$_1$ ]

**ತಂಗು$_3$, ಟಂಗು** (ನಾ). ೧. ಕುದುರೆ ಮೊದಲಾದ ಪ್ರಾಣಿಗಳ ಜೀನನ್ನು ಬಿಗಿಗೊಳಿಸುವುದಕ್ಕಾಗಿ ಅವುಗಳ ಒಡಲಿಗೆ ಬಿಗಿದಿರುವ ಚರ್ಮದ ಪಟ್ಟಿ,–ಸುತ್ತುಪಟ್ಟಿ : ಹೊನ್ನ ಹಲ್ಲಣ . . . ಉನ್ನಂತ ರತ್ನ ಬಂಧಗಳ ತಂಗಿನವಟ್ಟೆ ಚಿನ್ನ ಪಂಜಿನ ಕಂಠವಾಮಾ ಇಂದ್ರನೀಲದ ಹೇಮದ ತರಕಸ ಸಿಂಗಾಡಿ (ದೇವಾಂಪು. ೩-೧೪೮) ; ಕುದುರೆ ಮಾತಂತು ಆಯಿತು. ಇದರ ಕೋಗೀರು, ತಂಗು ಮುಂತಾದ ಸಾಮಾನುಗಳನ್ನು ನೀವು ಹೊರಬೇಕೋ (ಕಥಾಮಂ. IV, ೯೫) : ಪೇಟೆಗೆ ಹೋಗಿ . . . ತಂಗನ್ನೂ ಕುದುರೆಯ ಮುಂಗಾಲು ಹಿಂಗಾಲುಗಳಿಗೆ ಕಟ್ಟುವ ಅಗಾಡಿ ಪಿಚಾಡಿ ಹಗ್ಗಗಳನ್ನೂ ತೆಗೆದುಕೊಂಡು ಬಂದರು (ನಗಿಸ. ೫೧) ; ಕುದುರೆಯೂ ಕಟ್ಟಿದುದೂ, ಅದರ ತಂಗು ಥಡಿಗಳು ಬಳಿಯಲ್ಲಿ ಬಿದ್ದಿರುವದೂ ಗೊತ್ತಾಯಿತು (ವಿಂಧ್ಯಾಲಿ. ೨). ೨. ಕುದುರೆಯನ್ನು ಹತ್ತುವುದಕ್ಕಾಗಿ ಅದರ ಮಗ್ಗುಲಲ್ಲಿ ನೇತು ಬಿಟ್ಟಿರುವ ಬಳೆ ; ರಿಕಾಪು ; ಅಂಕವಣೆ. **ಟಂಗು** : (*).

**ಟಂಗು ಹರಿ** = ೧. ಕುದುರೆ ಮೊದಲಾದುವುಗಳ ನಡುಕಟ್ಟು ಕಿತ್ತು ಹೋಗು: ಟಂಗು ಹರಿಯಿತು, ಕಾಲು (ಕೋಲು) ಮುರಿಯಿತು(ಗಾದೆ). ೨. (ಅಲಂ) ಬಡತನವುಂಟಾಗು; ದಾರಿದ್ರ್ಯವನ್ನು ಹೊಂದು: (*).

**ತಂಗು ತಡಂಗು**="ಏರುವ ಕುದುರೆಗೆ ಇರಬೇಕಾದ ಪರಿಕರ; ಸಾಮಾನ್ಯವಾಗಿ ಎಲ್ಲ ಪರಿಕರ" (ನಮ್ಮನು. ೧೨೦).

[ ← ಪಾರ. ಹಿಂ. ಮರಾ. ತಂಗ್ ]

**ತಂಗುದಾಣ** (ನಾ). ತಂಗುವ ಸ್ಥಳ; ಬಿಡಾರ: ಆಗಾಗ ತನ್ನ ರಾಜಧಾನಿಗೆ ಹೋಗಿ ಬರುತ್ತಿದ್ದರೂ ಹೆಚ್ಚಾಗಿ ಆತನ ತಂಗುದಾಣವೆಂದರೆ ಮಾನ್ಯಖೇಟವೇ ಆಗಿತ್ತು (ವೀರಬಂ. ೪) ; ರಾಯಭಾರದ ಈ ಪರಿವಾರಕ್ಕೆ ತಂಗುದಾಣಗಳಲ್ಲಿ ತಕ್ಕ ವ್ಯವಸ್ಥೆಗಳನ್ನು ಮಾಡಲು . . . ಇಬ್ಬರು ವೇಗಾಯಿಲರು ಅಂದು ದೋರಸಮುದ್ರವನ್ನು ಬಿಟ್ಟರು (ಸವತಿ.೫೦).

[ ತಂಗು$_1$ + ತಾಣ ]

**ತಂಗುದೊಡ್ಡಿ** (ನಾ). "ವ್ಯಾಪಾರಕ್ಕಾಗಿ ಹೊಡೆದುಕೊಂಡು ಹೋಗುವ ದನಗಳು ತಂಗಲು ದಾರಿಯಲ್ಲಿ ಮಾಡಿರುವ ಕೊಟ್ಟಿಗೆ, ಆವರಣ ತಂಗು ದೊಡ್ಡಿ. ಕೊಟ್ಟಿಗೆ" (Lair. ೩೦೮೧).

[ ತಂಗು$_1$ + ದೊಡ್ಡಿ$_1$ (< ತೊಟ್ಟಿ$_1$) ]

**ತಂಗುಪಟ್ಟಿ** (ನಾ). = ತಂಗು₃ ೧ : ಬೆಳ್ಳಿಬಸವನ ಆಭರಣದ ಲೆಖ್ಖಾ . . . ೧ ಗಂಗದೊಗಲಿಗೆ ಬೆಲು ೧ ತಂಗುಪಟ್ಟಿ ೧ ಚತ್ರಿಕಲಶ (ಎಕ. XIV, ನಂಜನ. ೨೪೮-೨ನೇ ಕಲಂ : 1847) ; "ಕುದುರೆ ತನ್ನ ಹಿಂಗಾಲುಗಳ ಮೇಲೆ ನಿಲ್ಲುವುದು, ಮೊ. ತುಂಟತನವನ್ನು ಮಾಡದಂತೆ ತಡೆಯುವುದಕ್ಕಾಗಿ ಒಂದು ತುದಿಯನ್ನು ಅದರ ಕಡಿವಾಣಕ್ಕೂ ಮತ್ತೊಂದು ತುದಿಯನ್ನು ಅದರ ಸೊಂಟಪಟ್ಟಿಗೂ ತಳದಲ್ಲಿ ಸೇರಿಸಿ ಬಂಧಿಸಿರುವ ತೊಗಲಪಟ್ಟಿ (ಗಳು) ; ತಂಗುಪಟ್ಟಿ" (Martingale. ಇಂಕನಿ.). [ ತಂಗು₃ + ಪಟ್ಟಿ₂ ]

**ತಂಗುಬೆಳಕು** (ನಾ). ಸೂರ್ಯಾಸ್ತವಾದ ಮೇಲೂ ಸ್ವಲ್ಪಹೊತ್ತು ನಿಂತಿರುವ ಬೆಳಕು : ಬೇಸಗೆಯ ಸಂಧ್ಯಾಕಾಲದ ತಂಗುಬೆಳಕು ಕೂಡ ಅಳಿದುಹೋಗಿ ಕತ್ತಲೆ ಕವಿದಿತ್ತು (ನಂಟರು. ೯೬).
[ ತಂಗು₁ + ಬೆಳಕು₂ (<ಬೆಳಗು₂) ]

**ತಂಗುಮನೆ** (ನಾ). ೧. ಬಿಡದಿ ಮನೆ: (ಪ). ೨. ಪ್ರಯಾಣಿಕರು ತಾತ್ಕಾಲಿಕವಾಗಿ ತಂಗುವುದಕ್ಕಾಗಿ ನಿರ್ಮಿಸಿದ ಮನೆ,-ವಿಶ್ರಾಂತಿಗೃಹ ; ಪ್ರವಾಸಿ ಮಂದಿರ : ಒಂದು ಸಂಜೆ ಆಫೀಸು ಮುಗಿಸಿ ಯಶೋದೆ ವಿ. ಟಿ. ಯ ತಂಗುಮನೆಗೆ ಬಂದಿದ್ದಳು(ವಾತ್ಸಲ್ಯ. ೨೫೮). [ತಂಗು₁+ಮನೆ]

**ತಂಗುಳು** 'ತಣ್ಗೂಟ್' ನೋ.

**ತಂಗುಟ್** 'ತಣ್ಗೂಟ್' ನೋ.

**ತಂಗುಟ್ದಿರಿಕ** (ನಾ). ತಂಗುಳನ್ನವನ್ನು ತಿರಿದು ಉಣ್ಣುವವನು : ತಿರುಕ; ಭಿಕ್ಷುಕ : ತಮ್ಮಯ್ಯನಪ್ಪ ತಂಗುಟ್ದಿರಿಕನ ಮಾತಂ ಕೇಳ್ದು (ಧರ್ಮಾಮೃ. ೯-೧೭೬). [ ತಂಗುಟ್ (<ತಣ್ಗೂಟ್) + ತಿರಿಕ₁ ]

**ತಂಗೂಳು** 'ತಣ್ಗೂಟ್' ನೋ.

**ತಂಗೂಟ್** 'ತಣ್ಗೂಟ್' ನೋ.

**ತಂಗೆ, ತಂಗಿ₁** (ನಾ). ೧. ಕಿರಿಯ ಸಹೋದರಿ; ಒಡಹುಟ್ಟಿದ ಕಿರಿಯಳು: ಇದನಟಿಪಾತ ಕೆಟಿಯುಂ ಕೋಡಿಯುಮನಟಿದು ಪಸುವುಮಾರ್ವ್ವರು × × × [ಕೊನ್ಗೋನವ]ನ್ತಮ್ಮಬ್ಬೆಯನ್ತಂಗೆಯುಮ × × × ಮಾಡಿ ಕೊಣ್ಡ್ರೋ[೦] (ಸೌಇಇ. XI-1, ೭-೨೮ : 837) ; ಭಟಾರರ ತಂಗೆಯಪ್ಪ ವೀರಶ್ರೀಯುಂ . . . ಪುಳಾಪಿಸಿ ದುಃಖಿಂಗೆಯ್ಗೆ (ವಡ್ಡಾರಾ. ೧೧೮-೯) ; ಹಿಡಿಂಬನೆಂಬನವರ ಬರವನಱಿದು ತನ್ನ ತಂಗೆ ಹಿಡಿಂಬೆಯೆಂಬಳಂ ಕರೆದು (ಪಂಪಭಾ. ೩-೧೧ ವ) ; ಪತಿಯೊಡನೆನ್ನ ತಂಗೆ ದಹನಾರ್ಚಿಯೊಳೊಂದೆ ಮುಹೂರ್ತದೊಳ್ ನಿವೇದಿತತನುವಾದಳ್ (ಆಜಿಪು. ೧-೯೯). ೨. ಕಿರಿಯ ಹೆಂಗಸರನ್ನು ಸಂಬೋಧಿಸುವಾಗ ಹೇಳುವ ಮಾತು : ತಂಗೆ ತಲೆವೀದಿಯಂ ತೊಡೆಯದಿರು ಕೂಡೆ ಚಳೆಯಂಗೆಯ್ದಲಂಕರಿಸು (ಹಜಕಾ. ೪-೨೪). **ತಂಗಿ₁** : ೧. ನೀನಿದೇಂ ನಿಂದಿಲ್ಲಿ ಱೋಡಗತನಂಗೆಯ್ದಾಡುತ್ತಿರ್ಪೆ ಅತ್ತ ನಿನ್ನ ತಂಗಿಗವಸ್ಥೆ ಪಿರಿದು (ಪಂಚತಂ. ೨೮೧-೧೨) ; ಮೊಱೆಯಿಲ್ಲಪ್ಪೊಡೆ ಸತಿ ಗಾದೆಱಕಂ ಮೇಣ್ ಕೂರ್ಪ ತಂಗಿಗೇಕಾಗದು (ಧರ್ಮಾಮೃ. ೯-೩೦) ; ಹರಿಯಂ ತಂಗಿಯ ಬಾಲನೆಂದು ಬಗೆದೇಂ ಕಂಸಾಸುರಂ ಕಂಡನೇ (ಸೋಮೇಶ. ೩೪) ; ಹಿಂದಣ ರಾವಣನೊಳವಗಡಿಸಿಯಾತನ ಮಾವನನು ಮುಱಿದವನ ತಂಗಿಯ ಮೂಗ ಭಂಗಿಸಿದ (ಕುವ್ಯಾಸ. ೯-೩೦). ೨. ತಂಗಿ ನೀನಟಲಂ ತಳೆಯದಿರಾವಿರ್ವರುಂ ಸಮಸುಖದುಃಖ[ವೃತ್ತಿ]ಗಳಾದೆವು (ಕಾದಂಬ. ೬೨೯) ; ಬಾಲಕಿಯೆ ಬಾ ತಂಗಿ ಬಾ ನೀಲಾಳಕಿಯೆ ಬಾಯೆನುತ ವಿಗೆ ಪಾಂಚಾಲೆಯನು ಕರೆದಸುರರಿಪು ಸೂಚಿಸಿದನಂಗನೆಗೆ (ಕುವ್ಯಾಸ. ೧೧-೭೬). [ ದೇ.॥ ತಮಿ. ತಙ್ಕ್ಯಿ ; ಮಲ. ತಙ್ಙ ; ತುಳು. ತಂಗಿ ; ಕೊಡ. ತಂಗೆ ; ಗೊಂಡಿ. ತಂಗೇ ; ಕುಇ. ಕುವಿ. ತಂಗಿ ]

**ತಂಗೆಡೆ** (ನಾ). ತಂಗುವ ಎಡೆ ; ಬಿಡಾರ : ಎಲ್ಲಾ ವೀರರುಗಳೂ ಫಲ್ಗುಣನನ್ನು ಹೊಗಳಿಕೊಂಡು ಉತ್ಸಾಹವಾಗಿ ತಮ್ಮ ತಂಗೆಡೆಗಳಿಗೆ ಹೋದರು (ವ್ಯಾಸಜಿ. ೩೮೭). [ ತಂಗು₁ + ಎಡೆ₃ ]

**ತಂಗೆಳು** 'ತಂಗೇಳು' ನೋ.

**ತಂಗೆಱೆ** (ನಾ). ಒಂದು ಊರಿನ ಹೆಸರು : ಬಲಿವಂಶತಿಲಕ ಅಸನ್ನಿನಾಡ ನಾಳುತ್ತಿರೆ ತ್ರಿಱ್ಣಿಱಿಯಾ ದಣ್ಣರೆ ನೊಱಂಬಂ ಶಾಂ ಸಲೆ . . . ಕಾದಿ ಸತ್ತಂ (ಎಕ. V, ಅರಸೀ. ೨೧೫-೬ : ಸು. 890). [ ? ]

**ತಂಗೇಳು, ತಂಗೆಳು** (ನಾ). (?): ಯಿದಕೆ ಅನ್ಯಾಯವು ಆನೊರ್ಬ ಮಾಡಿದವನು ಗಂಗೆಯ ತಡಿಯಲ್ಲಿ ತಂಗೇಳು ಕವಿಲೆಯಕೊಂದ ದೋಷಕೆ ಹೋಹರು (ಎಕ. IX, ಬೆಂಗಳೂ. ೧೩೪-೧೦ : 1308) ; ಯಿದಕೆ ಆರು ಅಳಿಹಿ ತಪಿದವರು ಗಂಗೆಯ ತಡಿಯಲು ತಂಗೇಳು ಕವಿಲೆಯ ಕೊಂದ ಪಾಪದಲಿ ಹೋಹರು (ಎಕ. IX, ಬೆಂಗಳೂ. ೯೭-೧೭ : 1347) : ಆವನೊಬ್ಬ ಅಳಿದವ ಗಂಗೆಯ ತಡಿಯಲಿ ತಂಗೇಳು ಕಪಿಲೆಯನು ಬ್ರಾಹ್ಮರನು ಕೊಂದ ಪಾಪಕೆ ಹೋಹನು (ಎಕ. IX (8), ಕನಕ. ೬೫-೨೦ : ಸು. 1390). **ತಂಗೆಳು** : ಯಿದಕೆ ಆವನಾನೊಬನು ಅಳಿಪಿದವರು ಗಂಗೆಯ ತಡಿಯಲಿ ತಂಗೆಳು ಕಪಿಲೆಯ ಕೊಂದ ಪಾಪದಲಿ ಹೋಹರು (ಎಕ. IX (8), ಬೆಂಗಳೂ. ೦೭೩-೧೧ : ಸು. 1700). [ ? ]

**ತಂಗೇಟುಪುಣುಸೆ** (ನಾ). ಒಂದು ಪ್ರದೇಶದ ಹೆಸರು (?): ಮಹಾನದಿವಿವಾಯವ್ಯಾದಿಶಿಯಿಮ್ ಪೂರಮಟ್ಟು ತಂಗೇಟುಪುಣುಸೆವಿ ಆ ಪೇರೊರ್ಬ್ಬೆವಿ (ಮ್ಮಆರಿ. ೧೯೩೦, ೯-೩೪ : ಕೃಶಾ). [ ತಂಗೇಟು₀ + ಪುಣುಸೆ (<ಪುಳಿಸೆ) ]

**ತಂಗೈ** (ನಾ). ತಣ್ಣಗಿರುವ ಕೈ : ಹಣದ ತಂಗೈ ನನ್ನ ಮುಂಗೈಯ್ಯ ಹಿಡಿದಂತೆ ನಿನ್ನ ಮಾತಿನ ಪಟ್ಟು ಮನಕೆನಿಸಿತು (ಸಪೀಗೀ. ೩೭-೭೯).
[ ತಂ₁ (<ತಣ್₂) + ಕೈ₂ (<ಕೆಯ್₂) ]

**ತಂಗೊಡಗೆ** (ನಾ). ಒಂದು ಊರಿನ ಹೆಸರು. P ಈಗಿನ ಬಿಜಾಪುರ ಜಿಲ್ಲೆಯ ತಂಗಡಗಿ : ಪೆರ್ದೊಱೆಯ ಬಡಗದಟಯ ತಂಗೊಡಗೆಯ ಬೀಡಿನೊಳ್ (ಸೌಇಇ. XI-i, ೦೦೬-೦೪ : 1075). [ ? ]

**ತಂಗೊಡೆ** (ಕ್ರಿ). ಆಧಾರ ತಪ್ಪು ; ಆಶ್ರಯವಿಲ್ಲವಾಗು : ದಿಕ್ಕರಿಸೆ ಫಣಿಯು ಕೂರ್ಮಾದಿಗಳ್ತಂಗೊಡದು ಕುಕ್ಕುರಿಸೆ ಧರಣೀತಳಮ್ಮದಿರೆ ಕಡಲು ಕುದಿದುಕ್ಕಿದುದು ಅತಿರಥಮಹಾರಥವ ಯುದ್ಧದೊಳ್ಕೆಡಿದನು ವಿರಾಟಸೂನು (ತುರಂಗ. ೪೫ ಸೂಚನೆ). [ ತಂಗು₂ + ಒಡೆ₁ ]

**ತಂಗೊಳ** 'ತಣ್ಗೊಳ' ನೋ.

**ತಂಚಾವಂಚ** 'ತೊಂಚವಂಚ' ನೋ.

**ತಂಜಾಪುರಿ** (ನಾ). ಒಂದು ಊರಿನ ಹೆಸರು. P ಈಗಿನ ತಂಜಾವೂರು: ತಞ್ಜಾಪುರಿ ನಾಳ್ಕೇಳೋ ಪ್ರಮುಖಾದಿ ದುರ್ಗ್ಗನಿವಹಾನ್‌ದಗ್ದ್ವ (ಮ್ಮಆರಿ. ೧೯೩೧, ೧೧-೪೯ : 963) ; ಮಧುರೆ ತಂಜಾಪುರಿ ತೆಂಜಿರಾಯರ ಸಮ್ಮುಖದ ಮಂತ್ರಿನಿಕರವೈತಂದು (ಕಂನವಿ. ೨೦-೩೩). [ ತಂಜಾ₀ + ಪುರಿ₅ ]

**ತಂಟಲಮಾರಿ** 'ತಂಟಲುಮಾರಿ' ನೋ.

**ತಂಟಲು** (ನಾ). ತಂಟೆ ; ತಕರಾರು. 'ತಂಟಲುಮಾರಿ', 'ತಾರಾ ತಂಟಲು' ಪರಾ. [ ತಂಟೆ + -ಅಲು₂ (< -ಅಲ್₂) ]

**ತಂಟಲುಮಾರಿ, ತಂಟಲಮಾರಿ** (ನಾ). ೧. ತಂಟೆ ತೆಗೆಯುವ ಸ್ವಭಾವದ ವ್ಯಕ್ತಿ : ಪೇಟೆ ಶಾಲೆಯೆಂದರೆ, ತಂಟಲುಮಾರಿ ಹುಡುಗರೂ, ಅವರ ದಾಂಧಲೆಯೂ . . . ಬಡಪಾಯಿ ಮೇಷ್ಟುಗಳು ಇವಿಷ್ಟರಲ್ಲಿಯೇ ಮುಗಿದು ಬಿಡುತ್ತದೆ (ರೂಪಸಂ. ೫೩); ಸೀನಭಟ್ಟ ಮಗ-ಮಹಾ ತಂಟಲುಮಾರಿಯುವ (ಕೋದಂಡ. ೪೯). **ತಂಟಲಮಾರಿ** : ೨. ಗ್ರಾಮದೇವತೆ: ಕೊಡಗಿನ ಮಾರಿ ತಂಟಲಮಾರಿ ಗೌಡಗೆ ಬುದ್ಧಿ ಕಲಿಸಾಲೆಂತ . . . ಗೌಡ್ನ ಹಟ್ಟಿ ಬಾಗ್ಲಿಗೆ ಬಂದ್ಲು (ಜಗೀತ. ೩೭). ೩. ಕುಲಟೆ ; ಜಾರೆ : ನೀನಾದರೆ . . . ವಶ್ಯಕರವಾದ ಮದ್ದುಗಳನ್ನಿಟ್ಟು ವಶ್ಯರಂ ಮಾಡಿ ತಗಲಿಸಿಕೊಂಬ ತಂಟಲ ಮಾರಿಯೆ ಸರಿ (ಸೌಗಂಧಿ. ೫೧೯-೮).
[ ತಂಟಲು + ಮಾರಿ₂./ತಮಿ. ತಣ್ಟುಮಾರಿ; ತುಳು. ತಂಟೆಲ್ಮಾರಿ ; ತೆಲು. ತಂಟಲಮಾರಿ. ತಂಟಾಲಮಾರಿ ]

**ತಂಟಲುಮಾರಿತನ (ನಾ).** ತಂಟೆ ತೆಗೆಯುವ ಸ್ವಭಾವ ; ಜಗಳಗಂಟತನ: ದಯಮಾಡಿ ತಂಟಲುಮಾರಿತನಕ್ಕೆ ಮನಸ್ಸು ಕೊಡಬೇಡ (ಮಹಾತ್ಮಾ. ೧೦೩).

[ ತಂಟಲುಮಾರಿ + – ತನ ]

**ತಂಟು** 'ತಂಟೆ' ನೋ.

**ತಂಟೆ, ತಂಟು (ನಾ).** ೧. ಜಗಳ ; ತರಲೆ ; ತಕರಾರು : ಟೀಪುಸುಲ್ತಾನರ ಕೆಲಸದ ಮೇಲೆ ಮೂರು ಸರಕಾರದ ಕಡೆಯಿಂದಾ ಈ ತಂಟೆ ತಪ್ಪಿಸಿದರೆ (ರಾಜೇಂದ್ರ. ೭೫) ; ಇಬ್ಬರ ತಂಟೆಯಲ್ಲಿ ತೊಡಕಿದ ಹೊಲದ ಸೀಮೆಭಾಗ ದಂತೆ (ಅಶ್ವಮೇ. ೩) ; ನಾದವಿದ್ದರೆ ಘಂಟೆ, ವಾದವಿದ್ದರೆ ತಂಟೆ (ಗಾದೆ). ೨. ಕಷ್ಟ; ತೊಂದರೆ ; ಉಪದ್ರವ : ಪರಿಪರಿಯ ಸಾಲ ಜೂಜು ಮೊದಲಾದ ತಂಟೆಗಳನ್ನುಂಟುಮಾಡಿ (ಸಾಗಂಧಿ. ೧೩೪–೩) ; ಬಹಳ ತಂಟೆಗೆ ಬಂತು! (ದೇವೀಚಾ. ೨೧) ; ಅಣ್ಣನ ತಂಟೆ ತಡೆಯಲಾರದ ಸದಾಶಿವನೆನ್ನುವುದನ್ನು ಕೇಳಿ . . . ನೊಂದುಕೊಳ್ಳುತ್ತಿದ್ದಳು (ತ್ಯಾಗಮ. ೧೯೧). ೩. ಸಂಬಂಧ ; ಗೊಡವೆ ; ಗೋಜು : ಇನ್ನೆನಗಿದು ಬರುವುದುಂಟೆ ? ಬರಿದೇಕಿನ್ನಿದರ ತಂಟೆ (೧೪ವಿಂ. ೭೮–೭೩); ಸಂಸಾರಿಕರ ತಂಟೆಗೆ ಬರಲು ಏನಧಿಕಾರ ಈ ಸಂನ್ಯಾಸಿಗಳಿಗೆ (ಆಶ್ರಮ. ೧೧೩) ; ಅಜ್ಜಿ ಯಾವ ತಂಟೆಗೂ ಹೋಗುತ್ತಿರಲಿಲ್ಲ (ಧರ್ಮಶ್ರೀ. ೬). **ತಂಟು :** ೧. ಆಜು ಮಂದಿ ಮಕ್ಕಳುಂಟು (ಪಕ್ಕಲುಂಟು) ಮತ್ತಾಜು ಮಂದಿ ಪ್ರೇರಕರುಂಟು ಪ್ರೇರಕರಿಗೆ ಕರ್ತರುಂಟು ವಿಚಾರ ಮಾಡಲಿಕ್ಕೆ ನಿಮ್ಮದೇನು ತಂಟು (ಪುರಂದ. ೪–೧೬–೩).

**ತಂಟೆ ತಕರಾರು** = ಜಗಳ ; ವಿವಾದ : ನಮ್ಮ ಮಕ್ಕಳ ಕಾಲಕ್ಕೆ ತಂಟೆ ತಕರಾರು ಇರಕೂಡದು (ಅನಾಮಿ. ೬). **ತಂಟೆ ತಾಪತ್ರಯ** = ತಂಟೆ ತಕರಾರು: ನಾಲ್ಕಾರು ಪಾರಿವಾಳಗಳು ಯಾರ ತಂಟೆ ತಾಪತ್ರಯವೂ ಇಲ್ಲದೆ ಬಿಂಕದಿಂದ ಓಡಾಡುತ್ತಿದ್ದುವು (ಪುನರು. ೬). **ತಂಟೆ ತೀರಿಸು** = ಜಗಳ ಬಗೆಹರಿಸು: ಕುಂಟೆಕೊಳ್ಳುತ್ತಾ ತಂಟೆ ತೀರಿಸ್ಯಾನು (ಗಾದೆ). **ತಂಟೆ ಬಂಟೆ** = ತಂಟೆ ತಕರಾರು : ಆಯಾ ಸ್ಥಳದ ಮಟ್ಟಿಗೆ ಪಡೆರಗಳು ಯಿ ವಿಷಯವಾಗಿ ತಂಟೆಬಂಟೆಗಳ ಮಾಡಿದಲ್ಲಿ (ಮೈಆರಿ. ೧೯೩೦, ೪೩–೩೦ : 1812). **ತಂಟೆ ಮಾಡು** = ತಕರಾರು ಮಾಡು : ಪಕ್ಕದ ಹೊಲದವರು ತಂಟೆ ಮಾಡಿದ್ದರಿಂದ ಜಗಳ ಆರಂಭವಾಯಿತು (ರೂಢಿ). **ತಂಟೆಯವ** = ತಂಟೆಕೋರ ; ಉಪದ್ರವಕಾರಿಯಾದ ಮನುಷ್ಯ : ತಂಟೆಯವನ ನಂಟಿಕೆ ಸಲ್ಲ, ಒಂಟಿಯಾಗಿ ಹೋಗ ಸಲ್ಲ (ಗಾದೆ).

[ ←ಮರಾ. ತಂಟಾ ; ಹಿಂ. ತಂಟಾ, ಟಂಟಾ ; ಗುಜ. ತಂಟೋ, ಟಂಟೋ ; ಸಿಂಧಿ. ಟಂಟ. / ತಮಿ. ತಣ್ಣೈ; ತೆಲು. ತಂಟಾ]

**ತಂಟೆಕೋರ (ನಾ).** ತಂಟೆ ಮಾಡುವ ಸ್ವಭಾವದವನು ; ಜಗಳಗಂಟ : ಕೆಲಮಂದಿ ತಂಟೆಕೋರರಾದ ರೈತಜನರು ನಂಬರಿನ ಹದ್ದುಬಸ್ತಾದ ಬಾಂದುಕಲ್ಲುಗಳನ್ನು ಮನಃಪೂರ್ವಕವಾಗಿ ಕಿತ್ತೆಸೆಯುವುದೂ ಉಂಟು (ಭೂಮಿಅ. ೩೮). [ ತಂಟೆ + – ಕೋರ$_3$ ]

**ತಂಟೆಗಾರ (ನಾ).** = ತಂಟೆಕೋರ : ಈ ರಂಗಪ್ಪನ ದಾಳಿ ಹೊರಟುದೆಂದರೆ ಕನ್ನಡದೊಳಗಿನ ತಂಟೆಗಾರರೆಲ್ಲ ದಾಳಾದೂಳಿಯಾಗುವವರು (ನಡೆದಾ. I, ೪೩೭). [ ತಂಟೆ + – ಕಾರ$_1$ (< – ಕಾಱ) ]

**ತಂಡ, ತಂಡು$_1$ (ನಾ).** ೧. ಗುಂಪು ; ಹಿಂಡು ; ಸಮೂಹ : "ಬಂಬಲ್, ತುಱುಗಲ್ . . . ಸೇಣಿ, ತಂಡಂ, ಗುಂಡು . . . ಗುಮ್ಮಿ, ಗೊಂದಣ– ಈ ೪೦ ಸಮೂಹಂ" (ಕಶಸಾ. ೧೧–೨೨೨) ; " ತಂಡಮೆನಲೋಳಿ " (ಭಾರನಿ. ೩೬) ; "ತಂಡಂ ತೆರಳ್ಕೆ ಮೊಕ್ಕಳೆ . . . ತೋಮವಿವು ತಾವೆತ್ತಂ ಸ್ತೋಮಾಭಿಧಾನಮಕ್ಕುಂ" (ಕವಿಕಂ. ೧೧೬): ಕಣ್ಗಳಿಂ ಕೆಂಡದ ತಂಡಂಗಳು ಮುರಿಯ ತಂಡುಗಳುಂ ಸೂಸೆ (ಪಂಪಭಾ. ೩–೧೬ ವ); ರಸಮನೀವುತ್ತಿರ್ದು ದಿಕ್ಷುಪ್ರಕಾಂಡದ ತಂಡಂ (ಬಾಧಪು. ೧–೮೮) : ಕಂಡು ಬೆಚಿಗಾದುದು ಕುಮಾರರ ತಂಡ (ಕುಮ್ಯಾಅ. ೬–೫೯). ೨. ಪಕ್ಷ ; ಪಂಗಡ : ನೆಲೆವೆರ್ಚುಗೆ ನಿಮ್ಮೆರಡು ತಂಡಮೊದವಿದ ನಣ್ಪಂ (ಪಂಪಭಾ. ೧೬–೬೭) : ಇಂತೀ ಎರಡು ತಂಡದೊಳಾರು[ಪಾಠಾಂ. ಎರಡರಸುಗಳೊಳಾರು] ಸೋತರು ಸೋತ ಭೂಪತಿಗೆ ವರುಷ ಹನ್ನೆರಡಚಲಿ ವನದೊಳಗಿರವು (ಕುವ್ಯಾಸ. ೧೬–೪೯) : ತಮ್ಮ ಕೂಟನೀತಿಯಿಂದ ಎರಡು ತಂಡಗಳಾಗುವಂತೆ ಮಾಡಿದರು (ಜಗಸಂ. ೪೬). **ತಂಡು$_1$:** ೧. ಅನೇಕ ಮುಸಲ್ಮಾನರ ತಂಡುಗಳು ನಿರ್ಭಯರಾಗಿ . . . ಹಿಂದುಸ್ಥಾನದಲ್ಲಿಯೇ ನೆಲೆಗೊಂಡು ಇರಲಾರಂಭಿಸಿದರು (ಹಿಂಮುಸ. ೪೬).

**ತಂಡತಂಡ (ದ್ವಿರುಕ್ತಿ)** = ೧. ಅನೇಕ ಗುಂಪು; ಹಲವಾರು ಗುಂಪು: ಮನೋಭವನೊಡ್ಡಣದಂತೆ ತಂಡತಂಡದೆ ಪರಿತಂದು ಸೂಸಿದುದು ಸೇಸೆಯನಂದು ಪುರಾಂಗನಾಜನಂ (ಪಂಪಭಾ. ೪–೩೫) : ತಂಡತಂಡದ ಗಣಕತತಿ ತಪ್ಪದೆನುತಮಿರೆ (ಬಸರ. ೫–೮೩) : ಮೃಡಭಕ್ತಗಣತತಿ ತಂಡತಂಡದಲಿ ಸಡಗರದೊಳೆಯ್ತರೆ (ಬಸಪು. ೬–೨೦). ೨. ಬಗೆಬಗೆ ; ಹಲವು ಪ್ರಕಾರ: ನಾನಾ ವಿಧ: ಪುಂಡರೀಕಾಕ್ಷ ಸಿರಿ ಪುರಂದರವಿಠಲನ್ನ ತಂಡತಂಡದಿ ನೆನೆದು ಸುಖಿಯಾಗು ಮನವೆ (ಪುರಂದ. ೧–೦೫೯–೪) : ತಂಡತಂಡದ ವಿಹಗಾಲಾಪ ತುಂಬಿಯಾಖಿಂಡವಾಗಿರ್ದುದೇನೆಂಬೆ (ಮೋಹತ. ೫–೨೨) : ಕಂಡಕಂಡದ್ದೆಲ್ಲ ಕಮಲನಾಭನ ಮೂರ್ತಿ . . . ತಂಡತಂಡದ ವಾರ್ತೆ ಪಾರಿಜಾಕ್ಷನ ಕೀರ್ತಿ (ವಿದಾಕೃ. ೨೫–೧). **ತಂಡೋಪತಂಡ** = ತಂಡತಂಡ ೧: ಪಾಂಡವರ ಬಲದ ಮೇಲೆ ಬಿದ್ದು ತಂಡೋಪತಂಡವಾಗಿ ಚಂಡಕಾಂಡಗಳನ್ನು ಪ್ರಯೋಗಿಸಿ (ಕೃವಾಭೀ. ೧೧೦) : ವಿಚಾರಪರರಾದ ಸಂಶೋಧಕರೂ ತಂಡೋಪತಂಡವಾಗಿ ಸಿದ್ಧವಾದರು (ಕ್ರಿಯಾಶಿ. ೧೧೨).

[ದೇ.॥ ಮಲ. ತಣ್ಣು; ತುಳು. ತಂಡ, ತಂಡ್; ತೆಲು. ತಂಡ./ಸಂ. ದಂಡ]

**ತಂಡಂಗೊಳ್ (ಕ್ರಿ).** ಗುಂಪುಗೂಡು; ನೆರೆ; ಸಂದಣಿಸು: ಜಿನಭವನದಿಂದಾ ಖಂಡಲನಿಭವಿಭವನಿರದೆ ಪೊಱಮಟ್ಟಿದಿರೊಳ್ ಕಂಡಂ ನೆರೆದು ನಿಗುಂಬಿಸಿ ತಂಡಂಗೊಂಡಿರ್ದ ನರರ ಖಚರರ ಗುಂಡಂ (ಆದಿಪು. ೪–೩).

[ ತಂಡ + ಕೊಳ್$_1$ ]

**ತಂಡಂಬೆಱು (ಕ್ರಿ).** = ತಂಡಂಗೊಳ್ : ಭಕ್ತರುತ್ಸಾಹದಿಂ ತಂಡಂಬೆತ್ತರೇ ವುಘೇಯೆನುತುಮಿರ್ದರ್ (ವೃಷವಿ. ೩೬–೬೫). [ ತಂಡ + ಪೆಱು$_1$ ]

**ತಂಡಕ (ನಾ).** ೧. ಸರಿಯಾದ ಸಿದ್ಧತೆ; ಕಾರ್ಯದ ಸಂಪೂರ್ಣ ನಿರ್ವಹಣೆ. ೨. ಹೆಚ್ಚಾದ ಸಮಾಸಪದಗಳಿಂದ ಕೂಡಿದ ರಚನೆ. 'ದಂಡಕ$_2$' ಪರಾ. ೩. ಮರ ಅಥವಾ ಗಿಡದ ಕಾಂಡ. ೪. ಇಂದ್ರಜಾಲಿಕ. ೫. ಮೋಸಗಾರ: ತಂಡಕನು ಅವ ನಿನ್ನ ಹೆಂಡತಿಯ ಕೂಡಿರಲು ಭಂಡ ಒಡಲನು ಪೊರೆದುಕೊಂಡಿರ್ಪೆ ಯಾಕೆ (ಕರಿಕ. ೬೨–೧). ೬. ತುಂಟ ; ಅಧಿಕ ಪ್ರಸಂಗಿ : ಎಲಾ ತಂಡಕ ಹುಡುಗನೇ ಇದು ಉಪ್ಪಲ್ಲ, ಬೆಲ್ಲ (ಕಥಾಮಂ. IV, ೬೮). ೭. ಅಲಂಕರಿಸುವಿಕೆ ; ಅಲಂಕರಣ. [ಸಂ.]

**ತಂಡಜ (ನಾ).** (?) : ಆದಿಯಲ್ಲಿ ಲಿಂಗಾರ್ಚನೆಯ ಮಾಡಿದ ತಾರಜ ತಂಡಜ ರೋಮಜರಿಗೆ ಪ್ರಳಯವಾಯಿತ್ತು (ಅಬಿಂದೇ. ೭೧–೪೨). [ ? ]

**ತಂಡನಾಮೆ (ನಾ).** ವಿಚಾರಣೆ; ಪಂಚನಾಮೆ; ಮಹಜರು: ಪೋಲೀಸು ತಂಡನಾಮೆಯಾಗಿ ಶವಸಂಸ್ಕಾರವೂ ಮುಗಿಯಿತು (ತಳರು. ೫೪). 'ಪಂಚನಾಮೆ' ಪರಾ. [ ತಂಡ+ನಾಮೆ$_3$ ]

**ತಂಡರಸಿ** 'ತಂದ್ರಾಸಿ' ನೋ.

**ತಂಡವಾಳ, ತಾಂಡವಾಳ (ನಾ).** ಎರಕ ಹೊಯ್ದ ಕಬ್ಬಿಣ; ಬೀಡು ಕಬ್ಬಿಣ : ಅಗ್ನಿಸಂಯೋಗದಿಂದ ನೈಮಿತ್ತಿಕ ದ್ರವ್ಯತ್ವವಂ ಪಡದು ನಾಶಮಾಗದೇ ಮರಳಿ ಕಠಿನವಾಗುವ ಚಿನ್ನ, ಬೆಳ್ಳಿ . . . ಕಂಚು ತಂ[ಪಾಠಾಂ. ತಾಂ]ಡವಾಳ ಮುಂತಾದಕ್ಕೆ ಲೋಹವೆಂದು ಹೆಸರು (ಸಿದ್ಧಾಂತಿ. ೨೬೦). **ತಾಂಡವಾಳ:** "ಎರಕ ಹೊಯ್ದ ಕಬ್ಬಿಣ ; ತಾಂಡವಾಳ " (Cast-Iron. ಇಂಕನಿ.). [ ದೇ.॥ ತಮಿ. ತಣ್ಣವಾಳ ]

**ತಂಡಸ$_1$** 'ತಂಡಸು' ನೋ.

**ತಂಡಸ$_2$, ತಾಂಡಸ (ನಾ).** ಇಕ್ಕುಳ ; ಚಿಮಟ ; ಪಟಕಾರ : "ಇಕ್ಕುಟಿಂ ಲಾಳಿ ತಂಡಸಂ ಗಾರಿಕಾಖ್ಯಂ" (ಮಂಗರಾ. ೧೧೩-೮) ; ತಂಡಸದಿನೊಯ್ಯನೆ ಕೀಳುವೆಂ ನೀ ನೆಮ್ಮಿಕೋ ಬಂದೀ ಮರನನೆನುತ (ಬಸವು. ೪೪-೧೪) : ತಂಡಸದಿನಾ ದಸಿಯನಲುಗಿ ಕೀಳಲ್ಕೆ (ಆರಾಚ. ೮-೬೭): ಬಂಗರವು ತಂಡಸದಿ ಹುಡುಕಿಯೆ ಹಿಡಿದ ತೆರನಂತೆ (ಜ್ಞಾನಸಿಂ. ೧೮-೫೭): ಇರ್ಕುಟಿಯ ತಂಡಸದ ಕರ್ತರಿಯ . . . ಬಡಿವ ಸೊನ್ನೆಗಾಜಿರ ಸಾಲೆಯಿಂ (ರಾಮಾಶ್ವ. ೧೦೩-೧೪). **ತಾಂಡಸ :** "ಇಕ್ಕುಟಿ-ವ್ಯಾಧಿವಿಕಾರಂ ; ಸಂದಂಶಂ : ತಾಂಡಸಂ" (ಶಮದ. ಪರಿ. ೧). [<ಪ್ರಾ. ಸಂಡಾಸ./ಸಂ. ಸಂದಂಶ]

**ತಂಡಸಸರ (ನಾ).** ಒಂದು ಸರೋವರದ ಹೆಸರು: ತತೋ ನೈರ್ಋತ್ಯಾಂ ದಿಶಿ ತಂಡ [ಸಸರ]ಃ (ಸೌಇಇ. XX, ೬-೨೨ : 730). [ತಂಡಸ? + ಸರ$_5$]

**ತಂಡಸಿ** 'ತಂಡಸು' ನೋ.

**ತಂಡಸು, ತಂಡಸ$_1$. ತಂಡಸಿ, ತಂಡಸೆ, ತಂದಸಿ (ನಾ).** ಒಂದು ಬಗೆಯ ಮುಳ್ಳುಮರ : "ಕಂಟಕಿಯೆನಲ್ ತಂಡಸು[ಪಾಠಾಂ. ಮುಂಡನೆಂಗು, ಕುಂಡನೆಂಗು]" (ಮಂಗರಾ. ೩೭-೧೪) : ಕರಿಬೇವಿನಂಬಟೆಯು ತಾಱಿಯ ತಂಡಸಿನಾಸಿನಾನೆ ಬೊಬ್ಬುಲಿಯ (ಲೀಲಾವ. ೬-೨೬) ; ತಂಡಸು ತಪಸು . . . ಮಂದಾರಂಗಳಡಸಿ ತುಂಬಿದ ಚೆಲುವ ಭೂಜಂಗಳಿಂದ ಮಿಗೆ ಕಾನನಂ ಕಣ್ಗೆಸೆದುದು (ಹದಶಾ. ೫-೧೬) ; ಕೊಡಸಿಗೆ ಬಾಗೆ ಬೇಲರಳಿ ತಂಡಸು ಕೊಂಡಸು ಜಾಲವಾಲದಿಂದಿಡಿಕಿಱಿದಿರ್ದ ಪೇರಡವಿಯೊಳ್ (ಧರ್ಮಪ. ೩-೪೭). **ತಂಡಸ$_1$:** ತೇಗರುತಾಳ ತಂಡಸ ತಡಸ ತುಗ್ಗಿಲು . . . ಮೊದಲಾದ ವನಭೂಜಾಳಿಯಲಿ ಹೊಳಿದರಕಂಪನನಸಮ ರಣರಥವ (ತೊ ರ ರಾ. ೬-೧೮-೧೮) : ತಂಡಸ ದಿಂಡ ಪೆಬ್ಬೂರ . . . ತೇಗುಗಳ ವಿಸರ ನಾನಾವೃಕ್ಷ ಜಾತಿಯಿಂದೆಸೆವ ಘೋರಾರಣ್ಯ (ಸಿಂಗಿರಾ. ೩೦-೯) : ಆಲ ತಂಡಸ ತಪಸಿ ಸಹಕಾರ ಕಿಂಶುಕ . . . ಸಿರಿಸಂಗಳಿಂದೆಸೆದುದಾ ಕಾಂತಾರವು (ಸಿದ್ಧೇಪು. ೮-೩). **ತಂಡಸಿ :** ಕಕ್ಕೆ ಬಿಕ್ಕೆ ತಂಡ[ಪಾಠಾಂ. ಡಿ]ಸಿ ತಾಱ . . . ಚಂಪಕ ಗಳಿಂದ ನಿಲ್ಲದೆ ಮೆಱೆವುದಾ ವಿಪಿನ (ಕುರಾಸಾಂ. ೪-೫) : ಹೇರಿಜೆಯೆಲಚಿ ತಂಡಸಿ ಮುಳ್ಳುಬೇಲಿಗಳ್ ಸೇರಿ ಮುಟ್ಟಿಹುವಾಗಸವನು (ಕಂಸವಿ. ೧೮-೩೧). **ತಂಡಸೆ:** ತಂಡಸೆ[ಪಾಠಾಂ. ಗೆಂಡಗೆ, ಗೆಂಡಸೆ]ಕಾಗೆದೊಂಡೆ ಪೆರ್ಗುರುಡಿಗೆ . . . ಕೊಂಡರೆದು ಲೇಪಿಸೆ (ಖಮದ. ೧೦-೫೦) ; ಅಂಬಟೆಯು ಬಾರೆ ನೆಲ್ಲಿ ತಂಡಸೆ ಕರಗ ಸಂತಾಲ (ಮಹಾವಿ. ೭-೧೮). **ತಂದಸಿ :** ತಂದಸಿ, ಕಂಕಡ (ಮೃಡಿಗಿ. ४೧-೮೧೮).

**ತಂಡಸೆ** 'ತಂಡಸು' ನೋ.

**ತಂಡಾಮುಂಡಾ** 'ತಂಡುಂಮುಂಡು' ನೋ.

**ತಂಡಾಯ (ನಾ).** ಪರಿಚಾರಕ ; ಸೇವಕ (?) : ಕಂದರ್ಪೇಸ್ವರದೇವರ ತ್ರಂಡ್ಣಾಯ ಕೊಳೆಯಂಗೆ ತಂಣ್ಡೇಸ್ವರ ಮತ್ತರು ಆಱು (ಕಇ. II, ೧೬-೫೭ : 1122). 'ತಂಡಾಲಯು' ಪರಾ. [?./ತಮಿ. ತೊಣ್ಡ]

**ತಂಡಾಲಯು (ನಾ).** = ತಂಡಾಯ : ಜ್ಞಾನಾರೂಢ ಪ್ರಾಣೇಶ್ವರ ನೆಂಬಾತನಲ್ಲಿಯ ದೇವರು ಒಂಬತ್ತು ಮಾನಿಸರು ತಂ[ಪಾಠಾಂ. ತಾಂ] ಡಾಲಯರು[ಪಾಠಾಂ. ತಂಡದಲ್ಲ] (ಚನ್ನವ. ಕ. ೪೯೮-೧೦೭೮): "ವ್ಯವಸ್ಥಾಪಕ" (ಚನ್ನವ. ಕ. ಕೋಶ). [?]

**ತಂಡಿ, ಚಂಡಿ$_4$, ತಂಡು$_6$, ಥಂಡಿ (ನಾ).** ೧. ಚಳಿ ; ತಂಪು : ನೀರಿನ ಪಸೆಯಿಲ್ಲದಿದ್ದರೂ ವಾಯುವು ತೀರ ತಂಡಿಯಾಗುವುದು (ಬಾಲಪ್ರ. II, 667) ; ತಂಡಿಯಿಂದ ಹಿಮ್ಮಡಿ ಮುದುರಿ ಸೆಳೆಯುತ್ತದೆ (ಕುಡಿಕೊ. ೮೯). ೨. ತೇವ ; ಒದ್ದೆ : (ಶಿ). **ಚಂಡಿ$_4$ :** ೧. ವರರತ್ನಾಳಿರುಚಿಯಲಿ ಚಂಡಿಯಾಯಿತು ದಿವಸವಂದಿನಲಿ (ಕುವ್ಯಾಸ. ಒರಿಇ. ೫-೫೦) . ೨. ಒಣಗಿದಷ್ಟು ಒಣಗಲಿ. ತರಗೆಲೆಯು ಹಾಗೆ ಚಂಡಿಯಾಗಿ, ಬೆಂಕಿ ಊದಿದಷ್ಟು ಸಂದುತ್ತದೆ (ಮರಮ. ೨೨): ಮೈಯೆಲ್ಲ ಚಂಡಿ. ನನ್ನ ಬಟ್ಟೆಯಿಂದ್ಲೆ ವರ್ಷಿದೆ ದೇವರೆ (ಕದಂಬ. ೧೦೫). **ತಂಡು$_6$ :** ೨. ಹದಿನೈದು ದಿನದ ಮಳೆಯ ತಂಡಿನಿಂದ. ಹಪ್ಪಳಕ್ಕೆಲ್ಲಾ ಗಡ್ಡ ವಿಸಾಸ ಬಂದಿತ್ತು (ಮರಮ. ೨೩). **ಥಂಡಿ :** ೧. ಅಲ್ಲಿ ಬಂದು ಮುಟ್ಟಿದಾಗ ಥಂಡಿ ಸುರುವಾಗಿತ್ತು (ಸಮಜೀ. ೬೦೮) ; ಭಾಳ ಥಂಡಿ ಹತ್ತಿದ್ದಿತಲಾ ಹಂಗಾರ (ಮುಗಿಮ. ೨೬). ೨. ಮನೆ, ನೆಲ, ಗೋಡೆ ಎಲ್ಲಾ ಥಂಡಿ ಹತ್ತಿ ಜಿನುಗ್ತಿರೋವು (ಎಮುಕ. ४೭).

**ಚಂಡಿಪುಂಡೆಯಾಗು** = ನೆನೆದು ಸೊಪ್ಪಾಗು : ನನ್ನ ತೊಡುಗೆಗಳಲ್ಲ ನೀರಲ್ಲಿ ನೆನೆದು ಚಂಡಿಪುಂಡೆಯಾಗಿ ಹೋದುವು (ನಡದಾ. II. ೧೧೪೩).

[← ಮರಾ. ಥಂಡೀ, ಥಂಡಾಈ ; ಹಿಂ. ಠಂಡೀ]

**ತಂಡಿಲ (ನಾ).** ಹೋಮ ಹವನಗಳಿಗಾಗಿ ಶುಚಿಗೊಳಿಸಿ ಸಿದ್ಧಪಡಿಸಿದ ಚಚ್ಚೌಕವಾದ ಭೂಮಿ : ಯಜ್ಞವೇದಿಕೆ : ಸ್ಥಂಡಿಲ. ತಂಡಿಲ (ಶಬ್ದಾನು. ೧೪೯ ಪ್ರಯೋ).

[<ಪ್ರಾ. ಥಂಡಿಲ / ಸಂ. ಸ್ಥಂಡಿಲ]

**ತಂಡಿಲು (ನಾ).** ಅಕ್ಕಿ ; ತಂಡುಲ : ಬೇಕಾದ ಬೇಳೆ ಬೆಲ್ಲವು ತುಪ್ಪ ತಂಡಿಲು ಜೋಕೆಯಾಗಿರ್ದ ಭಾಂಡವನು ನೀ ಕಟ್ಟಿ ಗೊಡೆಯೊಳಗೆ ತುಂಬು (ಅಮುಸಾಂ. ೫-೯): ಆ ಸತ್ತೆಂಬ ತಂಡಿಲು ಚಿದ್ರೂಪನಾದ ಶರಣನ ಮಹಾನುಭಾವಾಂತರಂಗ ಮೂರ್ತಿಗೊಂಡಿತ್ತೆಂಬುದೀಗ ಆ ಭಕ್ತ ಸಿಕ್ಕಿತ್ತು ಅರಮನೆಯಲ್ಲಿ ಎಂಬ ಶಬ್ದಕ್ಕರ್ಥ (ವೋಳಿಮಾ. ೩೪೦-೭೯೧ ಟೀಕೆ).

[<ಸಂ. ತಂಡುಲ]

**ತಂಡು$_1$** 'ತಂಡ' ನೋ.

**ತಂಡು$_2$ (ನಾ).** ೧. ಕೋಲು ; ದೊಣ್ಣೆ ; ದಂಡ : (ಶಿ). ೨. ಭಾರವಾದ ಕಬ್ಬಿಣದ ಕೋಲು,-ಗದೆ : (ಶಿ). [←ತಮಿ. ತಣ್ಟು. / ಸಂ. ದಂಡ]

**ತಂಡು$_3$** 'ತೊಂಡ$_1$' ನೋ.

**ತಂಡು$_4$ (ನಾ).** ಮರದ ಸೌಟು : "ತಂಡೂಃ, ದಾರುಹಸ್ತಕಃ– ೨ ಕೈಬಟ್ಟು ಪೆಸರುಗಳು, ಮರದ ಸೊಟಕ, ಮರದ ಸೌಟು" (ಸಿದ್ಧಾಂತಿ. ೨४೩).

[ಸಂ. ತಂಡೂ]

**ತಂಡು$_5$ (ನಾ).** ಶಿವನ ದ್ವಾರಪಾಲಕರಲ್ಲಿ ಒಬ್ಬ ನಂದೀಶ್ವರ. ಆಣಕ ಮತ್ತು ನೃತ್ಯಕಲೆಗಳಿಗೆ ಈತನೇ ಆಚಾರ್ಯಪುರುಷ: ಶಿವನಾ ಪ್ರಯೋಗದೊದವಂ ತವಕಂ ಮಿಗೆ ನೆನೆದು ತಂಡುವಿಂಗುದ್ಧತ ನೃತ್ಯವ ನೊರೆಯಲಾತನೊಲವಿಂ ತವೆ ಭರತಂಗಿತ್ತೊಡಾಯ್ತು ತಾಂಡವದ ಪೆಸರ್ (ಲಾಸರಂ.೧-೧೨); ತುಂಬುರು ತಂಡುವು ಡಿಂಡಿಮ ಬಾರಿಸೆ (ಗಜೇಶ. ೧೧-೨೬೯). 'ತಾಂಡವ' ಪರಾ. [ಸಂ.]

**ತಂಡು$_6$** 'ತಂಡಿ' ನೋ.

**ತಂಡುಂಮುಂಡು, ತಂಡಾಮುಂಡಾ, ತಂಡಂಮುಂಡು, ತಂಡೋಮುಂಡೊ (ನಾ).** ೧. ಚೆಲ್ಲಾಪಿಲ್ಲಿ ; ಅವ್ಯವಸ್ಥೆ ; ಅಸ್ತವ್ಯಸ್ತತೆ : ಖಂಡದ ದೊಂಟೆಯ ಸುತ್ತುಂ ತಂಡುಂಮುಂಡಾಗಿ ಬಿರ್ದ ಪೆಣಗಳ ಪುಂಜಂ ಬೆಂಡೆರ್ದವು ಧುರದೊಳ್ ನೊರೆವಿಂಡೆದ್ದವರ್ಗಿಸುವ ಬಿಸಿಯ ನೆತ್ತರ ಕಡಲೊಳ್ (ಮಹಾನೀ. ೧೩-೨೬). **ತಂಡಾಮುಂಡಾ :** ೨. ಗೃಹಕೃತ್ಯದ ಹೊಣೆಗಾರಿಕೆಗಳಿಲ್ಲದವನು: ಆಶ್ರಯರಹಿತನಾದ ವ್ಯಕ್ತಿ : ತಂಡಾಮುಂಡಾ ವಾಸುದೇವ (ರೂಢಿ). **ತಂಡುಮುಂಡು :** ೧. ಖಳ ಶಿರೋಮಣಿ ರಕ್ತಬೀಜಾಸುರನ ಸಂತತಿಯ ಗಲಭೆ ಕೈಮೈಸೋಂಕಿಗ ನಿಮಿಷಲಲನೆಯರು ಮೋಣ್ಮೇರಿ ಬಾಳ್ವರೆ ಸಿಲುಕಿ ಕೆಡೆದರು ತಂಡುಮುಂಡಿಗೆ ಬೀದಿ ಬೀದಿಯಲಿ (ಅಂಬಿಕಾ. ४೨-४೮) : "ಧಾಂಧಳೆ, ಕೋಟಲೆ" (ಪ್ರಭಣ್ಣ). **ತಂಡೋಮುಂಡೊ :** (ಶಿ).

[?. / ತಮಿ. ತಣ್ಟಾಮುಣ್ಟಾ, ತಣ್ಟುಮಿಣ್ಟು = ಮೊಂಡುತನ]

**ತಂಡುಮುಂಡು** 'ತಂಡುಂಮುಂಡು' ನೋ.

**ತಂಡುಲ, ತಂಡುಳ** (ನಾ). ೧. ಅಕ್ಕಿ : ನೆಟ್ಟನೆ ಪುಷ್ಪವಾಸನೆಯ ಕಪ್ಪುರ ಶಾಲಿಯ ತಂಡುಲಂಗಳಂ ನಿಟ್ಟೆಸರಿಟ್ಟು ಬಾಗಿ (ಸುಕುಮಾ. ೧೦-೧೧೮) ; ಪುಜೆಯೆಲ್ಲಂ ಜಲಗಂಧಸ್ರುಜ ತಂಡುಲ ಧೂಪದೀಪ ಚರು ತಾಂಬೂಲ ವ್ರಜದಿಂ ಪೂಜಿಸುವುದು (ಯಶೋಧ. ೪-೭೩) : ಮೋಡಗಳ ಮೊರದಲ್ಲಿ ತಾರೆಗಳ ತಂಡುಲವ ಒನೆವ ವನಿತೆಯ ಹಾಗೆ ತೊನೆಯೆ ಗಾಳಿ (ಕರುಶ್ರಾ, ೧೬-೭). ೨. (ಕಮಲದ) ಬೀಜ : ತಿಳಿದ ತಿಳಿಗೊಳದ ತಳಿತ ತಾವರೆ ಯರಳ ತಂಡುಲದ ರುಚಿಯ ಕಳಹಂಸೆ ಬಯಸುವಂತೆ (ಅದಪ. ೧೬-೩೬): ತಾಮರಸತಂಡುಲಂಗಳ ಜಕ್ಕುಲಿಸಿ ಕೊಕ್ಕಿನಿಂ ನಲಿದು ವಧುಗೂಡಿ ಸೇವಿಪ ಬಿಸಿಲ್ವಕ್ಕಿಗಳಿಂ (ಪದ್ಮರಾ. ೮-೯೯). ೩. ಒಂದು ಅಕ್ಕಿಯ ಕಾಳಿನಷ್ಟು ತೂಕ ; ಮುತ್ತು, ರತ್ನ ಮೊದಲಾದುವುಗಳನ್ನು ತೂಕಮಾಡುವ ಒಂದು ಪ್ರಮಾಣ :೧೭ ತಂಡುಳ ಅಂದರೆ ೧ ರತಿ (ಮುಂಬಪ್ರಾ. ೧೩೭). ೪. ಕೋಶ, ರವಿ, ತಂಡುಲ, ಅಗ್ನಿ, ತಪ್ತಮಾಷ, ಜಲ, ವಿಷ ಎಂಬ ಏಳು ಬಗೆಯ ದಿವ್ಯಗಳಲ್ಲಿ ಒಂದು. 'ದಿವ್ಯ' ಪರಾ. ೫. ಒಂದು ಬಗೆಯ ಔಷಧಿ ಸಸ್ಯ ; ವಾಯುವಿಳಂಗ. **ತಂಡುಳ :** ೧. ಮಧುರಮೆಂಬ ಕಳಮತಂಡುಳಮಂ ಕಯ್ಪೆಯೆಂಬುದು ದುಷ್ಪ್ರತೀತಿ (ಪಸಾರ. ೯೦೪-೧೦). [ ಸಂ. ]

**ತಂಡುಲೀಯ** (ನಾ). ಒಂದು ಬಗೆಯ ಸೊಪ್ಪು ; ಕಿರುಕುಸಾಲೆ ; ಕೀರೆ ಸೊಪ್ಪು ; ಚಿಲುಕೀರೆ : "ತಂಡುಲೀಯಃ, ಅಲ್ಪಮಾರಿಷಃ – ೨ ಕೀರೇ ಸೊಪ್ಪು" (ಸಿದ್ಧಾಂತಿ. ೧೨೬). [ ಸಂ. ]

**ತಂಡುಲೀಯಕ, ತಂಡುಳೀಯಕ** (ನಾ).=ತಂಡುಲೀಯ : "ನೀರದರವಂ ತಂಡುಲೀಯಕಂ ಮುದಿಪ್ಪಮೆನೆ ಕಿಱುಕುಸಾಲೆಯಕ್ಕುಂ" (ಮಂಗರಾ. ೪೨-೪೦). **ತಂಡುಳೀಯಕ :** "ತಂಡುಳೀಯಕಂ ಜಳಧರನಾಮಂ" (ವಸ್ತುಕೋ. ೩೭-೨೮). [ ಸಂ. ]

**ತಂಡುವಾದಿಸು** (ಕ್ರಿ). ಮೊಂಡುತನದಿಂದ ವಾದಿಸು ; ವಿತಂಡವಾದ ಮಾಡು : ಇದು ರಾಗ ತೋರೆಯದವಗೆ ಮನಸಿಗೆ ಹತ್ತದು ಹೀಗೆ ಹಾಗ್ಯಾಕೆಂದು ತಂಡುವಾದಿಸಿದರೆ ಆಗುವುದೇನಯ್ಯಾ ಅದರಿಂದ ಫಲಿತಾರ್ಥ (ವಿಪ್ರಸು. ೨೨-೫).

[ ತೊಂಡು₁? + ವಾದಿಸು ]

**ತಂಡುಳ** 'ತಂಡುಲ' ನೋ.

**ತಂಡುಳಜಳ** (ನಾ). ಅಕ್ಕಿಯನ್ನು ತೊಳೆದ ನೀರು ; ಅಕ್ಕಿಯ ಕಚ್ಚು ; ಅಕ್ಕಚ್ಚು : ಸಿರಿಕಂಡಂ ಬ್ರಾಹ್ಮಿಯೆನಿಪ್ಪೆರಡಂ ಮೇಣಲ್ಲದಂದು ತಂಡುಳ ಜಳದಿಂದರಸಿನಮಂ ಪುಣಿಸೆಯ ಬೇರ ರಸಮುಮಂ ಕುಡಿಯೆ ಕಿಡಿಸುಗುಂ ಸ್ಫೋಟಕಮಂ (ಲೋಕೋಪ. ೯-೨೫).

[ ತಂಡುಳ (= ತಂಡುಲ) + ಜಳ₂ (= ಜಲ₂) ]

**ತಂಡುಳೀಯಕ** 'ತಂಡುಲೀಯಕ' ನೋ.

**ತಂಡೆ** (ನಾ). ೧.ಒಂದು ಬಗೆಯ ಕಾಲಿನ ಆಭರಣ ; ರುಳಿ : ಅಡಿಯು ತಾವರೆ ತಂಡೆಯಂಚೆಯು ತೊಡೆಯು ಬಾಳೆಯು ಬಳುಕುತಿಹ ಬಡನಡುವು ಬಳ್ಳಿಯು (ಅರ್ಜಾವಿ. ೨೧-೩೪). ೨. ಎತ್ತಿನ ಕೊರಳಲ್ಲಿ ಕಟ್ಟುವ ಬಣ್ಣ ಬಣ್ಣದ ದಾರಗಳನ್ನು ಹೆಣೆದು ಮಾಡಿದ ಪಟ್ಟಿ ; ಕೊರಳಪಟ್ಟಿ : ಎತ್ತಿನ ಕೊರಳಲ್ಲಿ ತಂಡೆ ಹಾಕಿದ್ದೇನೆ (ರೂಢಿ).

[ ದೇ.॥ ತಮಿ. ತಣ್ಟೈ ; ಮಲ. ತಣ್ಣ ; ತುಳು. ತಂಡೆ ]

**ತಂಡೆಯ** (ನಾ). ಒಂದು ಊರಿನ ಹೆಸರು. P ಈಗಿನ ನಂಜನಗೂಡು ತಾಲ್ಲೂಕಿನ ತಾಂಡ್ಯ : ಮಯ್ಸೂರ್ ನಾಡ ತಣ್ಡೆಯದ ಎಳ್ಳಿಯಮ್ಮನ ಮಗಂ ಮಾದಯ್ಯ (ಮೈಆರಿ. ೧೯೩೭, ೫೫-೩ ; 1054) : ಕಡೆಕೊಳಂ ಖಾರ ವುರಂ ತಣ್ಡೆಯದ ಮುಕ್ಕೂಡು ಮೂಡವೊಗದೆ ಪೋಗಿ (ಮೈಆರಿ. ೧೯೩೪, ೩೮-೭ ; 11ನೆಯ ಶತ). [ ? ]

**ತಂಡೇಲ** (ನಾ). ದೋಣಿಯ ಅಥವಾ ಹಡಗಿನ ಯಜಮಾನ,- ಮುಖ್ಯಸ್ಥ : ಅಲ್ಲಿಲ್ಲದ ದೋಣಿಯ ತಂಡೇಲನನ್ನು ಕುರಿತು ಆರ್ಭಟಿಸಿದೆ (ಮೈಲಿಮಾ. ೫೦) : ಬಂದರಿಗೆ ಹೋಗಿ ಅಲ್ಲಿನ ತಂಡೇಲರನ್ನು ಕರೆದು . . . ತನಿಖೆಮಾಡುತ್ತಾರೆ (ಜಾರುದಾ. ೬೩).

[ ದೇ.॥ ತಮಿ. ತಣ್ಡಲ್, ತಣ್ಡೇಲ್ ; ಮಲ. ತಣ್ಡಾಲ್; ತುಳು. ತಂಡೆಲ್, ತಂಡೆಲೆ ; ತೆಲು. ತಂಡೇಲು, ತಂಡೆಲು. / ಹಿಂ. ಮರಾ. ತಾಂಡೇಲ್ ]

**ತಂಡೋಮುಂಡೊ** 'ತಂಡುಂಮುಂಡು' ನೋ.

**ತಂತಿ** (ನಾ). ೧. ತಾಮ್ರ ಮುಂತಾದ ಲೋಹಗಳ ತೆಳುವಾದ ಎಳೆ ; ತೆಳಂಕಂಬಿ ; ಸರಿಗೆ: ಚೆರಲೊಳ್ ಬೀಣೆಯ ತಂತಿಗಳೊರಸಿದ ಕಿಂಗಲಿಗೆಗ್ (ಪಂಪಭಾ. ೬-೧೦) ; ಅರಿಭೂಪಾಳ ಸಿರಂಗಳಿಂದೆ ಸೊರೆಯಂ ತದ್ವಾಹು ಸಂದೋಹದಿಂ ಕರೆಯಂ ದಂಡಿಗೆ ಮಾಡಿ ಬೆಂನೆಸೆವ ಬೀಮಿಂ ತಂತಿಯಂ ಕಟ್ಟಿ (ಎಕ. VI, ಕಡೂರು. ೧೫೬-೩೬ ; ಸು. 1190) : ಪದಿನಾಲ್ಕು ತಂತಿಯಿಂ ಮೆಱೆವ ವೀಣೆಯನಲ್ಲಿ ಪದಪಿನಿಂ ಮೇಳಯ್ಸಿ (ತಿರುನೀ. ೮೫-೨೩) : ನೋಟ ರಾಯನ ಮೇಲೆ ನೆನಹು ರಾಗದ ಮೇಲೆ ನೀಟ ತಂತಿಯ ಮೇಲೆ ಬೆರಳು (ಭರತೇ. ೫-೫೮) ; ಧಾತುಗಳಿಂದ ಬೇಕಾದಷ್ಟು ಉದ್ದ ತಂತಿಯನ್ನು ಎಳೆಯ ಬಹುದು (ಮುಂಬಯಿ. ೪-೯೩). ೨. ವೀಣೆ ಮೊದಲಾದ ತಂತಿವಾದ್ಯ : ತಾಳ್ಯಾಕ ತಂತ್ಯಾಕ ರಾಗದ ಚಿಂತ್ಯಾಕ (ಗರಿ. ೧೨೨-೭) ; ಜೀವದ ರಸ ಹಿಂಡಿ ತುಂತುರು ಮಳೆಯಾಗಿ ತಂತಿಯ ತುಂಬೆಲ್ಲ ಸಿಡಿದಾಂಗ (ಸಖೀಗೀ. ೩೨-೦೪). ೩. ತಂತಿಯ ಮೂಲಕ ಕಳಿಸುವ ಸುದ್ದಿ ; ತಾರು ; ಟೆಲಿಗ್ರಾಂ : 'ಜಾಗ್ರುತೆಯಾಗಿ ಹೊರಟು ಬಾ' ಎಂದು ತಂತಿ ಕೊಟ್ಟಿದ್ದನು (ಚಿಂದುಟಿ. ೭೭). **ತಂತಿಯ ದೀಪ** = ವಿದ್ಯುದ್ದೀಪ : ವಿದ್ಯುಚ್ಛಕ್ತಿ ಎಂದು ಹೇಳುವ ಬೆಳಕಿಗೆ ತಂತಿಯ ದೀಪ ಎಂತಲೂ ಹೇಳುವುದನ್ನು ಕೇಳಿದ್ದೇನೆ (ಕಬಿಸಾ. ೬೩).

[ <ಪ್ರಾ. ತಂತೀ./ಸಂ. ತಂತ್ರಿ, ತಂತ್ರೀ ]

**ತಂತಿಕಂಬ** (ನಾ). ವರ್ತಮಾನವನ್ನು ದೂರಕ್ಕೆ ಸಾಗಿಸುವ ತಂತಿಗಳನ್ನು ಬಿಗಿದ ಕಂಬ; ತಂತಿ ವರ್ತಮಾನದ ಕಂಬ: "ತಂತಿಕಂಬ; ತಾರುಕಂಬ" (Telegraph-post. ಪತ್ರಿನಿ. ೮೨). [ ತಂತಿ + ಕಂಬ₁ (<ಕಂಭ) ]

**ತಂತಿಕಚೇರಿ** (ನಾ). ತಂತಿ ವರ್ತಮಾನವನ್ನು ಕಳಿಸುವ ಕಚೇರಿ : (Telegraph-office. ಪತ್ರಿನಿ. ೮೨). [ ತಂತಿ + ಕಚೇರಿ ]

**ತಂತಿಕಟ್ಟು** (ಕ್ರಿ). ೧. ತಂತಿಯನ್ನು ಅಳವಡಿಸು : ವೀಣೆ . . . ಮೊದಲಾದ ತಂತಿಕಟ್ಟಿ ನುಡಿವ ವಾದ್ಯವನಱುವುದು (ಆದಪ. ೬-೧೨). ೨. (ಆಲಂ) ನಿರ್ದಿಷ್ಟಪಡಿಸು ; ಗೆರೆ ಎಳೆ : ಊರಗೌರಕಿ ವ್ಯವಹಾರ ದೊಳಗ ಹಾಂಗೆಲ್ಲಾ ತಂತೀಕಟ್ಟಿ ಕೆಲಸ ಸಾಗೂದುಲ್ಲ (ಗ್ರಾಮಾಯ. ೪೦).

[ ತಂತಿ + ಕಟ್ಟು₁ ]

**ತಂತಿಕೊಡು** (ಕ್ರಿ). ತಂತಿಯ ಮೂಲಕ ಸಮಾಚಾರವನ್ನು ಕಳಿಸು : ಕಲಕತ್ತೆಗೆ ಹೊರಟ ಬಗ್ಗೆ ಬಾಬುಗಳಿಗೆ ತಂತಿಕೊಟ್ಟು ಹೊರಟುಬಿಟ್ಟನು (ಹೇಮಂತ. ೩೦೯). [ ತಂತಿ + ಕೊಡು₁ ]

**ತಂತಿಜಾಲರಿ** (ನಾ). ತಂತಿಯಿಂದ ಮಾಡಿದ ಜಾಲರಿ : ಕಿಟಕಿ ಬಾಗಿಲು ಗಳಿಗೆ ತಂತಿಜಾಲರಿ (wire-mesh) ಹಾಕಿಸುವುದರಿಂದ ಇವುಗಳ ಕಾಟ ಕಡಿಮೆಯಾಗುವುದು (ಗೃಹವಿ. ೧೮೬). [ ತಂತಿ + ಜಾಲರಿ ]

**ತಂತಿಟಪ್ಪಾಲು** (ನಾ). ತಂತಿಯ ಮೂಲಕ ಕಳಿಸುವ ವರ್ತಮಾನ,- ಸುದ್ದಿ ; ಟೆಲಿಗ್ರಾಂ: (ಕ). [ ತಂತಿ + ಟಪ್ಪಾಲು (<ಟಪಾಲು) ]

**ತಂತಿಬಲೆ** (ನಾ). = ತಂತಿಜಾಲರಿ : ಈ ಕೋಣೆಯೂ ಎರಡು ತಂತಿಬಲೆ ಗಳಿಂದ ಇಬ್ಭಾಗವಾಗಿತ್ತು (ಪುನರು. ೧೮೮). [ ತಂತಿ + ಬಲೆ₁ ]

**ತಂತಿಬಿಡು** (ಕ್ರಿ). ತಂತಿ ಸಮಾಚಾರವನ್ನು ಕಳಿಸು ; ತಾರು ಕೊಡು : ಅದನ್ನು ಕೇಳಿ ಅವರು ನನಗೆ ತಂತೀ ಬಿಟ್ಟಿದ್ದರು (ಸ್ಮೃತಿಚಿ. ೫೦೩).

[ ತಂತಿ + ಬಿಡು₁ ]

**ತಂತಿಮೆತ್ತೆ** (ನಾ). ಒಳಗೆ ಸ್ಥಿತಿಸ್ಥಾಪಕತ್ವವುಳ್ಳ ತಂತಿಯನ್ನು ಅಳವಡಿಸಿ ಮಾಡಿದ ಮೆತ್ತೆ,– ಆಸನ : ತಂತಿಮೆತ್ತೆಯ ಮೇಲೊಂದು ಶುಭ್ರವಾದ ಹಾಸುಗೆಯಿತ್ತು (ಪುನರು. ೩೬೫). [ ತಂತಿ + ಮೆತ್ತೆ ]

**ತಂತಿಮೇಹ** (ನಾ). = ತಂತುಮೇಹ : (ಕ). [ <ಸಂ. ತಂತುಮೇಹ ]

**ತಂತಿವರ್ತಮಾನ** (ನಾ). ದೂರಲೇಖಕದ ಮೂಲಕ ಕಳಿಸಿದ ಸುದ್ದಿ,– ಸಮಾಚಾರ: ೨೨೦೦೦ ಮೈಲು ದೂರ ತಂತಿವರ್ತಮಾನವು ನಡೆಯುತ್ತದೆ (ಭೂಗೋಳ. ೪೦). [ ತಂತಿ + ವರ್ತಮಾನ ]

**ತಂತಿವಾದ್ಯ** (ನಾ). ತಂತಿಗಳಿಂದ ಕೂಡಿರುವ ವೀಣೆ, ತಂಬೂರಿ ಮೊದಲಾದ ವಾದ್ಯ : "ತತಂ–ತಂತಿವಾದ್ಯಂ" (ಕಾಶಕ್ಕ. ೩೩೮); ತಂತೀವಾದ್ಯ ಯಾವುದೇ ಆದರೂ ಕಾಲಕ್ರಮೇಣ ವೀಣಾ ಎಂಬ ರೂಢನಾಮದಿಂದ . . . ಕಂಡುಬರುತ್ತದೆ (ಸಂಗೀತಂ. ೧೦೮). [ ತಂತಿ + ವಾದ್ಯ ]

**ತಂತಿವಾರ್ತೆ** (ನಾ). = ತಂತಿವರ್ತಮಾನ: ತಂತಿವಾರ್ತೆ ಕೇಳಿ ತಕ್ಷಣ ಹೊರಟರು (ರೂಢಿ). [ ತಂತಿ + ವಾರ್ತೆ ]

**ತಂತಿಸಮಾಚಾರ** (ನಾ).=ತಂತಿವರ್ತಮಾನ : ತಂತೀಸಮಾಚಾರ, ವಾಯುಸಮಾಚಾರ, ವೀಣಾವಾದನ ಇತ್ಯಾದಿ ಸೂಕ್ಷ್ಮಸ್ವರೂಪವನ್ನು ಪಡೆಯುತ್ತದೆ (ಜೀವಾತ್ಮ. ೧೭೪). [ ತಂತಿ + ಸಮಾಚಾರ ]

**ತಂತಿಹಚುಕ** (ನಾ). ಸಂಬಂಧವನ್ನು ಕಡಿಯುವವನು : ಸಂತೈಸಿಕೊಂಡು ಹೋದನೊ ದಾರಿಯಲಿ ಸಿಕ್ಕಿ ಭ್ರಾಂತುಗೊಂಡನೊ ಬೇಡ ಹೇಳವ್ವ ತಾಯಿಯೆನೆ ತಂತಿಹಚುಕನನಾರು ಸೀಯದಿರ್ದರೆ ಹೋ ದ ನೆಂ ದ ಳಾ ಪದ್ಮಾವತಿ (ಗುಭಡ. ೨-೭೯): "ಅಂಕೆಯಿಲ್ಲದವನು, ಲಂಗು ಲಗಾಮಿಲ್ಲದವನು" (ಗುಭಡ. ಕೋಶ). [<ತಂತು₂ + ಹಚುಕ (<ಪಚುಕ) ]

**ತಂತು₁** (ನಾ). ೧. ಎಳೆ ; ದಾರ ; ನೂಲು ; ಸೂತ್ರ : "ತಂತು ಗುಣಂ ಸೂತ್ರಂ" (ವಸ್ತುಕೋ. ೬೬-೮೭); "ನೂತ ನೂಲೆಟಿಯಲ್ಲಿ . . . ತಂತುವದು" (ಮಂಗರಾ. ೧೫೪-೬೬); ಪಟವ ಹಚಿದು ತಂತುವ ನೋಡಲದೇಕೆ ಆ ಪಟವೇ ತಂತುವೆಂದಚಿದೊಡೆ ಸಾಲದೇ (ದೇದಾವ. ೬೦-೧೫೫); ಸ್ನಾಯುಗಳ ಬಣ್ಣ ನಸುಗೆಂಪು; ಅವು ಹಲವು ತಂತುಗಳಿಂದುಂಟಾಗಿರುತ್ತವೆ (ಮುಂಬಯಿ. ೬-೩೦೪) : ನಿರಾಕಾರ ಏಕಾಂತ ತಂತು ಸುತ್ತುತ್ತಲಿತ್ತು ನನ್ನ (ಅರಳು. ೧೯೪-೫). ೨. ಸಂಬಂಧ. 'ತಂತಿಹಚುಕ' ಪರಾ.

ತಂತುಮಾತ್ರಬ್ರಾಹ್ಮಣ=ತಂತಂಹಾರುವ: ಇವುಗಳಲ್ಲಿ ೧೦೫ ಕುಲಗಳು ತ್ರಿಕರ್ಮಿಗಳು ; ತಂತುಮಾತ್ರ ಬ್ರಾಹ್ಮಣರು (ತುಳುನಾ. ೧೫೦). ತಂತುಮಾತ್ರಬ್ರಾಹ್ಮಣ್ಯ = ಜನಿವಾರದಿಂದ ಮಾತ್ರ ಬ್ರಾಹ್ಮಣನಾಗಿರುವಿಕೆ ; ಆಚಾರವಿಲ್ಲದೆ ಜಾತಿಯಿಂದ ಬ್ರಾಹ್ಮಣನಾಗಿರುವುದು : (ಕ). [ಸಂ.]

**ತಂತು₂** (ನಾ). ೧. ಉಪಾಯ ; ತಂತ್ರ : ಆಚಾರಮಾರ್ಗ ತಂತುವನಚಿವನಾವನೊರ್ವಂ ಬ್ರಹ್ಮವರ್ಚಸನಕ್ಕುಂ (ಮಂಗರಾ. ೭೪-೧); ಪಥದಲ್ಲಿ ಏಕಾಂತದಲ್ಲಿ ಕಾಂತೆಯ ಸಂಗಡದಲ್ಲಿ ಸಂತರ ಬಳಿಯಲ್ಲಿ ತಂತಿನಲ್ಲಿ ವನಾಂತರದಲ್ಲಿ . . . ಎಂತಾದರೂ ಮನದಂತಿರಲಿ ಸಂತತ ಹರಿಪಾದ ಕ್ರಾಂತನಾಗಿ (ವಿಜಾಸು. ೬೯-೫) : ಎಲ್ಲಾ ಕೊಡಗ ಮಾಡಿದ ತಂತು (ಜಿಂಗಾಳ್ಳ. ೪೦೪). 'ತಂತುಗಾರ' ಪರಾ. ೨. ಮುಖ್ಯವಾದುದು : ಪ್ರಧಾನವಾದ ವಿಷಯ: "ಮುಖ್ಯದಲ್ಲಿ . . . ತಂತುವದು" (ಮಂಗರಾ. ೧೫೪-೬೬). 'ತಂತ್ರ' ಪರಾ. [ ? ]

**ತಂತುಕ** (ನಾ). ೧. (ರೇಷ್ಮೆಹುಳು, ಜೇಡರ ಹುಳು ಮೊದಲಾದುವುಗಳಲ್ಲಿ) ನೂಲನ್ನು ಹೊರಡಿಸುವ ಅಂಗ: ರೇಷ್ಮೆಕೋಶಗಳನ್ನು (Cocoons) ಮಾಡಲು ತಂತುಕ (Spinneret)ದ ಮೂಲಕ ಹೊರಬರುತ್ತದೆ (ಕೀಟಬಿ. ೯೨). ೨. ದಾರವನ್ನು ತೆಗೆಯುವ ಸಾಧನ : ಸಂಶ್ಲೇಷಿತ ದಾರಗಳನ್ನು (Synthetic fibre) ತೆಗೆಯುವ ತಂತುಕಗಳನ್ನು (Spinneret) . . . ಬಳಸುತ್ತಾರೆ (ಶಿಲ್ಪನಾ. ೩೧೯). [ ಸಂ. ]

**ತಂತುಕಾರ**(ನಾ).ಜೇಡರ ಹುಳು: ನಿಚ್ಚಂ ತೊಯ್ದು ಮೃತಶಿಲೆಯ ಗೋಶಾಲೆ. ತಂತುಕಾರ ಸಹಸ್ರ ಜಾಲ ವೈರೂಪ್ಯದಿಂ, ಪಿಸ್ನವಿದ ಪಾಳೂರ ತುರುಪಟ್ಟಿಯೋಲ್ (ಶ್ರೀರಾಮಾ. ೮೫೦-೧೦). [ ಸಂ. ]

**ತಂತುಕುಳ** (ನಾ). "ಬ್ರಹ್ಮವರ್ಚಸ್ಸುಳ್ಳವರ ಸಮೂಹ (ಯಜ್ಞವನ್ನು ಮಾಡುವವರ ಗುಂಪು)" (ಲಶಿಚಂ. ಕೋಶ) : ದಧೀಚಿಮುನಿ ಯಜ್ಞ ಮಂಟಪಕೆ ಬಂದು ತಂತುಕುಳ ನೆರೆದುದಿನ್ನೆಲ್ಲರಳಿವುದು ದಿಟಂ . . . ಎಂದು ಮುಂತಿರ್ದು ನುಡಿದಂ (ಲಶಿಚಂ. ೧೮-೬). [ ತಂತು₂ + ಕುಳ₅ ( = ಕುಲ)]

**ತಂತುಕ್ರಿಯೆ** (ನಾ). ನೂಲಿನಲ್ಲಿ ಕೆಲಸ ಮಾಡುವುದು ; ಬಟ್ಟೆಯನ್ನು ನೇಯುವುದು: "ಕಿಸುವಣ್ಣ ಕೊರ್ಬುಗೆಗಳೊಳಂ . . . ತಂತುಕ್ರಿಯೆಯೊಳು ಕೆಚ್ಚೆಂದಕ್ಕು" (ಶಬ್ದಮಂ. ೮೮) : "ಘೃತದೊಳು ಪೇಟಲೇಂ ತಂತುಕ್ರಿಯೆಯೊಳು ನೆಯ್" (ಶಬ್ದಮಂ. ೦೧೩) [ ತಂತು₁ + ಕ್ರಿಯೆ ]

**ತಂತುಗಟ್ಟು₁** (ಕ್ರಿ). (ಪಾಕ ಮೊದಲಾದುವು) ದಾರದಂತೆ ಎಳೆ ಬರುವ ಹಾಗೆ ಜಿಗುಟಾಗು ; ಎಳೆಪಾಕವಾಗು : ಅದು ಸುಮಾರು ಮೂರು ತಾಸು ಕುದಿದು ಕಷಾಯವು ತಂತುಗಟ್ಟುವ ಹಾಗೆ ಜಿಗುಟಾದ ಮೇಲೆ . . . ಕುದಿಸುವರು (ಮುಂಬಯಿ. ೫-೩೦೦). [ ತಂತು₁ + ಕಟ್ಟು₁ ]

**ತಂತುಗಟ್ಟು₂** (ನಾ). ದೇಹದಲ್ಲಿಯ ಮೂಳೆಗಳನ್ನು ಒಂದಕ್ಕೊಂದು ಸೇರಿಸಿ ಬಿಗಿಯುವ ಮೆತುವಾದ ಎಳೆಗಳಂತಹ ರಚನೆ; ಅಸ್ಥಿರಜ್ಜು : ಮೆಲ್ಲೆಲುಬುಗಳು (ಕಾರ್ಟಿಲೇಜಸ್), ತಂತುಗಟ್ಟುಗಳು (ಲಿಗಮೆಂಟ್ಸ್), ಸ್ನಾಯುಗಳು ತಗುಲಿಕೊಳ್ಳುವ ಕಂಡರಗಳಲ್ಲೂ (ಟೆಂಡನ್ಸ್) ಸೇರಿಕೊಳ್ಳುತ್ತದೆ (ಕವಿಕೋ. I, ೦೫). [ ತಂತು₂ + ಕಟ್ಟು₂ ]

**ತಂತುಗಾರ** (ನಾ). ಉಪಾಯಗಾರ ; ತಂತ್ರಗಾರ ; ಮೋಸಗಾರ : ತಂತುಗಾರನೊ ಶೃಂಗಾರವರನೊ ಪಂಥದ ದೈವವೆ ವಿಜಯವಿಠ್ಠಲರೇಯಾ (ತೀರ್ಥಮ. ೧೩೩) : ತಂತುಗಾರನೆ ನಮ್ಮ ವಿಜಯ ವಿಠ್ಠಲ ಸ್ವಾತಂತ್ರ ಸರ್ವೋತ್ತಮ (ವಿಜಾಸು. ೩-೪). [ತಂತು₁ + – ಕಾರ₁ (<–ಕಾಚ)]

**ತಂತುಚಿತ**(ನಾ). ನೂಲಿನಿಂದ ಕೂಡಿದುದು; ನೂಲಿನಿಂದ ನೆಯ್ದುದು; ಬಟ್ಟೆ : "ತಂತುಚಿತಂ ಕಾರ್ಪಾಸಕಂ" (ವಸ್ತುಕೋ. ೭೮-೧೯). [ ಸಂ. ]

**ತಂತುನಾಗ** (ನಾ). ಒಂದು ಬಗೆಯ ಮೀನು; ಶಾರ್ಕ್‌ಮೀನು. [ ಸಂ. ]

**ತಂತುನಾಭ** (ನಾ). ಜೇಡರ ಹುಳು. [ ಸಂ. (ತಂತು + ನಾಭಿ + –) ]

**ತಂತುಪಟ** (ನಾ). ನೂಲಿನ ಬಟ್ಟೆ : ತಂತುಪಟ ಸಾಕಿನ್ನು ಬೆಳವಿಗೆಗಂತವಾದುದು ಸುಲಿಯದಿರಿ ಹೋ (ತೊರರಾ. ೫-೮-೩೬). [ ತಂತು₁ + ಪಟ್ಟ₃ ]

**ತಂತುಪಾಕ** (ನಾ). ಎಳೆ ಬರುವಂತೆ ಜಿಗುಟಾದ ಪಾಕ ; ಎಳೆಪಾಕ ; ಹದವಾದ ಪಾಕ : ನಾಲ್ಕುವರಹ ತೂಕ ಪಚ್ಚಗರ್ಪೂರವಂ ಪುಡಿ ಮಾಡಿ ಪಾಕದಲ್ಲಿ ಹಾಕಿ ತಂತುಪಾಕದಲ್ಲಿಳುಹಿ (ಸಕವೈ. ೧೩೬). [ತಂತು₁+ಪಾಕ₂]

**ತಂತುಮೇಹ** (ನಾ). ಮೇಹರೋಗದ ಒಂದು ಅವಸ್ಥೆ : (ಕ). [ತಂತು₂ + ಮೇಹ ]

**ತಂತುಯಂತ್ರ** (ನಾ). ನೂಲುವ ಯಂತ್ರ ; ರಾಟೆ : "ರಾಟಾ — ತಂತುಯಂತ್ರಂ" (ಕಾಶಕ್ಕ. ೦೬). [ ತಂತು₁ + ಯಂತ್ರ ]

**ತಂತುರ** (ನಾ). ಉಪಾಯ ; ತಂತ್ರ : ಉಕಾರಕ್ಕೆ–ಅಲ್ಪ–ಅಲುಪ . . . ತಂತ್ರ–ತಂತುರ (ಶಮದ. ೩೫೪ ಪ್ರಯೋ). [ <ಸಂ. ತಂತ್ರ ]

**ತಂತುವಾಯ** (ನಾ). ೧. ಬಟ್ಟೆ ನೇಯುವವನು; ನೇಕಾರ: "ಕುವಿಂದಾಖ್ಯೆ ತಂತುವಾಯಂಗೆ" (ವಸ್ತುಕೋ. ೬೬-೮೭). ೨. ಜೇಡರಹುಳು : "ತಂತುವಾಯಃ–ಜೇಡನ ಪುಳುವುಂ, ಜೇಡನುಂ" (ಕಾಶಕ್ಕ. ೩೩೮) : ತಂತುವಾಯದಿಂದೆಮ್ಮ ಲೋಕದೊಳಗಿನ್ನದೇನು ಬಂತು? ಅಲ್ಲಿ, ಇಲ್ಲಿ, ಎಲ್ಲೆಲ್ಲಿ ತೂಗಾಡಿ, ತಂತು, ತಂತು, ತಂತು! (ಚಿಂತನ. ೫೪-೦೦). ೩. ನೇಯುವುದು ; ನೆಯ್ಗೆ. ೪. ಮಗ್ಗ : "ಮಗ್ಗಂ ತಂತುವಾಯಮಕ್ಕುಂ" : (ಮಂಗರಾ. ೧೧೩-೮). [ ಸಂ. ]

**ತಂತುಸ್ನಾಯು** (ನಾ). ಸೂಕ್ಷ್ಮವಾದ ಎಳೆಗಳನ್ನುಳ್ಳ ಸ್ನಾಯು : ತಂತುಸ್ನಾಯುವಿನ (Fibre Mascular) ಬೆನ್ನ ಬಳಿಯ ವಪೆ (ಕೀಟಬಿ. ೩೨). [ ತಂತು₁ + ಸ್ನಾಯು ]

**ತಂತುಹಾರುವ** (ನಾ). ಜನಿವಾರವನ್ನು ಧರಿಸುವುದರಿಂದ ಮಾತ್ರ ಬ್ರಾಹ್ಮಣ ಎನಿಸಿಕೊಂಡವನು; ಹುಟ್ಟಿನಿಂದ ಮಾತ್ರ ಬ್ರಾಹ್ಮಣನಾಗಿದ್ದು ಯೋಗ್ಯ ಆಚರಣೆಯಿಲ್ಲದವನು : ತಂತುಹಾರುವನಲ್ಲ ಸಾಕ್ಷಾತ್ ಬೊಮ್ಮನಪ್ಪನು (ಬಸಪು. ೫೫-೩೩). [ ತಂತು₁ + ಹಾರುವ (<ಪಾರ್ವ) ]

**ತಂತೋತಂತು** (ಅ). ಎಳೆಎಳೆಯಾಗಿ; ಸಂಪೂರ್ಣವಾಗಿ : ಚಾಚೂ ತಪ್ಪದೆ : ಅಕ್ಷರಶಃ : ನಿನ್ನ ತರ್ಕ ತಂತೋತಂತು ಸರಿಯಾದದ್ದೆ ನೋಡು (ಅಶ್ವಮೇ. ೫) ; ನನ್ನ ಅನುಭವಕ್ಕೆ ಮಾತ್ರ ಈ ಮಾತು ತಂತೋತಂತು ಅನ್ವಯಿಸಿತು (ಕುಮಾರಾ. ೫೩). [← ಮರಾ. ತಂತೋತಂತ ]

**ತಂತ್ರ** (ನಾ). ೧. ದಾರ ; ನೂಲು : ತಂತು : ನೆಯ್ಯಾಳುತಿದೆ ಜಗವನೊಂದತಿ ವಿರಾಡ್ವಸನಂ, ಸೂಕ್ಷ್ಮಾತಿಸೂಕ್ಷ್ಮ ತಂತ್ರುದಿ ಬಿಗಿದು ಕಟ್ಟಿಯುಂ ಜೀವಿಗಳ್ಗೆಚ್ಛೆಯಾ ಸ್ವಾತಂತ್ರ್ಯಭಾವಮಂ ನೀಡಿ (ಶ್ರೀರಾಮಾ. ೫೪-೧೩೨). ೨. ನೇಯುವಿಕೆ ; ನೆಯ್ಗೆ. ೩. ಮಗ್ಗ. ೪. ಹೊದಿಕೆ ; ಪರಿಧಾನ. ೫. ಧಾರ್ಮಿಕ ಉತ್ಸವ, ಸಮಾರಂಭ ಮೊದಲಾದವುಗಳ ಪ್ರಧಾನವಾದ ವಿಧಿ, ಕ್ರಮ ಮತ್ತು ಅನುಷ್ಠಾನ: ಓಂ ನಮ ಶಿವಾಯ ಎಂಬ ಮಂತ್ರವ ಬೀಜವಮ್ಮದೆ ನಿಂದುದು ತರ್ಕ ಭಯಂಕರ ಭ್ರುಮೆಗೊಂಡಿತ್ತು ಮಂತ್ರ ತಂತ್ರ (ಬಸವ. ೮೧) ; ಧರ್ಮವೇ ಜಯವೆಂಬ ದಿವ್ಯಮಂತ್ರ ಮರ್ಮವನ್ನರಿತು ಮಾಡಲು ಬೇಕು ತಂತ್ರ (ಪುರಂದ. ೨-೭೫ ಪಲ್ಲವಿ). ೬. ಸಿದ್ಧಾಂತ ; ತತ್ತ್ವ. ೭. ಶಾಸ್ತ್ರ : ನಿಜಸ್ವರೂಪ ನಿರೂಪಣ ಚಿತ ಸಕಲಸಮಾಮ್ನಾಯತಂತ್ರ ಲಕ್ಷ್ಮೀಕಾಂತ (ಜಗವಿ. ೧-೮೦ ವ) ; ವಿದಿತವೆನೆ ವೇದಘೋಷದ ಪುರಾಣಪ್ರಸಂಗದ ತರ್ಕ ತಂ[ಪಾಠಾಂ. ಮಂ]ತ್ರ ಸಂವಾದದ . . . ಸಂಭ್ರಮಕೆ ಬೆಚಿಗಾದನು ಹರಿಶ್ಚಂದ್ರನು (ಹರಿಕಾ. ೬-೬೯) ; ತಂತ್ರಗಳಲ್ಲಿ ಅನೇಕ ತಂತ್ರಗಳು ಶಾಕ್ತಮತವನ್ನು ನಿರೂಪಿಸುತ್ತವೆ . . . ವೇದಗಳು, ಆಗಮಗಳು, ತಂತ್ರಗಳು, ಪುರಾಣಗಳು – ಈ ನಾಲ್ಕು ವಿಭಾಗಗಳಲ್ಲಿಯೂ ಈ ಸಂಪ್ರದಾಯವನ್ನು ಕಾಣಬಹುದು (ಭಾರದ. ೨೨೦). ೮. ಇಂದ್ರಜಾಲ ; ಯಕ್ಷಿಣೀವಿದ್ಯೆ. ೯. ಔಷಧಿದ್ರವ್ಯ; ಮೂಲಿಕೆ. ೧೦. ಉಪಾಯ : ಹಂಚಿಕೆ : ಯುಕ್ತಿ : ಆಗಳ್ ಮಂತ್ರಮುಂ ತಂತ್ರುದಿಂ ತಱಿದು ಪೊಸಮಸೆಯ ವಿಶಿಖಂಗಳಿಂ ಪಗೆಯ ಬಿಲ್ಲಂ . . . ಮುಕ್ಕಡಿಗೆಯ್ದು (ರಾಮಾಶ್ವ. ೧೪೫-೨೪) ; ಉರಗನ ವಿಷಕಿದೆ ಔಷಧಿ ಮಣಿಮಂತ್ರ ಖಳನ ವಿಷಕಿಲ್ಲವೋ ತಂತ್ರ (ಇಂಚಾಪ. ೧೪೩-೪) ; ಮಂತ್ರ ತಿಳಿಯದಿದ್ದರೂ ತಂತ್ರಕ್ಕೆ ಕಡಿಮೆ ಇಲ್ಲ (ಗಾದೆ). ೧೧. ಕಪಟೋಪಾಯ ; ಸಂಚು : ಜ್ವಾಲೆ . . . ಅರ್ಜುನನ ಮೇಲೆ ತಂತ್ರವನೆಸಗಿ ಶಾಪಮಂ ಕುಡಿಸಿದಳ್ (ಜೈಮಿಭಾ. ೯ ಸೂಚನೆ) ; ಸುಟ್ಟು ಕುಹಕೋಪಾಯ ಕೆಟ್ಟ ತಂತ್ರಗಳನ್ನು . . , ಬಟ್ಟೆ ತುದಿಯನು ಹೇಗೆ ಮುಟ್ಟಲಾಪುದೆ ನೋಡು (ಕಎಪು. ೨-೩): ಮುಂಕ್ರಾಂಬೆಯ ತಂತ್ರಗಳು ನಮಗೆ ಗೊತ್ತಾಗಿವೆ (ರಾವಿಜ. ೦೫). ೧೨. ಪ್ರತಿಜ್ಞೆ ; ಶಪಥ. ೧೩. ಗ್ರಂಥದ ಒಂದು ಭಾಗ.–ಅಧ್ಯಾಯ : 'ಪಂಚತಂತ್ರ' ಪರಾ. ೧೪. ರಾಜನ ಪರಿವಾರ: ಅರಸನಡಿವಜ್ಜೆಯಂ ನೋಡುತ್ತಂ ಪೆಱಗಣಿಂದಂ ತಂತ್ರಮೆಲ್ಲಂ ಬಂದು . . . ಊರೊಳಗೆಲ್ಲಮಱಸಿ (ವಡ್ಡಾ.ರಾ. ೧೧೧-೧೦). ೧೫. ಕೊಟ ; ಸಭೆ. ೧೬. ಸೈನ್ಯ ; ಪಡೆ : ತಮ್ಮ ಬೆಸದಿಂ ತಂತಮ್ಮ ಠಾಣಾಂತರಂಗಳೊಳಿರ್ದಂಗಜತಂತ್ರದಂತೆಸೆವಿನಿಂ ಚೆಲ್ವಾದುವಿಮ್ಮಾವುಗಳ್ (ಆದಿಪು. ೧೧-೯೬). 'ತಂತ್ರಪಾಲ', 'ತಳತಂತ್ರ₁' ಪರಾ. ೧೭. ಕುಲ; ವಂಶ. ೧೮. ಅಲಂಕಾರ ; ಸಿಂಗಾರ. ೧೯. ಪ್ರಧಾನವಾದ ವಿಷಯ ; ಮುಂಖ್ಯವಾದುದು. ೨೦. ಪರಮಾರ್ಥ : ಆತ್ಯಂತಿಕ ಸತ್ಯ. ೨೧. ಪ್ರಕ್ರಿಯೆ : ಪ್ರಯೋಗ ವಿಧಾನ : ಪಾತ್ರಗಳ ಅಂತರಂಗವನ್ನು ಅವುಗಳ ನಡೆವಳಿಕೆಯಲ್ಲಿಯ ವಿರೋಧಗಳ ಮೂಲಕ ಚಿತ್ರಿಸುವದು ಇಲ್ಲಿಯ ತಂತ್ರಗಳಲ್ಲೊಂದಾಗಿದೆ (ಹೊಸಕ್ಷಿ. ೨೮೪) ; ಅವರ ರಚನೆಗಳಲ್ಲಿ, ಗಾಯನದಲ್ಲಿ ಅಥವಾ ವಾದನದಲ್ಲಿ ಬಳಸಿದ ಹೊಸ ತಂತ್ರ . . . ಇಲ್ಲಿ ಕಾಣಬಹುದು (ಸಂಗೀತ. VI, ೬೮೪೫) ; "ಉಪಾಯ ಪರಿಧಾನ ವಿಧಾನ ಪ್ರಧಾನ ಸೇನೆ ಸಿಂಗರ ಪರಮಾರ್ಥ ತಂತು ಕುಲಭೇದಗಳಿಂತಿವು ತಂತ್ರವಾಚಕಂ" (ನಾನಾರ. ೭೬). ೨೨. ವಶ; ಅಧೀನ: ತಂತ್ರವೆಂದರೆ ಅಧೀನವೆಂದರ್ಥ(ಹಿಂದಸಾ.೨೨೬). ೨೩. ಆಡಳಿತ ; ರಾಜ್ಯಭಾರ : 'ಗಣತಂತ್ರ' ಪರಾ.

ತಂತ್ರಮಾಡು = ಉಪಾಯಮಾಡು : ಏನೋ ತಂತ್ರಮಾಡಿ ಕೆಲಸ ಗಿಟ್ಟಿಸಿಬಿಟ್ಟ (ರೂಢಿ). [ ಸಂ. ]

**ತಂತ್ರಂಬೆರಸು**(ಕ್ರಿ). ಪರಿವಾರದಿಂದ ಕೂಡಿಕೊಂಡಿರು; ಗುಂಪಿನೊಡನೆ ಇರು : ಭೋಗಿಕಟಕನ ಗಾಣಪತ್ಯಕೆ ಹೋಗನೇ ತಂತ್ರಂಬೆರೆಸಿ ಶಿವಯೋಗದಿಂದ ಕುಮಾರಪಾಲಕ ಗುರ್ಜರನು ಮುನ್ನ (ಬಸಪು. ೫೪-೭೫). [ ತಂತ್ರ + ಬೆರಸು₁ ]

**ತಂತ್ರಕ** (ನಾ). ಹೊಸಬಟ್ಟೆ ; ನೀರಿಗೆ ಹಾಕದೆ ಇರುವ ಬಟ್ಟೆ. [ ಸಂ. ]

**ತಂತ್ರಗಾರ** (ನಾ). ಉಪಾಯಗಾರ : ಚತುರ : ಆ ಉಮೇದುವಾರರು ಬಹಳ ತಂತ್ರಗಾರರು (ಮಲೆನಾ. ೧೨೬) : ತಂತ್ರಗಾರನನ್ನು ಕುತಂತ್ರಗಾರ ಜಯಿಸಿದ (ಗಾದೆ). [ ತಂತ್ರ + – ಗಾರ (< – ಕಾಱ) ]

**ತಂತ್ರಗಾರಿಕೆ** (ನಾ). ಉಪಾಯಕುಶಲತೆ; ಚಾತುರ್ಯ: ಬಂದ ಗಂಡಾಂತರಗಳನ್ನು ಬುದ್ಧಿಪೂರ್ವಕವಾದ ಉಪಾಯಾಂತರಗಳಿಂದ ಪರಿಹರಿಸುವ ಜಾಣತನಕ್ಕೆ ತಂತ್ರಗಾರಿಕೆ ಎಂದು ಹೆಸರು(ವಾರಾಕ್ಕ.೬೦). [ತಂತ್ರಗಾರ + – ಇಕೆ]

**ತಂತ್ರಗೈ** (ಕ್ರಿ). ಉಪಾಯಮಾಡು ; ಯುಕ್ತಿಯನ್ನು ಹೂಡು : ಶಕ್ತಿಯಿಂದಾಗದುದಾಗದೆ ತಂತ್ರಕೆ ತಂತ್ರಗೈವುದು ನೀನು ಹಾಗೆ (ಇಂಚಾಪ. ೯೦-೩೭). [ ತಂತ್ರ + ಗೈ (<ಕೆಯ್₁) ]

**ತಂತ್ರಜ್ಞಾನ** (ನಾ). ಪ್ರಯೋಗ ಪರಿಜ್ಞಾನ ; ಶಾಸ್ತ್ರೀಯ ಜ್ಞಾನ: ವಿದೇಶಿ ವಿಮರ್ಶಕರು . . . ಭಾರತೀಯ ಕಲಾವಿದರಿಗೆ ತಂತ್ರಜ್ಞಾನವೇ ಇಲ್ಲವೆಂದು ತೆಗಳಿದ್ದಾರೆ (ಭಾರದ. ೫೪೦). [ ತಂತ್ರ + ಜ್ಞಾನ ]

**ತಂತ್ರನಿಯಂತ್ರಣ** (ನಾ). ಸೈನ್ಯವನ್ನು ನಿಯಂತ್ರಿಸುವುದು ; ಸೈನ್ಯಕ್ಕೆ ಮಾರ್ಗದರ್ಶನ ಮಾಡುವುದು : ತಂತ್ರನಿಯಂತ್ರಣಂ ಬಿನದಮೋಲಗ ಮಕ್ಕರಗೊಟ್ಟಿ ಕಾರ್ಯ ಸನ್ಮಂತ್ರಂ ... ತ್ರಿಜಗದ್ಗುರು ಪ್ರಣತಿಯೆಂಬಿವನಾಗಳುಮೊಂದೆ ಕೀಲೆ ದಲ್ ಜಂತ್ರದ ಪಾಪೆಯಂತೆಡನೊಡರ್ಚುವನಿಂದ್ರನುಮಾ ಪ್ರತೀಂದ್ರನುಮಂ (ಶಾಂತಿಪು. ೭-೧೧೧). [ ತಂತ್ರ + ನಿಯಂತ್ರಣ ]

**ತಂತ್ರಪಾಲ, ತಂತ್ರಪಾಳ** (ನಾ). ೧. ಸೈನ್ಯಾಧಿಕಾರಿ ; ಸೇನಾಪತಿ: ಪಡವಳ್ಳೆಚಣ ಅಡಪದ ರಾಯಂಣ ತಂತ್ರಪಾಲ ಕೇಸಿಯಣನಿಂತಿವರೊಳಗಾಗಿ ಸಾಸಿರ ಪರಿಗ್ರಹ ಸಹಿತವಿಂದ್ರಕೇಸಿದೇವರಸರ್ಗ್ಗೆ ದ್ರವ್ಯನಿವೇದನಂ ಮಾಡಿ (ಸೌಇಇ. XX, ೧೪೪-೫೫ ; 1166). **ತಂತ್ರಪಾಳ** : ೧. ತಂತ್ರಪಾಳ ಮಿಳ್ಳಯ್ಯ (ಎಇ. XV, ೭೫-೧೧ ; 1050) ; ಶ್ರೀಮತ್ತಂತ್ರಪಾಳ ಚಾವುಣ್ಣಮಯ್ಯಂ ಪ್ರಮುಖ ಪ್ರಧಾನರುಂ (ಸೌಇಇ. XX, ೩೪-೨೪ ; 1058); ಶ್ರೀಮತ್ ಹನ್ನಿರ್ವ್ವರ ಗಂಡ ದಾಸರಸನ ತಂತ್ರಪಾಳ ಹನ್ನಿರ್ವ್ವರು ಮಂನ್ನೆಯರ ತಂತ್ರಪಾಳರ ಗಂಡ ಮಸಣಯ್ಯನ ತಮ್ಮ ಬೊಪ್ಪಣ (ಎಕ. VII, ಹೊನ್ನಾಳಿ. ೪೭-೫ : 1130) : ಜಯಕೇಸಿ ದೇವರುಂ ತಂತ್ರಪಾಳ ಚಟ್ಟಿಮಯ್ಯನಾಯಕನುಂ (ಸೌಇಇ. XX, ೦೦೭-೪೨ ; 1138). ೨. ರಹಸ್ಯಗಳ ಪಾಲಕ : ತಂತ್ರಪಾಳ ಎಂಬ ಪದವನ್ನು ಸಂಪಾದಕರು "Secretary or gaurdian of secrets" ಎಂದು ಅನುವಾದಿಸುತ್ತಾರೆ. ಎಂದರೆ, ರಹಸ್ಯಗಳ ಪಾಲಕ ಎಂದು ಅವರ ಅಭಿಪ್ರಾಯವಾಗಿರುವಂತೆ ಕಾಣುತ್ತದೆ (ಕಶಾಅ. ೨೫೪). [ ಸಂ. ]

**ತಂತ್ರಪಾಳ** 'ತಂತ್ರಪಾಲ' ನೋ.

**ತಂತ್ರಪ್ರಯೋಗ** (ನಾ). ಇಂದ್ರಜಾಲದ ಪ್ರದರ್ಶನ; ಯಕ್ಷಿಣೀವಿದ್ಯೆಯ ಪ್ರಯೋಗ : ಇಂದ್ರಜಾಲದ ನೋಳ್ಪರನಿಬರಿಗಂ ದೃಢಾಚರಿದೋರ್ವುದದ ರೊಳಸಂದ ತಂತ್ರಪ್ರಯೋಗವೇತ್ತರಿಗಳ್ಪರೊಡದಿಹುದೇ (ಗಗಕಾ. ೧೭-೭೦). [ ತಂತ್ರ + ಪ್ರಯೋಗ ]

**ತಂತ್ರಲಿಪಿ** (ನಾ). ಸಾಂಕೇತಿಕ ಲಿಪಿ : ಸ್ವಾಮಿ ಶಂಕರಾನಂದ ಎಂಬುವರು ಇಲ್ಲಿನ ಲಿಪಿ ತಂತ್ರಲಿಪಿಯೆಂದೂ, ಅದು ಏಕಾಕ್ಷರಗಳಿಂದ ರಚಿತವಾಗಿದ್ದು ಗುಪ್ತಭಾಷೆಯಲ್ಲಿ ಬರೆದ ವೇದಗಳೆಂದೂ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದರು (ದ್ರಾವಿಪಿ. ೨೫). [ ತಂತ್ರ + ಲಿಪಿ ]

**ತಂತ್ರವೇದಿ** (ನಾ). ತಂತ್ರಗಳನ್ನು ತಿಳಿದವನು ; ವೈದ್ಯ : "ದೋಷಜ್ಞಂ ತಂತ್ರವೇದಿ" (ವಸ್ತುಕೋ. ೭೯-೯೩). [ ಸಂ. ತಂತ್ರವೇದಿನ್ ]

**ತಂತ್ರಶಾಸ್ತ್ರ** (ನಾ). ೧. ಆಗಮಶಾಸ್ತ್ರ : ಆಗಮಶಾಸ್ತ್ರವನ್ನು (ತಂತ್ರ ಪ್ರಧಾನವಾದುದರಿಂದ) "ತಂತ್ರಶಾಸ್ತ್ರ"ವೆಂದೂ ಪರ್ಯಾಯನಾಮದಿಂದ ಕರೆಯುತ್ತಾರೆ (ಭಾರದ. ೬೯). ೨. ಯಂತ್ರಕಲಾಶಾಸ್ತ್ರ : ತೀವ್ರಗತಿಯಲ್ಲಿ ಬೆಳೆಯತೊಡಗಿದ ತಂತ್ರಶಾಸ್ತ್ರ (Technology) ಜನರ ಜೀವನ ವಿಧಾನವನ್ನೇ ಕ್ರಾಂತಿಕಾರಿಯಾಗಿ ಬದಲಾಯಿಸಿದುದಲ್ಲದೆ ಅವರ ಮನೋಧರ್ಮವನ್ನೇ ಬದಲಾಯಿಸಿತು (ಶುಕ್ಲಾರ. ೩೩, ಪೀಠಿಕೆ). [ ತಂತ್ರ + ಶಾಸ್ತ್ರ ]

**ತಂತ್ರಶುದ್ಧಿ** (ನಾ). ಪ್ರಯೋಗದಲ್ಲಿರುವ ಶುದ್ಧತೆ; ವಿಧಾನದಲ್ಲಿ ದೋಷವಿಲ್ಲದಿರುವಿಕೆ: ಆ ಆಕ್ಷೇಪವು...(೪)ಸ್ವವಿರುದ್ಧವೆಂದೋ ಅಥವಾ (೫) ತಂತ್ರಶುದ್ಧಿ(Technical correctness)ಗೆ ವ್ಯತಿರಿಕ್ತವಾಗಿದೆಯೆಂದೋ ಇರುತ್ತದೆ (ಅರಿಕಾ. ೧೧೭). [ ತಂತ್ರ + ಶುದ್ಧಿ ]

**ತಂತ್ರಸಿದ್ಧಾಂತ** (ನಾ). ಪಾಂಚರಾತ್ರಾಗಮದಲ್ಲಿ ಪ್ರತಿಪಾದಿತವಾಗಿರುವ ನಾಲ್ಕು ವಿಧವಾದ ಸಿದ್ಧಾಂತಗಳಲ್ಲಿ ಒಂದು : ಪಾಂಚರಾತ್ರಾಗಮದಲ್ಲಿ –'ದಿವ್ಯಮಂತ್ರಸಿದ್ಧಾಂತ', 'ಆಗಮಸಿದ್ಧಾಂತ', 'ತಂತ್ರಸಿದ್ಧಾಂತ' . . . ಎಂದು ನಾಲ್ಕು ವಿಧ (ಭಾರದ. ೭೭). [ ತಂತ್ರ + ಸಿದ್ಧಾಂತ ]

**ತಂತ್ರಹಾಳ, ತಂತ್ರಾಳ** (ನಾ).=ತಂತ್ರಪಾಲ ೧ : ಹೆರ್ಮ್ಮನೃಪನ ನಚ್ಚಿನ ಜಯಸಂಸ್ಥಾನಕರ ಕಟ್ಟಿದಲಗದನಟಿಯಿರೆ ತಂತ್ರಹಾಳನಂ ತೊಂಡಮನ . . . ಅನ್ನೆನಿಸಿ ನೆಗಳ್ದ ತಂತ್ರಹಾಳ [ತೊಂ]ಡಮರಸಂಗನುಜಾತನಾಗಿಯುಂ (ಸೌಇಇ. XV, ೪೫-೦೮ ; 12ನೆಯ ಶತ). **ತಂತ್ರಾಳ** : ತುಳುವದ ಶಾಸನಗಳಲ್ಲಿ ಬರುವ ಅಧಿಕಾರಿಗಳು . . . ಮಹಾಪ್ರಭು, ಸೇನಾಪತಿ, ತಂತ್ರಾಳ, ತಂತ್ರಿನಾಯಕ (ತುಳುನಾ. ೨೭೦). [ <ಸಂ. ತಂತ್ರಪಾಲ ]

**ತಂತ್ರಹಾಳಿಕೆ** (ನಾ). ತಂತ್ರಪಾಲನ ಅಧಿಕಾರ,–ಹುದ್ದೆ : ಅನ್ತಱಿಪ್ಪರ ದಧ್ಯಕ್ಷಂ ಕುನ್ತಳಪತಿಯಿತ್ತ ಸುರಿಗೆವಿಡಿವಧಿಕಾರಂ ಸನ್ತತದ ತನ್ತ್ರಹಾಳಿಕೆ ಯಿನ್ನು [illegible] 1124). [ ತಂತ್ರಹಾಳ + –ಇಕೆ ]

**ತಂತ್ರಹೂಡು** (ಕ್ರಿ). ಸಂಚುಮಾಡು ; ಉಪಾಯಮಾಡು: ಮುದುಕಿಯ ಆಸ್ತಿಪಾಸ್ತಿಯೆಲ್ಲ ಪರಭಾರೆಯಾಗುವಂತೆ ತಂತ್ರಹೂಡಿದ್ದ ವಕೀಲ (ಪುನರು. ೩೯). [ ತಂತ್ರ + ಹೂಡು₁ (<ಪೂಡು) ]

**ತಂತ್ರಾಧ್ಯಕ್ಷ** (ನಾ). ದಳಪತಿ ; ದಂಡನಾಯಕ : ತಂತ್ರಾಧ್ಯಕ್ಷನಂ ಬರಿಸಿ ಬೆಸಸುವುದು ಮಾತಂ ವಿಜಯಪ್ರಯಾಣಭೇರಿಯಂ ಪೊಯ್ಸುದಾಗಳ್ (ಚಂದ್ರಪ್ರ. ೧೧-೧ ವ) ; ಸಮರಪ್ರಸ್ಥಾನಭೇರಿಯಂ ಪೊಡೆಯೆಸೆಂಬುದುಮವಂ ತಂತ್ರಾಧ್ಯಕ್ಷನಪ್ಪ ಮೇಘನಾದನಂ ಬರಿಸಿ ಬೆಸಸುವುದುಂ (ರಾಜಶೇ.೭-೧೦ ವ). [ ತಂತ್ರ + ಅಧ್ಯಕ್ಷ ]

**ತಂತ್ರಾಲಯ** (ನಾ). ತಂತ್ರದ ನೆಲೆ ; ಉಪಾಯದ ನೆಲೆ : ವಿಷಯ ಲಗ್ನಾನಂದದಂ ಬೇರ್ಪಡಿಸಲಾದ ತಂತ್ರಾಲಯ ತೀರ್ಣಭಯ ಯತಿ ಸಿದ್ಧ ಸಂಸ್ಕೃಷ್ಟ ದೇವಾಲಯ (ಮಲಿದೇ. ೨೭-೯). [ ತಂತ್ರ + ಆಲಯ ]

**ತಂತ್ರಾವಾಪ** (ನಾ). ೧. ತಂತ್ರಗಳನ್ನು ಹೂಡುವಿಕೆ, –ಪ್ರಯೋಗಿಸುವಿಕೆ. ೨. [ರಾಜನೀ] ರಾಜ್ಯಪಾಲನೆಯ ಮತ್ತು ರಾಷ್ಟ್ರರಕ್ಷಣೆಯ ಚಿಂತೆ ; ಸ್ವರಾಷ್ಟ್ರ ಮತ್ತು ಪರರಾಷ್ಟ್ರ ವಿಚಾರ : ಮುಕ್ತಿಸಾಮ್ರಾಜ್ಯ ದೊಳತಿಪ್ರಾಜ್ಯ ಸಂಜನಿತ ನಿಸ್ಸೃಹನನವರತಕಲ್ಯಾಣ ಪರಿವಿತದೊಳ್ ನಿರಂತರಂ ತಂತ್ರಾವಾಪ ಚಿಂತಾಂತರಾಯಪ್ರಾಯ ಸುಖಿಲವದೊಳೀ ಮಹೀತಳರಾಜ್ಯದೊಳ್ ನಿಱಿಸುವುದುಂ ಮದುವೆ ನಿಱಿಸುವುದು ಮೆನಗಶಕ್ಯಾನುಷ್ಠಾನಂ (ಆದಿಪು. ೯-೮ ವ). [ ತಂತ್ರ + ಆವಾಪ ]

**ತಂತ್ರಾಳ** 'ತಂತ್ರಹಾಳ' ನೋ.

**ತಂತ್ರಿ₁** (ನಾ). ೧. ತಂತ್ರಶಾಸ್ತ್ರವನ್ನು ಬಲ್ಲವನು ; ಆಗಮೋಕ್ತರೀತಿಯಲ್ಲಿ ಪೂಜಾವಿಧಿಯನ್ನು ನಡೆಸುವವನು: ಅವರು ಹಾಡುವ ಭೂತದ ಪಾಡ್ದನಗಳಲ್ಲಿ . . . ತಂತ್ರಿ, ಬ್ರಾಹ್ಮಣ, ಪುರೋಹಿತ, ಮೊದಲಾದವರು ಬರುತ್ತಾರೆ (ಜಾನಗೀ. ೫೪) ; ತಂತ್ರಿಯವರು ಕೂಡಾ ಹೇಳುತ್ತಾರೆ . . . ಆ ಕೊಳದ ಸುತ್ತಲೂ ಹದಿನಾರು ದೇವ್ವಗಳಿವೆ . . . ಎಂದು (ಪದ್ಮಸ. ೩೭). ೨. ಯುಕ್ತಿಯನ್ನು ಬಲ್ಲವನು ; ಉಪಾಯಗಾರ : ಮಂತ್ರಿ ಬಸವನೆ ಕೇಳು ತಂತ್ರಿಗಳ ಮಂತ್ರಗಳು ಜಂತ್ರದಲಿ ತಲೆಯ ಕೊಟ್ಟಂತೆ (ಕನ್ನಜಾ. ೨೩೦) ; ಅವನ ಮುಖಭಾವದಲ್ಲಿಯಾಗಲಿ ಅಥವಾ ಮಾತಿನಲ್ಲಿಯಾಗಲಿ ಅವನು ತಂತ್ರಿ ಎಂದು ಕಾಣುತ್ತಿರಲಿಲ್ಲ (ಮಲಿನಾ. ೧೫೯). [ ಸಂ. ತಂತ್ರಿನ್ ]

**ತಂತ್ರಿ₂** (ನಾ). ೧. ದಾರ ; ಎಳೆ ; ಸೂತ್ರ. ೨. ತಂತಿ ; ವೀಣೆ ಮೊದಲಾದ ವಾದ್ಯಗಳ ತಂತಿ : ನಯಮುಳವಟ್ಟ ಜೀವೆಯುಳವಟ್ಟ ಧರೋತ್ತರ ತಂತ್ರಮಪ್ಪ ತಂತ್ರಿಯೊಳನುವಾದಿಯಾಗೆ ಪೊಸ ಮೂರ್ಛನೆ ರಂಜಿಸೆ ಮಂದ್ರ ತಾರ ಗೀತಿಯು ಶ್ರವಣೋಪ್ಪೆ . . . ವೀಣೆಯಂ ಮಿಡಿದಳಳ್ಕೆರ್ದೆಯಂ ಮಿಡಿದಳ್ ಪ್ರಗೀತರಾ (ಶಾಂತಿಪು. ೯-೧೦೭) ; ಸೇರಿಸಿ ತಂತ್ರಿಯಂ ಸಂಚಿನಿಂ ಮೇಚನು ಬಾಜಿಸುತಿಸೆಯೆ ಭಾವೆಯರು (ಜೀವಂಧ. ೨೦-೧೩) ; ಗಗನ ವೀಣಾತಂತ್ರಿಯಂ ಮಿಡಿದ ತೆರನಾಗಲ್ (ಶ್ರೀರಾಮಾ. ೧-೧೭) : ಸಹಸ್ರತಂತ್ರೀನಿಃಸ್ವನದಂತೆ . . . ಗುಡುಗಾಡುತ್ತಿದೆ ಗಗನದ ತುಂಬ ಪ್ರಣವಪ್ರವೀಣನ ನಾದಸ್ತಂಭ (ಅರಳು. ೭೭-೧). ೩. ಒಂದು ತಂತೀವಾದ್ಯ ; ವೀಣೆ: ವಾಣಿ, ಓ ಪ್ರಾಣವೀಣಾಪಾಣಿ, ಕವಿಯೆರ್ದೆಯ ರಸರಾಣಿ, ಮಿಡಿಯೆನ್ನಾತ್ಮತಂತ್ರಿಯಂ (ಶ್ರೀರಾಮಾ. ೧೪೨-೨). [ ಸಂ. ತಂತ್ರೀ ]

**ತಂತ್ರಿಕೆ** (ನಾ). ಒಂದು ಬಗೆಯ ಸಸ್ಯ ; ಅಮೃತಬಳ್ಳಿ : "ವತ್ಸಾದನೀ, ಛಿನ್ನರುಹಾ, ಗುಡೂಚೀ, ತಂತ್ರಿಕಾ . . . ಮಧುಪರ್ಣೀ – ೯ ಅಮೃತ ಬಳ್ಳೀ ಹೆಸರು" (ಸಿದ್ಧಾಂತಿ. ೧೧೩). [ ಸಂ. ತಂತ್ರಿಕಾ ]

**ತಂತ್ರಿಗ** (ನಾ). ೧. ಪಿತೂರಿ ಮಾಡುವವನು. ೨. ರಾಜತಂತ್ರವನ್ನು ಬಲ್ಲವನು : ನಾನು ಪಾಲಗಕೆ ತಪ್ಪಿದದರಿಂದಿನ್ನು ತಂತ್ರಿಗನಪ್ಪುದದರಿಂ ರಾಜಗಪ್ರತಿಯಪ್ಪರಾರೇಗೈದೀಾಗದು ಎನಲು (ಬಿಜ್ಜಳ. ––-೮). [ ತಂತ್ರ + –ಇಗ ]

**ತಂತ್ರೋದಿತ** (ಗುಂ). ತಂತ್ರದಲ್ಲಿ ಹೇಳಿರುವ ; ನೀತಿಶಾಸ್ತ್ರೋಕ್ತವಾದ : ಸತ್ಪ್ರಜಾಪಾಲನೆಯ ನೆಗಳ್ಪುಪಾಯಂಗಳಂ ಸಾರ್ದು ಶಕ್ತಿಸ್ಫುರಣಂ ಕೈಗಣ್ಮೆ ತಂತ್ರೋದಿತ ಗುಣಗಣಮುಂ ತಾಳ್ದಮೋಘಂ ಪ್ರಭುತ್ವಂ ದೊರೆ ಕೊಂಡೆಮ್ಮಾಳ್ದನಾದಲ್ಲಮವಿಭು ವಿರತಿಶ್ರೀಯುಮುಂ ಮಾಳ್ಪುದು (ರಾಜಶೇ. ೧-೧೩). [ ತಂತ್ರ + ಉದಿತ₂ ]

**ತಂಥಳಿಸು** 'ತಟತಟಿಸು' ನೋ.

**ತಂದನತಾನ** 'ತಂದಾನತಾನ' ನೋ.

**ತಂದನಾನ** 'ತಂದಾನತಾನ' ನೋ.

**ತಂದನೋತಾನಾನಿ** 'ತಂದಾನತಾನ' ನೋ.

**ತಂದನ್ನತಾ** 'ತಂದಾನತಾನ' ನೋ.

**ತಂದರಿ, ತಂದಿರಿ, ತಂದುರಿ** (ನಾ). ೧. ತೂಕಡಿಕೆ; ಜೊಂಪು. ೨. ದಣಿವು; ಬಳಲಿಕೆ : ಆಯಾಸ : ತಂದ್ರಿ–ತಂದರಿ. ತಂದಿರಿ. ತಂದುರಿ (ಶಬ್ದಾನು. ೧೪೭ ವ್ಯಾಖ್ಯಾ). **ತಂದರಿ :** ಮೇಲಿನ ಪ್ರಯೋಗವನ್ನು ನೋಡಿ. **ತಂದುರಿ :** ಮೇಲಿನ ಪ್ರಯೋಗವನ್ನು ನೋಡಿ.

[ <ಸಂ. ತಂದ್ರಿ. ತಂದ್ರೀ ]

**ತಂದಲ್, ತಂದಲು$_1$** (ನಾ). ೧. (ನೀರಿನ) ಹನಿ: ತುಂತುರು : "ಸೀವರ ಮೆಂದುಂ ತಂದಲೆಂದುಂ ಶೀಕರಂ" (ಕಶಸಾ. ೬–೧೪೫) : "ಸೀವರಂ ತಂದಲೆನೆ ಜಲಕಣಂ" (ಕಬ್ಬಿಕ್ಕೈ. ೧೨) : ಗಲ್ಗಲನೊಕ್ಕ ಪಾಲ ತಂದಲ್ಗಳಿನಾವಗಂ ಮಡಿಯ ನೀರ್ ಕಡುವೆಳ್ಪಿನೊಳೊಂದೆ (ಲೀಲಾವ. ೫–೫೭) : ಪಱಿದಾಗಳ್ ಪನಿಪುಲ್ಲ ಬಿಂದುಗಳ ತಂದಲ್ . . . ನೆಱೆ ಸಾರುತ್ತಿರೆ (ಕುಸುಮಾ. ೭–೧೩) : ಚಂದ್ರಮರೀಚಿಯಂತೆ ತನಿಪಾವಿನ ಪಣ್ಗಳ ತಂದಲಂತೆ . . . ಸೋಮ ರಾಜೇಂದ್ರನ ಕಬ್ಬದಿಂಪು (ಉದ್ಭಟ. ೧–೩೨); ತನ್ನ ಕಂಬನಿಯ ತಂದಲಿಂದತಿ ಸ್ನೇಹಲತೆಯಂ ಬೆಳೆಯಿಸಿದಳ್ (ಅನಂಪು. ೮–೨೭ ವ) : ಮುಗಿಲ ಪೊಱೆಯಿಂ ಸುರಿವ ಮುತ್ತುಗಳಂ ಕಾರ ಮುಂಬನಿಯು ತಂದಲೆಂದು ಬಂದು ನುಂಗ ಲಂಗೈಸುವ ಚಾದಗೆಯ ಮಱಿಗಳುಮಂ (ಕಬ್ಬಿಕಾ. ೨೩೪) : ತನಿರಸದ ತಂದಲ್ ಸುರಿವರನೇಱಿಲ ಗೊಂಚಲಂ ಕಟ್ಟಿದಿರೊಳ್ ಕಂಡು (ರಾಮಾಶ್ವ. ೫೪–೬). ೨. ಬಿಟ್ಟೂಬಿಡದೆ ಸುರಿಯುವ ಮಳೆ ; ಜಡಿಮಳೆ : "ಸೋನೆ ಯೊಳ್ ತಂದಲಕ್ಕುಂ" (ಕರ್ಣಾನಿ. ೫೧) ; ಸೋನೆಯಿಂ ಸರಿಗಳಿಂ ತಂದಲ್ಗ ಳಿಂದಂದು ಭೂತಳಮೇಕಾರ್ಣವಮಾಗೆ (ಆದಿಪು. ೧೩–೫೯) : ಎಳೆನೀರ ತಂದಲಂ ಕಱಿವೆಳೆದೆಂಗು (ಎಕ. XI, ದಾವಣ. ೩೫–೩೭; ಸು. 1160) ; ತಂದಲ್ ಸೋನೆ ನಟ್ಟ ಬಡಪಮೆನಲ್ಸುರ್ಧಿದುವು ಬಿಡದೆ ಮಱಿಗಳಿರುಳುಂ ಪಗಲುಂ (ಜಗವಿ. ४–೩೨) : ಉತ್ತಮವನಂ ರಾಮಣೀಯಕ ತರುಗಳಿಂ . . . ಜೇನ್ನೆಯ್ಯ ತಂದಲ್ಗಳಿಂ (ವೀಶೈಪು. ೩–೯–೭). 'ಸೋನೆದಂದಲ್' ಪರಾ. **ತಂದಲು$_1$:** ೧. ತಂಬೆಲರ ಮೊಗಸಿರಿಯ ತಂದಲಿನ ಮೈದೊಡವು . . . ಕಂಗೊಳಿಪಂತೆ ಮಲ್ಲಿಗೆಗಳು (ವೆಂಕಾರಾ. ೧–೪–೧೪). ೨. "ಮಳೆ, ಸರಿ, ಸರವು . . . ಒದ್ದೆ, ತಂದಲು, ತುಂತುರು" (ಕಂನುಹು. ೮೯).

**ತಂದಲು$_1$** 'ತಂದಲ್' ನೋ.

**ತಂದಲು$_2$** (ನಾ). ಸೇವಕ ; ದಾಸ (?) : ಮಾರಹರ ನಿಮ್ಮ ಪರಿಚಾರಕರ ದಾಸಿಯರ ತಂದಲೆನಗಿನಿತುಚಿತವೇ (ಕೊಟ್ಟೂಬ. ೧–೭೦). 'ತಂಡಾಲಯ' ಪರಾ. [ ? ]

**ತಂದವೂರ್** (ನಾ). ಒಂದು ಊರಿನ ಹೆಸರು : ಬೆಳ್ಗುಹೆಯೆಟ್ಟತ್ತೆಡೆ ನಾಡೆಟ್ಟತ್ತು ತಂದವೂರ ಪನ್ನೆರಡು ಗೆದೆಯ ಪನ್ನೆರಡು(ಎಕ. VIII, ಸೊರಬ. ४೭೭–೦೩ : 991). [ ತಂದ ? + ಊರ್ ]

**ತಂದಸಿ** 'ತಂಡಸು' ನೋ.

**ತಂದಾನತಾನ, ತಂದನತಾನ, ತನಾನಾನ, ತಂದನೋತಾನಾನಿ, ತಂದನ್ನತಾ, ತಂದಾನತಾನಾನ, ತಾಂದನಿತಾನೊ** (ನಾ). ಜಾನಪದ ಹಾಡುಗಳಲ್ಲಿ ಬರುವ ಒಂದು ಪಲ್ಲವಿ: "ದಂರುಗವುರಗಿಯರ ಸೊಲ್ಲು" (ಜಾನಕೋ. ೬४). **ತಂದನತಾನ :** (+). **ತಂದನಾನ :** (+). **ತಂದನೋತಾನಾನಿ :** ತಂದನೋತಾನಾನಿ ತಂದನೋತಾನಾನಿ ತಾನು ತಂದನು ತಂದೆ, ನಾನಿ ತಂದನುತಾನಿ ತಾನುತಂದನು ತಂದೆ ಶಿವ್ನೀಗೆ ಶರಣೊ (ಹುಟ್ಟಹ. ೩೦). **ತಂದನ್ನತಾ :** ತಂದನ್ನತಾಯೆಂದು ಕೈಲಿ ಕಿನ್ನರಿ ಧರಿಸಿ ಅಂದವಾಗಿ ಶ್ರೀಹರಿಯ ಮುಂದೆ ಕುಣಿವ ಚರಣ (ವಿದಾಕ್ಕೈ. ೨೭-೧). **ತಂದಾನತಾನಾನ :** (+). **ತಾಂದನಿತಾನೊ :** ಕಿನ್ನೂಡಿ ಮೇಲೆ ಕಿರುಗೆಜ್ಜೆ–ತಾಂದನಿತಾನೋ (ನಾಪದ. ೨೦).

[ ದೇ.॥ ತುಳು. ತಂದನ; ತೆಲು. ತಂದನತಾನ, ತಂದಾನತಾನ ]

**ತಂದಾನತಾನಾನ** 'ತಂದಾನತಾನ' ನೋ.

**ತಂದಿರಿ** 'ತಂದರಿ' ನೋ.

**ತಂದುರಿ** 'ತಂದರಿ' ನೋ.

**ತಂದೆ** (ನಾ). ೧. ಅಪ್ಪ ; ಜನಕ : ತನ್ದೆಯ ತಾಯ್ವಿರಾ ಸನ್ನಾನಮ(೦) ನುಳಿದು ಬಿಸುಟೋಂ (ಸಾಇಇ. XI-1, ೧೧–೫ ; 865) ; ತಾಯ್ಗಂ ತಂದೆಗ ಮೆಲ್ಲಾ ನಂಟರ್ಗೆಯುತ್ಸಾಹಮುಂ ಸುಖಮುಂ ವಿಭವಮುಮಂ ಪಡೆವುದ ಱಿಂದಮಾ ಕೂಸಿಂಗೆ . . . ಭದ್ರಬಾಹುವೆಂಬ ಪೆಸರನೆಲ್ಲರುಂ ನೆರೆ ದಿಟ್ಟೊಡೆ (ವಡ್ಡಾರಾ. ೭೩–೧೭) ; ತಂದೆಯ ರೂಪೆ ತಂದೆಯ ವಿಳಾಸಮೆ ತಂದೆಯ ಚೆಲ್ವೆ . . . ತನ್ನೊಳಮರ್ಕೆವೆತ್ತುದು (ಆದಿಪು. ೮–४३) ; ಹಿತಮ ತೋಱುವನಾತ್ಮಬಂಧು ಪೊರೆವಾತಂ ತಂದೆ (ಸೋಮೇಶ. ೮). ೨. ಹಿರಿಯ ರನ್ನು ಕುರಿತು ಭಕ್ತಿ ಗೌರವಗಳಿಂದ ಹೇಳುವ ಮಾತು: ತಂದೆ ಚಿತ್ತೈಸು ವುದು ಕಿಂಕರನ ಬಿನ್ನಪಂ (ನಂಬಿರ. ೧–೭೬) ; ಎಮ್ಮಂತಪ್ಪ ಪಾಪಿಗಳಿಗೊಗೆ ವನೇ ತಂದೆಯೆನಲ್ (ಸಿದ್ಧರಾ. ೧–೨೯) ; ಗಂಗಾವರಕುಮಾರ ದ್ರೋಣ ಕೃಪರೀ ಸೆಱಿಗ ಬಿಡಿಸಿರೆ ತಂದೆಗಳಿರೆಂದೊಱಲಿದಳು ತರಳೆ (ಕುವ್ಯಾಸ. ೧४–೧೦४). ೩. ಕಿರಿಯರನ್ನು ಕುರಿತು ವಾತ್ಸಲ್ಯದಿಂದ ಹೇಳುವ ಮಾತು : ಬಾರೆಲೆ ತಂದೆ ಬಾರರಸ ಬಾ ಪೊರೆವಾಳ್ದನೆ (ಕಾದಂಪೂ. ३६೧): ಬಾಲ ಲಿಂಗವೆ ಬಾರ ತಂದೆ (ಬಸಪು. ४೭–೨೯) : ತಂದೆ ನಿನಗೆನ್ನಲ್ಲಿ ಋಣಸಂಬಂಧ ಸವೆದುದೆ ಶಿವಶಿವಾ ತಾ ಮಂದಭಾಗ್ಯಂಗಣುಗ ದಕ್ಕುವನಲ್ಲ ಎನಗೆಂದ (ಕುವ್ಯಾದ್ರೋ. ೮–೨೧). ४. ಹೆಸರಿನ ಮುಂದೆ ಗೌರವಸೂಚಕವಾಗಿ ಬಳಸುವ ಶಬ್ದ. ಉದಾ : ಅಱುವಿನ ಮಾರಿತಂದೆ.

**ತಂದೆವಿರ್** (ಬಹುವ) : ವಿರ್ಗೆ–ತಂದೆವಿರ್. ತಾಯ್ವಿರ್, ಸೊಸೆವಿರ್ (ಶಮುದ. ೯೭ ಪ್ರಯೋ). **ತಂದೆಯ ತಂದೆ** = ೧. ಅಜ್ಜ ; ತಾತ: ಪಿತಾಮಹ : "ತಾತ – ತಂದೆಯ ತಂದೆಗೂ . . . ಪಿತಾಮಹ ಎಂಬ ಹೆಸರು" (ನಾನಾರ. ೨೩ ಟೀಕೆ). ೨. ಬ್ರಹ್ಮ : "ಅಂಚೆದೇರಂ . . . ತಂದೆಯ ತಂದೆ, ಅರಲಿಚಂ, ನಾಲ್ಮೊಗಂ, ತಾವರೆವಸೆಯಂ – ಈ ೮ ಬ್ರಹ್ಮಂಗೆ ಪೆಸರ್" (ಕಶಸಾ. ४೮–೧೫) : "ಪೊಂಬೊಡೆಯಂ . . . ಬೊಮ್ಮ ತಂದೆಯ ತಂದೆ ಮಿಸುಪ ತಾವರೆಗಂದನು ತಾಂ ಬ್ರಹ್ಮಗೆಸೆವ ನಾಮಂ" (ಕಬ್ಬಿಕ್ಕೈ. ೯). **ತಂದೆಯ ತಂದೆಯಿಲ್ಲದಂ** = ತಾತನಿಲ್ಲದವನು ; ವಿನಾಯಕ : "ಕರಿ ಮೊಗಂ, ಇಲಿದೇರಂ . . . ತಂದೆಯ ತಂದೆಯಿಲ್ಲದವಂ–ಈ ೭ ವಿನಾಯಕಂಗೆ ಪೆಸರ್" (ಕಶಸಾ. ೧–४) : "ಬಿಜ್ಜೆವಳನೆಡರ್ಗೇಡಿ ಮೇಣೆಲರುಣಿವಸಿಱನು ತಂದೆಯ ತಂದೆಯಿಲ್ಲದಂ[ಪಾಠಾಂ. ತಂದೆಯಯ್ಯನಿಲ್ಲದವಂ] . . . ಎನೆ ವಿನಾಯಕನ ನಾಮಂ" (ಕಬ್ಬಿಕ್ಕೈ. ೫).

[ ದೇ.॥ ತಮಿ. ತನ್ತೈ; ಮಲ. ತನ್ದ; ತೆಲು. ತಂಡ್ರಿ. ತಂಡಿರಿ; [illegible] ]

**ತಂದ್ರ** (ಗು). ೧. ದಣಿದ ; ಬಳಲಿದ. ೨. ಸೋಮಾರಿಯಾದ ; ಮೈಗಳ್ಳತನದಿಂದ ಕೂಡಿದ. (ನಾ) . ೩. ಮೈಗಳ್ಳತನ ; ಸೋಮಾರಿತನ; ಜಡತೆ : ಮಹೇಂದ್ರಂ ದಧೀಚಿಯೆಡೆಗಂ ತಂದ್ರಮನುಳಿದೆಯ್ದಿ ವಂದಿಸುತ್ತ ಬಳಿಕಂ (ಹಾಲಾಸ್ಯ. ೧–೨–४೨). [ ಸಂ. ]

**ತಂದ್ರತೆ** (ನಾ) . ೧. ಬಳಲಿಕೆ; ದಣಿವು. ೨. ಆಲಸ್ಯ ; ಜಡತೆ ; ಮಾಂದ್ಯ : ತಳೆದ ಸುಮನೋದಾಮಂ ನೀರೋಡಿ ಬಾಡಿದುದಾಗಳಾಗುಳಿಯನೊಳ ಕೆಯ್ದುತ್ತಾಸ್ಯಾಂಭೋರುಹಂ ನಿಜದೇಹದುಜ್ಜ್ವಳಿಕೆ ಮಸುಳ್ದೈತಂದು ದೊಂದು ತಂದ್ರತೆ ಚಿತ್ತಮಂ ಬಳಸಿದುದು (ಚಂದ್ರಪು. ४–೭೭).

[ ಸಂ. ತಂದ್ರತಾ ]

**ತಂದ್ರಾವಸ್ಥೆ** (ನಾ). ಸೋಮಾರಿತನ ; ಜಡತೆ : ಅತ್ತ ದೇಶವೂ ಮೂಕ–ಮೂಢ – ತಂದ್ರಾವಸ್ಥೆಯಿಂದ ಎಚ್ಚತ್ತು . . . ತನ್ನ ಭಾವನೆಗಳನ್ನು ವ್ಯಕ್ತಗೊಳಿಸಲು ತೊಡಗಿತು (ಮಹಾಯೋ. ೮೭). [ ತಂದ್ರ + ಅವಸ್ಥೆ ]

**ತಂದ್ರಾಸಿ, ತಂಡರಸಿ** (ನಾ). ಒಂದು ಬಗೆಯ ಗಿಡ: ತಂದ್ರಾಸಿ, ತಂಡರಸಿ, ತನಸಿಮೆಳೆ (ಮೈಸಿಗಿ. ೪೧–೮೧೭): ಸಂಕೀರ್ಣ: . . . ಹುರಗಲು, ಕಂಗೊಂದಿ, ತಂದ್ರಾಸಿ, ಮುಕ್ಕರಿವೆ (ನಮ್ಮನು. ೨೩೪). **ತಂಡರಸಿ** : ಮೇಲಿನ 'ಮೈಸಿಗಿ' ಪ್ರಯೋಗವನ್ನು ನೋಡಿ. [ ? ]

**ತಂದ್ರಿ** (ನಾ). ೧. ಆಲಸ್ಯ ; ನಿರುತ್ಸಾಹ ; ಜಡತೆ : ಸಂದ್ಯಶ್ಯ ವಾತ್ಮವಾತ್ಮಕೆ ಬೇರೆ ಕರಣದಿಂ ತಂದ್ರಿ ಬಿಡೆ ದೊರೆವುದದು (ಮಂಕುಕ. ೬೯೩). ೨. ನಿದ್ದೆಯ ಮಂಪರು ; ಜೊಂಪು : ಲಕ್ಷ್ಮಣನನೆಳ್ಪಿಸಿದನಾತನುಂ ತಂದ್ರಿಯುಂ ಬಿಟ್ಟೇಳಲನಿಬರುಂ ತೊರೆಯ ಶಿವಸಲಿಲದೊಳ್ ಮೊಗಂ ದೊಳೆದು ಮುಂಬರಿದರ್ (ಶ್ರೀರಾಮಾ. ೧೯೯–೪೦೦): ಓದು ಓದುತ್ತಿರು ವಾಗಲೇ ನಿದ್ರೆಯ ತಂದ್ರಿ ಕಣ್ಣಿಗೆ ಸೋಂಕಿಹೋಗುತ್ತಿತ್ತು (ಕಮನಿ. ೧೧೧). ೩. ಗುಂಗು; ತಲ್ಲೀನತೆ: ಬಾಬು ವಿಚಾರತಂದ್ರಿಯೊಳಗಿಂದ ಹೊರಬಿದ್ದು . . . ನೋಡಿದನು (ರಕ್ತಧ. ೧೩೦) ; ಮಧುಕರನು ತಂದ್ರಿಯಲ್ಲಿಯೇ ಕುಳಿತಿದ್ದನು (ಕೃತಕ್ಕ. ೧೧೧). [ ಸಂ. ]

**ತಂದ್ರಿತ** (ನಾ). ಮಗ್ನನಾದವನು; ತಲ್ಲೀನನಾದವನು: ನೀವೂ ವಿಚಾರದಲ್ಲಿ ತಂದ್ರಿತರಾಗದೆ ಇರಲಾರಿರಿ (ನೀರಸ. ೮). [ ಸಂ. ]

**ತಂದ್ರೀಭೂತ** (ಗು). ಜಡವಾದ; ಮಂದವಾದ; ಚಟುವಟಿಕೆಯಿಲ್ಲದ : ಭರತಂ ವಿಷಾದಭರ ತಂದ್ರೀಭೂತಚೇತಸನಾಗಿರ್ಪುದುಂ (ಪಂರಾಮಾ. ೬–೧೦೩ ವ). [ ಸಂ. ]

**ತಂದ್ರೆ** (ನಾ). ೧. ಆಲಸ್ಯ ; ಜಡತೆ : ಸನ್ನಿಪಾತಜ್ವರಲಕ್ಷಣಂ ತಂದ್ರೆ, ನಿದ್ರಾಭಂಗ . . . ಗಂಟಲನೋವು (ಸಕವ್ಯ. ೯೭). ೨. ಮಗ್ನತೆ ; ಗುಂಗು: ಈ ತಂದ್ರೆಯು ಅವರನ್ನು ಮರುಳುಗೊಳಿಸಿತು (ಮಾವಿತೋ. ೯೩). [ ಸಂ. ತಂದ್ರಾ ]

**ತಂಪಗಿ** (ಕ್ರಿ). ತಂಪು ಆವರಿಸು,–ವ್ಯಾಪಿಸು : ತಿಳಿಗೊಳನ ತಂಪಗಿವ ತೆಕ್ಕೆಯು ತೊಳಲಿಕೆಯ ತಾವರೆಯ ತನಿಪರಿಮಳದ ವಿಸರದ ಹಸರದಲಿ ತೀಡಿದುದು ತಂಗಾಳಿ (ತೊರರಾ. ೨–೭–೩). [ತಂಪು$_2$(<ತಣ್ಪು$_2$)+ಅಗಿ$_1$]

**ತಂಪಿಗ** (ನಾ). ತಂಪನ್ನು ಉಂಟುಮಾಡುವವನು ; ಹಿತವನ್ನುಂಟು ಮಾಡುವವನು : ನೆಲೆವೊಲೆಗಳಂ ತಡವುತೊತ್ತೊ ತಳಿರ್ಗೈಯ್ಯ ತಂಪಿಗ ವಿರಹಮುಂ ತವಿಸಿ ನೆರೆಯೊ ಹದಗಾಜಿ (ಚಿಬಪು. ೧೯–೩೭).
[ ತಂಪು$_2$ (<ತಣ್ಪು$_2$) + – ಇಗ ]

**ತಂಪಿಡಿ** 'ತಣ್ಪಿಡಿ' ನೋ.

**ತಂಪಿಸು** 'ತಣ್ಪಿಸು' ನೋ.

**ತಂಪು$_1$** (ಕ್ರಿ). ೧. ಶಾಖವನ್ನು ಕಳೆದುಕೊಳ್ಳು; ತಣ್ಣಗಾಗು : ಬಿಸಿಲು ತಂಪುವವರೆಗೆ ಹೊರಗೆ ಹೋಗಬೇಡ (ರೂಢಿ). ೨. (ದುಃಖ ಮೊದ ಲಾದ ಭಾವನೆಗಳ)ಆವೇಗ ಕಡಮೆಯಾಗು : ಮಂದಿ ಸುಳಿಯ ದೊಂದೆ ಗುಡಿಲು ; ತೋಪು, ನೆರೆಯೊಳು; ನೆರಳು ಸಾವತನಕ ನನ್ನ ನೋವು ತಂಪಲು (ಇಂಗೀತ. ೯೫–೧೪). [ <ತಂಪು$_2$ ]

**ತಂಪು$_2$** 'ತಣ್ಪು$_2$' ನೋ.

**ತಂಪುಕನ್ನಡಕ** (ನಾ). ಬಿಸಿಲಿನ ಚುರುಕು ಕಣ್ಣುಗಳಿಗೆ ತಗಲದಂತೆ ತಂಪಾಗಿಡುವ ಕನ್ನಡಕ : ಕಣ್ಣಿಗೆ ಬಿಸಿಲಿನ ತಂಪುಕನ್ನಡಕವನ್ನು ಹಾಕಿದ್ದರಿಂದಂತೂ ಯಾರಿಗೂ ನನ್ನ ಗುರುತು ಹತ್ತಲಿಲ್ಲ (ಮೀದಿಮ. ೨೧೭).
[ ತಂಪು$_2$ (<ತಣ್ಪು$_2$) + ಕನ್ನಡಕ$_2$ ]

**ತಂಪುಗೈ** 'ತಣ್ಪುಗೆಯ್' ನೋ.

**ತಂಪುಗೊಳ್** (ಕ್ರಿ). ತಾಪವನ್ನು ಆರಿಸಿಕೊಳ್ಳು; ತಣ್ಣಗೆ ಮಾಡಿಕೊಳ್ಳು: ಹರನುರಿಗಣ್ಣಿಂದೆ ಬೆಂದ ಸಂತಾಪ ಪೀವರಕುಚಾನ್ವಿತೆಯರ ತಾಪ ಸ್ಮರ ನಿನ್ನ ಮೆಯ್ಯೊಳಗಿದೆ ತಂಪುಗೊಳ್ಳೆಂದು ತರಳೆ ನೂಂಕಿದಳು ತಣ್ಗೊಳದೆ (ಮೋಹತ. ೦೪–೭೪). [ ತಂಪು$_2$ (<ತಣ್ಪು$_2$) + ಕೊಳ್$_1$ ]

**ತಂಪುತೀಡು** (ಕ್ರಿ). ತಣ್ಣಗೆ ಬೀಸು; ತಂಪಾಗಿ ಸುಳಿ: ಇಂದಿರನ ದೆಸೆಗೆಂಪು ಮೂಡೆ ಕತ್ತಲೆಯೋಡೆ ಮಂದಾನಿಲಂ ತಂಪುತೀಡೆ (ಚಿಬಪು. ४–೭).
[ ತಂಪು$_2$ (<ತಣ್ಪು$_2$) + ತೀಡು$_1$ ]

**ತಂಪುವಡೆ** 'ತಣ್ಪುವಡೆ' ನೋ.

**ತಂಪುವೆಟ್ಟ** (ನಾ). ಹಿಮವತ್ಪರ್ವತ ; ಹಿಮಾಲಯ : ತಂಪುವೆಟ್ಟದ ಬಡಗಭಾಗದೊಳಗೊಪ್ಪುವುದು ಕಿಂಪುರುಷವರ್ಷಂ (ಚಿಬಪು. ೧೫–೧೭).
[ತಂಪು$_2$ (<ತಣ್ಪು$_2$) + ಬೆಟ್ಟ$_1$ (<ಬೆಟ್ಟು$_2$) ]

**ತಂಪುವೇಱು** 'ತಣ್ಪುವೇಱು' ನೋ.

**ತಂಪುಹೊತ್ತು** (ನಾ). = ತಂಪೊಟ್ಟು : ಎಂಥ ಪುಣ್ಯಾತ್ಮ ! ಆತನನ್ನು ತಂಪುಹೊತ್ತಿನಲ್ಲಿ ನೆನೆಯಬೇಕು (ರೂಢಿ).
[ ತಂಪು$_2$ (<ತಣ್ಪು$_2$) + ಪೊತ್ತು$_2$ (<ಪೊಟ್ಟು) ]

**ತಂಪುಳಿ** (ನಾ). "ಕಾಯಿಸದ ಕಬ್ಬಿಣಕ್ಕೆ ಆಕಾರ ಕೊಡಲು ಉಪ ಯೋಗಿಸುವ ಉಕ್ಕಿನ ಅಥವಾ ಕಬ್ಬಿಣದ ಚಾಣ : ತಂಪುಳಿ" (Cold-chisel. ಇಂಕಿನಿ.). [ ತಂಪು$_2$ (<ತಣ್ಪು$_2$) + ಉಳಿ$_5$ ]

**ತಂಪೆರೆ** 'ತಣ್ಪೆಱೆ' ನೋ.

**ತಂಪೆಸೆ** (ಕ್ರಿ).ತಂಪಾಗಿ ಶೋಭಿಸು,–ಕಂಗೊಳಿಸು: ತಂಪೆಸೆವ ತಣ್ಣೆಲ ತಾಣಂ (ನವಮೋ. ४–೨೨). [ ತಂಪು$_2$ (<ತಣ್ಪು$_2$) + ಎಸೆ$_2$ ]

**ತಂಪೇರು** 'ತಣ್ಪೇಱು' ನೋ.

**ತಂಪೇಱು** 'ತಣ್ಪೇಱು' ನೋ.

**ತಂಪೊಟ್ಟು** (ನಾ). ತಂಪಾದ ಹೊತ್ತು; ಸಂಜೆಯ ಹೊತ್ತು; ಸಾಯಂ ಕಾಲ: ಈ ಪೊಟ್ಟು ತಂಪೊಟ್ಟು ಪೂವಿನ ಪೊಟ್ಟೆಂಬಿನಮಾಯ್ತು ಧಾರಿಣಿಗೆ ಭಾಸ್ವನ್ಮಂಡಲಂ ಕುಂಡಲಂ (ಸೂಕ್ತಿಸು. ೮–೭).
[ ತಂ$_1$ (<ತಣ್$_2$) + ಪೊಟ್ಟು ]

**ತಂಬಟ, ತಂಬಟೆ, ತಂಬಟ್ಟ, ತಪಟೆ, ತಪ್ಪಟ, ತಪ್ಪಟೆ, ತಬಟೆ, ತಮಟೆ, ತಮ್ಮಟ$_1$, ತಮ್ಮಟೆ, ತಮ್ಮಟ್ಟೆ** (ನಾ). ಒಂದು ಬಗೆಯ ಚಪ್ಪಟೆ ಯಾದ ಚರ್ಮವಾದ್ಯ ; ಹಲಗೆ: ವಿಳ್ಳಿಪ ಪಟಯಿಗೆ ಸೂಳೈಪ ತಂಬ [ಪಾಠಾಂ. ಮೃಟಂ (ವರ್ಧಪು. ೮–೫೦) : ಬೀಸುವ ಚಾಮರದ ಪೊಯ್ಮ ತಂಬಟದ . . . ಸರ್ವಸಂಭ್ರಮದ ನಡುವೆ ಸಕಲ ಜನದಾನಂದರಸಂ ಮಡುಗಟ್ಟೆ (ಸಂಬಿರ. ೮–೫೫) ; ತಾಟಿಸುವ ತಂಬಟದ . . . ಕಾಳೆಯ ಬಲ್ಲುಲಿಯ ಸಡಗರಮೆಲ್ಲಾ ದೆಸೆಗಳಂ ಕಿವುಂಡುವಡಿಸೆ (ಕಬ್ಬಿಕಾ. ೨೫೦) ; ತುಡುಕಿದವು ತಂಬಟದ ದನಿ ಜಗದಡಕಿಲನು (ಕುವ್ಯಾದ್ರೋ. ೦–೪೭) : ಭೇರಿ ತಂಬಟ ಬೊಂಬುಳಿ ಬುರುಗು ಡಿಂಡಿಮದ ಮುಂಬರಿದೆಸೆವ ರವಗಳಾಕಾಶವ ತುಂಬಿದುವು (ಕಂನವಿ. ೮–೧೯). **ತಂಬಟೆ** : ಭೇರಿ ತಂಬಟೆ ನಿಸ್ಸಾಳ ಕಹಳೆಗಳ ಭೂರಿ ನಿನದ (ಅಂಜಜ. ೫–೪೯) : ತಂಬಟೆ ಡೋಳು ಚಂಬುಕವಱ . . . ಕಹಳೆಗಳ ದನಿಯು ಬೆಂಬಳಿ (ಕುರಾಸಾಂ. ೧೧–೩೭) ; ಪಱೆಯ ಪೆರ್ಗಾಳೆಯ ಪಳಹದ ಕೊಟಲ ತಂಬಟೆಯ . . . ಭೇರಿಯ ಭೂರಿ ನಿನಾದಂ ದೆಸೆಮುಟ್ಟೆ ಪಳಂಚಲೆಯೆ (ರಾಮಾಶ್ವ. ೫೦–೦): ತಂಬಟೆಯ ಹೊಯ್ದು ಮೈಮರೆತವರು ಹಲರು (ವಿಸೀಗೀ. ೨೫–४). **ತಂಬಟ್ಟ** : "ಆನಕ" (ನಾಚಿರಾ. ೩). **ತಪಟೆ** : ಕಠಿನ ದುಂದುಭಿ ತಪಟೆ ತಾಳ ಮದ್ದಲೆ ಗಳುಂ . . . ದಿಕ್ತಟಗಳೊಳ್ಮೊಳಗುತಿವೆ (ಅರ್ಜಾವಿ. ೨೪–೩೦). **ತಪ್ಪಟ** : ಕೊಂಬು ಕೊಳಲು ತಾಳ ತಪ್ಪಟ ಭೇರಿ ಸಂಭ್ರಮದಿಂದ ವೃಂದಾವನ ಸೇರಿ (ಪ್ರಸಭಾ. ೨೩–४). **ತಪ್ಪಟೆ** : ಕೊಂಬು ಕೊಳಲು ತಪ್ಪಟೆ ಮೃದಂಗದ ರವ ತುಂಬಿತು ಲೋಕವನಿರದೆ (ರಾಮವಿ. ೭–೧೨) : ಚಪ್ಪಾಳೆಗಳ ರವ ಕೊಂಬು ಕೊಳಲು ಹೊನ್ನ ತಪ್ಪಟೆಗಳ ದನಿಯಿಂದ ಸರ್ಪಶಯನ ರಂಗಧಾಮನ ತೇರು ಬಂದೊಪ್ಪಿತು ಮುನ್ನಿನ ಸ್ಥಳದ (ಕಂನವಿ. ೨೫–೧೧೧). **ತಬಟೆ** : ತಬಟೆ ಕಾಸಿ ಸಿದ್ಧ ಮಾಡಿಕೊಂಡರು (ರೂಢಿ). **ತಮಟೆ** : ತಮಟೆಯನ್ನು

ಕಾಯಿಸಿ ಹೆಗಲಿಗೆ ಹಾಕಿಕೊಂಡು (ಹುಲ್ಮಹ. ೧೯) : ಎದೆ ತಮಟೆಯಂತೆ ಬಡಿಯತೊಡಗಿತು (ಸಿಡಿಲು. ೮೭). **ತಮ್ಮಟ್ಟ$_1$**: ಪೊಯ್ಯ ನಿಸ್ಸಾಳ ತಮ್ಮಟದ ಭೇರಿಗಳಲ್ಲಿ ನೆರೆದುದು ಚಾತುರಂಗ ಬಲ (ಇಹರ. ದೇ. ೩೭-೨೧) : ಸೂಳೈಪ ತಮ್ಮಟಂಗಳ . . . ಸಂಭ್ರಮದ ಸೌರಂಭದಿಂ ವಿೂಱಿ ನಡೆದನು (ಸಿದ್ಧರಾ. ೬-೨೧) : ತಮ್ಮಟವೆಂಬ ಹಲಿಗೆ ಶಂಖವೆಂಬ ಧವಳ . . . ಜಯಘಂಟೆಯೆಂಬ ಜಾಗಟೆ ಇತ್ತೆಱದ ಪಂಚಮಹಾವಾದ್ಯಂಗಳಂ (ವಿವೇಕ. ೨೩೭): ಪಟಹ ತಮ್ಮಟ ಢಕ್ಕೆ ಡವುಡೆ ಕಹಳಾ ಸಮುತ್ಕಟನಾದವಳ್ಳಿಱಿಯೆ (ಚಿಬಪು. ೧೬-೧೩). **ತಮ್ಮಟೆ**: "ಆನಕಃ. ಪಟಹಃ-೨ ತಮ್ಮಟೆ ಹೆಸರುಗಳು" (ಸಿದ್ಧಾಂತಿ. ೫೪) : ಮನಸ್ಸಿನಲ್ಲಿ ಬಂದರೆ . . . ಹದಿನೇಳುನೂರು ಡೊಳ್ಳು, ನಗಾರಿ, ಹಲಿಗೆ, ತಮ್ಮಟೆ, ಶಂಖ, ತುತ್ತೂರಿಗಳನ್ನು ಬಾರಿಸಬಹುದು (ಕುರಿಹಿಂ. ೧೪೫). **ತಮ್ಮಟ್ಟೆ**: ಚೀಱಿದವು ಕಹಳೆಗಳುಂ ತಮ್ಮಟ್ಟೆ ಭೇರಿ ನಿನಾದ (ರಾಮಚ. ೨೩-೧).

[ದೇ.॥ ತಮಿ. ತವ್ವುಟ್ಟ, ತಪ್ಪಟ್ಟ, ತಪ್ಪಟ್ಟೈ$_1$; ಮಲ. ತವಿಮ್ಮಟ್ಟ, ತಪ್ಪಿಟ್ಟ; ತುಳು. ತಂಬಟ, ತಂಬಟೆ, ತಂಬಡ, ತಬಟೆ. ತಮಟೆ, ತಮ್ಮಟೆ : ತೆಲು. ತಮ್ಮಟ, ತಪ್ಪೆಟ; ನಾಯ್ಕಿ. ತಪ್ಪಟೆ. ತಪ್ಪ ]

**ತಂಬಟಜಾಲಿ** 'ತಂಬತ್ತಿಜಾಲಿ' ನೋ.

**ತಂಬಟಿಕಿ** (ನಾ). (?) : ಹರಿಸು ಭೀಯೆಂದು ತುಚ್ಛಿತ ಬುದ್ಧಿಗಂಡರೆನು ತ್ತೊರಿಸುವರ್ ಸಲಿಗೆಯಿತ್ತನ್ಯೋನ್ಯದಿಂ ಮೆಲ್ಲನೆ ತರಿಸುವರ್ ಆರಿಯ ದೋಲ್ ಮನೆಯ ತಂಬಟಿಕಿಯುರ ಮೂಲದಿಂ ಲೂಟಿಯಂತೆ (ಜಿನಮು. ೪೯-೪೦) [ ? ]

**ತಂಬಟಿಗ** (ನಾ). ತಾಮ್ರದ ಕೆಲಸ ಮಾಡುವವನು : ಸ್ವರಮನಱಿಗೆ ತಾಂ ಭರತಜ್ಞನಂದದಿಂ . . . ಎಱಕಮನಱಿಗೆ ತಂಬಟಿಗನಂತೆ (ಮದಶಿ. ೧೦-೭೭). [ ತಂಬ$_0$ (<ತಾಂಬ್ರ) + – ಅಟಿಗ ]

**ತಂಬಟೆ** 'ತಂಬಟ' ನೋ.

**ತಂಬಟೆಗ** (ನಾ). ತಮಟೆ ಬಾರಿಸುವವನು : ಡೊಂಬಿಯ ತಂಬಟೆಗರು ಪಾಡುವ ತಿವದಿಗಳು (ಸಾಹಿವಿ. ೮೩). [ತಂಬಟೆ (<ತಂಬಟ) + – ಗ$_2$]

**ತಂಬಟೆಹೊಯಿಲು** (ನಾ). ತಮ್ಮಟೆಯ ಬಡಿತ : ತಂಬಟೆಹೊಯಿಲಿಲ್ಲ ವಾದ್ಯದ ಹಲುಬಿಲ್ಲ. ಹೆಣವ ಕೋಟೆಗೆ ನಾವು ತ್ವರೆಯಲೊಯ್ವಾಗ (ಇಂಗೀತೆ. ೧೯-೧). [ತಂಬಟೆ (<ತಂಬಟ) + ಹೊಯಿಲು (<ಪೊಯ್ಯು)]

**ತಂಬಟ್ಟೆ** 'ತಂಬಟ' ನೋ.

**ತಂಬತ್ತಿ** (ನಾ). = ತಂಬತ್ತಿಜಾಲಿ : (+). [ ? ]

**ತಂಬತ್ತಿಜಾಲಿ, ತಂಬಟಜಾಲಿ** (ನಾ). ಬಿಳಿಯ ಉದ್ದನೆಯ ಮುಳ್ಳು ಗಳಿರುವ, ಸುವಾಸನೆಯ ಹಳದಿ ಹೂವುಗಳನ್ನು ಬಿಡುವ ಒಂದು ಬಗೆಯ ಜಾಲಿ ; ಸುಗಂಧಜಾಲಿ: (+). **ತಂಬಟಜಾಲಿ** : ಪೀಕಜಾಲಿ. ತಂಬಟಜಾಲಿ (ಮೃಶಿಗಿ. ೧-೧೨). [ ತಂಬತ್ತಿ + ಜಾಲಿ$_1$ ]

**ತಂಬನಿ** 'ತಣ್ಬನಿ' ನೋ.

**ತಂಬಲ** (ನಾ). ೧. ಒದ್ದೆ; ತಂಪು; ತೇವ. 'ತಂಬಲಗಱ' ಪರಾ. (ಗು). ೨. "ಆರ್ದ್ರ, ತೊಯ್ದ" (ಜಾನಕೋ. ೬೫).

ತಂಬಲದ ಹುಳು = ಬಚ್ಚಲು, ಮೋರಿ ಮೊದಲಾದ ತೇವವಾದ ಜಾಗಗಳಲ್ಲಿ ಇರುವ ಒಂದು ಬಗೆಯ ಹುಳು : ಬಾಲದ ಹುಳು. [ <ತಣ್ಬ$_2$ ]

**ತಂಬಲಗಱ** (ಕ್ರಿ). ತೇವವನ್ನುಂಟುಮಾಡು : ತಂಪುಗೊಳಿಸು : ಶ್ರೀಕೃಷ್ಣನಂಭೋಧಿಮಾರ್ಗಣದಿಂದೆ ಮುಂಬರಿದೈದುವ ಕಾಲಾಗ್ನಿಯ ಮೆಟ್ಟಿ ತಂಬಲಗಱದನಾ ಬಲಕೆ (ಮೋಹತ. ೩೭-೫೮). [ ತಂಬಲ + ಕಱ$_1$ ]

**ತಂಬಹಾಲು** 'ತಣ್ಬಾಲ್' ನೋ.

**ತಂಬಳಕೋಲ್** (ನಾ). ಭೂಮಿಯನ್ನು ಅಳೆಯುವ ಒಂದು ಅಳತೆ ಗೋಲು,-ಪ್ರಮಾಣ (?) : ಪವಿತಗೆಯ ಸಾಲೆಯ ತ್ರಾಯಿಪುರುಷ ದೇವಗ್ಗೆಯಲ್ಲಿಯ ತಂಬಳಕೋಲಲಿನ್ನೂಱು ಮತ್ತರು ಕೆಯ್ಯು (ಎಇ. IV, ೬೫-೧೭ ; ಸು. 11ನೆಯ ಶತ). [ ತಂಬಳ$_0$ + ಕೋಲ್$_1$ ]

**ತಂಬಳಿ** 'ತಂಬುಳಿ' ನೋ.

**ತಂಬಾಕ** 'ತಂಬಾಕು' ನೋ.

**ತಂಬಾಕು, ತಂಬಾಕ** (ನಾ). ಒಂದು ಬಗೆಯ ಗಿಡ ಮತ್ತು ಅದರ ಸೊಪ್ಪು : ಹೊಗೆಸೊಪ್ಪು : ತಂಬಾಕು, ಕಾಡುಸಣ್ಣ ಹೊಗೆಸೊಪ್ಪು (ಮೃಶಿಗಿ. ೭೧-೧೪೫೨) : ಅದೇ ಗುಡಿಸಲಿನಲ್ಲಿ ದೇವದಾಸ ತಂಬಾಕು ಸೇದುತ್ತಾನೆಂಬುದು ಪಾರ್ವತಿಗೆ ಗೊತ್ತಿದ್ದಿತು (ದೇವದಾ. ೮) : ತಂಬಾಕು ಮಿಶ್ರಿತ ಕವಳವು ಅವರ ಗಲ್ಲವನ್ನು ಯಾವಾಗಲೂ ಉಬ್ಬಿಸುತ್ತಿತ್ತು (ರಂಗರೋ. ೧). **ತಂಬಾಕ** : ಹಾಳುಭೂಮಿಗಳಲ್ಲಿ ಸಜ್ಜೆ ಮತ್ತು ಜೋಳವು ಗೊಬ್ಬರ ವಿಶೇಷವಾದರೆ ತಂಬಾಕವು ಬೆಳೆಯುತ್ತವೆ (ಕೃಷಿಪ್ರ. ೬೭) : ಸಿಂಹಲದ್ವೀಪದಲ್ಲಿ . . . ಕಬ್ಬು, ತಂಬಾಕ, ಬುಂದು ಮುಂತಾದವುಗಳು ಬೆಳೆಯುತ್ತವೆ (ಮುಂಬಯಿ. ೪-೨೦೧) ; ತಂಬಾಕವನ್ನು ನಿಂದಿಸುತ್ತಲೇ ಅದನ್ನು ಅಗಿಯಲು ಸುರುವು ಮಾಡುತ್ತಾರೆ (ಗಾಳಿಗು. ೨೮). [ ←ಹಿಂ. ತಂಬಾಕೂ, ತಮಾಕೂ : ಮರಾ. ತಂಬಾಕೂ, ತಂಬಾಖು, ತಮಾಕೂ, ತಮಾಖು. / ಇಂ. Tobacco. / ಪೋರ್ಚ್. ಸ್ಪ್ಯಾನಿಷ್. ಟಬಾಕೋ ; ಜಪಾನೀ. ತಾಬಾಕೋ ]

**ತಂಬಾಲ್** 'ತಣ್ಬಾಲ್' ನೋ.

**ತಂಬಾಲ** (ನಾ). ಒಂದು ಊರಿನ ಹೆಸರು (?) : ಪಾರಾಶಗೋತ್ರದ ಆಪಸ್ತಂಬ ಸೂತ್ರದ ತಂಬಾಲದ ಕ್ರಿಷ್ಣಭಟರ ಮಕ್ಕಳು ದೇವಣಭಟರು (ಎಕ. XII, ತಿಪಟೂ. ೧೩೯-೧೨೫ : ?). [ ? ]

**ತಂಬಾಲು** 'ತಣ್ಬಾಲ್' ನೋ.

**ತಂಬಾಳ** 'ತಾಂಬಾಣ' ನೋ.

**ತಂಬಾಳೆ** 'ತಾಂಬಾಣ' ನೋ.

**ತಂಬಿ$_1$** 'ತಮ್ಮ' ನೋ.

**ತಂಬಿ$_3$** (ನಾ). ದಂಡಿಸುವಿಕೆ ; ದಂಡನೆ ; ಶಿಕ್ಷೆ.

ತಂಬಿ ಪಹುಂಚಾಯಿಸು = ದಂಡಿಸು : ಶಿಕ್ಷಿಸು : ತಮ್ಮ ರಾಜ್ಯದಲ್ಲಿ ಟೀಪುಸುಲ್ತಾನರ ಕಡೆಯಿಂದ ಉಂಬಳಿ ಪಡಕೊಂಡು ಇದ್ದಂತಾ . . . ಮುಸಲ್ಮಾನರಿಗೆ ತಂಬಿ ಪಹುಂಚಾಯಿಸಿ ಅವರನ್ನು ಪಲಾಯನಮಾಡಿ (ರಾಜೇಂದ್ರ. ೨೧). [ ←ಅರ. ತಂಬೀಹ್ : ಮರಾ. ತಬೀ ]

**ತಂಬಿಗೆ** 'ತಂಬುಗೆ' ನೋ.

**ತಂಬಿಟ್ಟು$_1$, ತಣ್ಬಿಟ್ಟು** (ನಾ). ಹುರಿಕಡಲೆ, ಅಕ್ಕಿ ಮೊದಲಾದುವು ಗಳ ಹಿಟ್ಟಿನಿಂದ ಮಾಡುವ ಒಂದು ಬಗೆಯ ಸಿಹಿ ತಿಂಡಿ: ಕಬ್ಬಿನ ರಸ ಜೇನುತುಪ್ಪ ನವಣೆಯ ಹಿಟ್ಟಿನ ತಂಬಿಟ್ಟು ಹೂರಿಗೆ ಕಡುಬು . . . ಮಂತ್ರಸಮನ್ವಿತವಾಗಿ ಮೂಱುದಿನ ಬಲಿಯಂ ಕೊಡಲು (ಬಾಲಚ. ೧೩೨-೨) : ತಂಬಿಟ್ಟು ಕೊಡುವೆನು ದಾಸಯ್ಯ (ಪುರಂದ. ೨-.೭-೫); ನಾಳೆಗೆ ಬೆಣ್ಣೆ ನೈವೇದ್ಯ, ತಂಬಿಟ್ಟು ನೈವೇದ್ಯ, ಕಡಬು ನೈವೇದ್ಯ, ಅನ್ನೋದಕ ನೈವೇದ್ಯವೆಂದು ಪಲತೆರದ ಹರಕೆಯಂ ಪೊತ್ತರೆ (ಶರಲೀ. ೪೦೭) ; ನೆನಗಡಲೆ ಚಿಗುಳಿ ತಂಬಿಟ್ಟು ಉಂಡಲಿಗೆ ನಾನಾ ಫಲಂಗಳು (ಸೌಗಂಧಿ. ೪೩-೧೭) ; ತಂಬಿಟ್ಟು ತಣ್ಬುಹಿಟ್ಟು. ದೇವರನ್ನು ತಣಿಸುವ, ಅಥವಾ ದೇವರ ಕೋಪ ವನ್ನು ತಂಪು ಮಾಡುವ ಹಿಟ್ಟು (ನಮ್ಮನು. ೮೮) ; ತಂಬಿಟ್ಟಿಗೆ ಉಪ್ಪುಂಟೆ ತವರಿಗೆ ಮುಪ್ಪುಂಟೆ ? (ಹಳ್ಳಿಜಾ. ೮೭). **ತಣ್ಬಿಟ್ಟು** : ರೊಟ್ಟಿ ಸಕ್ಕರೆ ತುಪ್ಪ ಬೆಲ್ಲ ಗೋಧುವೆ ತಣ್ಬಿಟ್ಟು ರಾಯುಳ್ಳಿಯುಪಿನಿಯ ಒಬ್ಬಿಲು . . . ಅಂಗಡಿಯೊಳು (ಕುರಾಸಾಂ. ೪೨-೬೧). [ತಣ್$_2$+ಪಿಟ್ಟು. /ಕೊಡ. ತಂಬುಟ್ಟೀ]

**ತಂಬಿಟ್ಟು₂** (ನಾ). ಒಂದು ಬಗೆಯ ಗಿಡ: ತಂಬಿಟ್ಟು, ಕುಕ್ಕುಟ, ಉಪ್ಪಾಲ (ಮೈಶಿಗ. ೫೩-೧೦೩೪೮). [ ? ]

**ತಂಬಿಲ** (ನಾ). (ಕರಾ) ಭೂತಗಳಿಗೆ ಮಾಡುವ ನೈವೇದ್ಯ: ಬನದ ಪಂಜುರ್ಲಿ ಇವನಲ್ಲಿ ಕೇಳಿ 'ತಂಬಿಲ' ವನ್ನು ಸ್ವೀಕರಿಸುತ್ತಾನೆ (ಡೀವಮು. ೪). [ ←ತುಳು. ತಂಬಿಲ, ತಂಬಿಲೊ ]

**ತಂಬಿಸು₁** 'ತಣ್ಪಿಸು' ನೋ.

**ತಂಬಿಸು₂** (ಕ್ರಿ). ೧. ಸ್ತಂಭೀಭೂತವಾಗು; ನಿಶ್ಚಲವಾಗು; ನಿಂತುಬಿಡು: ಸೂತ್ರ ಹರಿದ ಕಾವನ ಕೈಯ ಜಂತ್ರದ ಪುತ್ರಿಕೆ ನಿಂದ ಮಾಳ್ಕೆಯೊಳು ಧಾತ್ರೀಪತಿಯ ಮೊಗವ ಕಾಣುತಾ ಮೃಗನೇತ್ರೆ ತಂಬಿಸಿ ನಿಂದಳಾಗ (ಶ್ರೀಪಾಲ. ೪-೧೦೯). ೨. ತಡೆ; ನಿಲ್ಲಿಸು: ಲಂಕಾಪುರದ ಲಗ್ಗೆಗೆ ಬೇಗ ಬೆಸನಂ ಕೊಡುವುದೆಂದೆನಲು ಧರಣಿಪತಿಗಳ ನೀತಿ ಸಂಧಿಯ ಪರುಠವಿಪುದದ ವಿಾರಿದಡೆ ಸಂಗರಕೆ ನೇಮವನೀವೆನೆಂದವರುಗಳ ತಂಬಿಸಿದ (ಅನಂರಾ. ೫ ೮-೧೦) ; ಕುಸುಮಮಂಜರಿಯಲ್ಲಿಯಳ್ಳಗರ ತಂಬಿಸುವ ಸುಸ್ವರದ ಶುಕಪಿಕಂ ಕಾಣದಿಲೆಯಿಲ್ಲ (ಜಿನಮು. ೨-೧೮). ೩. ತೊಲಗಿಸು; ನಿವಾರಿಸು: ತುಂಬಿಗಳನೋಡಿಸದ ಚಂಪಕಂ ಸೊಕ್ಕಾನೆಯಂ ಬೆದರಿಸದ ಸಿಂಗಮಿಡಿ ದಂಧಕಾರಮಂ ತಂಬಿಸದ ಚಂದ್ರಮಂಡಲಮಿರಲ್ (ಜೈಮಿಭಾ. ೮-೨೦). [ <ಸ್ತಂಭಿಸು ]

**ತಂಬು, ತಂಬೂ** (ನಾ). ತಾತ್ಕಾಲಿಕ ವಾಸಕ್ಕಾಗಿ ಹಾಕಿರುವ ಬಟ್ಟೆಯ ಬಿಡಾರ; ಗುಡಾರ; ಡೇರೆ: ಹೊದಿಸಿದ ತಂಬು ಅಂಬರ ತಾಗುವಂದದಿ ಪೈಸರಿಸಿ ನಿಲ್ಲಿಸಿದ ಬಲವಾ (ಸಾಂದಕಾ. ೬-೨೨) ; ಮಹಾರಾಜರವರ ತಂಬಿಗೆ ಬಂದು (ರಾಜೇಂದ್ರ. ೯೩) ; ಈಗ ತಂಬು ಡೇರೆ ಮುಂತಾದ ಮಂಡಿನ ಸಾಮಾನುಗಳೆಲ್ಲ ಮಾತ್ರ ಅವುಗಳ (ಆನೆಗಳ) ಮೇಲೆ ಹೇರುತ್ತಾರೆ (ಮುಂಬಯಿ. ೪-೨೩). **ತಂಬೂ:** ಅರಸುಮಗನ ಸ್ವಂತ ತಂಬೂದಲ್ಲಿ ಬಹಳ ಹೊತ್ತಿನಿಂದ ಸಂಗೀತ ಕಚೇರಿಯು ನಡೆದುದನ್ನು ಹೋದ ಕೂಡಲೆ ಕಂಡೆ (ಶ್ರೀಕಾಂತ. ೨) ; ಸರ್ಕಸ್ಸಿನ ತಂಬೂದಲ್ಲಿ ಬಂದು ತಂತಿಯನ್ನು . . . ಸೂಕ್ಷ್ಮವಾಗಿ ನೋಡುತ್ತ ನಿಂತಾಗ (ಮೀಡಿಮ. ೪೯). [ ←ಪಾರ. ಹಿಂ. ಮರಾ. ತಂಬೂ ]

**ತಂಬುಗೆ, ತಂಬಿಗೆ** (ನಾ). ತಾಮ್ರ, ಹಿತ್ತಾಳೆ ಮೊದಲಾದ ಲೋಹಗಳಿಂದ ಮಾಡಿದ ನೀರಿನ ಸಣ್ಣ ಪಾತ್ರೆ: ಚೆಂಬು: ಚರಿಗೆ: "ಜಲಪಾತ್ರೆಯೆ ಕಮಂಡಲಂ ಗಿಂಡಿ ತಂಬುಗೆ" (ಮಂಗರಾ. ೬೩-೨೫) ; ಮಡದಿಯರಾಪಗಂ [ಕೆ]ರಸಿ ಕಾವಲಿ ತಂಬುಗೆ ಹುಟ್ಟು ಸಟ್ಟುಗಂ ಕೊಡನೊರಲಕ್ಕಿಯಂಬಿವನೆ ಚಿಂತಿಸಿ ಕೋಟಲೆಗೊಂಬರ್ (ಕಇ. IV, ೧-೫೭; 1204); ನೀರ್ಗೊಟ್ಟಳೊಂದು ಪೊಸ ತಂಬುಗೆಯಿಂ (ದಶಕು.೧೨-೧೨೯); ಪೊನ್ನ ತಂಬುಗೆಗಳೊಳು ಮೊಗೆ ಮೊಗೆದು (ಬಸಪು. ೫೮-೬೫); ತಳಿಗೆ ತಂಬುಗೆ ಗಿಂಡಿ ಹರಿವಾಣ ಪಡಿಗ ಬಟ್ಟಲು ಮೊದಲಾಗಿ ಭೋಜನಕೆ . . . ಅನುಗೊಳಿಸಿದರು (ಭರಪ. ೪-೫೮). **ತಂಬಿಗೆ:** ಮಿಗೆ ರಮ್ಯವಡೆದ ಹೊಂಬರಿಯಣ ತಳಿಗೆ ತಂಬಿಗೆ ಗಿಂಡಿ ಗಿಣ್ಣಲುಗಳನು ನಗೆಮೊಗ ದರ್ಪಣ ಹಂಸಪುತ್ಥಳಿಯ ದೀವಿಗೆಗಂಬಗಳನಿತ್ತನೊಲಿದು (ಪೂ ೧ ಹ ತ. ೧೫-೧೮); ಹೊನ್ನ ತಂಬಿಗೆ ಗಿಂಡಿ ಪನ್ನೀರ ಚಂಬಿನಲಿ ಪೂರ್ಣ ಜಲವ ಕೊಂಡು (ಕಂನವಿ. ೫-೨೫); ಕರತಳದಲ್ಲಿ ತಾಳ್ದು ಶಶಿಕಾಂತದ ತಂಬಿಗೆಯಂ (ಚಂದ್ರಭ್ಯು. ೨-೩೦) ; ಅಲ್ಲೆ ತಂಬಿಗೆಯಲ್ಲಿ ನೀರಿದೆ ಕೈಕಾಲು ತೊಳೆದುಕೊ (ನಿಷ್ಕಾಮು. ೩೭); ಗಂಗೆಗೆ ಹೋದರೂ ತಂಬಿಗೆ ಮೇಲೆ ಜ್ಞಾನ (ಗಾದೆ); ಮನೆ ನಿಮ್ಮದು ತಂಬಿಗೆ ಮುಟ್ಟಬೇಡಿ (ಗಾದೆ). 'ಚೆಂಬು₁' ಪರಾ.

**ತಂಬಿಗೆ ತೆಗೆದುಕೊಂಡು ಹೋಗು = ಶೌಚಕ್ಕೆ ಹೋಗು**; ಮಲ ವಿಸರ್ಜನೆಗೆ ಹೋಗು: ಅವನೀಗ ಇಲ್ಲ. ಮುಂಜಾನೆಯೇ ತಂಬಿಗೆ ತೆಗೆದುಕೊಂಡು ಹೋಗಿದ್ದಾನೆ (ರೂಢಿ). **ತಂಬಿಗೆ ಕೈಗೆ ಬರು = ಬೇಡುವಂತಾಗು**; ಭಿಕ್ಷೆಗೆ ಹೋಗುವಂತಾಗು: ಸಿರಿ ಇದ್ದಾಗ ಮೆರೆದಿದ್ದನು. ಈಗ ತಂಬಿಗೆ ಕೈಗೆ ಬರುವಂತಾಯಿತು (ರೂಢಿ). [ ದೇ.॥ ತಮಿ. ತಮ್ಪಿಕ್ಕೈ : ತುಳು. ತಂಬಿಗೆ : ತೆಲು. ತಂಬಿಗಿ, ತಂಬುಗ ]

**ತಂಬುರಿ** 'ತಂಬೂರಿ' ನೋ.

**ತಂಬುಲ, ತಾಂಬುಲ, ತಾಂಬುಳ, ತಾಂಬೂಟಿ, ತೊಂಬಲ₁, ತೊಂಬಲಂ** (ನಾ). ೧. ಅಡಕೆ; ಕ್ರಮುಕ: "ತಂಬುಲಂ, ಕ್ರಮುಕಂ-ಈ ೨ ತಂಬುಲಂ" (ಹಲಾಯು. ೯೦-೩೯೦); ಕ[ಯ್ಯ]ಲೆ ಕಯ್ಯೊಳ್ ಬಾಯ ತಂಬುಲಂ ಬಾಯೊಳ್ ತೋಱೆ ಮೆಯ್ಮುಱಿದು ನೋಡಿದಳಾ ಸಮರೈಕವೀರುವಂ (ಪಂಪಭಾ. ೪-೩೭). ೨. ವೀಳೆಯ; ಅಡಕೆ ಮತ್ತು ಎಲೆ: "ತಂಬುಲಮೆಂಬು ವೀಳೆಯಮೆಂದುಂ ವೀಟಕೆ" (ಕಶಸಾ. ೩೫-೩೩೬); ಪೂವುಂ ತಂಬುಲಮುಂ ತಿಂಬಡಂಗಳುಂ ಬಂದುವು (ವಡ್ಡಾರಾ. ೧೧೬-೨೦) ; ತಂಬುಲಮಿಲ್ಲದ ವದನಂ . . . ಶೀತಲಜಲಮಿಲ್ಲದ ಪೂಗೊಳಂ ಮನಂಗೊಳಿಸುಗುಮೇ (ಅಜಪು. ೬-೯೫) ; ಒಂದನಲ್ಲದೆ ನಿನ್ನ ತಲೆಗೆರಡಂಬ ತೊಡಚಿದರೆ ಇಂದು ನಿನ್ನಯ ಬಾಯ ತಂಬುಲ ತಿಂದವನು ನೋಡು (ಕುಮಾರವ್ಯಾ. ೧೭-೩೮). ೩. ಅಗಿದು ಉಗುಳುವ ಕವಳ; ಚರ್ವಿತ ತಾಂಬೂಲ: ಕುರ್ಚಿಯ ಹಿಮ್ಮಗ್ಗಲು ಇರುವ ಕಿಟಕಿಯಲ್ಲಿ ತಂಬುಲದ ಪಿಚಕಾರಿಯನ್ನು ಬಿಡುತ್ತಿದ್ದರು (ರಂಗರೂ. ೧). ೪. ಒಂದು ಬಗೆಯ ತೆರಿಗೆ; ತಂಬುಲಿಗರು ಕೊಡಬೇಕಾದ ತೆರಿಗೆ: ಮನ್ನೆಯರುಮೆಱ ಆಳಿವಸತಾಯ ಪೊ[ಗೆ]ಪೊಗೆ ತಳಾರಿಗೂಲಿ ಇಂದಿ ತಂಬುಲಂ ಮೊದಲಾಗಿ ಆತನ ಮಕ್ಕಳ್ಕ[ಳ್ಮ]ರ ಸರ್ವ್ವಬಾಧಾಪರಿಹಾರಂ ಕಾದು ನಡೆಯಿಸುವರ್ (ಸೌಇಇ. XI-1, ೬೫-೨೨; 1042) ; ಚೈತ್ರಪವಿತ್ರಕೆ ಬಿಟ್ಟ ಪಣ ೪ ದಿವಸವಳ ದೇವ[ರ] x x x ಕೆಯರುಂ x ಗಡಿಯ ತಂಬುಲಮಂ ಬಿಟ್ಟರು (ಸೌಇಇ. XX, ೧೩೬-೯; 1180). **ತಾಂಬುಲ:** ೨. ನಿಟಲಕ್ಕೆ ತಿಲಕಮದು ಕುಂತಳಕೆ ಕುಸುಮಗಳ್ ತುಟಿಗೆ ತಾಂಬುಲರಸಂ (ಪರಶು. ೧೫ ೩೨). **ತಾಂಬುಳ:** ೨. ಶ್ರೀಕೇದಾರೇಶ್ವರ ದೇವರಂಗಭೋಗಕ್ಕಂ ಧೂಪಾರತಿ ನಿವೇದ್ಯ ತಾಂಬುಳ ನಂದಾದೀವಿಗೆ ಪಾತ್ರ ಪಾವುಳಕ್ಕಂ (ಕಇಅ. ೧೬-೩-೨೬; 1130). △ **ತಾಂಬೂಟಿ:** ೨. ಬ್ರಹ್ಮೇಶ್ವರ ದೇವರಂಗಭೋಗ ಜಳ ಗಂಧಾಕ್ಷತೆ . . . ತಾಂಬೂಟಿವೆಂಬ ಅಷ್ಟವಿಧಾರ್ಚನೆಗು (ಸೌಇಇ. XX, ೮೪-೯೬; 1123). **ತೊಂಬಲ₁:** ೨. "ನಾನು ತೊಂಬಲ ತಂದುಕೊಡುತ್ತೇನೆ" ಎಂದವಳೇ . . . ವೀಳ್ಯ ಸಜ್ಜು ಗೊಳಿಸುವ ನೆವದಿಂದ ಹೊರಟುಹೋದಳು(ಇತ್ಯಕ. ೨೫೦). ೩. "ತೊಂಬಲ-ಎಂಜಲು" (ಜಾನಕೋ. ೬೮). **ತೊಂಬಲು:** ೩. ಚಿತ್ತ ನಿನ್ನಲ್ಲಿಡಿಸಿ ಕಾಯೊ ತೊತ್ತಿನ ತೊಂಬಲು ತಿಂಬೆ (ಮೋಕ್ಷದೀ. ೩೦-೭) ; ಜಗದೀಶಾ ನಿನ್ನಯ ಉಗುರು ಕಾಣದವರು ಉಗುಳಿದಾ ತೊಂಬಲು ನಾನು (ಮೋಕ್ಷದೀ. ೮೯-೩).

**ತಂಬುಲ ತಿನ್ನು = ಎಂಜಲನ್ನು ತಿನ್ನು**: ಅವಳ ತಂಬುಲ ತಿನ್ನೋದಕ್ಕೆ ಅಲ್ಲಿಗೆ ಏಕೆ ಹೋದೆ ? (ರೂಢಿ). **ತಂಬುಲದೆಲೆ = ವೀಳ್ಯದೆಲೆ**: ಏರ್ಕೆಯಲೆ ಸಾಸಿವೆ ತಂಬುಲದೆಲೆಯಿವನಿಕ್ಕುಗೆ ಗೋಕುಲಕ್ಕೆ ರುಜೆ ತೀರ್ಗುಂ (ಲೋಕೋಪ. ೯-೨೦೮) ; ಒಂಭತ್ತೆಕ್ಕೆಯ ಪೂವಂ ತಂಬುಲದೆಲೆ ಮೂಱರಲ್ಲಿ ವಿದಿಯಿಕ್ಕುಗೆ ಶೀತಂ ಬಪ್ಪಾಗಳು (ಕಲ್ಯಾಕಾ. ೩-೯೫). [ <ಸಂ. ತಾಂಬೂಲ ]

**ತಂಬುಲಂಗುಡು** 'ತಂಬುಲಂಗೊಡು' ನೋ.

**ತಂಬುಲಂಗೊಡು, ತಂಬಲಂಗುಡು** (ಕ್ರಿ). ವೀಳೆಯವನ್ನು ಕೊಡು: ತಾಂಬೂಲವನ್ನು ಕೊಡು: ಸಾಹಸಾಭರಣನ ಸಾಹಸಮನಳವಲ್ಲದೆ ಪೊಗಟ್ದು ತೊಡೆಯನೇಱಿಸಿಕೊಂಡು ಬಾಯೊಳ್[ಪಾಠಾಂ. ಬಾಯ್ದಾ ಯೊಳ್]ತಂಬುಲಂಗೊಟ್ಟಂ (ಪಂಪಭಾ. ೭-೩೮ ವ) ; ಎನಗೆ ತಂಬುಲಂ ಗೊಡಲುಜ್ಜುಗಂಗೆಯ್ವಲ್ಲಿ ನಡುಗುವ ಕಂದಳಮಂ ಚಿನ್ನೆದಿಲೆಗೆತ್ತು (ಕಾದಂಪು. ೯೦). **ತಂಬುಲಂಗುಡು:** ಅವಂದಿರ್ಗಳ್ಗುಪಜಾತ ಪರಿಚಯದಿಂ ತಂಬುಲಂಗುಡಲ್ವೇಟ್ಟು (ಕಾದಂಪು. ೨೬೨). [ ತಂಬುಲ + ಕೊಡು₁ ]

**ತಂಬುಲಂಗೊಳ್** (ಕ್ರಿ). ತಾಂಬೂಲವನ್ನು ತೆಗೆದುಕೊಳ್ಳು ; ವೀಳೆಯವನ್ನು ಸೇವಿಸು : ದಿವ್ಯಾಹಾರಂಗಳನಾರೋಗಿಸಿ ಕೆಯ್ಗಟ್ಟಿಗೊಂಡು ತಂಬುಲಂಗೊಂಡು (ಪಂಪಭಾ. ೩-೭೭ ವ).
[ ತಂಬುಲ + ಕೊಳ್$_1$ ]

**ತಂಬುಲಂದೀವು** (ಕ್ರಿ). ತಾಂಬೂಲವನ್ನು ತುಂಬು ; ವೀಳೆಯವನ್ನು ಜೋಡಿಸು : ತಂಬುಲಂದೀವಿದ ಪೊಂಗವಳಿಗೆಯಂ ಪಿಡಿದಂಬಿಕೆಗವಟಯ್ಸಿ ದಳೊರ್ವಳಿಂದ್ರುವಧು ತಂಬುಲವಂ (ಶಾಂತಿಪು. ೯-೧೮೦).
[ ತಂಬುಲ + ತೀವು ]

**ತಂಬುಲಂಬಿಡಿ** (ಕ್ರಿ). = ತಂಬುಲಂಗೊಳ್ : ಮಾಸಿದೆಯಾದೆ ಮೇಣುಡಲ. ತರಿಪೆನೆ ತಂಬುಲಂಬಿಡಿ (ಪಂಪಭಾ. ೮-೬೪). [ ತಂಬುಲ + ಪಿಡಿ$_1$ ]

**ತಂಬುಲಗುಟುಕು** (ನಾ). ಬಾಯಿಗೆ ಬಾಯಿಟ್ಟು ಕೊಡುವ ತಾಂಬೂಲ; ಕುಟುಕುದಂಬುಲ : ದೇವಿಯ ಪಾಣಿಪದ್ಮದಿಂ ತೊಲಗದೆ ಪದ್ಮರಾಗನಿಭ ಚಂಚುವನೊಯ್ಯನೆ ನೀಡಿ ನೀಡಿ ತಂಬುಲಗುಟುಕಂ ಕೊಡುತ್ತೆ (ಕುಸುಮಾ. ೧೩-೨೦). [ ತಂಬುಲ + ಕುಟುಕು$_2$ ]

**ತಂಬುಲಪೆಚ್ಚ** (ನಾ). ತಾಂಬೂಲದ ಹುಚ್ಚು ಹಿಡಿದವನು ; ಅತಿಯಾಗಿ ತಾಂಬೂಲವನ್ನು ಸೇವಿಸುವವನು : ಪಿಚ್ಚಿ ಚಿಚ್ಚಿ ಎಲೆಗಳನ್ನು ನಿಮಿಷಾರ್ಧದಲ್ಲಿ ಅರೆದು ಅಗಿದು, ಪಿಚಿ ಪಿಚಿ ಉಗುಳುವ ತಂಬುಲಪೆಚ್ಚರಾದ ಆ ಸದಾನಂದಿಗಳ ಬಗ್ಗೆ ನಾನಿಲ್ಲಿ ಬರೆಯಲು ಬಯಸುವದಿಲ್ಲ (ನಿರಾಭ. ೧೩೭).
[ ತಂಬುಲ + ಪೆಚ್ಚ (<ಪಿಚ್ಚ) ]

**ತಂಬುಲವಿಡು** (ಕ್ರಿ). ೧. ತಾಂಬೂಲವನ್ನು ಕೊಡು; ವೀಳೆಯ ನೀಡು. ೨. ಆಹ್ವಾನಿಸು ; ಕರೆ : ಜಗಳಕೆ ತಂಬುಲವಿಟ್ಟು ವುಗ್ಗಡಿಸುವ ಬಗೆಯಾದುದಾ ಭದ್ರಹಸ್ತಿ (ಶ್ರೀಪಾಲ. ೭-೩೦). [ ತಂಬುಲ + ಇಡು$_1$ ]

**ತಂಬುಲಿ** (ನಾ). ೧. ವೀಳೆಯದೆಲೆಯನ್ನು ಮಾರುವವನು; ತಂಬುಲಿಗ: ಹರದರ ಸುವ್ವೆಶ್ಯರ ಕಾರುಕರ ಚಿತ್ರಕರ ತಂಬುಲಿಗಳ ವಿನೋದಿಗಳ . . . ಸೇರುವೆಯ ಕಂಡು (ಅಕ್ರೂರ. ೭-೪೮). ೨. ವೀಳೆಯದೆಲೆಯನ್ನು ಮಡಿಚಿಕೊಡುವವನು ; ಹಡಪದವನು ; "ಹಡಪಾಳಿ" (ಚತುನಿ. ಕ. I, ೨೩). [ ತಂಬುಲ + – ಇ$_3$ ]

**ತಂಬುಲಿಗ** (ನಾ). ೧. = ತಂಬುಲಿ ೧ : ಗೊಜ್ಜಗಂ ತಂಬುಲಿಗರೆಟ್ಟಿಂ ಕಳ್ಳೆಕ್ಕೊಳೆ ಕಾದಿ . . . ದೇವಲೋಕಕ್ಕೆಸೆದನ್ (ಎಇ. XVI. ೭೩-೧೦ ; 1007) ; ತಂಬುಲಿಗರ್ ನಂಬುಗೆಗೆಟ್ಟವರಂತೆ ಪೆಱಸಾರೆ (ಧರ್ಮಾಮೃ. ೨-೬೯); ದೂಸಿಗರ ಕಂಚುಗಾಱರ ಬಳೆಗಾಱರ ತಂಬುಲಿಗರ ಮಣಿಗಾಱರ ಗಂದಿಗ ರಾಪಣಂಗಳೊಳ್ ನಡೆತಂದರ್ (ಜಗವಿ. ೭-೧೮) ; ಮಾಱುವಂಗೆ–ಗಂದಿಗಂ, ದೂಸಿಗಂ, ತಂಬುಲಿಗಂ (ಶಮದ. ೧೯೭ ಪ್ರಯೋ) ; ತಂಬುಲಿಗ ಜಂಗಮ ಜೋಗಿಗಳ ಜಂಗುಳಿಗಗೇರಿಗಳೊಳಗೆ ರಥಾಡಿಸಿದನು ಶಿಖಾಳಿಗಳ (ತೊರರಾ. ೩-೮-೩೩). 'ತಂಬುಲಿಗವಸರ' ಪರಾ. ೨. = ತಂಬುಲಿ ೨ : ಅಯ್ಮಗೆಲೆಯ ಕೊಡುತಿರ್ದ ತಂಬುಲಿಗನ ಕೈಯ ತಬಕನರ್ಕಕೀರ್ತಿ ಒಯ್ಯನೆ ಸೆಳೆಕೊಂಡು ತಂದೆಗೆಲೆಯ ತನ್ನ ಕೈಯಾರೆ ಕೊಡತೊಡಗಿದನು (ಭರಚ. ೨೭-೭೭).

**ತಂಬುಲಿಗ ಸಾಸಿರ್ವರ್** = ವೀಳೆಯದೆಲೆಯ ವರ್ತಕ ಸಂಘದ ಸಾವಿರ ಸದಸ್ಯರು: ಸುಂಕದನ್ಯಾಯ ಪೆಚ್ಚಿಡಡೆ ಬಾಳ್ಗುಳಿಯಯ್ವ ದಿಂಬರುಂ . . . ತಂಬುಲಿಗಸಾಸಿರ್ವ್ವರುಂ ಅಯ್ನೂರ್ವರುಂ ಪೋಗಿ . . . ಬಿನ್ನಪಂಗೆಯ್ವಡೆ (ಸೌಇಇ. IX-i, ೭೬-೧೦ : 991) ; ಅಲ್ಲಿಯ ತಂಬುಲಿಗ ಸಾಸಿರ್ವ್ವರುಮಿಟ್ಟು ಹೇಱಿಗೆ × [ವೀ]ಸವಂ ಬಿಟ್ಟರು (ಸೌಇಇ. XV, ೨೭-೩೦; 1144); ದೇವರಂಗಭೋಗಕ್ಕೆ ತಂಬುಲಿಗಸಾಸಿರ್ವ್ವರಶೇಷವಿರ್ದು . . . ಕೊಟ್ಟರ್ (ಮುಂಬರಾ. XI, ೨೩೪-೨೫ ; 1144).
[ ತಂಬುಲ + – ಇಗ ]

**ತಂಬುಲಿಗವಸರ** (ನಾ). ವೀಳೆಯದೆಲೆಯನ್ನು ಮಾರುವ ಅಂಗಡಿ; ತಂಬುಲಿಗರ ಅಂಗಡಿ : ಮಾಲೆಗಾರ್ತಿಯರಲರ್ಗಣ್ಮಲರ್ಪೆಳಗು ನಟ್ಟಪೊಲ್ ಬಿಳಿಯೆಲೆಗಳ್ ತಂಬುಲಿಗವಸರದೊಳ್ ಕರಮೆಸೆಗುಂ (ಲೀಲಾವ. ೭-೧೦೩). [ ತಂಬುಲಿಗ + ಪಸರ ]

**ತಂಬುಲಿಗಸೆಟ್ಟಿ** (ನಾ). ತಾಂಬೂಲದ ವ್ಯಾಪಾರಿ : ವೀಳೆಯದೆಲೆಯ ವರ್ತಕ : ತಂಬುಲಿಗಸೆಟ್ಟಿಗಳು ಬಿಟ್ಟ ಧರ್ಮ್ಮವಾವುದೆಂದಡೆ ಹೇಱಿಂಗೆ ವೀಸ (ಸೌಇಇ. XI-ii, ೧೫೮-೨೫ ; 1109). [ ತಂಬುಲಿಗ + ಸೆಟ್ಟಿ ]

**ತಂಬುಳಿ, ತಂಬಳಿ** (ನಾ). (ಕರಾ) ತೆಂಗಿನಕಾಯಿ, ಜೀರಿಗೆ ಮುಂತಾದುವನ್ನು ರುಬ್ಬಿ ಅದಕ್ಕೆ ಮಜ್ಜಿಗೆ ಬೆಂದ ತರಕಾರಿಗಳನ್ನು ಹಾಕಿ ಕುದಿಸದೆ ಮಾಡುವ ಒಂದು ಬಗೆಯ ಮೇಲೋಗರ : ಪುಡಿಚಟ್ನಿ ಇದೆ. ತಂಬುಳಿ ಮಾಡಿದರಾಯ್ತು (ಬೆಂದಜೀ. ೬೧). **ತಂಬಳಿ :** ಬಟ್ಟಲಲ್ಲಿ ಅನ್ನ, ತಾಳದ, ತಂಬಳಿ, ಸಾರು . . . ಕಂಡವು (ಈಕಥ. ೦೨೪); ಬೇಸಿಗೆ ಬಂದರೆ ಕೊಳದ ನೀರು ಹಸುರು ತಂಬಳಿಯಾಗುತ್ತದೆ (ಚಾರುದಾ. ೩೮).
[ ತಂ$_1$ (<ತಣ್$_2$) + ಪುಳಿ$_2$. / ತುಳು. ತಂಬುಳಿ ]

**ತಂಬೂ** 'ತಂಬು' ನೋ.

**ತಂಬೂರ** 'ತಂಬೂರಿ' ನೋ.

**ತಂಬೂರಿ, ತಂಬುರಿ, ತಂಬೂರ** (ನಾ). ಆಧಾರಶ್ರುತಿಗಾಗಿ ನುಡಿಸುವ, ನಾಲ್ಕು ತಂತಿಗಳುಳ್ಳ ಒಂದು ಬಗೆಯ ವಾದ್ಯ : ತಂಬೂರಿ ಮೊದಲಾದ ಅಖಿಲ ವಾದ್ಯಗಳಿದ್ದು . . . ಹರಿ ನಂಬಲಾಱಿ ಈ ಡಂಭಕದ ಕೂಗಾಟ (ಪುರಂದ. ४-೭೭-೧) ; ತಾಳ ಶಂಖ ಭೇರಿಯು ತಂಬೂರಿಯು ಮೊದಲಾದ ಮೇಲು ಪಂಚಕಂಗಳೆಲ್ಲ ಹೊಗಳು ಹೊಗಳಲೂ (ವಾದಿಕೀ. ४೦-೨) ; ನಿಸ್ಸಾಳ ಪಟಹ ತಂಬೂರಿ ಪಣವ ಕಂಸಾಳೆ ಕಂಬು ಡಿಕ್ಕಿ ವಾದ್ಯ ಸೂಳೈಸುತಲಿರೆ (ವಿದಾಕ್ಶ. ೭೬-೩) ; ಪಟುವಾದ ಬಾರ ತಂಬೂರಿ ತುತ್ತೂರಿಗಳ್ (ಅರ್ಜಾವಿ. ೨೪-೬೦) ; ತಂಬೂರಿ ತುಂಬೆಲ್ಲ ಕೀಸರ ಬಾಸರ ಬೇಸರ ಬಂದ್ಯೆತಿ (ಸಬೀಗೀ. ४೮-४). **ತಂಬುರಿ :** ಒಂದೆಡೆಗೆ ವೀಣೆ ಸಾರಂಗಿ ತಂಬುರಿಯಿಂತು ಸಂದಣಿಸಿ ಪೂರೈಸೆ (ಶ್ರೀರಾಮ. ४-೩೩). **ತಂಬೂರ :** ಮಾಧುರ್ಯತರದ ಸುಮ್ಯಾನದಿಂ ಪರವಶತೆಯಾಂತರೋ ಯೆಸಲಂಬುಜಾನನೆಯರತಿಶಯದ ತಂಬೂರಗಳ ಪಿಡಿದು ಮಲಗಿ ರ್ದರಂ ಕಂಡನು (ವೆಂಕಾರಾ. ೩-४-೧೨).
[ ←ಅರ. ತಂಬೂರಾ; ಹಿಂ. ತಂಬೂರಾ, ತಾನ್‌ಪೂರಾ ; ಮರಾ. ತಂಬೂರಾ, ತಂಬೋರಾ. / ಸಂ. ತುಂಬುರಿ = ಒಂದು ಬಗೆಯ ವೀಣೆ ]

**ತಂಬೆಧಡೆ** (ನಾ). ಒಂದು ಊರಿನ ಹೆಸರು. **P** ಈಗಿನ ವಿಜಾಪುರ ಜಿಲ್ಲೆಯತಮ್ಮಧಡ್ಡಿ : ಶ್ರೀಮತು ತಂಬೆಧಡೆ ಬಲೇಶ್ವರ ದೇವರ್ಗ್ಗೆ ಬಿಟ್ಟ . . . ಮತರು ೩೦ (ಸೌಇಇ. XI-i, ೬೮-೧೦ ; 1033). [ ? ]

**ತಂಬೆರಲ್** 'ತಂಬೆಲರ್' ನೋ.

**ತಂಬೆಲರ್, ತಂಬೆರಲ್, ತಂಬೆಲರು** (ನಾ). ತಂಪಾದ ಗಾಳಿ: ಕಮ್ಮಿತಪ್ಪ ತಂಬೆಲರ್‌ವೀಸಿ (ವಡ್ಡಾರಾ. ೧೧೭-೨೧) ; ಮನವಮಾಱಿ ತೀಡಿದುದು ತೆಂಕಣ ತಂಬೆಲರಪ್ಪಿಕೊಳ್ವಪೋಲ್ (ಪಂಪಭಾ. ೧४-೧೨) ; ಕಾಮಂಗೆ ವಸಂತ ಸಮಯಮುಂ ವಸಂತಸಮಯಕ್ಕೆ ತಂಬೆಲರುಮೆಂಬಂತೆ (ಕಾದಂಪೂ. ೮೦४). **ತಂಬೆರಲ್ :** ತೀಡುವ ತಂ[ಪಾಕಾಂ ತೆಂ]ಬೆರಲ್ (ಪಂಪಭಾ. ३-೩೭) ; ತಂಬೆರಲ್ಸಂಚರಿಸಿದುದಾ ಪುರದ ಪೊಱಗೆ ಸುರಭಿಸಮೇತಂ (ಉದ್ಭಟ. ೭-೩). **ತಂಬೆಲರು:** ಸುಳಿವೆಲರು ತಂಬೆಲರು . . . ಹಂಸೆ ರಾಜಹಂಸೆಗಳೆಸೆದುವಾ ವನದೊಳು (ಹಚಕಾ. ३-३೭) ; ಪಸರಿಸಿತು ತಂಬೆಲರು ಬೀತುದು ಬಿಸಿಲ ಬಿಂಕ (ಕುಮ್ಯಾಅ. ೧३-३೮) ; ಅಳಿವಿಂಡುಗಳ ಗಾನಕೆ ತಂಬೆಲರಿಗೆ . . . ತಲೆದೂಗುವಂದದೆ ಕಳಮೆಯ ತೆನೆಗಳಂದೊಲೆದಾಡುತಿರ್ದುವು (ಕಂನವಿ. ३-೭३). [ ತಂಪು$_2$ (<ತಣ್ಪು$_2$) + ಎಲರ್ ]

**ತಂಬೆಲರು** 'ತಂಬೆಲರ್' ನೋ.

**ತಂಬೆಳಕು** 'ತಣ್ಬೆಳಗು' ನೋ.

**ತಂಬೆಳಗ** (ನಾ). ತಂಪಾದ ಬೆಳಕನ್ನು ಬೀರುವವನು ; ಚಂದ್ರ : "ತಂಬೆಳಗಂ[ಪಾಠಾಂ ತೆಳ್ಪೆಳಗಂ] . . . ಚಂದ ಚೆಳಿಗದಿರ ಕತ್ತಲೆವಣೆಯ ಶಶಿಯ ನಾಮಂ" (ಕಬ್ಬಿಗ. ೪೩). [ತಂಬೆಳಗು (<ತಣ್ಬೆಳಗು) + – ಅ₇ ]

**ತಂಬೆಳಗು** 'ತಣ್ಬೆಳಗು' ನೋ.

**ತಂಬೇಲು** (ಗು). ಹೆಚ್ಚಾದ ; ಅತಿಶಯವಾದ ; ತುಂಬಿದ : ದುಶ್ಶಾಸನೆ ಕೇಳು ತಂಬೇಲು ಗರ್ವದಿಂದ ದ್ರುಪದಾತ್ಮಜೆಯೆಮಗೆ ಈ ಕುಂಭಿಣಿಯೊಳು ಆಚೋದ್ಯವೆನಿಪ ಸುಖದ್ಯೂತದೊಳ್ ಸೋಲ್ಗೊಳಿಸಿದ ಪ್ರಯುಕ್ತ ದಾಯೆಂದು ಕರೆದರೆ . . . ಬಾಹೋಣಯಿಲ್ಲವೆಂದು ಪ್ರಾತಿಕಾಮಿಕನಿಗೆ ನಿರೂಪಿಸಿದಳಂತೆ (ದುಶ್ಶಾ. ೧೮).

[?. / ತುಳು. ತವೆಲ್ = ತುಂಬಿ ತುಳುಕು ]

**ತಂಬೈಸು** 'ತಣ್ಬೈಸು' ನೋ.

**ತಂಭಾಲು** 'ತಣ್ಪಾಲ್' ನೋ.

**ತಃಖ್ತಿ** 'ತಖ್ತೆ' ನೋ.

**ತಃಖ್ತೆ** 'ತಖ್ತೆ' ನೋ.

**ತಕ** (?). (?) : ಕಗ್ಗಲಿಪುರಕ್ಕೆ ಪಡವಲು ತಕದ ಕರಿಮುರುಟಗೆ ಬಡಗಣ ಪೊತ್ತಿನಲ್ಲೂ ನೆಟ್ಟಕಲ್ಲು ೧ (ಎಕ. XIV, ಮೈಸೂರು. ೧೦೩-೩೦ ; 1674).

[ ? ]

**ತಕಣೆಚಿಯ** (ನಾ). ಒಬ್ಬಾತನ ಹೆಸರು (?) : ಮನೆವಗತಿ ತಕಣೆಚಿಯ ಕೊನವಾಮಾ ಎಚಿಅಂಗ ಪೊಲುಕೇಸಿಯ ಬೂದಿಗನ ಕಾಳಗದೊಳ್ . . . ಸತ್ತ (ಎಕ. III, ಮೈಸೂರು. ೪೪-೩ ; ಸು. 990). [ ? ]

**ತಕತಕ** (ನಾ). ಕುಣಿಯುವುದನ್ನು ಸೂಚಿಸುವ ಒಂದು ಅನುಕರಣ ಪದ: ದೀಪಾವಳಿ ಬಂದರೆ ಹುಡುಗರು ತಕತಕ ಎಂದು ಕುಣಿಯುತ್ತಾರೆ (ರೂಢಿ).

**ತಕತ್ತು, ತಕಥು, ತಗತ್ತು** (ನಾ). ೧. ರಾಜ್ಯ : ಪಟ್ಟದ ಕೊರಸಿಯನವನ ಕೈಗಿತ್ತಿದೆಂತಿರ್ಪುದೆನಲವನಕ್ಕೆ ಹೂಣಿಸಿ ನಿಲಲಾರದೆ ಕಂಪಿಸುತ್ತಿರಲವನಂ ಕಂಡಿವಂ ತಕತ್ತನಾಳ್ವುದರ್ಕಯೋಗ್ಯನೆಂದು ಬಗೆದು(ಕಳನ್ನ.೯-೩೬). **ತಕಥು**: ೧. ಶಾಹವಮುರ್ತಜಾ ಅಲ್ಲಿಯಾದಿಯಾಗಿ . . . ವಿಜಾಪುರದ ತಕಥನಾಳ್ದ ಪಾತುಶಾಹರ್ (ಕಳನ್ನ. ೯-೩೯). **ತಗತ್ತು** : ೨. ಸಿಂಹಾಸನ ; ಪಟ್ಟ : ಜಗದ ರಾಯರು ನಿನಗೆ ಸಾಟಿಯೆ ತಗತನಿಳಿಯೈ ಪಾವಕನಿಳಯದಿ ಮಗ ಸಹಿತ ಮಂಡಿಸುವದೂಚಸ್ಥಾನ ಹೋಗೆಂದ (ಅಂಬಿಕಾ. ೪೮-೭೩).

[ ←ಪಾರ. ಹಿಂ. ತಖ್ತ್ ; ಮರಾ. ತಕ್ತ್, ತಖತ್, ತಖ್ತ್ ]

**ತಕಥು** 'ತಕತ್ತು' ನೋ.

**ತಕಪಕ** (ನಾ). ಒಂದು ಅನುಕರಣ ಶಬ್ದ : ಅನ್ನ ತಕಪಕ ಎಂದು ಕುದಿದು, ಉಕ್ಕಿ ಹೊರಗೆ ಬರುತ್ತಿದ್ದಿತು (ರೂಢಿ). 'ತಕಪಕನೆ' ಪರಾ.

**ತಕಪಕನೆ** (ಅ). ತಕಪಕ ಎಂದು ; ಶೀಘ್ರವಾಗಿ : ಬಳಗೆ ತಕಪಕನೆ ಕುದಿವ ವಡಬಾಗ್ನಿಯ ಕಳಾಪದಿಂದಾ ಕಡಲ್ ಕಣ್ಗೆಸೆದುದು (ಚಬಪು. ೩-೩) ; ಕಡಲು ತಕಪಕನುಕ್ಕಲಮರರ ಗಡಣ ಕಂಗೆಟ್ಟೋಡಲು (ಪ್ರಹ್ಲಾದ. ೩-೪೫).

[ ತಕಪಕ + – ಅನೆ₁ ]

**ತಕಯೂದ** (ನಾ). ಕಟ್ಟು ; ನಿರ್ಬಂಧ : ಜುಲುಮು, ಜಬರದಸ್ತಿ, ಪೆಟ್ಟು, ಕೊಲೆ ಮಾಡಿದವರಿಗೆ ಚೆನ್ನಾಗಿ ಶಿಕ್ಷೆಮಾಡಿ ಮುಂದೆ ಈ ಪ್ರಕಾರ ಅನ್ಯಾಯ ವಾಗದ ಹಾಗೆ ತಕಯೂದ ಇಡಬೇಕು (ಮಹಾಪಂ. II, ೭೩).

[ ←ಪಾರ. ತಕಯಿಾದ್ ]

**ತಕರಾರ್** 'ತಕರಾರು' ನೋ.

**ತಕರಾರು, ತಕರಾರ್, ತಕರಾಲು, ತಕ್ರಾರ, ತಕ್ರಾರು**(ನಾ). ೧. ವಿವಾದ; ದೂರು: ಚೌಗ್ರಾಮದವರ ಕರಸಿಕೊಂಡು ಗಡಿ ತಕರಾರು ಬಾರದಂತೆ . . . ಭೂಮಿಗೆ ಶಿಲಾಸ್ಥಾಪಿತವ ಮಾಡಿಸಿಕೊಟ್ಟು (ಎಕ. VIII, ಸೊರಬ. ೩೩೪-೩೧ ; 1743). ೨. ಅಡ್ಡಿ ; ಆಕ್ಷೇಪಣೆ ; ವಿರೋಧ : ಯಾರಾದರೂ ಕೊಡದೆ ತಕರಾರು ಮಾಡಿದರೆ (ಮೈಆರಿ. ೧೯೩೧, ೨೦-೨೦ ; 1712) : ನನ್ನದೇನು ತಕರಾರು ಇಲ್ಲ (ಬದುಜ. ೩೬) ; ತಂಟೆ ತೀರಿದರೂ ತಕರಾರು ಹೋಗಲಿಲ್ಲ (ಗಾದೆ). **ತಕರಾರ್**: ೧. ಕಂದಾಯ ಬಾಕಿ ಇರುವ ಜಮೀನಿನ ಸ್ವಾಸ್ದಾರಿಕೆಯು ತಕರಾರ್ ಬದ್ದಿದ್ದಲ್ಲಿ . . . ಹರಾಜು ಮಾಡುವುದು ನ್ಯಾಯವಲ್ಲವು (ಗ್ರಾಮಾಕ. ೭೮). **ತಕರಾಲು** : ೨. ಕೆಂಚಿ ತನ್ನ ಮಕ್ಕಳ ಹೆಸರಿನಲ್ಲಿ . . . ನೀರಗಂಟಿತನ ನೋಡಿಕೊಳ್ಳಲು ಬಂದಾಗ ಮಾರಪ್ಪನ ಮಕ್ಕಳು ತಕರಾಲು ಎತ್ತಿದರು (ಊರುಕ. ೭೮). **ತಕ್ರಾರ** : ೧. ಗಡಿ ತಕ್ರಾರ ಬಾರದ ರೀತಿಯಲ್ಲಿ . . . ಶಿಲಾಸ್ಥಾಪಿತವ ಮಾಡಿಕೊಟ್ಟು (ಮೈಆರಿ. ೧೯೩೪, ೯-೦೪ ; 1690). ೨. ಪ್ರತಿಯೊಬ್ಬ ಭಕ್ತರೂ ಹೀಗೆ ಒಂದಿಲ್ಲೊಂದು ಬಗೆಯಿಂದ ತಕ್ರಾರ ಹೂಡಿದರು (ಗೌರಾಂಗ. ೧೭೬). **ತಕ್ರಾರು** : ೧. ಗಡಿ ತಕ್ರಾರು ಬಾರದ ರೀತಿಯವರ ಮುಂದಿಟ್ಟು ರೇಪೆ ಪ್ರಮಾಣು ಭೂಮಿಗೆ ಗಡಿಕಲ್ಲು ಹೂಳಿಸಿ ಕೊಟ್ಟು (ಮೈಆರಿ. ೧೯೨೫, ೭೧-೧೫ ; 1817).

ತಕರಾರು ತೆಗೆ = ಆಕ್ಷೇಪಿಸು ; ತಕರಾರು ಮಾಡು : ರೂಲ್ಸ ಪ್ರಕಾರ ನಾವು ನಡೆದುಕೊಂಡಿಲ್ಲ ಅಂತ ತಕರಾರು ತೆಗೆದು ನಮ್ಮ ಈ ದೀಪ ಬಂದ ಮಾಡಬಹುದು (ಮನಬಿ.೧೬೩). ತಕರಾರು ಮಾಡು = ೧. ದೂರು: ಮಾಣ ಬೋಣಿಯಾಗಲಿಲ್ಲವೆಂದು ತಕರಾರು ಮಾಡಿದ್ದರಿಂದ ಹೋಟಲಲ್ಲಿ ಜಗಳ ಕಾಯಬೇಕಾಯಿತು (ಹೊಸಕ್ಷಿ. ೫೮). ೨. ಅಡ್ಡಿಮಾಡು ; ವಿರೋಧಿಸು : ಈಗ ಅವರ ಮಗ ಟೀಪುಸುಲ್ತಾನರು ತಕರಾರುಮಾಡಿ . . . ಶರಾರತು ಮಾಡುತ್ತಾರೆ (ರಾಜೇಂದ್ರ. ೫೦). ತಕರಾರು ಹೂಡು=ತಕರಾರುಮಾಡು ೧: ಸಂಬಳ ಸಾಲದು . . . ಎಂದೆಲ್ಲರೂ ಅವರಿವರ ಮಾತು ಕೇಳಿ ತಕರಾರು ಹೂಡಿದೆವು (ಹುಚ್ಚುಹು. ೭೧) ; ನಾನು ಹಡಗಿನಿಂದ ಸಾಮಾನುಗಳನ್ನು ಇಳಿಸಿದೆನೊ ಇಲ್ಲವೊ ಇಲ್ಲಿಯ ರಾಜ ತಕರಾರು ಹೂಡಿದ (ಪ್ರವಾಇ. II, ೧೯೦). [ ←ಅರ. ಹಿಂ. ಮರಾ. ತಕರಾರ್, ತಕ್ರಾರ್ ]

**ತಕರಾರು ಅರ್ಜಿ** (ನಾ). ೧. ಕೆಳಗಿನ ಕೋರ್ಟಿನ ತೀರ್ಪನ್ನು ಪ್ರತಿಭಟಿಸಿ ಸಲ್ಲಿಸಿದ ಅರ್ಜಿ : (+). ೨. (ನ್ಯಾಯಾಲಯಕ್ಕೆ) ಒಬ್ಬನು ಸಲ್ಲಿಸಿದ ಅರ್ಜಿಗೆ ಪ್ರತಿಯಾಗಿ ಸಲ್ಲಿಸಿದ ಅರ್ಜಿ : (+). [ತಕರಾರು + ಅರ್ಜಿ₂]

**ತಕರಾರುಇಸಮು** (ನಾ). ಅಡ್ಡಿ ಮಾಡುವ ಸ್ವಭಾವದವನು : ಬಲು ತಕರಾರು ಇಸಮು (ಕಮಕ. ೧೬೮). [ತಕರಾರು + ಇಸಮು (<ಇಸಂ)]

**ತಕರಾರುತಃಖ್ತೆ** (ನಾ). ೧. ಹಳ್ಳಿಯ ಶ್ಯಾನುಭೋಗರು ಸರ್ಕಾರಿ ಜಮೀನುಗಳ ಒತ್ತುಗಡೆ ಮುಂತಾದ ವಿಚಾರಗಳನ್ನು ಗುರುತು ಮಾಡಿ ಇಟ್ಟಿರುವ ದಾಖಲೆ ಪುಸ್ತಕ. ೨. ತಕರಾರು ಅರ್ಜಿಗಳನ್ನು ನಮೂದು ಮಾಡುವ ಪುಸ್ತಕ : ಗ್ರಾಮ ಪಂ ಚಾ ಯ ತಿ ಯ ವ ರು ಯಾವಾಗಲೂ ಒಂದು ತಕರಾರು ತಃಖ್ತೆಯನ್ನು ಇಟ್ಟಿರಬೇಕು (ರೂಢಿ).

[ ತಕರಾರು + ತಃಖ್ತೆ (<ತಖ್ತೆ) ]

**ತಕರಾಲು** 'ತಕರಾರು' ನೋ.

**ತಕಲಿ, ಟಕಳಿ** (ನಾ). ನೂಲನ್ನು ತೆಗೆಯುವ ಒಂದು ಉಪಕರಣ ; ಕದಿರು : ರಂಗಣ್ಣ ಕಾಕಾ ಪಡಸಾಲೆಯಲ್ಲಿ ಕುಳಿತುಕೊಂಡು ತಕಲಿಯಿಂದ ನೂಲು ತೆಗೆಯುತ್ತಿರುವರು (ಬೆಂದಯು. ೧೨) ; ಹಿಂದಿನ ಕಾಲದಲ್ಲಿ ಕೈಗಳಿಂದ ಅಥವಾ ತಕಲಿ, ಚರಕಗಳಂಥ ಸಣ್ಣ ಉಪಕರಣಗಳಿಂದ ಎಳೆಗಳನ್ನು ತೆಗೆಯುತ್ತಿದ್ದರು(ಗೃಹವಿ.೭೨). **ಟಕಳಿ**: ನಿತ್ಯ ನೂಲಬೇಕೆಂದು ನಿಯಮ ಮಾಡಿದವರಿಗೆ ನೂಲಲು ಟಕಳಿಯನ್ನು ಕೊಡಲಿಲ್ಲ (ಛಾರಸಂ. ೪೭) : ಟಕಳಿಯಲ್ಲಿ . . . ನೂಲು ತೆಗೆಯುತ್ತಿದ್ದ (ದೀಪಹ. I, ೯೮). [ ←ಹಿಂ. ತಕಲೀ ]

**ತಕಲೀಫು** (ನಾ). ತೊಂದರೆ ; ಕಷ್ಟ : ಇದು ತುಂಬಾ ತಕಲೀಫು ಕೊಡುವ ಕೆಲಸ (ರೂಢಿ). [ ←ಅರ. ಹಿಂ. ಮರಾ. ತಕಲೀಫ್ ]

**ತಕಲು** 'ತಕ್ಕಿಲ್₂' ನೋ.

**ತಕಶೀರು** 'ತಕ್ಸೀರು' ನೋ.

**ತಕಶೀರುದಾರ** 'ತಕ್ಸೀರುದಾರ' ನೋ.

**ತಕಾರ** (ನಾ). 'ತ' ಎಂಬ ಅಕ್ಷರ : ಕಿಜುದರ್ಕ ಕುಟಿಂಬೆಡೆಯಲ್ಲಿ ತಕಾರಂ ಸ್ವರಮುಡಸೆ ಪರಕ್ಕುತ್ತಮುಸ್ವರಂ ನಿಲೆ ವರದೊಳ್ (ಶಮದ. ೧೮೦).

[ ಸಂ. ]

**ತಕಾವಿ, ತಗಾಯಿ, ತಗಾವಿ** (ನಾ). ವ್ಯವಸಾಯದ ಸೌಕರ್ಯಗಳಿಗಾಗಿ ರೈತರಿಗೆ ಸರಕಾರದವರು ಕೊಡುವ ಸಾಲ,-ಮುಂಗಡ ಹಣ: ರೈತರಿಗೆ ಬೇಕಾದರೆ ಮುನಾಸಬು ತಕಾವಿ ಕೊಡುವುದಕ್ಕೂ . . . ಏರ್ಪಾಡಾಗಿತ್ತು (ಮುಹಾವಂ. II, ೬೧). **ತಗಾಯಿ:** ತಗಾಯಿ ವಸೂಲಿಯ ಕೆಲಸವನ್ನು . . . ಆ ಕಾಲದಲ್ಲಿ ಅವರು ಮಾಡುತ್ತಿದ್ದರು (ಬ್ಯಾಂಕಕ್ಕೆ. ೧೨೭) : ಇನ್ನೊಬ್ಬರಿಗೆ ತಗಾಯಿಯ ಹಣವನ್ನು ಕೊಡಿಸುವದಾಗಿಯೂ . . . ಹೇಳುವರು (ಗಂಗಾಸಾ. ೪೮). 'ತಗಾಯಿಸಾಲ' ಪರಾ. **ತಗಾವಿ :** ತಗಾವಿಯಲ್ಲಿ ನೋಡಲಿಲ್ಲವೇ, ತಹಸೀಲದಾರ ಸಾಹೇಬರು ಸಾವಿರಗಟ್ಟಲೆ ಹೊಡ ಕೊಂಡರು (ಪ್ರೇಮಾಶ್ರ. ೨).

[ ←ಅರ. ಹಿಂ. ತಕಾವೀ ; ಮರಾ. ತಕಾವೀ, ತಗಾಈ ]

**ತಕಾವಿರಕಮು** (ನಾ). ತಕಾವಿ ಸಾಲದ ಮೊತ್ತ : ಭೂಕಂದಾಯುವನ್ನೂ ತಕಾವಿ ರಕಮನ್ನೂ ಸರಕಾರಕ್ಕೆ ತುಂಬಿ ಅಧಿಕಾರದಿಂದ ನಿವೃತ್ತರಾದರು (ದಾಕೂಟಿ. ೯).

[ ತಕಾವಿ + ರಕಮು (<ರಕಂ) ]

**ತಕಾವಿಸಾಲ, ತಗಾಯಿಸಾಲ** (ನಾ). = ತಕಾವಿ : ಸರ್ಕಾರದಿಂದ ರೈತರಿಗೆ ತಕಾವಿ ಸಾಲ (ಗ್ರಾಮಾಕ.೧೫೯). **ತಗಾಯಿಸಾಲ:** ತಗಾಯಿಸಾಲ ಮಂಜೂರ ಮಾಡುವ ಬಗ್ಗೆ ರೈತರು ಅಧಿಕಾರಿಗೆ ಅರ್ಜಿಮಾಡಿಕೊಂಡರು (ಕರವೀ. ೬೩).

[ ತಕಾವಿ + ಸಾಲ₁ ]

**ತಕ್ಕ₁** (ನಾ). ೧. ಯೋಗ್ಯನಾದವನು ; ಅರ್ಹನಾದವನು : ಸಮರ್ಥ ನಾದವನು: ಮಂದರಾಚಲಮಂ ತಂದವನಾವನಾತನೆ ವಲಂ ತಕ್ಕಂ ಪೆಱರ್ ತಕ್ಕರೇ (ಪಂಪಭಾ. ೬-೪೦) ; ಸೇನೆಯ ಬಹುಳತೆಯ ಲೆಕ್ಕಿಸಲ್ ತಕ್ಕನಾವಂ (ಕುಸುಮಾ. ೩-೧೪) ; ತಕ್ಕರಿಲ್ಲದ ಸಭೆ ಮದಾಂಬುವನುಕ್ಕದಿಭ (ಸಾಳ್ವಭಾ. ೩-೧೧) ;ತಕ್ಕನ್ ತಕ್ಕವೊಲ್ ಬಾಟ್ಟಪನ್ (ಅಶ್ವಶಾ. ೧೯-೪೦೩). ೨. ಒಳ್ಳೆಯವನು ; ಸಜ್ಜನ : "ಕುಳಜಾತಂ ತಕ್ಕನಾರ್ಯಂ ಸುಜನನಭಿಜನಂ ಸಾಧು ಸದ್ವೃತ್ತಸಭ್ಯಂ" (ವಸ್ತುಕೋ. ೧೦೦-೧೧) ; ತಕ್ಕನಂ ಪೊಲೆಯುನೆ ಮಾಟ್ಟಿ ಪಮಂ ಪೊಲೆಯನಂ ತಕ್ಕನೆ ಮಾಟ್ಟ . . . ನೃಪಚಿತ್ತವೃತ್ತಿ ಸಂಚಲಂ (ಪಂಪಭಾ. ೧೨-೯೨) ; ಪಾಪಕ್ಕಂಜುಗುಂ ತಕ್ಕಂ (ಭಾಷಾಭೂ. ೮೧ ಉದಾ) ; ಮಕ್ಕಳಾಟಿಕೆಯಾದಡಾಗಲಿ ತಕ್ಕರಲ್ಲೆಂದೆನಲಿ ಸಲಹುವಡಕ್ಕ ಸೈರಂಧ್ರಿಯನು ಸೇರಿಸಬೇಕು ತನಗೆಂದ (ಕುಮ್ಯಾವಿ. ೨-೪೭) : ತಕ್ಕರ ಗೋಷ್ಠಿ ತನೂದರಿಯರ ಪೊಸ ತಕ್ಕೆ . . . ಹೃದಯಕ್ಕೆ ವಿಲಾಸಮನೀವುದು (ಜಯುಕಾ. ೧-೩೪). ೩. ಹಿತವನ್ನು ಬಯಸುವವನು ; ಗೆಳೆಯ : "ತಕ್ಕನೆಂದು ಹಿತವಂ" (ಕಬಿಸಾ. ೧೮-೬೭೧) ; "ಹಿತವಂ ತಕ್ಕನೆನಿಸಿರ್ಕು" (ಕಬ್ಬಿಕ್ಕೆ. ೩೭) ; ನಿನ್ನ ಕೆಳೆ ಟಕ್ಕರ ಕೆಳೆಯಂತಕ್ಕುಮಲ್ಲದೆ ತಕ್ಕರ ಕೆಳೆಯಂತೊಪ್ಪಲಟಿಯದು (ಪಂಚತಂ. ೧೨೩-೧೯) : ನೆಯ್ದಿಲ ತಕ್ಕನುದಯಗಿರಿಶಿಖರಮನೇಱಲ್ (ಜಯುಕಾ. ೧೧-೩೯). ೪. ಊರಿನ ಮುಖ್ಯಸ್ಥ : "ಲಾ ಅಪ್ಪಯ್ಯ, ತಕ್ಕರಿ ದಾರೇನೊ?" ಎಂದನು (ಚಿಕರಾ. ೩೪) : ನೀನು ಇಲ್ಲದುದು ಒಂದು ದೊಡ್ಡ ಕೊರತೆಯಾಯಿತೆಂದು ಊರ ತಕ್ಕ ಮತ್ತು ಆರುವರು ಹೇಳಿಕೊಂಡರು (ನಡದಾ. III, ೧೧೩೯). 'ಗ್ರಾಮತಕ್ಕ' ಪರಾ.

[ ತಕ್ಕು₂ + – ಅ₇. / ಕೊಡ. ತಕ್ಕೆ ]

**ತಕ್ಕ₂** 'ತಗು' ಪರಾ.

**ತಕ್ಕಡಿ₁** (ನಾ). ವಸ್ತುಗಳನ್ನು ತೂಕಮಾಡುವ ಸಾಧನ; ತ್ರಾಸು: ರತ್ನ ಪರೀಕ್ಷಕರು ಯಣಿಸಲಶಕ್ಯರಾಗಿ ತಕ್ಕಡಿಗಳಿಂದಾ ಮಣಿ ಯಿಷ್ಟೆಂದು ತೀವದವರಲ್ಲಾ (ಸೌಗಂಧಿ. ೭೩೩-೧೯) ; ಗೀತೆಯು ಪ್ರತಿಯೊಂದು ವಿಷಯದಲ್ಲಿ ತಕ್ಕಡಿಯನ್ನು ಸಮತೂಕವನ್ನಾಗಿ ಹಿಡಿಯಲು ಪ್ರಯತ್ನಿಸುತ್ತದೆ (ಗೀತಾಸ. ೧೨೩): ತಕ್ಕಡಿಗೋ ಬೇಡ ಕಾಣೆ ತೂಗುತಿರಲಿ ಸತ್ಯವಾಣಿ (ಅರಳು.೪೦೦-೩). **ತಕ್ಕಡಿ ಹಿಡಿ**=೧. ತೂಗು : ತೂಕಮಾಡು. ೨. ವ್ಯಾಪಾರಮಾಡು. ೩. ಪರೀಕ್ಷಿಸು: ಬೆಲೆಕಟ್ಟು: ಪರಿಶೀಲಿಸಲಿ, ತಕ್ಕಡಿ ಹಿಡಿಯಲಿ, ಕೇರಲಿ, ತೂರಲಿ (ಕಬಿಸಾ. ೧೪ ಪೀಠಿಕೆ). [ ದೇ.॥ ತಮಿ. ತಕ್ಕಟಿ, ತಕ್ಕಟ್ಟೈ ; ಮಲ. ತಕ್ಕಡಿ ; ತುಳು. ತಕ್ಕಡಿ ; ತೆಲು. ತಕ್ಕೆಡ ]

**ತಕ್ಕಡಿ₂** (ನಾ). ಮೋಸ : ಏಣಿಕಮಲ್ಲದೆ ಪೊಲ್ಲದಾಗೆಣಿಗೆ ದೊರೆಕೊಟ್ಟಕೊಟ್ಟ ತೆಱನಲ್ಲದೆ ನೆಱೆಯ ಬರಲೆ ತಕ್ಕಡಿಯಲ್ಲಿ ಬೀಸುವಲ್ಲಿಯೆ ಬೀಸಲಱಿದೆಯಲ್ಲ . . . ಆಸುವನುಂ ಕೂಕುವನುಂ ಬೀಸುವನುಂ ಗಡಯೆ ನೆಗಟ್ಟ ತಕ್ಕಡಿಯೊಳೆನುತ್ತಾಸದೆಯು ಕುಂಕದೆಯುಂ ಬೀಸದೆಯು ಬಿದ್ದ ಮೊಟಿಗುಮುಟಿವ ಬೆಡಂಗಂ (ಎಕ. II, ೧೩೩- ೧೨೪ ; 982).

[ ದೇ.॥ ತಮಿ. ತಕ್ಕಟ : ತೆಲು. ತಕ್ಕಿಡಿ ]

**ತಕ್ಕಡಿಗ** (ನಾ). ತಕ್ಕಡಿ ಹಿಡಿಯುವವನು : ವ್ಯಾಪಾರಿ.

[ ತಕ್ಕಡಿ₁ + – ಗ₂ ]

**ತಕ್ಕಡುಗುದುರೆ** (ನಾ). ಯೋಗ್ಯವಾದ ಅಶ್ವ : ಚುರುಕಾದ ಕುದುರೆ : ಲಂಡಿ ಸವೆದು ಹೋದರೆ ಬಿಚ್ಚುವುದ ತಾ ಕಂಡು ತಕ್ಕಡುಗುದುರೆಯನು ಕೊಂಡು ಬಂದೀ ಹುಯ್ಯಲೊಳಗೆಱಗುವೆನೆಂದು ಬಂಡಾದ ಬೆನಕರಾವುತನು (ಮೋಹತ. ೩೮-೬೨). [ ತಕ್ಕಡು₀ (P ←ಮರಾ. ತಾಖಿಡಾ) + ಕುದುರೆ ]

**ತಕ್ಕನೆ** (ಅ). ಒಮ್ಮೆಲೆ : ಥಕ್ಕನೆ : ಎನೆ ನಕ್ಕನ್ ತಕ್ಕನ್ ತಕ್ಕನತಿಕ್ರಮಣೀಯವಿವಾ ಜಯೋತ್ಸವದೊಳ್ (ವಿಪ್ಪುಪು. ೧೫-೧೧೩).

[ ತಕ್₀ + – ಅನೆ₁ ]

**ತಕ್ಕಯಿಸು** 'ತಟ್ಕೈಸು' ನೋ.

**ತಕ್ಕಲಿ** (ನಾ). ಒಂದು ಬಗೆಯ ಔಷಧಿ ಮೂಲಿಕೆ : ಕರ್ಕಾಟಕಶೃಂಗಿ, ಮರದರಿಸಿನ . . . ತಾರೆಬೇರು, ತಕ್ಕಲಿ ಇವಂ ಕಷಾಯವಿಟ್ಟು ಕೊಡಲು ವಾತಜ್ವರ ನಿಲ್ಲುವುದು (ಸಕವೈ. ೬೯). 'ತಕ್ಕಿಲ್₁' ಪರಾ. [ ? ]

**ತಕ್ಕಲು** 'ತಕ್ಕಿಲ್₂' ನೋ.

**ತಕ್ಕವಲ** (ನಾ). = ತಕ್ಕೋಲ₂ ೧ : ಉಪಯುಕ್ತಮಪ್ಪ ತಕ್ಕವಲ ಪುಟ್ಟಿಯೇಲಕ್ಕಿ[ಪಾಠಾಂ. ತಕ್ಕಪ್ಪವಲಘಟ್ಟಿ] ತಗರಮಲಯಜವಿನಿತಂ . . . ಉಪಸೇವಿಸೆ ಪೊಗೆಯಿಸೊಗೆದ ಬಟಲಿಕೆಯಟಿಗುಂ (ಜಮದ. ೨-೧೮೪).

[ <ಸಂ. ತಕ್ಕೋಲ ]

**ತಕ್ಕವಿಸು** 'ತಟ್ಕೈಸು' ನೋ.

**ತಕ್ಕಸೈಲ** (ನಾ). ಮೈಲುತುತ್ಥ : ರಸಾಂಜನ : "ತಾರ್ಕ್ಷ್ಯ-ತಕ್ಕಸೈಲ" (ಔಷಧಿ. ೬೬). [ <ಸಂ. ತಾರ್ಕ್ಷ್ಯಶೈಲ ]

**ತಕ್ಕಳಿ** 'ತಕ್ಕಟಿ' ನೋ.

**ತಕ್ಕಳಿಸು**(ಕ್ರಿ). (ನೀರು ಮೊದಲಾದುವನ್ನು) ಚಿಮುಕಿಸು; ಸಿಂಪಡಿಸು: ತುಂಬಾ ಧೂಳಿದ್ದಿದೆ, ನೀರು ತಕ್ಕಳಿಸಬೇಕು (ರೂಢಿ). [ ? + – ಇಸು₁ ]

**ತಕ್ಕಟಿ, ತಕ್ಕಳಿ**(ಕ್ರಿ).೧. ಘನತೆಯನ್ನು ಕಳೆದುಕೊಳ್ಳು; ಹಿರಿಮೆಗುಂದು: ಘನತೆಗೆಡು : ತಕ್ಕಟಿದೆನಗೆ ಸಪತ್ನಿಯರಿಕ್ಕುಂಗೂಟಿಂಗೆ ಬಯಸಿ ಪಾರ್ದಿರ್ಪ ವಿಷಾದಕ್ಕೆ ಗುರಿಯಪ್ಪ ದುರ್ಯಶಮುಕ್ಕುಂ ತನಯಂ ತಪಕ್ಕೆ ಪಕ್ಕಾಗಲೊಡಂ (ಪಂರಾಮಾ. ೬-೪೧). ೨. ಎದೆಗುಂದು : ಶಕ್ತಿಗುಂದು : ಧೈರ್ಯವುಡುಗು : ಇಭರಿಪುವಂ ತಕ್ಕಟಿವಿನೆಗಂ ನೊಂದು ನಿಂದು ಕೊಂದುದಿಭೇಂದ್ರಂ (ಶಾಂತಿಪು. ೨-೧೦೬) ; ಮಂಜುವಕ್ಕದ ನಾಯಕರನಾಜಿಯೊಳ್ಕಂಡನಿಸುಂ ತಕ್ಕಟಿದನೆ ಬಗೆಯೊಳ್ ಬೆಳ್ವಕ್ಕಿಯ ಪಿಂಡಿಂಗಮಂದಿರಂ

ಸರಿಗಂಡಂ (ಪಂರಾಮಾ. ೯-೩೮) ; ತಕ್ಕಟಿಯದೆಕ್ಕತುಳಂ ಪೊಣರ್ದುರ್ . . . ಒಂದನೊಂದಿಱಿಯಲಿರ್ದುವು ತಟಿತ್ತಿರದುಗ್ರು ದಂತಿಗಳ್ (ಪುಷ್ಪ. ೫-೮೦); ಪಜ್ಜೆ ಪಜ್ಜೆಗೆ ತಕ್ಕಟಿದು ಬಗೆಗುಂದಿ ಕಂಡರಂ ಬೆಸಗೊಳುತುಂ (ರಾಮಾಶ್ವ. ೧೧೦-೬). ೩. ಔಚಿತ್ಯವನ್ನು ಮೀರು ; ಮರ್ಯಾದೆಯನ್ನು ತಪ್ಪು : ನೆರೆಯೊಳಘಮರ್ಷಣದೊಳಿರ್ಪ ಮುನಿಗಳಂ ಲೆಕ್ಕಿಸದೆ ತಕ್ಕಟಿದು ಮುಕ್ಕುಳಿಸಿ ಜಕ್ಕುಳಿಸಿದಂ (ರಾಮಾಶ್ವ. ೧೩೭-೩೧). ತಕ್ಕಳಿ : ೨. ಬಿಕ್ಕುತುಂ ಬೀಗುತುಂ ಬಲ್ಪಳಿದು ಬಾಡುತುಂ ತಕ್ಕಳಿದು ತಡವಾಗಿ ಹೊರೆಯೇಱ ನೋಡುತುಂ (ನಂಬಿರ. ೭-೧೫೦): ಕೆಲ ಪೌಜು . . . ತಲ್ಲಣಂಗೊಂಡು ತಕ್ಕಳಿದು ನಿಂದೆಡೆಯಲ್ಲಿ ನಿಲ್ಲದಾಯಿತು (ಸಮ್ಮಕೌ. ೮-೫೦) ; ಪೆಂಪಳಿದರ್ ಜಗುಳ್ದರ್ ತಿಣೆದರ್ ತಕ್ಕಳಿದರ್ ಪರಪ್ಪಥಿವೀಪಾಲಕ ಬಲದವರು (ಜಯಕಾ. ೭-೧).

[ ತಕ್ಕು₂ + ಅಟಿ₁ ]

**ತಕ್ಕಾಬಿಕ್ಕಿ**, ತಕ್ಕಿಬಿಕ್ಕಿ (ನಾ). ಮೋಸ : ವಂಚನೆ : ಅಪ್ರಾಮಾಣಿಕ ವ್ಯವಹಾರ: "ತಕ್ಕಾಬಿಕ್ಕಿ—ಮೋಸತನ" (ಜಾನಕೋ. ೬೩). ತಕ್ಕಿಬಿಕ್ಕಿ: (ಅ).

[ <ತಕ್ಕು₃ ]

**ತಕ್ಕಾಮೆ** (ನಾ). ೧. ಘನತೆ : ಗೌರವ : ಜೊತೆ ತಕ್ಕರನ್ನತಾರೆ ; ಕೊಡಗ ಅದನ್ನ ತಡೆಯಬಹುದೆ ? ತಡದೆ. ತಕ್ಕಾಮೆ ಉಳಿಯತ್ತೇನು ? (ಚಿಕರಾ. ೧೦೯). ೨. ಒಡೆತನ : ಪದವಿ : ಸ್ಥಾನಮಾನ : ಇವರು ಬೇಸರಗೊಂಡ ವರಲ್ಲಿ ಮುಖ್ಯರಾದ ಜನ ಇಂಥವರು ನಾಡಿನ ಎಲ್ಲ ಸೀಮೆ ಎಲ್ಲ ತಕ್ಕಾಮೆ ಯಲ್ಲಿಯೂ ಇರುವರು (ಚಿಕರಾ. ೫೩). 'ತಕ್ಕುಮೆ' ಪರಾ.

[ ←ಕೊಡ. ತಕ್ಕಾಮೆ ]

**ತಕ್ಕಾರಿ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಬೀಜ : ತಕ್ಕಾರಿ ಯೆಂಬ ಬೀಜವಂ ಚೂರ್ಣವಂ ಮಾಡಿ ನೀರಿನಲ್ಲಿ ಕದರಿ ಗಿಡಗಳ ಬೇರಿಗೆ ಹಾಕಿದರೂ . . . ಆ ಗಿಡಗಳು ಚೆನ್ನಾಗಿ ವೃದ್ಧಿಯಂ ಹೊಂದುವದಿಲ್ಲ (ಸೌಗಂಧಿ. ೪೩೭-೭೧). 'ತಕ್ಕಿಲ್₁' ಪರಾ. [ <ಸಂ. ತರ್ಕಾರೀ ]

**ತಕ್ಕಾಳಿ** (ನಾ). ಟೊಮ್ಯಾಟೊ; ಚಪ್ಪರಬದನೆ: ತಕ್ಕಾಳಿ (ಟೊಮ್ಯಾಟೋ) ಬೇರನ್ನು ಕಷಾಯಮಾಡಿ ಕಲ್ಲಾರು ಗ ೧ ತೂಕವನ್ನು ಅರೆದು ಕಲಸಿ ತೆಗೆದುಕೊಳ್ಳಲು ಬಹುಮೂತ್ರ ನಿಲ್ಲುವುದು (ಸಕವ್ಯ. ೫೦೦ ಪರಿ) ; ಗೂದೆ ಹಣ್ಣು. ಚಪ್ಪರಬದನೆ. ಟೊಮಾಟೋ. ತಕ್ಕಾಳಿ (ಮೃಡಿಗಿ. ೫೦-೧೦೫೦) ; ವಿಟಮಿನ್ ಸತ್ವ ಅಧಿಕವಾಗಿರುವುದು ತಕ್ಕಾಳಿ ಹಣ್ಣುಗಳಲ್ಲಿ (ತರಜಿ. ೪೦).

[ ದೇ.II ತಮಿ. ಮಲ. ತಕ್ಕಾಳಿ; ತೆಲು. ತಕ್ಕಲಿ ]

**ತಕ್ಕಿಬಿಕ್ಕಿ** 'ತಕ್ಕಾಬಿಕ್ಕಿ' ನೋ.

**ತಕ್ಕಿಲ್₁**, ತಕ್ಕಿಲೆ (ನಾ). ಒಂದು ಬಗೆಯ ಮರ ; ತಗ್ಗಿಮರ : ಎಲವಂ ಪಾದರಿ ಹಾಲೆ ನುಗ್ಗೆ . . . ಬೊಬ್ಬುಲಿ ತಕ್ಕಿ[ಪಾಠಾಂ. ತೊಕ್ಕ, ತೊಲ್ಕಿ] ಲ್ಪರುಕಾಸು ನೆಲ್ಲಿ (ಸೂಕ್ತಿಸು. ೩-೩೩). ತಕ್ಕಿಲೆ: "ಜಯಾ. ಜಯಂತೀ, ತರ್ಕಾರೀ, ನಾದೇಯಾ. ವೈಜಯಂತಿಕಾ—ಈ ತಕ್ಕಿಲೇಗಿಡ. ತಗ್ಗೀಸೊಪ್ಪಿನ ಗಿಡ" (ಸಿದ್ಧೌಂತಿ. ೧೧೧): ಈಜಿಗಿಡ. ಅಗ್ನಿಮಂದ, ತಕ್ಕಿಲೆ. ಬಾಚಣಿಗೆ ಮರ (ಮೃಡಿಗಿ. ೬೪-೧೩೦೦).

**ತಕ್ಕಿಲ್₂**, ತಕಲು. ತಕ್ಕಲಂ. ತಕ್ಕಿಲು. ತರ್ಕಿಲ್ (ನಾ). ವ್ಯವಸಾಯಕ್ಕೆ ಯೋಗ್ಯವಾದ ಭೂಮಿ : ತಕ್ಕಿಲ ೩ ಮತ್ತರ್ಕ್ಕೆಯುಮಂ . . . ಬಿಟ್ಟರು (ಕಇ. II, ೧೦-೩೦ : 1080) ; ನೆಸಜುವಾಡವಾ ಗಡಿಂಬದಿಂ ತಕ್ಕಿಲ ನೆಲ ಮತ್ತ ೨ (ಸೌಇಇ. IX-I, ೩೩೩-೬೯ : 1140) ; ಹಳ್ಳದಿಂ ಪಡುವಲ್ ತಕ್ಕಿಲ ಮತ್ತರು ೩ (ಎಇ. XIV, ೩೭೨-೪೦ ; 1173) ; ಖಂಡಸ್ಫುಟಿತ ಜೀರ್ಣೋ ದ್ಧಾರವಿನ್ನಿನಿತಕ್ಕಂ ಬಿಟ್ಟ ತಕ್ಕಿಲ ಮತ್ತರ್ ೨ (ಸೌಇಇ. IX-I, ೩೯೭-೬೩ ; 1176). ತಕಲು : ಯೆರಡನೆಯ ಪರಿಸಕೆ ಪ ೨ ಮೂಱನೆಯ ಪರಿಸಕೆ ಪ ೩ ಯರಿ ಹೊಲ ತಕಲು ನೂಱಕೆ ಪ ೧ (ಎಇ. XIV, ತಿರುಮ. ೭೨-೩೩ : 1309). ತಕ್ಕಲು: ಮಣ್ಣು ವೊರಟ ಕೆಳಗಿರುವ ಕುರುಬರ ತಕ್ಕಲ ಮೂಡಣ ತೆವಿರೊತ್ತಿನಲ್ಲಿ ನೆಟ್ಟ ಕಲ್ಲು (ಎಇ. XIV, ನಂಜಸ. ೨೯೫-೨೦೭ : 1716). ತಕ್ಕಿಲು : ತೆವರಕೇರಿಯದ್ದುವಸುಗೆಯ ತಕ್ಕಿಲು ಮತ್ತರು (ಎಇ. XIII, ೪೯-೮೦ ; 1112) ; ಹಟ್ಟಣದ ದಾರಿಯಿಂ ತೆಂಕಲು ತಕ್ಕಿಲು ಒಡ್ಡಿಹಟ್ಟಿಯ ಗಡಿಂಬದ ಘಳೆಯಲು ಮತ್ತರು (ಸೌಇಇ. IX-I, ೩೯೭-೪೩ : 1177) : ಸೋಭನೇಶ್ವರದ ಹೊಲಸ ಮೇರೆ ಮನ್ನ(ತ್ರ)ಂ ತೋಂಟ್ಟ[ತ]ಕ್ಕಿಲು ಅರವನ್ನ(ತ್ರ)ರು (ಸೌಇಇ. XV, ೧೩೧-೭ : 1178) ; ಹಲವು ತಕ್ಕಿಲ ನಡುವೆ ಸವೆದ ಬೆಳೆಕ್ಕೆಯಂತೆ ಹಲವು ಬಸದಿಯ ನಡುವೆ ಸುರಹೊನ್ನೆ ಬಸದಿ ಯಗ್ಗಲಿಸಿ ಮೆಱೆಯಲು (ಸೋಮಡ. ೪-೦೫). △ತರ್ಕಿಲ್ : ನಾಗಯ್ಯ ಗೇರಿಯ ಶತದ ತರ್ಕ್ಕಿಲ್ಲೆಯ್ಯ ಮತ್ತರು ೩ (ಕಇ. II, ೯-೧೯ : 1075).

ತಕ್ಕಲು ಕೀಳು = ವ್ಯವಸಾಯದ ಭೂಮಿಯಲ್ಲಿರುವ ಕಳೆಯನ್ನು ಕೀಳಂ,—ಕಿತ್ತುಹಾಕು : ಆ ಸಾಲಿನಲ್ಲಿ ಸ್ವಲ್ಪ ತಕ್ಕಲುಕಿತ್ತು ಹೊಗೆಹಾಕ ಬೇಕೆಂದೂ ಅವರ ವಾದ (ಹಂಗಾಳ್ಳ. ೩೦೩) ; ಮೂರು ಕೊಳಗದಷ್ಟು ತಕ್ಕಲು ಕಿತ್ತು ಹೊಗೆ ಹಾಕಿದ್ದರಿಂದ ಸುಂಕಗಿಂಕ ಕಳೆದು ಅರುವತ್ತು ವರಹ ಬಂತು (ಹಂಗಾಳ್ಳ. ೩೦೩).

**ತಕ್ಕಿಲು** 'ತಕ್ಕಿಲ್₂' ನೋ.

**ತಕ್ಕಿಲೆ** 'ತಕ್ಕಿಲ್₁' ನೋ.

**ತಕ್ಕಿಸು₁** (ಕ್ರಿ). ಅಪೇಕ್ಷಿಸು ; ಬಯಸು : ತಕ್ಕಿಸಲೆ ತಕ್ಕ ಶೋಭೆಗೆ ಪಕ್ಕಾ ದೊಡಮರಸನಲ್ಲಿ ಪುಗಲೊಲ್ಲದೊಡಂ ಪಕ್ಕಣಮಂ ಬಲ್ಪಿಂದಂ ಪೊಕ್ಕುವು ನಿಯಮಿಸುವರಾರೊ ಕಣ್ಣಂ ಮನಮಂ (ಲೀಲಾವ. ೮-೪೦) ; ಅಸಮಶರನ ತನುವಾಂತನೊಳೆಸೆಯದು ತನಗಿನಿತು ಶೋಭೆಯೆಂದೊಲವಿಂ ತಕ್ಕಿಸಿದುದು ಕಡುಗಾಡಿಯೊನಲ್ ವಸುದೇವನ ಗಂಡಗಾಡಿ ಗಣನೆಗಳುಂಬಂ (ಮಹಾನೇ. ೪-೨). [ ತಕ್ಕು₂ + –ಇಸು₃ ]

**ತಕ್ಕಿಸು₂** 'ತಟ್ಕಿಸು' ನೋ.

**ತಕ್ಕುಟಿ** (ಕ್ರಿ). ಸಾಮರ್ಥ್ಯ ತಗ್ಗು ; ಶಕ್ತಿಗುಂದು : ವಿಳಯಜಳಧರದ ಪೊಲ್ ಕಡುಮುಳಿಸಿಂ ಖಚರೇಂದ್ರಸೇನೆ ಕವಿದೆನಸುಂ ತಕ್ಕುಟಿಯೆ ರಿಪು ಬಲದ ಮೇಲಾಗಳೆ ಸುರಿದುದು ತರಣೆ ಸರಲ ಬಲುಸರಿವಟಿಯಿಂ (ಶಾಂತೀಶ. ೩-೯೩). [ ತಕ್ಕು₂ + ಇಟಿ ]

**ತಕ್ಕು₁** (ಕ್ರಿ). ೧. ಪಡೆ ; ತೆಗೆದುಕೊಳ್ಳು : ಎಮ್ಮಣ್ಣ ಪಾತಿಯಿಂ ರಣವ ಜಯಿಸಲು ದಿವ್ಯವಸ್ತುಗಳ ನೀ ತಕ್ಕಿಕೊಂಡು ಬಹುದಯ್ಯಾ ಸೈರಂಧ್ರಿ ಯೆಂದುರ ಹರಸಿ ಬೀಳ್ಕೊಟ್ಟಳು (ಲಕ್ಷ್ಮಭಾ. ೪-೪-೬). 'ತೆಗೆ₁' ಪರಾ. ೨. (?) : ಮೆರೆವ ಮಧುಮಾಸವಿದು ಪರ್ವತರ್ತುವಲ್ಲಲೇ ಬೆರಗಿದೇನುಕ್ಕಿ ದಂತೆತಂದು ಪೆರ್ಜಲಂ ಪರಿದುಕ್ಕಿ ತಕ್ಕುತಿದೆ ಮಚ್ಚಿವಾರಾಧನೆಯು ವೊಂದಲ್ಲದೆರಡು ವೇಳೆ (ಪರಶು. ೧೩-೨೯). [ ? ]

**ತಕ್ಕು₂**, ತರ್ಕು (ನಾ). ೧. ಶ್ರೇಷ್ಠತೆ ; ಘನತೆ; ದೊಡ್ಡಸ್ತಿಕೆ : ಹಿರಿಮೆ: ಯೋಗ್ಯತೆ : ಅಂತದಟರನೊಂದೆವೊಯ್ದುಮೆರಡುಂ ಬಲಮೆನ್ನನೆ ನೋಡೆ ತಕ್ಕಿನೆನ್ನದಟುಮನೆನ್ನ ವೀರಮುಮನಾಜಿಯೊಳೆನ್ನರಸಂಗೆ ತೋಱುವೆಂ (ಪಂಪಭಾ. ೧೦-೪೧) ; ಪುಸಿವುದೆ ತಕ್ಕು ಕೊಟ್ಟಟಿಪಿಕೊಳ್ವುದೆ ಮನ್ನಣಂ (ಎಇ. II, ೧೩೩-೪೫ : 982) ; ತಕ್ಕಿನ ಪವಳದ ಸಂಕೆಯ ಟಿಕ್ಕೆಯ ಮಣಿ ಗಳನೇಕವಂ . . . ಸೂಱಿಗೊಳ್ವನವನುತ್ಸವದಿಂ (ಧರ್ಮಾಮೃ. ೩-೩೬) ; ಒಕ್ಕಲ್ತನವುಮನಱವಿನ ತಕ್ಕುಮನಱಿವವಗುಣಂಗಳೆಮಗೇವುವು(ಬಂಹರಿ. ೧-೩೦) ; ಸದ್ವಿದ್ಯರ್ ಸಭಾಮಧ್ಯದೊಳ್ ಪಲಬರ್ ಸತ್ಕವಿಗಿತ್ತ ತಕ್ಕಿನ ಪೆಸರ್ ಸಲ್ವಂತೆ ನೀಚಂಗೆ . . . ಗಾವಿಲನೊರ್ವಂ ಕುಡೆ ಕೊಂಡ ತೊಂಡು ವೆಸರಿಂದೇಂ ಸಲ್ವುದೇ ನಿಲ್ವುದೇ (ಧರ್ಮನಾ. ೧-೪೯). ೨. ತಕ್ಕುದು: ಯೋಗ್ಯವಾದುದು ; ಉಚಿತವಾದುದು : ರಕ್ಕಸನ ಮಾಡದೊಳಗಂ ಪೊಕ್ಕಾವಂ ಸುಖದಿನಿರ್ದನಾತಂಗೆ ಕರಂ ತಕ್ಕಪ್ಪೆ[ಪಾಠಾಂ. ತಕ್ಕಪ]ನ್ನಾತ್ಮ ಜೆಯಂ ಮಿಕ್ಕಿರ್ದಾ ನಾಡುಮಂ ನಿತಾಂತಂ ಕುಡುವೆಂ (ಜೀವಸಂ. ೩೦೫-೪೯);

ಮಾರ್ಗವಂ ತಕ್ಕೈನಿಸಿ ಪನ್ನೆರಡು ಸಾವಿರದ ಗಾವುದಮ್ಮಾಕಸ್ಮಿದನುದಿನಕೆ ಪೋಪವನಾರುಯೆನುತಲಾ ಮಂತ್ರಿ ಸಹ ಯೋಚಿಸುತಿರೆ (ತುರಂಗ. ೩೨-೧೧). ೩. ಯೋಗ್ಯವಾದ ಮಾತು ; ನಾಣ್ಣುಡಿ : ಗಾದೆ : ಕಾಲಕ್ ಬುದ್ದವಂಡ ಎದೆ ಚವುಟತ್ತ್ ಎಂಬ ಕೊಡವ ತಕ್ಕನ್ನು ಅರಿತು ನಡೆಯುವ ವರು ದೊರೆಗಳು (ಹುಲಿಹಾ. ೮೫) ; ಕೈಲಾಗದವನಿಗೆ ಮೂಗಿನ ತುದಿಯಲ್ಲಿ ಚೊಡಿ ಎಂಬ ತಕ್ಕನ್ನು ನೀನು ಕೇಳಿಲ್ಲವೆ? (ಹುಲಿಹಾ. ೧೩೧). ೪. ಶೌರ್ಯ; ಸಾಮರ್ಥ್ಯ ; ಪರಾಕ್ರಮ : “ಪನ್ನತಿಕೆ, ಪೆಟ್ಟುವೆರ್ಚು, ತಕ್ಕು . . . ಆರ್ಪು, ಅಣ್ಮು—ಈ ೮ ಪರಾಕ್ರಮಂ” (ಕಶಸಾ. ೧೩-೨೬೩) ; ನಲ್ಲಂಬಿಂದಿಸೆ ಪುಷ್ಪಬಾಣನೆರ್ದೆಯುಂ ಬೆಂಬಿಟ್ಟು ಬೆಳ್ಪಾಗಿ ತಕ್ಕೆಲ್ಲಂ ಕೆಟ್ಟೆರ್ದೆಗೆಟ್ಟು ಜಂಗಮಲತಾ ಸಲ್ಲೀಲೆಯರ್ ಬಾಲೆಯರ್ ಚೆಲ್ಲಂ ಬೇಂಟದ ತೋಟಿಯೊಳ್ ತೊಡರೆ (ಕಾವ್ಯಸಾ. ೫೫೧ ಶೂದ್ರಕ) ; ಕಡುಗೆಯ್ಯನಾಗಿ ಶೀಘ್ರಸಂಧಾನವಿಸು ವಶ್ವಗ್ರೀವನ ತಕ್ಕುಂ ಬೇಗಯ್ಕೆಯುಂ ಕಿಡೆ (ಶಾಂತಿಪು. ೫-೬೦ ವ) ; ತಕ್ಕಿನಿನೀ ಶನೆಚ್ಚ ತಿಮಿರೇಷುಗಿನೇಷುವನಗ್ನಿಮಿತ್ರ ಬಾಣಕ್ಕಹಿಬಾಣಮಂ . . . ಅಧೋಕ್ಷಜನೆಚ್ಚು ಪೊಡರ್ಪುದೋಱಿದಂ (ಜಗವಿ. ೧೮-೨೯) ; ಧುರದೊಳಿ ದಿರ್ಚ್ಚಿದ ಪಗೆವರನುರವಣೆಯಿಂ ಗೆಲ್ವ ತಕ್ಕು . . . ಅಂಗರಕ್ಕೆಗೆ ನಿಜಂ (ಎಕ. V, ಅರಸೀ. ೩೯-೩೦ : 1186) ; ವಿಕ್ಕರಸನುಂ ತಕ್ಕಂ ಬಿಸುಟೋಡಿದಂ (ಮ್ಯಆರಿ. ೧೯೪೦, ೧-೩೨ : 1300) ; ಎಕ್ಕಲಗಳು ತಮ್ಮ ತೆಗೆದ ಜಾಯಿಲಗಳ ನಿಕ್ಕಡಿಮಾಡಿ ಹಾಯ್ದುದನು ತ[ಪಾಠಾಂ. ಟ]ಕ್ಕಿನ ಬೇಡರ ಕೆಡಹಿದುದನು ಕಂಡಿಕ್ಕಿದನಾ ವನಚರನು (ನೇಮಿಸಂ. ೨-೫೬) : ಎಕ್ಕೆಯೊಳೊಕ್ಕು ಪಳಂಚುವ ಪಾಂಗಿಂ ತಕ್ಕು ಮಿಗಿಲ್ಕೆಕ್ಕತುಳಂ ಪೊರ್ಕುಳಿವೊಕ್ಕು ಕರಂ ಖಾಡಾಖಾಡಿ ಯೊಳುಱದಿಱಿದರ್ ತವ್ಮೊಳಗೆ (ಜಯುಕಾ. ೬-೩೧). ೫. ಬೆಡಗು ; ಠೀವಿ : ಅವಿರಳವಾದ ತುಂಗಕುಚಭಾರದೆ ತೋಳ್ಸೆಣೆದಿಟ್ಟ ತಕ್ಕಿನೊಳ್ ಕವಣೆಯ ಗುಂಡು ಪಾಯವು ಮೃಗಾವಳಿ ಪಾಯವು . . . ಪಾಂಥರೆರ್ದೆ ಪವ್ವನೆ ಪಾಱುವುವಾ ಪ್ರದೇಶದೊಳ್ (ಅನಂಪು. ೧-೮೨). ೬. ಸ್ನೇಹ ; ಪ್ರೀತಿ : “ತಕ್ಕು, ಅಟ್ಕಱು, ಒಲಿಲ್ . . . ಎಱಕಂ, ಒಪು—ಈ ೮ ಸ್ನೇಹಕ್ಕೆ ಪೆಸರ್” (ಕಶಸಾ. ೧೯-೩೯೦); “ತಕ್ಕೆಂಬುದು ನೇಹ ಮಪ್ಪುದು” (ಚತುನಿ. ೩೬) ; “ಎಱಕಂ ತಕ್ಕಟ್ಕಱು ಕೂರ್ಪೊಲುಂ ಕಾದಲ್ಮೆಯೆನ್ನಲಿವು ಸುಸ್ನೇಹಂ” (ಕವಿಕಂ. ೧೬೩). ೭. ಆಸೆ ; ಇಚ್ಛೆ ; ಉತ್ಸಾಹ : ಕ್ಷಿತಿತಲಮಂ ಗೆಲ್ದಿರ್ದಪ್ರತಿಮಲ್ಲನನಿಕ್ಕಿ ಮುಯ್ವನಣ ಮಾನದೆ ದರ್ಪಿತ ದುರಿತಮಲ್ಲನುಮನುಡಿವ ತಕ್ಕಿನಿಂ ಸಭೆಗೆ ನಡೆದ ನಿಂದ್ರಾರ್ಚಿತನಾ (ಆದಿಪು. ೧೪-೧೩೪); ನಡೆತಂದರಾಜಿಗಿರ್ವಲದಲರಾತಿ ನಾಯಕರುಮೊರ್ಬರನೊರ್ಬರೆ ಗೆಲ್ವ ತಕ್ಕಿನೊಳ್ (ಪಂಪಭಾ. ೧೦-೫೨) ; ಮುಕ್ಕುವೋಗದಳುರ್ಕುಮಂ ನೋಟಕರಪ್ಪಿನಮಪ್ಪವರಿಂ ಪೊಗೞಿಸು ವೆನೆಂದು ತಱಿಸಂದು ತಮ್ಮುತಿರ್ವರುಮನಿಕ್ಕುವ ತಕ್ಕು ಕೈಮಿಕ್ಕು ನಿಲೆ (ಶಾಂತಿಪು. ೪-೩೬ ವ) : ಮಹೇಂದ್ರಂ ಪುರಮಂ ಪೊಱಮಟ್ಟು ಮಱುವಕ್ಕಮ ನಿಕ್ಕುವ ತಕ್ಕು ಮಿಕ್ಕು ಬರೆ ಕಡಂಗಿ ಕಾದುವಲ್ಲಿ (ಪಂರಾಮಾ. ೧೧-೫೧ ವ) ; ಪ್ರತಿರೋಧಕನಾರಟಗೊಳ್ವ ತಕ್ಕಿನವಂ (ವಸುಕೋ. ೬೫-೮೨) ; ಈ ಗೋಪಾಲಬಾಲಕರಂ ಮಟ್ಗಿಸುವೆನೆಂಬ ತಕ್ಕು ಮಿಕ್ಕು ಬರೆ (ಜಗವಿ. ೬-೯ ವ) ; ಬೆಳ್ಳಿಯ ಬಳ್ಳಿಮಾಡಮಂ ತಕ್ಕಿನೊಳೇಱಿ ನೋಡಿದಳ ದೊರ್ವಳಗುರ್ವಿಪ ಕರ್ಪುವಿಲ್ಲನಂ (ಕಬ್ಬಿಕಾ. ೩೪೦). ೮. ನೆರವು; ಬೆಂಬಲ; ಆಶ್ರಯ: ‘ತಕ್ಕುಗುಂಡು’ ಪರಾ. ೯. ಕಾವ್ಯದಲ್ಲಿರುವ ಔಚಿತ್ಯ : ಕವಿತೆಯ ಬರ್ದು ಮೆಯ್ಸಿರಿ ಬೆಡಂಗು ರಸಂ ಚದುರೊಳ್ಪು . . . ಸವಿ ತಕ್ಕು ಪೊದಳ್ಕೆ ಬಿನ್ನಣಂ . . . ಪೊಡರ್ಪವರಿನಿತಿಂತುಟೆಂದಳೆದರಂ ಧರೆ, ಪೇಳ್ವೆಯ ತಾಳ್ದೆಯೆಂದದಂ ? (ಸಂಸಪ. ೬-೧೦). △ ತರ್ಕು : ೪. ನಾಳೆ ನೋಡುವೆನಾತನ ಚಕ್ರದುರ್ಕುಮಂ ಮೊನೆಗನುಕೂಲರಾಗಿ ನೆಱಪಂದ ನೃಪಾಳರ ತೋಳ ತರ್ಕುಮಂ (ಮಹಾನೇ. ೧೧-೯೯). [ <ತಗು ]

ತಕ್ಕು$_3$ ‘ಟಕ್ಕು$_1$’ ನೋ.

ತಕ್ಕು$_4$ ‘ತಟ್ಕು’ ನೋ.

ತಕ್ಕು$_5$ (ನಾ). ಒಂದು ಬಗೆಯ ಔಷಧಿ ಸಸ್ಯ : “ಷಟ್ಚರಣ – ತಕ್ಕು, ಗರುಗ” (ಓಷಧಿ. ೧೬೩).

ತಕ್ಕುಂಗೆಡು, ತಕ್ಕುಗಿಡು, ತಕ್ಕುಗೆಡು (ಕ್ರಿ). ೧. ಘನತೆಯನ್ನು ಕಳೆದು ಕೊಳ್ಳು ; ಹೀನಸ್ಥಿತಿಗೆ ಬರು ; ದೈನ್ಯಾವಸ್ಥೆಯನ್ನು ಹೊಂದು : ತಾಮಸವಿಲ್ಲದೆ ತಕ್ಕುಂಗೆಡದಭಿರಾಮಂ ರಿಪುನಿರ್ಧೂಮಂ ಶರಣಬಲಾಮಂ ತೇಜೋಧಾಮಂ . . . ಕುಳ್ಳಿದು ಸೋಮೇಶನನೀಕ್ಷಿಸಿ (ಉದ್ಭದೇ. ೩-೬೦). ತಕ್ಕುಗಿಡು : ೧. ಬಾಹುಬಲವಿಲ್ಲದ ರಾಜಪುತ್ರನಂತೆ ತಕ್ಕುಗೆಟ್ಟು (ಶಾಂತಿಪು. ೪-೩೦ ವ). ೨. ಶಕ್ತಿಗುಂದು ; ನಿರ್ಬಲನಾಗು : ತೇರಚ್ಚಂ ಮುಱಿಯೆಚ್ಚಂ . . . ಸಾರಥಿಯಂ ಕೆಡೆಯೆಚ್ಚಂ ಮಾರುತಿಯ ರಣಕ್ಕೆ ತಕ್ಕುಗಿಡದವನಾವಂ (ಪಂರಾಮಾ. ೧೧-೫೨). ತಕ್ಕುಗೆಡು : ೧. ತಕ್ಕುಗೆಟ್ಟಲ್ಲ ಶಿವಶಿವಯೆನುತ್ತಂ ಜನಂ (ಮಱರ. ದೇ. ೭೫-೧೬) ; ಚಿತ್ರಜಚಾಪಂ ಮನಮಂ ಸುತ್ತಿರೆ ಮಿಗೆ ತಕ್ಕುಗೆಟ್ಟು ಪೌರೋಹಿತನುದ್ವೃತ್ತತೆಯನೊಕ್ಕು ಧೈರ್ಯಗೆಡುತ್ತಂ ದತ್ತೂರವಂ ಸವಿದ ಮಾಟ್ಕೆಯೊಳಿರ್ದಂ (ಪುಣ್ಯಾಸ್ರ. ೧-೯೨). [ ತಕ್ಕು$_2$ + ಕೆಡು$_1$ ]

ತಕ್ಕುಗಿಡು ‘ತಕ್ಕುಂಗೆಡು’ ನೋ.

ತಕ್ಕುಗುಡು (ಕ್ರಿ). ನೆರವನ್ನು ನೀಡು ; ಒತ್ತಾಸೆಯಾಗು ; ಬೆಂಬಲ ವಾಗು : ಬೆರಲೆಡೆಯೊಳಡಸಿದ ಕಪ್ಪುರವಳುಕಿನೊಳೆ ನಗಿಸುವ ಱೋಡಗರ ನಿಡುವ ನೆವದಿಂ ಪರಿವ ಮುಗುಳ್ನಗೆಯ ಮುಗುಳ್ವೆಳಗಿಂಗೆ ತಕ್ಕುಗುಡು ವಂತೆಯುಂ ಕೋಮಳಾಂಗುಳಿಜಾಳಕಂ ಮೆಱೆಯೆ (ಅನಂಪು. ೮-೭ ವ).

[ ತಕ್ಕು$_2$ + ಕುಡು$_1$ (<ಕೊಡು$_1$) ]

ತಕ್ಕುಗೆಡಿಸು (ಕ್ರಿ). ಘನತೆಯನ್ನು ತಗ್ಗಿಸು ; ಹಿರಿಮೆಯನ್ನು ಕುಂದಿಸು : ಕರೆಸೊವ್ಮೆ ಬಾರದಿರ್ದರೆ ತಕ್ಕುಗೆಡಿಪೆನೆಂದೊರೆದ ಚೋಳನ ಬಱುನುಡಿಯ ಶಿರಸ[ಸಾ] ವಹಿಸಿಕೊಂಡು (ಭೃರವೇ. ೧-೧೪೩): ತೆಕ್ಕದಿರ್ಪ ಮುನಿಸಾಪತ್ನ ಸಂತಾನಮಂ ತಕ್ಕುಗೆಡಿಸಿ ರಾಜ್ಯಂಗೆಯ್ವನಾ ಪಣ್ಯವಧುವಾಟಿಯೊಳಗನಂಗಂ (ಉದ್ಭದೇ. ೪-೧೬). [ ತಕ್ಕು$_2$ + ಕೆಡಿಸು$_1$ ]

ತಕ್ಕುಗೆಡು ‘ತಕ್ಕುಂಗೆಡು’ ನೋ.

ತಕ್ಕುಗೊಡು (ಕ್ರಿ). ವಂಚಿಸು ; ಟಕ್ಕಿಸು : ಚಿಂತಾಗತಿಯುಂ ತನ್ನ ಪೆಸರಂ ನನ್ನಿಮಾಡಿ ತರುಣೆಗೆ ತಕ್ಕುಗೊಟ್ಟು ಪೆಱಗೆ ಪಾಱಿ ಪೋಗಿ (ಅಧನೇ. ೩-೧೮ ವ). [ ತಕ್ಕು$_3$ (<ಟಕ್ಕು$_1$) + ಕೊಡು$_1$ ]

ತಕ್ಕುದಕ್ಕು (ನಾ). ಖಡ್ಗಯುದ್ಧದ ಒಂದು ವರಸೆ (?) : ಪುಸಿ ನಸು ವಂಚನೆ ನೋರ್ಪನುವಸಿದಗಲಿತು ತಕ್ಕುದಕ್ಕು ಪಗೆ ಕೆಯ್ಪುಗೆ ಕೆಯ್ಯುಸುರ್ ನುಸುಳೆಂಬ ಕೇಣದ ಕುಸುರಿಯುನಱಿದಿಱಿದು ಮೆಱೆದು ನೆಱೆದುಱದರೆಬರ್ (ಪಂಪಭಾ. ೧೦-೮೧).

[ ☞ಇಲ್ಲಿ ತಕ್ಕು ಮತ್ತು ದಕ್ಕು ಎಂಬವು ಭಿನ್ನ ಶಬ್ದಗಳಿರಬಹುದು ]

ತಕ್ಕುಬೊಕ್ಕು (ನಾ). ಒಂದು ಅನುಕರಣ ಶಬ್ದ : ತೆಱಪಂ ನಿಟ್ಟಿಸಿ ಕುಕಿಱಿದಿಱಿಕಡಂ ಮೆಟ್ಟಿ ತಕ್ಕುಬೊಕ್ಕೆನೆಯೆಸೆ ತತ್ತಱದಱದ ಕಡಿತಲೆಯೊಳ್ಪಱಿಸಿಡಿಲರಹಲ್ಲವೀರನುಂ ಮದ್ದನುಂ (ಎಕ. XV, ಬೇಲೂರು ೩೬೧-೯ : ಸು. 1200).

ತಕ್ಕುಮೆ (ನಾ). ೧. ತಕ್ಕುದಾಗಿರುವಿಕೆ ; ಔಚಿತ್ಯ : ಉಮೆಗೆ – ತಕ್ಕುಮೆ (ಶಮದ. ೨೧೧ ಪ್ರಯೋ). ‘ತಕ್ಕುಮೆಗಿಡು’, ‘ತಕ್ಕುಮೆವಡೆ’ ಪರಾ. ೨. ಯೋಗ್ಯತೆ ; ಅರ್ಹತೆ : ಗಂಡಿಲ್ಲದ ಭಟನ ಯುದ್ಧಮುಂ . . . ಮಿಂಡನ ತಕ್ಕುಮೆಯುಮೊಪ್ಪಲಾಱವು ಜಗದೊಳ್ (ಧರ್ಮಾಮೃ. ೭-೪೯); ಅಧಿಕಾರಿಗಳ್ಗಂ ಬಲ್ಲಿತ್ತಾದ ತಕ್ಕುಮೆಯುಂ ಬಿತ್ತರಿಪ ಬಗೆಬಗೆಯ ಮಹಾ ಬಿರುದುಗಳಂ ದಯೆಗೆಯ್ಯಲ್ಕೊದಲ್ಮಾಡಿಯುಂ (ಮರಾಜ. ೬-೩೬) : ತನ್ನ

ದಂಡಿನವರಿಗೆ ಅವರವರ ತಕ್ಕುಮೆಯಂತೆ ಹಣವನ್ನು ಕೊಟ್ಟು, ಉಳಿದುದನ್ನು ಕಾಬೂಲಿನಲ್ಲಿದ್ದ ತನ್ನ ಪ್ರಜೆಗಳಿಗೆ ಹಂಚಿದನು (ಮೋಬಾದ. ೨೩). ೩. ಶೌರ್ಯ ; ಪರಾಕ್ರಮ : " ಪನ್ನತಿಕೆ ಪೆಟ್ಟು ತಕ್ಕುಮೆಯಿನ್ನುಂ ತಾಂ ಸಾಸ ದಪ್ಪವಂದಟಾರ್ಪಣ್ಮೆಂದೆನ್ನಲ್ ಪರಾಕ್ರಮಾಖ್ಯಂ" (ಕವಿಕಂ. ೧೨೫). 'ತಕ್ಕೊರ್ವೆ$_1$' ಪರಾ. [ ತಕ್ಕು$_2$ + – ಉಮೆ$_1$ ]

**ತಕ್ಕುಮೆಗಿಡು** (ಕ್ರಿ). ಔಚಿತ್ಯವಿಹಾರು : ನಿಮ್ಮ ಬಗೆಯ ದ್ರೋಹಿ ದುರಾತ್ಮರಿಗೆ ತಕ್ಕುಮೆಗಿಡದ ಒಂದೇ ದಂಡನೆ ಎಂದು ತರಿಸಂದು ತೀರುಕಣೆಗೊಟ್ಟರುವರು (ಬಿಟ್ಟಅ. ೨೦೪-೨೨). [ ತಕ್ಕುಮೆ + ಕಿಡು (<ಕೆಡು$_1$) ]

**ತಕ್ಕುಮೆವಡೆ** (ಕ್ರಿ). ೧. ಔಚಿತ್ಯವನ್ನು ಪಡೆ ; ತಕ್ಕುದಾಗಿರು : ಮಹಾರಾಜ ಸನ್ನಿಧಿಯ ಭೋಗೋಪಭೋಗಗಳಿಗೆ ತಕ್ಕುಮೆವಡೆದ, ಉಪಸ್ಕರಾಲಂಕಾರಾದಿ ವಸ್ತು ಪ್ರಪಂಚವು . . . ರಂಜಿಸುತ್ತಿರುವುದು (ಬಿಟ್ಟಅ. ೧೩೮-೬) : ಮಹಾರಾಣಿಗೆ ತಕ್ಕುಮೆವಡೆದ ಬೀಡಾರವನ್ನು ನಿಮಗೆಂದೇ ಅಣಿಮಾಡಲಾಗಿದೆ (ಸವತಿ. ೨೬೯). ೨. ಘನತೆಯನ್ನು ಪಡೆ : ದುಃಖದಿಂ ಪರಿಪಕ್ವವಾದೆ : ತಕ್ಕುಮೆವಡೆದೆ (ಸಂಸಪ. ೨೫-೧೭).

[ ತಕ್ಕುಮೆ + ಪಡೆ$_1$ ]

**ತಕ್ಕೊರ್ವೆ$_1$** (ನಾ). ಹಿರಿತನ ; ದೊಡ್ಡಸ್ತಿಕೆ ; ಘನತೆ : ತನ್ನದೊಂದು ಸವಿಗಂ ಸೋಲಕ್ಕುವಿತ್ತಂ ನಿಜಕ್ರಮಮಂ ತನ್ನಯ ಬೇಟದಾಕೆಯ ಮಗಂಗೆಂಬೊಂದಪಖ್ಯಾತಿ ಲೋಕಮನಾವರ್ತಿಸೆ ಬಟ್ಟೊಡೆನ್ನ ಕುಲಮುಂ ತಕ್ಕೊ[ಪಾಠಾಂ. ತ್ಕೊ]ರ್ವೆಯುಂ ಮಾಸದೆ (ಪಂಪಭಾ. ೧-೭೧) ; ಪೇಸುಗೆಗೆಟ್ಟೀ ನಾಣಪುತ್ತೃಪ್ಪಟಿಜಗಟದೊಳೇನಮ್ಮ ತಕ್ಕೊರ್ವೆಯುಂಟೇ (ಶಾಂತಿಪು. ೬-೮೭) ; ಸರ್ವ್ವ ಜನೋಪಕಾರಿ ತಕ್ಕೊರ್ಮ್ಮೆಯ ಜನ್ಮಭೂಮಿ (ಸೌಇಇ. XI-ii, ೧೩೩-೨೪ ; 1087) ; ಕಲಿಯುಂ ಚಾಗಿಯುಮಿನ್ನರಾರ್ ಮನುಕುಲರ್ ಮುನ್ನಾದರೆಂಬನ್ನೆಗಂ ನೆಲನುಂ ನೇಸಱುಮುಳ್ಳಿನಂ ನಿಲಿಸಿದಂ ತಕ್ಕೊ[ಪಾಠಾಂ. ತ್ಕೊ]ರ್ವೆಯಂ ಪೆರ್ಮೆಯಂ (ಪಂರಾಮಾ. ೬-೧೭೧). [ ತಕ್ಕು$_2$ + ಊರ್ಮೆ. /ತಮಿ. ತಕ್ಕೊರ್ವ್ವೆ ]

**ತಕ್ಕೊರ್ವೆ$_2$** (ನಾ). ಪ್ರೀತಿ ; ಸ್ನೇಹ : ಬರ್ಮ್ಮೆಯನೀಗಳೆಯ್ದೆ ಪರಿಭಾವಿಸಿ ನೋಳ್ಪಡೆ ಮೇಲೆನಿಪ್ಪನಾ ಧರ್ಮ್ಮತನೂಭವಂಗೆನುತೆ ಬಣ್ಣಿಪುದೀ ಜಗಮೆಲ್ಲ ಮೊಲ್ದು ತಕ್ಕೊರ್ವೆಯಿನೆನ್ನೊಡೇಪೊಗಳ್ವನಿಂ ಪೊಗಳ್ವಂ ಬುಧಕಲ್ಪವೃಕ್ಷನಂ (ಕೊಲ್ಹಾಶಾ. ೮-೧೬ ; 1147). [ ತಕ್ಕು$_2$ + ಕೊರ್ವೆ ]

**ತಕ್ಕೊರ್ವೆಗೆಡು** (ಕ್ರಿ). ಘನತೆಯಿಲ್ಲವಾಗು ; ಯೋಗ್ಯವಾದುದನ್ನು ಕಡೆಗಣಿಸು : ವಿಪಿನಕ್ಕೆ ತೆರಳ್ವನ್ನವಮಾಂ ಪೊಱಮಟ್ಟೆನೆಂದು ಕೇಳ್ದು ಮಗಲ್ದಿರಲಾಱದೊಂದು ಮೋಹದಿಂ ಬೆಂಬತ್ತಿದ ನಿನ್ನಂ ತಕ್ಕೊರ್ವೆಗೆಟ್ಟುಂ ಪೇಱದೆಯುಮಾನೆ ಪಱುವಿಂಗಟ್ಟಿದನೇ (ರಾಮಾಶ್ವ. ೪೫-೨೨).

[ ತಕ್ಕೊರ್ವೆ$_1$ + ಕೆಡು$_1$ ]

**ತಕ್ಕೆ$_1$** 'ತಟ್ಕೆ' ನೋ.

**ತಕ್ಕೆ$_2$** (ನಾ). ಯೋಗ್ಯಳಾದವಳು ; ತಕ್ಕವಳು : ನಿಮ್ಮಡಿಗಾಹಾರದಾನಂ ಕುಡಲ್ ತಕ್ಕೆನಲ್ಲೆನಾಂ ಸೂಳೆಯೆಂ (ಚಾವುಂಪು. ೩೮-೩೦).

[ ತಕ್ಕ$_1$ + – ಎ$_2$ ]

**ತಕ್ಕೆ$_3$, ಟಕ್ಕೆ$_1$, ತೆಕ್ಕೆ$_2$** (ನಾ). ದಿಂಬು ; ಒರಗುದಿಂಬು ; ಲೋಡು : ಕಚೇರಿಯ ತುಂಬ ಹಾಸಿದೆ ; ನಟ್ಟನಡುವೆ ಎದುರಿನ ಗೋಡೆಗೆ ಒಂದು ತಕ್ಕೆ (ವೃದ್ಧರಾ. ೯) ; ಹಾಸಿದ್ದ ಹೊಸ ಜಮಖಾನೆಯ ಮೇಲೆ ತಕ್ಕೆಗೆ ಒರಗಿ ಚೆನ್ನಪ್ಪ ಕುಳಿತುಕೊಂಡಿದ್ದ (ಜನಜೀ. ೩೪). ಟಕ್ಕೆ$_1$: ಮೂರೆಲೆ ಆಟ ಆಡಲು ಕುಳಿತಿದ್ದಾರೆ. ಹತ್ತಿರ ಒಂದೆರಡು ಟಕ್ಕೆಗಳು (ತಿಡುಗು. ೪೬). ತೆಕ್ಕೆ$_2$ : ಗಾದಿಗಳನ್ನು ಜೋಡಿಸಿ, ಅವರ ತೆಕ್ಕೆಯನ್ನೇ ತಲೆಗಿಂಬುಮಾಡಿ ನಾನು ನನ್ನ ಸಜ್ಜಿಕೆಯನ್ನು ಸಜ್ಜುಗೊಳಿಸಿದೆ (ದೀಪಹ. II, ೧೮೦).

[ ←ಅರ. ಪಾರ. ಹಿಂ. ತಕಿಯಾ ; ಮರಾ. ತಕಿಯಾ, ತಕ್ಯಾ ]

**ತಕ್ಕೆಗಟ್ಟು$_1$** 'ತೆಕ್ಕೆಗಟ್ಟು' ನೋ.

**ತಕ್ಕೆಗಟ್ಟು$_2$** (ನಾ). ಅಪ್ಪುಗೆಯ ಹಿಡಿತ; ಆಲಿಂಗನದ ಬಂಧನ: ಬಟ್ಟೆಗರ ಬಗಸೆಗಣ್ಣಂ ಕರೆದು ಸವಿದಕ್ಕೆಗಟ್ಟಿನೊಳ್ವಾಸಿಕೆಯೊಳಟ್ಟಧರಪಾನಮಂ ಕೊಟ್ಟು (ಪದ್ಮರಾ. ೮-೧೧) ; ಪಟುಭಟರು . . . ಸುರಾಂಗನೆಯರ ತೋಳ ತಕ್ಕೆಗಟ್ಟಿನೊಳೊಱಗಿದರು (ಕುರಾಸಾಂ. ೧೨-೬೭).

[ ತಕ್ಕೆ$_1$ (<ತಟ್ಕೆ) + ಕಟ್ಟು$_2$ ]

**ತಕ್ಕೆಗೊಳ್** 'ತಟ್ಕೆಗೊಳ್' ನೋ.

**ತಕ್ಕೆಗೊಳಿಸು** (ಕ್ರಿ). ಅಪ್ಪುಗೆಗೆ ಒಳಪಡಿಸು; ತಬ್ಬಿಕೊಳ್ಳು: ಹೊಸಹೊನ್ನ ಬಿಂದಿಗೆದುಂಬಿಯೋಕುಳಿಯ ಇಂದಿಗೆ ಸುಖ ಸಿದ್ಧಿಸಿತೆಂದು ಚೆಲ್ಲಿದರಂದು ಕೃಷ್ಣನ ತಕ್ಕೆಗೊಳಿಸಿ (ಮೋಹತ. ೧೪-೬೯).

[ ತಕ್ಕೆಗೊಳ್ (<ತಟ್ಕೆಗೊಳ್) + – ಇಸು$_3$ ]

**ತಕ್ಕೆಬೀಳು, ತಳಿಕೆಬೀಳು, ತೆಕ್ಕೆಬೀಳು** (ಕ್ರಿ). ತೋಳುಗಳಿಂದ ಗಟ್ಟಿಯಾಗಿ ಅವುಚಿಕೊಳ್ಳು ; ತಬ್ಬು : ನಾನೂ ಅಳುತ್ತ ಅಮ್ಮನನ್ನು ತಕ್ಕೆಬಿದ್ದೆ (ಚಂದುಟ. ೨೦) : ನನಗೆ ಚೆಲೋ ಚೆಲೋ ಗೊಂಬೆ ತಂದಿದ್ದೀಯಾ . . . ಕೊರಳಿಗೆ ತಕ್ಕೆಬಿದ್ದು ಮಗು ಕೇಳಿತು (ಎರಸಿ. ೫). ತಳಿಕೆಬೀಳು : ಅವಳು ಕಣ್ದೆರೆದುದನ್ನು ಕಂಡು ಎದ್ದು ಹಾರಿಹೋಗಿ ಅವಳ ಕೊರಳಿಗೆ ತಳಿಕೆಬಿದ್ದಳು (ಪ್ರೇಮಾಶ್ರ. ೬೧). ತೆಕ್ಕೆಬೀಳು : " ಅಪ್ಪಯ್ಯ " ಎಂದು ಶಾಸ್ತ್ರಿಗಳಿಗೆ ತೆಕ್ಕೆ ಬಿದ್ದು ತಡೆದಷ್ಟೂ ಅವಳಿಗೆ ಅಳು ಉಕ್ಕಿ ಬರುತ್ತಿತ್ತು (ಹೊಸಕ್ಕಿ. ೨೨) ; ಭಯ್ಯಾ ಮಲ್ಲನನ್ನು ತೆಕ್ಕೆಬಿದ್ದು ಅಳಹತ್ತಿದ (ಜೀದಾನ. ೧೨೬).

[ ತಕ್ಕೆ$_1$ (<ತಟ್ಕೆ) + ಬೀಳು$_1$ (<ಬೀೞ್$_1$) ]

**ತಕ್ಕೆಮುಕ್ಕೆ, ತೆಕಿಮುಂಕ್ಕಿ, ತೆಕ್ಕಾಮುಂಕ್ಕೆ, ತೆಕ್ಕಿಮುಂಕ್ಕಿ** (ನಾ). ಬಿಗಿಯಾಗಿ ಹಿಡಿದುಕೊಳ್ಳುವಿಕೆ ; ಗಟ್ಟಿಯಾಗಿ ತಬ್ಬಿಕೊಳ್ಳುವುದು : ಒಬ್ಬರನೊಬ್ಬರು ತಕ್ಕೆಮುಕ್ಕೆಯಲ್ಲಿ ಹಿಚುಕಿ ಅಸುವನ್ನು ಹಿಂಡಲಣಿಯಾದ ವೀರರಿಬ್ಬರು ಒಬ್ಬರನ್ನೊಬ್ಬರು ಬಿಗಿದಪ್ಪಿಕೊಂಡು ಒಬ್ಬರೊಬ್ಬರ ಹೃದಯವನ್ನು ಸೂರೆಗೊಂಡರು (ಕವೀರ. ೬೫). ತೆಕಿಮುಕ್ಕಿ : 'ತೆಕಿಮುಕ್ಕಿಬೀಳು' ಪರಾ. ತೆಕ್ಕಾಮುಕ್ಕೆ: 'ತೆಕ್ಕಾಮುಕ್ಕೆಬೀಳು' ಪರಾ. ತೆಕ್ಕಿಮುಕ್ಕಿ : 'ತೆಕ್ಕಿಮುಂಕ್ಕಿಬೀಳು' ಪರಾ. [ <ತಕ್ಕೆ$_1$ ]

**ತಕ್ಕೆಯಿಸು** 'ತಟ್ಕೈಸು' ನೋ.

**ತಕ್ಕೆವರ್** (ಕ್ರಿ). ಗುಂಪುಗೂಡು : ವಾಸವವೈರಿ ಪುತ್ತ ಮಗುಟಿದ್ದಿನ್ನೊಳೆ ಕೀಳ್ಮನದಟ್ಟಿ ಪುಟ್ಟಿಯಭ್ಯಾಸನಿಮಿತ್ತದಿಂದಿರದೆ ಬರ್ಕೆಮೆನುತ್ತಮೆ ತಕ್ಕೆವಂದು ಕೈಲಾಸಮನಂತಮಾಯ್ತೆನೆ ಎಯುತ್ತಳಮಂ ತುಡುಕುತ್ತು ಮಿರ್ಪವ್ರೋಲ್ ಭಾಸುರಮಾಗೆ ಸಾಂದ್ರ ಶಶಿಕಾಂತದ ದೇವನಿವಾಸ ಕೋಟಿಗಳ್ (ಕುಸುಮಾ. ೧೧-೧೩೯). [ ತಕ್ಕೆ$_1$ (<ತಟ್ಕೆ) + ಬರ್$_1$ ]

**ತಕ್ಕೈಸು** 'ತಟ್ಕೈಸು' ನೋ.

**ತಕ್ಕೋಲ$_1$** (ನಾ). ಒಂದು ಊರಿನ ಹೆಸರು. **P** ತಮಿಳುನಾಡಿನ ಅರಕೋಣದ ಬಳಿಯ ಈಗಿನ ತಕ್ಕೋಲ : ಶ್ರೀಮತ್ ಕನ್ನರದೇವ ಆಟ್ಕೋವದೆ ಚೋಳರಾಜಾದಿತ್ಯನ ಮೇಲೆ ಬನ್ದು ತಕ್ಕೋಲದೊಳ್ಕಾದಿ ಕೊನ್ದು ಬಿಜಯಂಗೆಯ್ಯುತ್ತಿಱ್ದು (ಎಕ. III, ಮಂಡ್ಯ. ೪೧-೪ ; 950).

**ತಕ್ಕೋಲ$_2$** (ನಾ). ೧. ಒಂದು ಬಗೆಯ ಸುಗಂಧದ ವೃಕ್ಷ ಮತ್ತು ಅದರ ಕಾಯಿ : " ಪಂಚಸುಗಂಧಃ– ಶ್ರೀಗಂಧ, ತಕ್ಕೋಲ, ಜಾಯಿಫಲ, ಪದ್ಮಕೇಸರ, ತಾವರೆಯ ಕೇಸರ" (ಒಷಧಿ. ೯೨): ತಾಱೀಕಾಯಿ, ಲವಂಗ, ಚವ್ಯ, ತಕ್ಕೋಲ . . . ಇವಿಷ್ಟನ್ನೂ ಪ್ರತ್ಯೇಕ ಒಂದು ವರಹ ತೂಕವ ಸಣ್ಣನಾಗಿ ಕತ್ತರಿಸಿ ಚೂರ್ಣಿಸಿ (ವೈದ್ಯಸಾ. II, ೫೫) ; ಬದರಿ ತಕ್ಕೋಲ ನಾರಿಕೇಳಾಶ್ವತ್ಥ . . . ಭೂರುಹವ್ವಂದದಿಂ ಪೂಜ್ಯಮಾಗಿರ್ಪ ಆರಾಮಗಳು ಎಸೆವುತಿರ್ದವು (ಕುಕೇಲೋ. ೪೪) ; ಜಂಜೀರ ಮಾಧವೀ ಮಧೂಕ ತಾಲ ತಕ್ಕೋಲ ತಮಾಲ ಹಿಂತಾಳ . . . ಸುಮನಸಭರಿತವಾಗಿ

ಶೋಭಿಸುತಲಿತ್ತು (ಪುರಾವಿ. ೯೭). ೨. ತಕ್ಕೋಲವೃಕ್ಷದಿಂದಾದ ಒಂದು ಬಗೆಯ ಸುಗಂಧದ್ರವ್ಯ.–ಸುಗಂಧದ ಔಷಧದ್ರವ್ಯ : ಕುಂಕುಮ ಕಸ್ತೂರೀ ಲವಂಗ ತಕ್ಕೋಲಮನಂಕ ಮೃಗಾಂಕವಹ್ನಿ ಚಂದ್ರುವ ಹಿಮ ಕೃತ್ಪುರವಿತತದೊಳರೆಗೆ ಗಂಧೋದಕದಿಂ (ಲೋಕೋಪ. ೭-೭). 'ಕಕ್ಕೋಲ' ಪರಾ. [ ಸಂ. ]

**ತಕ್ಕೋಲಕ (ನಾ).**=ತಕ್ಕೋಲ೨ ೨ : "ತಕ್ಕೋಲ ವೃಕ್ಷದ ಪರಿಮಳದ್ರವ್ಯ" (ಅಮರ. ಟೀಕೆ). [ ಸಂ. ]

**ತಕ್ಕೋಲಪುಟ್ಟಿ (ನಾ).** = ತಕ್ಕೋಲ೨ ೨ : "ತಕ್ಕೋಲಂ–ತಕ್ಕೋಲಪುಟ್ಟಿ" (ಔಷಧಿ. ೭೫) : " ನಿಷ್ಕುಟಂ – ತಕ್ಕೋಲಪುಟ್ಟಿ " (ಔಷಧಿ. ೮೭).

[ ತಕ್ಕೋಲ೨ + ಪುಟ್ಟಿ ? ]

**ತಕ್ಕರೋಹಿತ (ನಾ).** ಒಂದು ಬಗೆಯ ಗಿಡ : ನೀರು ಕಣಿಗಲು, ತಕ್ಕ ರೋಹಿತ, ನೀರುಸಣ್ಣೆಸೊಪ್ಪು (ವ್ಯಡಿಗಿ. ೬೩-೧೩೯೧). [ Pಇದು 'ತಿಕ್ತ ರೋಹಿತ' ಎಂಬುದರ ಅಪಲಿಖಿತವಿರಬಹುದು]

**ತಕ್ಕರೋಹಿತಕ (ನಾ).** ಒಂದು ಬಗೆಯ ಗಿಡ : ಮುಳ್ಳುಮುತ್ತಲ, ತಕ್ಕ ರೋಹಿತಕ, ರೋಹಿತಕ (ವ್ಯಡಿಗಿ. ೮-೧೩೦). 'ತಕ್ಕರೋಹಿತ' ಪರಾ.

[ ? ]

**ತಕ್ರ (ನಾ).** (ನಾಲ್ಕನೆಯ ಒಂದು ಭಾಗದಷ್ಟು) ನೀರು ಬೆರಸಿ ಕಡೆದ ಮೊಸರು; ಮಜ್ಜಿಗೆ: "ಗೋರಸ ದಂಡಾಹತ ಮಥಿತಾರಿಷ್ಟೋದಶ್ವಿದಾಹ್ವ ಮಂತದು ತಕ್ರಂ" (ವಸ್ತುಕೋ. ೯೩-೧); ಆಲದ ಬೀಟಲನರೆದು ತಕ್ರದೊಳ್ ಕುಡಿಯಲೊಡನೆಯತಿಸಾರರೋಗವಾಗಳೆ ಕಿಡುಗುಂ(ಲೋಕೋಪ. ೯-೧೧೯); ಕಪಿಯುಂ ಗಾಣಿಗ ಪಾವು ಕಾಪ್ಪಜಿನ ತಕ್ರಂ . . . ಧೂಮಮಂ ನಿಪುಣರ್ ಕಂಡರೆ ಪೋಗಲ್ಕೆ (ಸೋಮೇಶ. ೬೮) ; ಹಾಲೊಡೆಯೆ ಕಡೆದದನು ತಕ್ರವಾಗಿ ಪುದು . . . ಹಳದೆ ಹೊಸತಾಗಿಪುದು ಬಾಳಿಗಿದೆ ಚಿರಧರ್ಮ (ಮಂಕುಕ. ೨೩೩). [ ಸಂ. ]

**ತಕ್ರತೈಲ (ನಾ).** ಮಜ್ಜಿಗೆಯಲ್ಲಿ ಎಣ್ಣೆ ಮಂತ್ರಿತರ ಔಷಧಿವಸ್ತುಗಳನ್ನು ಹಾಕಿ ಸಿಪ್ಪಪಡಿಸಿದ ಒಂದು ಬಗೆಯ ಔಷಧಿ: ತಕ್ರತೈಲ – ಒಂದು ಕೊಳಗ ಮಜ್ಜಿಗೆಯಲ್ಲಿ ಒಂದು ಬಳ್ಳ ಎಣ್ಣೆಯಂ ಹಸಿಸಿ ಪಾನಾಭ್ಯಂಗನ ನಸ್ಯಂಗಳಂ ಮಾಡಲು . . . ವಾತರೋಗ ಸಹ ಗುಣಮಕ್ಕುಂ (ಸಕವೈ.೧೧೫).

[ ತಕ್ರ + ತೈಲ ]

**ತಕ್ರಬಲಿ (ನಾ).** ಮೂಲಂಗಿ. ಈರುಳ್ಳಿ ಹಾಗೂ ಹಸಿಶುಂಠಿಗಳಿಗೆ ಮಜ್ಜಿಗೆ ಅಥವಾ ಹುಳಿ ಹಾಕಿ ಮಾಡುವ ಒಂದು ಬಗೆಯ ವ್ಯಂಜನ ಪದಾರ್ಥ : " ಮುಲ್ಲಂಗಿ ಮೊದಲಾದವುಳ್ಳಿಯಲ್ಲಂಗಳೊಳ್ ಪುಳಿವೆರಸಲವು ತಕ್ರಬಲಿ [ಪಾಠಾಂ. ತಕ್ರಕಂಬಲಿ, ಸಸ್ಯಬಲಿ]ಗಳಕ್ಕುಂ " (ಮಂಗರಾ. ೬೫-೬).

[ ತಕ್ರ + ? ]

**ತಕ್ರಾರ** 'ತಕರಾರು' ನೋ.

**ತಕ್ರಾರು** 'ತಕರಾರು' ನೋ.

**ತಕ್ರಿ (ನಾ).** ಒಂದು ಬಗೆಯ ಪೊದರು.–ಕಂಟಿ : " ಪಂಚಾಂಗುಲಿ – ಅಪ್ಪರಣಿ, ತಕ್ರಿ " (ಔಷಧಿ. ೯೩). [ ? ]

**ತಕ್ರೀರು** 'ತಕ್ಷೀರು' ನೋ.

**ತಕ್ಷ (ನಾ).** ೧. ಮರಗೆಲಸ ಮಾಡುವವನು ; ಬಡಗಿ. ೨. ಸ್ಥಪತಿ ; ಶಿಲ್ಪಿ: ಪವನಂಜಯನೆಂಬ ತುರಂಗರತ್ನದಿಂದಂ ಭದ್ರಮುಖನೆಂಬ ತಕ್ಷನಿಂದಂ . . . ಪದಿನೆಣ್ಬಾಸಿರ್ವರ್ ಮ್ಲೇಚ್ಛರಾಜರಿಂದಂ ನೆಟಿದೈಶ್ವರ್ಯಂ (ಶಾಂತಿಪು. ೧೧-೮೪ ವ). [ ಸಂ. ತಕ್ಷನ್ ]

**ತಕ್ಷಕ (ನಾ).** ೧. ಬಡಗಿ : ಮರಗೆಲಸ ಮಾಡುವವನು : " ವರ್ಧಕಿ ದಲ್ ರಥಕಾರಂ ತ್ವಷ್ಟೃ ಕಾಷ್ಠತಟ್ ತಕ್ಷಕಾಭಿಧಾನಮೆನಿಕ್ಕುಂ " (ವಸ್ತುಕೋ. ೬೪-೭೩) : ತಕ್ಷಕರು, ಚಿತ್ರಕಾರರು, ವೈದ್ಯರು, ಗಾಯಕರು, ಕವಿಗಳು ಎಲ್ಲರೂ ಸೇರಿ, ಆ ಚರಿತ್ರೆಯನ್ನು . . . ಒಂದು ಉಜ್ವಲ ಪ್ರಕರಣವನ್ನಾಗಿ ಸಿದ್ಧಪಡಿಸಿದ್ದಾರೆ (ಜೀವಸಾ. ೧೧). 'ತಕ್ಷಪತಿ' ಪರಾ. ೨. ಅಷ್ಟಫಣಿಗಳಲ್ಲಿ ಒಂದು; ವಾಸುಕಿಯ ಸಹೋದರ: ಇಂದ್ರಾಗ್ನಿ ಮೊದಲಾದೆಂಟು ದಿಕ್ಕಿನ ಭೂಮಿಯಂ ಕ್ರಮದಿಂ ಪೊತ್ತು ಅನಂತ ತಕ್ಷಕ . . . ಕಾಲವೆಂಬಷ್ಟಕುಲಫಣಿಗಳಿರ್ಕುಂ (ವಿವೇಕ. ೧೭೭) ; ಅಗ್ನಿಗೆ ತೃಪ್ತಿಯಾಯಿತು; ಆದರೆ ತಕ್ಷಕನು ತಪ್ಪಿಸಿಕೊಂಡು ಕುರುಕ್ಷೇತ್ರಕ್ಕೆ ಹೊರಟುಹೋದನು (ವನಕಥಾ. ೬೪). ೩. ಒಂದು ಬಗೆಯ ಹಾವು,–ಸರ್ಪ : ತಕ್ಷಕಭೂಷಣ ಪಕ್ಷಿವಾಹನವಿನುತ ದಕ್ಷಶಿಕ್ಷಣನಿಪುಣಜಗದೇಕಶರಣ (ಯುಗಿಕ. ೩೦) ; ಬೆನ್ನಿನಲ್ಲಿ ಸ್ವಸ್ತಿಕ ಲಾಂಛನ ಉಳ್ಳುದು ತಕ್ಷಕನೆನಿಸಿಕೊಂಬುದು (ವಿಷಚಿ. ೨-೧). [ ಸಂ. ]

**ತಕ್ಷಕಪತಿ (ನಾ).** ಶ್ರೇಷ್ಠನಾದ ಶಿಲ್ಪಿ : ಕಾಮವೃಷ್ಟಿಯೆಂಬ ಭಂಡಾರಿಗನುಂ ಭದ್ರಮುಖನೆಂಬ ತಕ್ಷಕಪತಿಯುಂ . . . ಆತ್ಮೀಯ ಸಾಮ್ರಾಜ್ಯಪದಿಚ್ಛೇದವಾಗೆ (ಆದಿಪು. ೧೫-೩ ವ). [ ತಕ್ಷಕ + ಪತಿ ]

**ತಕ್ಷಕರತ್ನ (ನಾ).** [ಜೈನ] ಏಳು ಜೀವರತ್ನಗಳಲ್ಲಿ ಒಂದು; ವಾಸ್ತುಶಿಲ್ಪಿ; ಸ್ಥಪತಿ : ಅನುಸ್ಮರಣ ಮಾತ್ರ ನಿಷ್ಪಾದಿತ ಸಪ್ತತಳಾತಿಪ್ರಾಸಾದಪ್ರಕರನುಮಪ್ಪ ಭದ್ರಮುಖನೆಂಬ ತಕ್ಷಕರತ್ನಮುಂ (ಆದಿಪು. ೧೧-೩ ವ).

[ ತಕ್ಷಕ + ರತ್ನ ]

**ತಕ್ಷಣ**೧ 'ತತುಕ್ಷಣ೧' ನೋ.

**ತಕ್ಷಣ**೨ 'ತತುಕ್ಷಣ೨' ನೋ.

**ತಕ್ಷಣಿ (ನಾ).** ಮರವನ್ನು ಕೆತ್ತುವ ಒಂದು ಸಾಧನ ; ಬಾಚಿ : " ವಾಸಿ ತಕ್ಷಣೀನಾಮಂ " (ವಸ್ತುಕೋ. ೫೦-೩೭).

[ ಸಂ. ತಕ್ಷಣೀ ]

**ತಕ್ಷೀರು** 'ತಕ್ಸೀರು' ನೋ.

**ತಕ್ಷೀರುವಂತ (ನಾ).** ತಪ್ಪಿತಸ್ಥ ; ಅಪರಾಧಿ : ಈ ಇಬ್ಬರು ಚೀಲೇರು ಬಹಳ ತಕ್ಷೀರುವಂತರಿದ್ದಾರೆ (ರಾಜೇಂದ್ರ. ೫೭).

[ ತಕ್ಷೀರು (<ತಕ್ಸೀರು) + –ವಂತ ]

**ತಕ್ಷೋಪಜೀವ್ಯ (ನಾ).** ಮರಗೆಲಸದಿಂದ ಉಪಜೀವನ ಮಾಡುವವನು: ರವಿ ಚಾಪಕ್ಷೇತ್ರದೊಳ್ ನಿಂದೊಡೆ ಧನಪತಿ ಸತ್ಪೂಜಿತಂ . . . ತಕ್ಷೋ [ಪಾಠಾಂ. ಕಷ್ಟೋ]ಪಜೀವ್ಯಂ (ಜಾತತಿ. ೧೭-೧೭).

[ ಸಂ. (ತಕ್ಷ + ಉಪಜೀವ್ಯ) ]

**ತಕ್ಸೀರ್** 'ತಕ್ಸೀರು' ನೋ.

**ತಕ್ಸೀರು,** ತಕಶೀರು, ತಕ್ಕೀರು, ತಕ್ಷೀರು, ತಕ್ಸೀರ್ (ನಾ). ಅಪರಾಧ; ತಪ್ಪು : ದೋಷ : ಯಾವುದಾದರೂ ಒಂದು ತಕ್ಸೀರಿನಲ್ಲಿ ಶಿಕ್ಷೆಯನ್ನು ಪಡೆದು (ಗ್ರಾಮಾಕ. ೧೦) ; ಕೋರ್ಟಿನಲ್ಲಿ ಕ್ರಮವಾದ ವಿಚಾರಣೆಯಾಗಿ ತಕ್ಸೀರು ರುಜುವಾತ್ತಾದ ಮೇಲೆ ಶಿಕ್ಷೆವಿಧಿಸಬೇಕು (ಸಕತ. ೮೭). **ತಕಶೀರು:** 'ತಕಶೀರುದಾರ' ಪರಾ. **ತಕ್ಕೀರು :** ಮರಣದಂಡನೆ ತಕ್ಕೀರನ್ನು ಮಾಫಿ ಪಡಿಸುವದಕ್ಕೆ ಇನಾಂ ಕೊಡುವದಾಗಿ ಹೇಳಿದರೆ . . . ಪೈದು ಅಥವಾ ಜುರ್ಮಾನೆ (ಗ್ರಾಮಾಕ. ೧೮೪). **ತಕ್ಷೀರು :** ಇದು ಹೊರ್ತು ನಮ್ಮಿಂದಾ ಯೇನಾದರೂ ತಕ್ಷೀರು ಆಗಲಿಲ್ಲಾ (ರಾಜೇಂದ್ರ. ೧೦೯) ; ವಲ್ಲಭಭಾಯಿಯವರು ನ್ಯಾಯಾಧೀಶರ ಮುಂದೆ ಯಾವುದೋ ಒಂದು ತಕ್ಸೀರಿನ ಕುರಿತು ಜೋರಿನಿಂದ ವ್ಯವಹರಿಸುತ್ತಿದ್ದರು (ರಾಜವ. ೩೮) ; ಮುಂದೆ ಅವನು ತಕ್ಸೀರು ನಿರಾಕರಿಸಿದರೆ ಅವನ ಮೇಲೆ ನಿರಾನುಮಾನವಾದ ಪ್ರಮಾಣ ರೂಪವಾಗಿ ಅಂಗೀಕರಿಸಲ್ಪಡುವದಕ್ಕೋಸ್ಕರ ಅವನ ಕೈ ಉಂಗುರಗಳನ್ನು ಸೆಳಕೊಂಡು ಹಾಜರುಪಡಿಸಿದ್ದಾನೆ (ವಾಗ್ಮೇವಿ. ೧೮೫). **ತಕ್ಸೀರ್ :** ಅವರಿಗೆ ತಕ್ಸೀರ್ ವಿಚಾರಣೆ ಮಾಡುವ ಅಧಿಕಾರವನ್ನು (Magisterial power) ಕೊಟ್ಟಿತ್ತು (ಮಹಾವಂ. II, ೩೭).

[ ←ಅರ. ಹಿಂ. ತಕ್‌ಸೀರ್; ಮರಾ. ತಕ್‌ಶೀರ್, ತಕ್‌ಸೀರ್ ]

ತಕ್ಸೀರುದಾರ,ತಕಶೀರಂದಾರ (ನಾ). ಅಪರಾಧಿ; ತಪ್ಪಿತಸ್ಥ: "ಅಪರಾಧಿ, ಪಾತಕಿ; ತಕ್ಸೀರುದಾರ" (Criminal. ಪತ್ರಿನಿ. ೨೭). ತಕಶೀರುದಾರ: ವೈದಿನಿಂದ ತಪ್ಪಿಸಿಕೊಂಡು ಹೋದ ತಕಶೀರುದಾರನಿಗೆ ಆಸರೆಕೊಟ್ಟರೆ (ಗ್ರಾಮಕ. ೧೮೪). [ ತಕ್ಸೀರು + – ದಾರ್₄ ]

ತಕ್ಸೀರುನಾಮೆ (ನಾ). ಆಪಾದನೆಯ ವಿವರಣೆಗಳನ್ನು ತಿಳಿಸುವ ಪಟ್ಟಿ. [ ←ಹಿಂ. ತಕ್ಸೀರ್‌ನಾಮಾ ]

ತಖ್ತೆ, ತಃಖ್ತಿ, ತಃಖ್ತೆ (ನಾ). ಆಯವ್ಯಯ ಮುಂತಾದ ವಿಷಯಗಳ ವಿವರಣೆಯ ಪಟ್ಟಿ.–ವಿವರಗಳನ್ನು ಸೂಚಿಸುವ ಪಟ್ಟಿ: ಕುಲ್ಲು ಜಮಾಬಂದೀ ಗೋಷ್ವಾರೆ ತಖ್ತೆಲುವಾರು ಗ್ರಾಮುವಾರು ತಖ್ತೆ ಸಹ ತಯಾರು ಮಾಡಿಸಿ (ಮಹಾವಂ. II, ೭೨) ; ಲಾಭ ನಷ್ಟಗಳ ತಖ್ತೆಯನ್ನು ಪರಿಷ್ಕಾರವಾಗಿ ತಯಾರಿಸಿ ವಾರ್ಷಿಕ ಆದಾಯವನ್ನು ಕಂಡುಹಿಡಿಯುವ ವಿಧಾನ (ಘಾಗ್ಯಕಿ. ೮೩). ತಃಖ್ತಿ : (ಮೈಗೆಜಿ. IV, ೭೮೭). ತಃಖ್ತೆ : ಪ್ರತಿ ತಿಂಗಳು ಪಾವತಿಯಾಗತಕ್ಕ ತಲಬುಗಳ ಒಂದು ತಃಖ್ತೆಯನ್ನು ತಯಾರ್ಮಾಡಿ ರವಾನಿಸಬೇಕು (ಗ್ರಾಮಾಕ. ೩) ; ಮಕ್ಕಳ ಅಭಿವೃದ್ಧಿಯ ತಃಖ್ತೆಯನ್ನು ತಪ್ಪದೆ ಇಡಬೇಕು (ರಂಗ೪. ೮೧)
[ ←ಪಾರ. ತಖ್ತಃ : ಹಿಂ. ತಖ್ತಾ : ಮರಾ. ತಕ್ತಾ, ತಖ್ತಾ ]

ತಗ 'ದಗ' ನೋ.

ತಗಚಿ 'ತಗಚೆ' ನೋ.

ತಗಚೆ, ತಗಚಿ, ತಗಸಿ, ತಗ್ಗಚ್ಚಿ (ನಾ). ೧. ಅಗಸೆ ; ಚೊಗಚೆ ; ಚಕ್ರಮರ್ದ : "ಏಡಗಜಃ, ಪ್ರಪುನ್ನಾಟಃ, ದದ್ರುಘ್ನಃ, ಚಕ್ರಮರ್ದನಃ– ಈ ೪ ತಗ(ಚೆ)ಟೆ" (ಹಲಾಯು. ೧೧೧-೧೬೫) ; ನೆಗ್ಗಿಲ್ ತಗಚೆ ನಿದಿಗ್ಗಿಕೆ ತಗ್ಗಿಯುಪಾಮಾರ್ಗದೊಡನೆ ಬೆರಸಿದುದಂ . . . ಕುಡಿಸೊಗ್ಗಿಸಿದಂಬಿಲದೆ ಬೇದುಗಟ್ಟು ವಿಷಘ್ನಂ (ಖಮದ. ೧೬-೭೪) ; ತಗಚೆ, ತಾಕೋಟೆ (ಮೈಜಿಗಿ. ೫೪-೧೯೫). ೨. ಹಿಪ್ಪನೇರಳೆ ಅಥವಾ ಉಪ್ಪುನೇರಳೆ ಗಿಡ: (+). ತಗಟೆ : ೧. "ಪ್ರಪುನ್ನಾಟಃ, ಏಡಗಜಃ ದದ್ರುಘ್ನಃ, ಚಕ್ರಮರ್ದಕಃ, ಪದ್ಮಾಟಃ, ಉರಣಾಕ್ಷಃ, ಈ ೬ ತಗಚೆ[ಪಾಠಾಂ. ಟೆ]" (ನಾಚಿರಾ. ೧೧೨) ; ಮುತ್ತುಗ ತಗಚೆ ಯುಗಚೆ . . . ಮೊದಲಾದ ಗಗನವಂ ತುಡುಕುವ ವೃಕ್ಷಂಗಳ್ (ಸೌಗಂಧಿ. ೫೪-೬). ತಗಸಿ : ೧. "ಪ್ರಪುನ್ನಾಟಮದೇಡಗಜಂ ಕಪಿತ್ಥಪರ್ಣಾಖ್ಯಃ ತಗಸಿ (ವಸ್ತುಕೋ. ೩೬-೨೧). 'ಕೋಲ್ತಗಸಿ' ಪರಾ. ತಗ್ಗಚ್ಚಿ : ೧. "ಪ್ರಪುನ್ನಾಟಃ, ಏಡಗಜಃ, ದದ್ರುಘ್ನಃ, ಚಕ್ರಮರ್ದಕಃ, ಪದ್ಮಾಟಃ, ಉರಣಾಕ್ಷಃ–೬ ತಗಚೀ ಗಿಡದ ಹೆಸರುಗಳು. ತಗಚಿ, ತಗ್ಗಚ್ಚಿ" (ಸಿದ್ಧಾಂತಿ. ೧೨೪).
[ ದೇ.॥ ತಮಿ. ತಕರೆ : ಮಲ. ತಕರ ; ತೆಲು. ತಗರ್ಚೆ, ತಗಿರ್ಸ, ತಗಿರಿಸ ]

ತಗಟ (ನಾ). ಜರತಾರಿ ರೇಷ್ಮೆ : ಪಟ್ಟಸಾಲೆಯೊಳು ಮೇಲ್ಕಟ್ಟು ಲಕ್ಷಾವೆ ಬಾಳ್ವದು ಪಟ್ಟೆಮಂಚಕೆ ವಜ್ರದಾ ದಟ್ಟತವಾದ ಕಾಲ್ಗಳೂ ಪಟ್ಟದ್ವಾ ಸೂವರಳೆ ಸುಪ್ಪತ್ತಿಗೆ ತಗಟ ತಲೆದಿಂಬು ಕಟ್ಟಿದಾ ಮುತ್ತಿನಾ ಗೊಂಚಲು (ಶ್ರೀಕೃಪಾ. ೨೩). [ ದೇ.॥ ತಮಿ. ತಕಟ; ತೆಲು. ತಗಟ ]

ತಗಟೆ 'ತಂಗಡಿ' ನೋ.

ತಗಡತಿ (ನಾ). ಒಂದು ಬಗೆಯ ಗಿಡ : ತಗಡತಿ, ಹರಿಯಾಗೆ, ಮೈಸಾರೆ (ಮೈಜಿಗಿ. ೫೦-೧೦೦೦). [ ? ]

ತಗಡು (ನಾ). ೧. ತೆಳುವಾಗಿ ಬಡಿದ ಲೋಹದ ಹಾಳೆ,–ಹಲಗೆ,–ಫಲಕ : ಬಿಳಿಯ ಕಬ್ಬಿನ ಜಂತೆಯೊತ್ತಿನೊಳು ಕೀತಕೀದಳದ ತಗಡವಕೆ ಮುಡಿವಾಳದ ಹೊದಕೆ (ಸೋಮಚ. ೧-೧೧೧) ; ಕಪ್ಪುರವಳಿಕಿನ ತಗಡಿಂದೆ ಮಾಡಿದಂತಿರೆ ಕಂಪಂ ತಳೆದ ಬಿಳಿಯೆಲೆಯನಂಬುಜದಳದಿಂ ಪುದಿವಂತೆ ಪಿಡಿದು ಸುರಸತಿಯಿತ್ತಳ್ (ಪಾರ್ಶ್ವಪು. ೧೩-೧೨೭) ; ರವಿಯ ತಗಡನೆ ತಳಿತವಾಯುಧನಿವಹ (ಕುಮಾ.ಉ. ೯-೭೧) ; ತಿಂಗಳ ತಂಗದಿರನು ತಗಡನು ತಳೆದಂಗಜನೆಂಬ ಸೊನ್ನಾರಿ ಹಿಂಗದೆ ಮಾಟುವನೆನೆ ಪಚ್ಚೆಗರ್ಪುರದಂಗಡಿ ಯುದಟಿಸೊಳೊಪ್ಪಿದವು (ರಾಮವಿ. ೩-೬೫) : ತಪ್ತಕಾಂಚನದ ತಗಡಿನಲ್ಲಿ ಬರೆದಂಥ ಜಂತ್ರದಂತೆ (ಅರಳು. ೪೯-೧೧). ೨. ಕುಂದಣದ ಹರಳುಗಳ ಕೆಳಗೆ ಜೋಡಿಸಿದ ಹೊಳಪಿನ ವರ್ಣ.–ರೇಕು: ಹೊನ್ನ ತಗಡ ಮೇಲೆ ಹೊಳೆವ ಮಾಣಿಕವು ಕರ್ಬೊನ್ನೊಳಗತಿ ರಂಜಿಪುದೆ (ನೇಮಿಸಂ. ೧೧-೧೪೫) : ಕುಂದಣದ ತಗಡಿಗಕ್ಕರ ತಾಗೆ ರಕ್ಷೆಯಾದಂತೆ (ಭರತ. ೪೩-೯). ೩. ಕನ್ನಡಿಯ ಹಲಗೆ : ಕನ್ನಡಿಯಂತಿರುವ ಲೋಹದ ಫಲಕ : ತಗಡಿನೊಳಗೆ ತೋರ್ಪ ಛಾಯಾಪ್ರತಿಮೆಯೊ ಹಗಲಲ್ಲಿ ಬೆಳುದಿಂಗಳಲ್ಲಿ ಸೊಗಸುವ ಛಾಯಾಪುರುಷನೊಯೆಂಬಂತೆ ಬಗೆಗೊಳಿಸುವುದಾತ್ಮರೂಪು (ಭರತ. ೧-೧೧೧). ೪. ಜರಿ; ಜರತಾರಿ; ಕಲಾಬತ್ತು: ಹೇಮವರ್ಣದ ತಗಡಿನುಡಿಗೆಯ ಹೇಮಕೊರಳಿನ ಸೊಗಸು ಮಿಗಲು (ಸಂಭಪ. ೮-೫೯) ; ಹಳದಿ ಪೊಪ್ಪಳಿ ಚಂದ್ರಗಾವಿ ಬೊಂಬೆಯ ಬಣ್ಣ . . . ಹೊನ್ನ ತಗಡಿನ ಬಿಳಂವಟ್ಟಿ ನಾನಾವರ್ಣದ ಜವಳಿಯ ಮಳಿಗೆಗಳೆಸೆದುವು (ಕಂನವಿ. ೬-೭೦). ೫. ದಟ್ಟಣೆ; ಸಾಂದ್ರತೆ ; ಸಂದಣೆ: ಒಗುಮಿಗೆಯ ಪರಿಮಳದ ಕಂಪಿನ ತಗಡ ತಕ್ಕೈಯ ಬೀದಿವರಿಗಳ . . . ಸೊಗಸ ಸೇರಿಸಿ ಮಂದಮಾರುತನಪ್ಪಿದನು ಮಗನ (ಕುಮಾ.ಆ. ೧೦-೪೩). 'ತಗಡುಗತ್ತಲೆ' ಪರಾ.
[ ದೇ.॥ ತಮಿ. ತಕಟು ; ಮಲ. ತಕಡು, ತಕಿಡು ; ತುಳು. ತಗಡ್ ; ತೆಲು. ತಗಡು. / ಮರಾ. ತಗಡ್. ತಕಟ್ ]

ತಗಡುಗತ್ತಲೆ (ನಾ). ದಟ್ಟವಾದ ಕತ್ತಲೆ: ಅಂಡಲೆಯ ಬಲುನಿದ್ರೆ ನಳಿನಭವಾಂಡಭವನದ ತಿಮಿರರಕ್ಕಸಿ ಚಂಡಕರದೀಪವನು ಮಲಗಿಸಿ ಮಹಿಯ ಮಂಚದಲಿ ಮಂಡಿಸಿದಳೆನೆ ತ[ಪಾಠಾಂ. ಸಲ]ಗಡುಗತ್ತಲೆ ಚಂಡಿಸಿತು ತತ್ಸಮಯದಲಿ (ತೊರರಾ. ೫-೨-೨).
[ ತಗಡು + ಕತ್ತಲೆ₁ (<ಕಟ್ಟಲೆ) ]

ತಗಡುನ್ನಾಡು (ನಾ). ಒಂದು ನಾಡಿನ ಹೆಸರು : ಮಾಣಿಸಾಚಾರಿಯ ಆಟಿಯ ಪಾಲ್ಗುಡುವಿನ ಚೋಳಾಚಾರಿ ತಗಡುನ್ನಾಡ ಪೊಲ್ಲೆಯೂರ ತುಟುವಿ ಕಳ್ಕಿರ್ಕೊಣ್ಡುಪೋಗೆ . . . ಇಟಿದು ಸರ್ಗ್ಗಸ್ಥನಾದಂ (ಎಕ. X, ಕೋಲಾರ. ೧೪-೩ ; 1035). [ ತಗಡು₀ + ನಾಡು ]

ತಗಡುರಿ (ನಾ). ದಟ್ಟವಾದ ಉರಿ: ಕನಲಿ ಫಲುಗುಣನಾದಡಿದ ಕೊಳ್ಳೆನುತ ಕೊಳ್ಳಿಯೊಳಿಟ್ಟನಗ್ನಿಯ ನೆನೆದು ಮಂತ್ರಿಸಲುರಿಮುಖದ ಕಾರ್ಬೊಗೆಯ ಮೊಬ್ಬಿನಲಿ ಹೊಸಲುಗಿಡಿಗಳ ತಗಡುರಿಯ ಕೊಂಡಿ[ಡ]ನಲಿ ಮುತ್ತಿತು ರಥವನಾತನ ಧನುವನಾತನ ತನುವನು (ಕುಮಾ.ಆ. ೧೧-೩೩).
[ ತಗಡು + ಉರಿ₂ ]

ತಗಡೂರ್, ತಗಡೂರು (ನಾ). ಒಂದು ಊರಿನ ಹೆಸರು : ಪೊಂಕುನ್ನದ ಬಾರಾಪ್ಪರವಯ್ಯ ತಗಡೂರ ಕೆಳೆಯ ಕಾಳೆಗದೊಳೆ ಬಸವಯ್ಯನ ಮುನ್ನೆ ಕಾದಿ ಸತ್ತು (ಎಕ. X, ಬಾರಿಂಗ್. ೮೪-೩ : ಸು. 950). ತಗಡೂರು : ತಗಡೂರು ಸ್ಥಳದ ಬದಣೆವಾಳ ಕಾಲುವಳ್ಳಿ (ಮೈಆರಿ. ೧೯೪೬, ೧೮-೬ ; 1488). [ ತಗಡು₀ + ಊರ್₃ ]

ತಗಡೂರು 'ತಗಡೂರ್' ನೋ.

ತಗಣ (ನಾ). [ಛಂದ] ಅಕ್ಷರಗಣಗಳಲ್ಲಿ ಒಂದು : ಎರಡು ಗುರು ಮತ್ತು ಕೊನೆಯಲ್ಲಿ ಒಂದು ಲಘುವಿರುವ ಗಣ (– – ∪) : ತಗಣಾಂಬರ ಜಗಣಾರ್ಕಂ (ಛಂದೋಂಬು. ೩. ೧-೩೫). [ ತ₁ + ಗಣ ]

ತಗಣೆ 'ತಗುಣೆ' ನೋ.

ತಗಣೆ 'ತಗುಣೆ' ನೋ.

ತಗತು₁ (ನಾ). ಕಲಾಬತ್ತು ; ಜರತಾರಿ : ಚಿನ್ನದೆಳೆ ಮುಂಡಾಸನವು ಸಿರದಿಯಾಂತು ಧವಲಾಂಬರದ ತಗತಿನಂಗಿಯು ತೊಟ್ಟು ಸಂತಸದಿ ವಸುಮಯದ ಪಚ್ಚಡಂಗಳ ಪೊದೆದು (ನವಕೋ. ೨-೪೪). [ <ತಗಡು ]

**ತಗತ್ತು₂** 'ತಕತ್ತು' ನೋ.

**ತಗಪಡು** (ಕ್ರಿ). ಅಡ್ಡಿಮಾಡಲ್ಪಡು ; ನಿರ್ಬಂಧಕ್ಕೊಳಗಾಗು : ಭೋಗತೃಷ್ಣೆಯನುೞಿದ ಕಿಱುಗೂಸುಗಳುಂ ಕೌಮಾರ ಬ್ರಹ್ಮಚಾರಿಗಳುಂ ಕಟ್ಟುಂ ಪಟ್ಟುಂ ತಗಪಟ್ಟುಂ ಸೆಱೆಯೊಳಿರ್ದುಂ ಅಳಲದೆ ಬೇಸಱದೆ ಮುನಿಯದೆ ಕಾಯಕ್ಕೆ ಶಮಂ ಪರವಶತೆ ಮಾಡ್ಪುವರುಂ ನೀಚದೇವರಾಗಿ ಪುಟ್ಟುವರು (ಶ್ರಾವಕಾ. ೪೮-೦೪). 'ಅಗಪಡು' ಪರಾ. [ <ತಗೆ + ಪಡು₁ ]

**ತಗಪ್ಪು** 'ತಗೆಪ್ಪು' ನೋ.

**ತಗಬೊಗರಿ**(ನಾ). ಚಿನ್ನದ ಬುಗುರಿ; ಪೊಂಬುಗುರಿ: ಅಂಗಜನಮುಳ್ಗುಡಿಗಳ ಬೆಳಗಾಯ್ಗಳ ತೇಂಗಾಯ್ಗಳ ತ[ತ]ಗಬೊಗರಿಗಳವಱಂ ಪಿಂಗಡೆಗೆಲ್ವ ಕುಚದ ಕೋಮಲೆಯರ್ ತೊಳಗಿದರಂತಲ್ಲಿ (ಜಯಕಾ. ೧೪-೨೬).
[ ತಗ₀ (P ←ತಮಿ. ತಙ್ಕ=ಚಿನ್ನ, ಆಪರಂಜಿ) + ಬೊಗರಿ ]

**ತಗರ್₁**, ತಗುರು (ಕ್ರಿ). ೧. ತಡೆ ; ಅಡ್ಡಗಟ್ಟು ; ಅಡ್ಡಿಪಡಿಸಂ ; ನಿರೋಧಿಸು: "ತಗರ್—ಗತಿಬಂಧನೇ (ನಿಲ್ಲಿಸು) ಅಜಭೇದೇ ಚ (ಟಗರು)" (ಶಮಧಾ) ; ಪೋ ಪೋಗಲೆಂದೊದಱುತ್ತುಂ ಪರಿತಂದು ತಾಗಿ ತಗರ್ದಂ [ಪಾಠಾಂ. ತಗೆದಂ, ತೆಗೆದಂ]ಗಂಗಾಸುತಂ ಭೀಮನಂ (ಪಂಪಭಾ. ೧೧-೧೧) ; ತಂತಮ್ಮ ವಿಷಯಂಗಳಿಗೆ ಪರಿಯಲೀಯದೆ ತಗರ್ದು . . . ಚತುರ್ವಿಧಾಹಾರಮಂ ಅಷ್ಟಮಿ ಪರ್ವದಿನಂಗಳೊಳು ತೊಱೆವುದು (ಪಸಾರ. ೬೩೨-೧೧); ವ್ರತಸಮಿತಿ ಗುಪ್ತ್ಯಾದಿಗಳಿಂ ಕರ್ಮಗಳಂ ತಗರ್ವುದು ಸಂವರತತ್ತ್ವಂ (ಶಾಸ್ತ್ರಟೀ. ೧೧೩-೧). ೨. ನಿಲ್ಲು; ಅಡ್ಡಿಗೊಳಗಾಗು; ನಿರ್ಬಂಧಿತವಾಗು: ಸುದತೀವಕ್ತ್ರಸುಧಾಂಶುದರ್ಶನದೊಳಾತಂಗಂದು ಕಾಮಾಂಧಕಾರದ ಪೆರ್ಚಾಯ್ತು ಮನಶ್ಚಕೋರಿಯು ರತಂ[ತರಂ]ಗಾಂಭೋಧಿಯಾಗಳ್ತಗರ್ದುದು ಬಲ್ಸೆಡೆ ಪೊದಳ್ದು ಪೂಣ್ಮೆತು (ವೀರವಿ. ೬-೪೮). **ತಗುರು :** ೧. ಆತು ತಗುರೊಮ್ಮೊಮ್ಮಗಂ ಪವನಸೂನು ಸಂಘಾತ ತಪ್ಪಿಸಿ ಪೊಯ್ವ ಕುರುನೃಪಂ ಮತ್ಸರದೊಳೀತ ಪೊಯ್ವನು ಬೀಳು ಬೀಳೆನುತಲದ ಬೀಯುಮಮ್ಮಾಳ್ಪನಾ ಕುರುಪತಿ (ತುರಂಗ. ೭೫-೪೧). [ ? ]

**ತಗರ್₂**, ಟಗರು, ತಗರು (ನಾ). ಗಂಡು ಕುರಿ ; ಮೇಷ : "ತಗರ್ – ಗತಿಬಂಧನೇ (ನಿಲ್ಲಿಸು) ಅಜಭೇದೇ ಚ (ಟಗರು)" (ಶಮಧಾ) ; ಮೂಗುರ್ಚಿದೆಮ್ಮೆ ಪೋರಿಯುಂ ಪೆಱಮೆಟ್ಟದ ತಗರುಂ ತಾಗುವಂತೆ . . . ಪೆಣೆದಿಱುವ ಪದದೊಳ್ (ಶಾಂತಿಪು. ೬-೮೩ ವ) ; ಕೊಣಕಿಟ್ಟು ತಗರೆರಡುಂ ತಮ್ಮೊಳ್ ತಾಗಿ ಕಿಡಿಗುಟ್ಟಿದಂತಾಗೆ ಪೋರುತ್ತಿರೆ (ಪಂಚತಂ. ೭೨-೧೩); ತಗರ್ ತಗರೊಳ್ ಮಲ್ಲರ್ ಮಲ್ಲರೊಳ್ ತಾಗುವಂತೆ ಕಿಚ್ಚುಂ ಕಿಡಿಯುಮಾಗಿ ತಂತಮ್ಮೊಳ್ ತಾಗಿ (ಧರ್ಮಾಮ್ಮ. ೩-೮೭) ; ಇಂಗುಳದ ಪಣ್ . . . ಲೊಕ್ಕಿಯ ಪರ್ಣಂಗಳ ರಸದಿಂ ನಸ್ಯಂ ಕಂಗಳೊಳೆಚ್ಚಲ್ಕೆ ತಗರ ವಿಷಮಂ ಕಳೆಗುಂ (ಖಮದ. ೧೩-೭೭). **ಟಗರು:** ಪುರಾಣವೆಂಬುದು ಪುಂಡರ ಗೋಷ್ಠಿ ತರ್ಕವೆಂಬುದು ಟ[ಪಾಠಾಂ. ತ]ಗರ ಹೋರಟೆ (ಅವಚಂ. ೧೦೩-೪೬೫); ಟಗರಿನ ಹೋರಾಟದಂತೆ . . . ತಾನು ಹಿಡಿದುದ ಬಿಡದೆ ಹೋರಾಡುವುದೇ ತರ್ಕಮರ್ಕಟ ವಿಧಿ (ಸಿದ್ಧೇವ. ೧೪-೪೫ ಟಿಪ್ಪಣಿ) ; ಎಳ್ಳೂ ಹೊಲ್ದಾಗೆ ಎಳೆ ಟಗರಾ ಸಾಕಿ (ಹುಟ್ಟಿಹ. ೩೨). **ತಗರು :** ತಗರಿನ ಬಲಿದ ಕೊಂಬಂ ತನ್ನೆಡದ ಕೈಯಲಿ ಪಿಡಿದುಕೊಂಡು (ಬಸವಪು. ೨೯-೪) ; ತಗರು ಮುಳಿದಾರಿದರೆ ತೋಳನು ತೆಗೆದು ಜೀವಿಸಲಱಿವುದೇ (ಕುಮ್ಮಾಕ. ೧೦-೪೫) ; ತಗರು ಸಿಪಿಲೆ ಕೋಳಿ ಕಾಳಗಗಳು (ಕಂನವಿ. ೬-೧೯೭) ; ತೊಗರೆಯ ತೊಗೆ ಲೇಸು ಕಿಗುರಿಗೆ ಮೊಳೆ ಲೇಸು ತಗರ ಹಿಂಗಾಲ ಸತು ಲೇಸು (ಸರ್ವಜ್ಞ. ೭೨೨).

**ತಗರ ಕಾಳಗ** = ಟಗರುಗಳನ್ನು ಹಂರಿದುಂಬಿಸಿ ಹೋರಾಟ ಮಾಡಿಸುವ ಒಂದು ಪಂದ್ಯ,—ಜೂಜು : ತಗರ ಕಾಳಗ ಮದಕರಿಗಳ ಹೋರಾಟ . . . ಸೊಗಸ ಬೀಱಿದುದೋಲಗದೆ (ಕಂನವಿ. ೨೧-೯೪).
[ ದೇ.II ತಮಿ. ತಕರ್ ; ತುಳು. ತಗರು, ಟಗರ್ ; ತೆಲು. ತಗರು ]

**ತಗರ₁** 'ತವರ' ನೋ.

**ತಗರ₂**(ನಾ). ಸುವಾಸನೆಯಾದ ಬಿಳಿಯ ಹೂವುಗಳನ್ನು ಬಿಡುವ ಒಂದು ಬಗೆಯ ಗಿಡ : ನಂದಿಬಟ್ಟಲು : ನಂದಿವರ್ಧನ : "ನಂದಿವಟ್ಟಮದು ತಗರ ಸಂಜ್ಞಕಂ ತಾನಕ್ಕುಂ" (ವಸ್ತುಕೋ. ೩೮-೩೫) ; "ನಮ್ರುಂ – ತಗರ, ನೀರುಮಂಜಿ" (ಓಷಧಿ. ೮೩) ; ತಗರಂ ಕೊಳ್ಳುಳಿ ನುಗ್ಗಿ ಕಗ್ಗೊಱಲೆ ತೊಟ್ಟಿಲ್ . . . ಪುತ್ರಿನ ಮಣ್ಣುಮಂ ಕದಡಿ ಕಾಸಿಟ್ಟೆಯ್ದೆ ಪೊಯ್ವುವ ಬಾವುಗಳಂ ತೀರ್ಚುಗುಂ (ಲೋಕೋಪ. ೯-೨೪೧) ; ತಕ್ಕೊಲಲ, ಶ್ರೀಗಂಧ, ತಗರ, ಲಾವಂಚ, ಸಿವನ್ನಿಯ ಬೇರು . . . ಚೂರ್ಣಿಸಿ ಹಾಕಿ (ವೃಕ್ಷಸಾ. I, ೪೧೫) ; ಸಿಂಧುವಾರ ತಗರ ಮೊದಲಾದ ಲತಾವಿಶೇಷಂಗಳು ಕೊಂಬೆಗಳಂ ನೆಡಲು ಹುಟ್ಟುವವು (ಸೌಗಂಧಿ. ೪೨೫-೧೧). [ ಸಂ. ]

**ತಗರಪುರ** (ನಾ). ಒಂದು ಪಟ್ಟಣದ ಹೆಸರು. P ಈಗಿನ ಆಂಧ್ರ ಪ್ರದೇಶದ ಬಳಿ ಉಸ್ಮಾನಾಬಾದ್ ಸಮೀಪದಲ್ಲಿರುವ ತೇರ : ಮಹಾಸಾಮನ್ತಾಧಿಪತಿ ತಗರಪುರ ಪರಮೇಶ್ವರ ಸಿಲಾಹಾರ ನರೇಂದ್ರ (ಇಅ. V, ೨೭೪-೨ ; 1026). [ ತಗರ? + ಪುರ₃ ]

**ತಗರಬುಗರಿ** 'ತಗರುಬೊಗರು' ನೋ.

**ತಗರಸನ್ನೆ** (ನಾ). ಹತ್ತು ಬಗೆಯ ಲೆತ್ತದ ಆಟಗಳಲ್ಲಿ ಒಂದು (?): ಆರಿದಿರಾದೊಡಾಡಿದಪೆನೆಕ್ಕಡಿಯ ಪಡೆ ಪಂಚಬಾಯುಮಂ ವೀರವಿಳಾಸಮಂ ತಗರಸನ್ನೆಯನೈದೆರಡಂ ನೆಗಟ್ದ ಚೌಸಾರಿಯನಾಱು ಪನ್ನೆರಡನೊಪ್ಪುವ ರಾಜಕುಮಾರನಂ ಮಹೋದಾರವನೊಡ್ಡಿ ದೊಡ್ಡನೆನುತೆನ್ನನವಂ ಕಡುಪಿಂ ಕೆರಳ್ಚಿದಂ ಇವು ಮೊದಲಾಗಿ ಪತ್ತು ವಿಧದ ನೆತ್ತವನಾಡುವೆನೆಂದೆನ್ನಂ ಕೆರಳ್ಚಲ್ (ದಶಕು. ೮-೯೨). [ ? ]

**ತಗರಿ** (ನಾ). ಕುದುರೆಯ ಬಾಲದ ಕೆಳಗಿನ ಭಾಗ : "ಬಾಲದ ಕೆಳಗು ತಗರಿಯೆಂಬ ಪೆಸರಕ್ಕುಂ" (ಅಶ್ವಶಾ. ೪೯-೧೧). [ ? ]

**ತಗರು** 'ತಗರ್₂' ನೋ.

**ತಗರುಬಿಗುರು** 'ತಗರುಬೊಗರು' ನೋ.

**ತಗರುಬೊಗರು**, ತಗರಬುಗರಿ, ತಗರುಬಿಗುರು (ನಾ). ೧. ಕಪಟ; ಮೋಸ : ಬೂಟಾಟಿಕೆ : ಬೇಟಪೂರ್ವಗಳಲ್ಲಿ ಪುರ್ಬಿನಾಟಪೂರ್ವಗಳಲ್ಲಿ . . . ತಾಟೊಟು ತಗರುಬೊಗರು ಟಕ್ಕುಟೌಳಿಯೆಸಗುವ ಕೋಟಲೆ ಸಾಕು ದಮ್ಮಯ್ಯ (ಗೀತಗೋ. ೨೬). **ತಗರಬುಗರಿ:** ೧. ತಗೀರಿ, ತಗೀರಿ, ಸೋಟಿನ ಕಟ್ ತಗೀರಿ . . . ಸುಂಕಿ ತಗರಬುಗರಿ ಒಡಿಬ್ಯಾಡಿ ಬುದ್ಧಿ (ಶಕಾರ. ೧೫೦). **ತಗರುಬಿಗುರು :** ೨. ತಬ್ಬಿಬ್ಬು ; ಗೊಂದಲ : ಸೇರೆಗಾರ ಕೇಳದ ಪ್ರಶ್ನೆಗಳಿಗೆ ಸಾಬ್ರು ಎಂಥೆಂಥ ಜಟಿಲ ಉತ್ತರ ಕೊಡುತ್ತಿದ್ದರು ಎಂದರೆ ಅವುಗಳ ವಿದ್ವತ್ತಿಗೇ ಚೀಂಕ್ರ ತಗರುಬಿಗುರಾಗಿ ಮಾರುಹೋಗಿ . . . ಒಪ್ಪಿಗೆ ಕೊಟ್ಟಿದ್ದನು (ಮಲೆಮ. ೭೮೨). [ ? ]

**ತಗರೆ** (ನಾ). =ತಗರ₂ : ಗಂಧ ತಗರೆಯ ಮೂಲ . . . ತಂದು ಶುಚಿನಿಜಾತಿ ಪೆಣ್ಣಿಗೆ ಕೊಡಲು ತಾ ವಶ್ಯ (ಕಕ್ಕೋಕ. ೫-೩೩). [ <ತಗರ₂ ]

**ತಗರೆನಾಡು** 'ತಗಂರೆನಾಡು' ನೋ.

**ತಗರೇಱು** (ನಾ). ಮಲ್ಲಯುದ್ಧದ ಒಂದು ಪಟ್ಟು : ತಗರಿನಂತೆ ಮೇಲೇರುವುದಂ (?) : ಲಾಗಿನಲಿ ಬವರಿಯಲಿ ಒಡಮುಱಿದಾಗಿನಲಿ ತಗರೇಱಿನಲಿ ಮೈಲಾಗಿನಲಿ ತೆಕ್ಕೆಯಲಿ . . . ಗೆಲುಸೋಲುಗಳ ಬಗೆ ಸಂದೇಹವಾಗಿರೆ ಭೀಮ ಜೀಮೂತಗಳು ಹಳಚಿದರು (ಕುಮ್ಮಾವಿ. ೬೩೩. ೪-೭೭). [ ತಗರು(<ತಗರ್₂) + ಏಱು₆ (<ಏಱ್) ]

**ತಗರ್ತಲೆಯ** (ನಾ). ಒಂದು ಬಗೆಯ ಬಾಣ : ನೆಱಿದು ನಿರ್ವಾಯು ನರುವಾಯಂ ಮುಮ್ಮೊನೆ ನೆರಕೆ ನಾರಾಚಂ ತಗರ್ತಲೆಯಂ ನೆಱನರಿ[ವ]ಕಣೆ ಗೆಲೆಯಂಬು ಕಕ್ಕಂಬು ಕೆಲ್ಲಂಬು ಮೊನೆಯಂಬು . . . ಸಾರ್ದು ಸಾರ್ದು ಚ್ಚಿಚ್ಚು ಕಾದಿದರತಿರಥರೊಂದು ಜಾವಂ (ಪಂಪಭಾ. ೧೩-೬೯). [ ? ]

**ತಗರ್ತಿ** (ನಾ). ಒಂದು ಸ್ಥಳದ ಹೆಸರು. P ಈಗಿನ ಸಾಗರ ತಾಲೂಕಿನ ತಗರ್ತಿ : ಮುದನು ತಗರ್ತ್ರಿ ಕೊಠೆಯ ಹತ್ತಿ (ಮೈಆರಿ. ೧೯೨೯, ೧೫–೪; 12ನೆಯ ಶತ). 'ತಾಗರತಿ' ಪರಾ. [ ? ]

**ತಗರ್ದಲೆಯ** (ನಾ). ಟಗರಿನ ತಲೆಯುಳ್ಳವನು; "ದಕ್ಷಬ್ರಹ್ಮ" (ಪ್ರಭಿನ್ನ). [ ತಗರ್$_2$ + ತಲೆ$_1$ + – ಅ$_7$ ]

**ತಗರ್ದೇರ** (ನಾ). ಟಗರನ್ನು ವಾಹನವಾಗಿ ಉಳ್ಳವನು; ಅಗ್ನಿ : "ಅಗಿನಿ ಮರಗೂಟಂ . . . ತಗರ್ದೇರ ಪೊಗೆವಟಿಯಗೆಯನು ಕಾರ್ವಟ್ಟೆಗನಿವೆಯ್ದು ಯನಲನ ನಾಮವು" (ಶಬ್ದಮಂ. ೧೩) ; ತಗರ್ದೇರಂ ನೇಣ್ಗೈಯ್ಯಂ ಮುಂತಪ್ಪರ್ ದೆಸೆವಳರಾದರ್ (ರಾವಾಶ್ವ. ೧೮೦–೩). [ ತಗರ್$_2$ + ತೇರ್$_2$ + – ಅ$_7$ ]

**ತಗರ್ವೆಣಗಿಸು** (ಕ್ರಿ). ಟಗರುಗಳನ್ನು ಕಾದಾಡಿಸು; ಟಗರಿನ ಕಾಳಗವನ್ನು ಏರ್ಪಡಿಸು: ತಗರ್ವೆಣಗಿಸುವ ಸಿಪಿಲೆಗಟ್ಟುಸುವ ಕೋಳಿಗಾಳೆಗವ ಕಾದಿಸುವ . . . ರಾಜಪುತ್ರರ (ಜೈಮಿಭಾ. ೬–೪೯). [ ತಗರ್$_2$ + ಪೆಣಗಿಸು ]

**ತಗಲ್$_1$** 'ತಗುಳ್$_1$' ನೋ.

**ತಗಲ್$_2$** 'ದಗಲು' ನೋ.

**ತಗಲ** (ನಾ). ಮೋಸಗಾರ : ವಂಚಕ ; ದ್ರೋಹಿ : ಜಸವಂತಸಿಂಗನು ತಗಲನಿದ್ದರಂತೂ ನೆಟ್ಟಗೆ ಆಯಿತು (ಕಮಲ. ೨೦): ಈಕೆಯು ನಖಶಿಖಾಂತ ತಗಲಳಿರುವಳೆಂದು ತಿಳಿದು ಆಕೆಯ ಹೆರಳು ಹಿಡಿದು ದರದರ ಎಳೆಯ ಹತ್ತಿದನು (ತುಳಸಿ. ೧೫೯). [ ತಗಲು$_3$ (<ದಗಲು) + – ಅ$_7$ ]

**ತಗಲಿಸು** 'ತಗುಳಿಸು' ನೋ.

**ತಗಲು$_1$** 'ತಗುಳ್$_1$' ನೋ.

**ತಗಲು$_2$** 'ತಗುಳ್$_2$' ನೋ.

**ತಗಲು$_3$** 'ದಗಲು' ನೋ.

**ತಗಲುಗಾರ** (ನಾ). ವಂಚಕ : ಠಕ್ಕ: ತಗಲುಗಾರನಿಗೆ ಬಗಲ ಮೇಲೆ ಜ್ಞಾನ (ನಾದ). [ ತಗಲು$_3$ (<ದಗಲು) + – ಗಾರ (<–ಕಾಱ) ]

**ತಗಲುತನ** (ನಾ). ಅಪ್ರಾಮಾಣಿಕತೆ: ಮೋಸಗಾರಿಕೆ: ಅವನ ತಗಲುತನವನ್ನು ಬೈಲಿಗೆಳೆಯುವುದು ಬಿಗಿಯಲ್ಲ (ಕಮಲ. ೨೦). [ ತಗಲು$_3$ (<ದಗಲು) + – ತನ ]

**ತಗಲುಬೇರೀಜು** (ನಾ). ಲೆಕ್ಕಮಾಡುವಾಗ ತಪ್ಪಾಗಿ ಕೂಡಿಸುವುದು ; ತಪ್ಪು ಸಂಕಲನ : ಕುಳಗಳು ಆಗಾಗ್ಗೆ ಒಯ್ದು ರಕಮುಗಳನ್ನು ಒಟ್ಟು ಗೂಡಿಸುವಾಗ "ನಾಲ್ಕೂ ಎರಡೂ (ಕೂಡಿ) ...ವು" "ಎಪ್ಪತ್ತೇಳೂ ಆರು ಕೂಡಿ ಎಂಬತ್ತಾ... ಹೀಗೆ ತಗಲುಬೇರೀಜು ಮಾಡುವರು (...). [ ತಗಲು$_3$ (<ದಗಲು) + ಬೇರೀಜು ]

**ತಗಲುಮೊಳೆ** (ನಾ). ಉಡುಪು ಮೊದಲಾದುವುಗಳನ್ನು ತಗಲು ಹಾಕುವುದಕ್ಕಾಗಿ ಅಳವಡಿಸಿದ ಮೊಳೆ: ಅವನು ರುಮಾಲನ್ನತ್ತಿ ಸ್ಟ್ಯಾಂಡಿನ ತಗಲುಮೊಳೆಯ ಮೇಲೇರಿಸಿದಾಗ (ವಿಮೋಚ. ೧೬೦). [ ತಗಲು$_1$ (<ತಗುಳ್$_1$) + ಮೊಳೆ$_2$ ]

**ತಗಲುಸಾಕ್ಷಿ** (ನಾ). ಸುಳ್ಳು ಸಾಕ್ಷಿ : ನಾಯಕರು ತಗಲುಸಾಕ್ಷಿ ನುಡಿಯಲಿಲ್ಲ ಕೋರ್ಟಿನ ಮೆಟ್ಟಲು ಹತ್ತಲಿಲ್ಲ (ಗುರುಪ್ರ. ೨). [ ತಗಲು$_3$ (<ದಗಲು) + ಸಾಕ್ಷಿ ]

**ತಗಲೂಪಿ** 'ತಗಲೂಫಿ' ನೋ.

**ತಗಲೂಫಿ, ತಗಲೂಪಿ** (ನಾ). ಅಪ್ರಾಮಾಣಿಕತೆ ; ಮೋಸ ; ಠಕ್ಕು : ನಿಮ್ಮಪ್ಪಯ್ಯನಿಂದ ಜಮೀನು ತಗೊಂಡೋರು ಯಾರೂ ತಗಲೂಪಿ ಮಾಡಿಲ್ಲ; ಸಾಚಾ ವ್ಯಾಪಾರಸುಡಿ, ರೊಕ್ಕಕೊಟ್ಟು ಜಮೀನು ತಗಂಡವರೆ (ತಂದತೋ. ೧೯೫). ತಗಲೂಪಿ : ಅವನೊಬ್ಬ ತಗಲೂಪಿ ಮನುಷ್ಯ (ರೂಢಿ). [ ←ಅರ. ಪಾ. ಹಿಂ. ತಕಲ್ಲುಫ್: ಮರಾ. ತಕಲೂಪೀ, ತಕಲುಬೀ ]

**ತಗಲೆ** 'ದಗಲೆ$_1$' ನೋ.

**ತಗವು$_1$** 'ತಗಹು$_1$' ನೋ.

**ತಗವು$_2$** 'ತಗೆಪು' ನೋ.

**ತಗವೆ** (ನಾ). ತಡೆ ; ಅಡ್ಡಿ ; ಪ್ರತಿಬಂಧ : ಕನ್ನಡದೊಳ್ ಯತ್ವ ವತ್ವಂಗಳ್ಗೆ ಬಹುಳತೆಯಿಂ ಲೋಪಮುಂಟು – ಒತ್ತೆ + ಇಟ್ಟಂ = ಒತ್ತಿಟ್ಟಂ . . . ತಗವೆಯಪ್ಪೊಡೆ, ತಗವಪ್ಪೊಡೆ (ಶಮದ. ೩೫ ಪ್ರಯೋ). 'ತಗವು$_2$' ಪರಾ. [ <ತಗೆ$_1$ + – ವೆ ]

**ತಗಸಿ** 'ತಗಚಿ' ನೋ.

**ತಗಸು** (ಕ್ರಿ). ಅಡ್ಡಿಪಡಿಸು ; ನಿರ್ಬಂಧಪಡಿಸು ; ಬಂಧನದಲ್ಲಿರಿಸು : ಹರನ ಭಕ್ತರ ಮಹಾತ್ಮೆಯನಱಿಯದೀ ಲಾವಕರ ಮಾತಗೇಳಿ ತಗಸಿದ ಭೂರಿ ದುರ್ಭಾವದುರವಣೆಯ ನೋಡಲೆಂದಾ ಶೀತಕರ ಸಿಂದನೈಸೆ (ಸಿಂಗಿರಾ. ೨೨–೩೪) ; ಕ್ರೀರೂಪು ನೃಪ ಧನದ ಕಾರ್ಪಣ್ಯದಿಂದಲತ್ಯಾರೋಷದಿಂದ ಲಿಂಗಾಂಗಿಗಳ ತಗಸೆ (ಸಿಂಗಿರಾ. ೨೨–೩೭). [ ತಗೆ$_1$ + – ಸು$_1$ ]

**ತಗಹಿಕ್ಕು** (ಕ್ರಿ). ತಡೆಯನ್ನು ಒಡ್ಡು ; ಅಡ್ಡಿಪಡಿಸು ; ನಿರ್ಬಂಧವನ್ನುಂಟುಮಾಡು : ಹಗಲಿರುಳಿಡೆವಿಡದೀ ಮಳೆ ಕಱಿದುದು ತೆಗಹಿಲ್ಲ ಮುಂದೆ ಹೆಚ್ಚುತಿದೆ ತಗಹಿಕ್ಕಿದಂತಾಯ್ತು ಪಾಯ್ದುಳಕೆಂದು ಚಿಕ್ಕಿಗೆ ಮತ್ತೆ ಯೋಚನೆಯಾಯ್ತು (ಭರತ. ೩೪–೭೨). [ತಗಹು$_2$ (<ತಗೆಪು) + ಇಕ್ಕು]

**ತಗಹಿಡು** (ಕ್ರಿ). = ತಗಹಿಕ್ಕು : ಕೊಡುವೊಡವೆ ಬರಲಿ ಬಾರದೆ ಕಿಡಲಿ ಕಾನನದ ನಡುವೆ ತಗಹಿಟ್ಟುರಿಸಿ[ಪಾಠಾಂ. ತಗಹಿನಲಿರಿಸಿ]ಕೆಲವುದಿನವುಪವಾಸ ಬಡಿಸಿರ್ದು . . . ನುಡಿದವಧಿಯಾಯ್ತೆಂದು ಧರೆಯುಱಿಯೆ ನೃಪನಂ ಹುಸಿಕನೆನಿಸು (ಹರಿಶ್ಚಂ. ೯–೧೬). [ ತಗಹು$_2$ (<ತಗೆಪು) + ಇಡು$_1$ ]

**ತಗಹು$_1$, ತಗವು$_1$** (ಕ್ರಿ). ತಡೆ ; ನಿಲ್ಲಿಸು ; ನಿರೋಧಿಸು: ನೆಗಪ ಕಂಬನಿಯು ನಿಲ್ಲಿಸುತೇಳ್ವ ಶೋಕವ ತಗಹುತ ನೃಪ ಧೈರ್ಯದಿಂದ ಮೊಗವಿಡಿದೆತ್ತಿ ತಂಗಿಯರ ಕಂಬನಿಯ ಕೈಮಿಗೆ ತೊಡೆದಳಲನಾಱಿಸಿದ (ಭರತ. ೭೯–೭೩). ತಗವು$_1$ : "ವಿಷ್ಟಂಭಃ ಪ್ರತಿಬಂಧಃ ಈ, ಎರಡೂ ತಗವುದು" (ಹಲಾಯು. ೧೨೭–೪೪) [ <ತಗೆ$_1$ + –ಹು$_1$ ]

**ತಗಹು$_2$** 'ತಗೆಪು' ನೋ.

**ತಗಹು$_3$** (ನಾ). ಸಂಬಂಧ ; ಸಂಪರ್ಕ ; ಹೊಂದಿಕೆ : ಜಗದೊಳುಳ್ಳ ಚರಾಚರ ಪ್ರಾಣಿಗಳವೆಲ್ಲಿರ್ದೆಡೆಯೊಳಸುಗಳ ತಗಹು ಬಿಟ್ಟುವು . . . ಲೋಕ ವಳುಕಿದವು (ಬಸವು. ೨೮–೫೫) ; ಹೆಗಲ ಕೊಯ್ಲಿನ ತಗ್ಗಿನಲಿ ಸೈನೆಗೆದ ರೋಮದ ವಿಕ್ರಮಾಗ್ನಿಯ ತಗಹು ಬಿಡದಳುವನ್ನು ಮೆಱಿದನು ಶಸ್ತ್ರ ಶಯನದಲಿ (ಕುಮಾ.ದ್ರೋ. ೬–೭೨); ಹೊಗರುಗೆಟ್ಟುದು ಕುಮುದ ಕಮಳದ ಬಿಗುಹು ಬಿಟ್ಟುದು ಚಕ್ರವಾಕದ ತಗಹು ಕೆಟ್ಟುದು (ಕುಮಾ.ದ್ರೋ. ೧೫–೩೪). [ <ತಗು + – ಹು$_2$ ]

**ತಗಳೂರ್** (ನಾ). ಒಂದು ಊರಿನ ಹೆಸರು : ದೇವೆಯನೆವ್ಯೋನ್ ನೊಟವ್ಪುನ್ನೃಗಳೂರ ಕೋಟ್ಟೆ ಕೊಣ್ಡನ್ದು ಶತ್ತಾನ್ (ಎಕ. XII, ಮಧುಗಿ. ೩೮–೫ ; ಸು 950). [ ತಗಳ್$_0$ + ಊರ್ ]

**ತಗಾದಿ** 'ತಗಾದೆ' ನೋ.

**ತಗಾದೆ, ತಗಾದಿ** (ನಾ). ೧. ಆಗ್ರಹ ; ಒತ್ತಾಯ ; ಬಲವಂತ : ಚಿಕ್ಕಮ್ಮಯ್ಯ ಊರಿಗೆ ಹೋಗಬೇಕು ಎಂದು ತಗಾದೆ (ಚಂಗಾಳ್ಳ. ೨೨೬) ; ಸರ್ಕಾರಿ ಅಧಿಕಾರಿಗಳಿಂದ, "ಮನೆಗಳನ್ನು ಬಿಟ್ಟು ಗುಡಿಸಲುಗಳಲ್ಲಿ ವಾಸಿಸಬೇಕೆಂದು" ತಗಾದೆ ಬಂದಿತು (ಗುರುವಾ. ೦೮). ೨. ಕೊಡಬೇಕಾದ ಹಣಕ್ಕಾಗಿ ಒತ್ತಾಯ ಮಾಡುವಿಕೆ : ಲೆಕ್ಕಾಚಾರ ಬಾಕಿಯಿಂದ ಅಥವಾ ಇತರ ವಿಧದಿಂದ ಸಾಲ ಯಾ ತಗಾದೆಯು ೨೦ ರೂಪಾಯಿ ಮೊಬಲಗು

ಯಾ ಮೌಲ್ಯಕ್ಕೆ ಮೀರದೆ ಇದ್ದ ಪಕ್ಷದಲ್ಲಿ (ಗ್ರಾಮೂಕ. ೨೦) : ಸಾಲಗಾರರ ತಗಾದೆಯನ್ನು ಮೈಮೇಲೆ ಆವನ ಸಾಲದ ತಗಾದೆ ತಾನೇ? (ಅನಾಮಿ. ೫): ಇಟ್ಟುಕೊಂಡು ದಾನಧರ್ಮ ಮಾಡುವುದು ವಿವೇಕವಲ್ಲ (ಮೋಹಿನೀ. ೭೨). ೩. ವ್ಯಾಜ್ಯ; ವಿವಾದ: ಮೊಕದ್ದಮೆ: (ಕ). ತಗಾದಿ : ೩. ಫವುಜನವರು ಅರಶಿನವರ ಮೇಲೆ ತಗಾದಿ ಕುಳಿತರು (ಹೈದರ. ೭೧) ; ನಮ್ಮ ಹಿರಿಯರು ಗಳಿಸಿದ ಮಠ ಮಾನ್ಯವೆಂದು ಹೋರಾಡಿ, ತಳ್ಳಿ ತಗಾದಿ ಮಾಡಿ ಸರಕಾರಕ್ಕೆ ಹೊನ್ನ ಕೊಟ್ಟವರು ಮಹೇಶ್ವರರಲ್ಲ (ವಚಶಾ. I, ೩೩೧). ೪. ಒಂದಂ ಬಗೆಯ ಸುಂಕ (?) : ತಪ್ಪು ತಗಾದಿ ದಂಡ ಉಡಿಗೆ ಎಂದು ನಾಡವಳಿಕಾಜಿ ಪ್ರಭುಗಳು ಕೊಳಸಲ್ಲ (ಸೌಇಇ. IX-ii, ೪೩೩-೫೪ : 1408).

ತಗಾದಿ ಹಚ್ಚು = ಒತ್ತಾಯ ಮಾಡು ; ಮೇಲಿಂದ ಮೇಲೆ ಕೇಳು : ಅರಮನೆಗೆ ಬಿಟ್ಟಿ ಮಡಕೆಗಳು ಬೇಕೆಂದು ತಗಾದಿ ಹಚ್ಚಿ ಬಹಳ . . . ತೊಂದರೆ ಪಡಿಸಿ (ಕಥಾಮಂ. IV, ೩೧). ತಗಾದೆ ಪತ್ರ = ಒತ್ತಾಯಂಮಾಡಿ ಬರೆಯುವ ಪತ್ರ : ಅವರಿಗೆ ಹಣ ಹಿಂತಿರುಗಿಸಿಯೆಂದು ತಗಾದೆ ಪತ್ರ ಬಂದಿತ್ತು (ರೂಢಿ). ತಗಾದೆ ಮಾಡು = ಒತ್ತಾಯ ಮಾಡು : ಸಿನಿಮಾ ನೋಡದಿದ್ದ ಅತ್ತೆಯನ್ನು ತಗಾದೆ ಮಾಡಿ ಅವಳು ಕೆಲವು ವೇಳೆ ಕರೆದು ಕೊಂಡು ಹೋಗುವುದೂ ಉಂಟು (ಮೂಲಾನ. ೧೪೨) : ಸಾಲಗಾರರು ಬಹಳ ತಗಾದೆ ಮಾಡುತ್ತಿದ್ದಾರೆ (ರೂಢಿ).

[ ←ಹಿಂ. ತಗಾದಾ, ತಕಾಜಾ; ಮರಾ. ತಗಾದಾ : ಅರ. ತಕಾಜಾ ]

**ತಗಾದೆಗಾರ** (ನಾ). ಒತ್ತಾಯ ಮಾಡುವವನು : ನಮ್ಮಂತಹ ಬಡಜನರ ಬಾಗಿಲುಗಳನ್ನು ಸದಾ ತಟ್ಟುತ್ತಿರುವ ಈ ಸುಖೀ ತಗಾದೆಗಾರರು ನಮ್ಮನ್ನು ಶಾಂತಿಯಿಂದುಳಿಸಿದರೆ ಸಾಕು (ಸಾಹಿಪ್ರ. ೨೫೦).

[ ತಗಾದೆ + - ಗಾರ (< -ಕಾಜಿ) ]

**ತಗಾಯಿ** 'ತಕಾವಿ' ನೋ.

**ತಗಾಯಿಸಾಲ** 'ತಕಾವಿಸಾಲ' ನೋ.

**ತಗಾಯಿಸೂಟು** (ನಾ). ತಕಾವಿಸಾಲದ ಮರುಪಾವತಿಯ ಸಂಬಂಧದಲ್ಲಿ ತೋರುವ ವಿನಾಯತಿ,-ರಿಯಾಯತಿ : "ತಗಾಯಿ ಸೂಟ" ಬಿಡಿಸತಿ ಏನಪ? (ಕುಮಾಕಾ. ೧೮೯). [ ತಗಾಯಿ (~ತಕಾವಿ) + ಸೂಟು$_1$ ]

**ತಗಾವಿ** 'ತಕಾವಿ' ನೋ.

**ತಗಿಬಿಗಿ** 'ತಗೆಬಗೆ' ನೋ.

**ತಗಿಬಿಗಿಗೊಳಿಸು** (ಕ್ರಿ). ತಬ್ಬಿಬ್ಬುಗೊಳಿಸು ; ಕಕ್ಕಾಬಿಕ್ಕಿಯಾಗುವಂತೆ ಮಾಡು : ನಗೆಗಳಿಂ ಕೆಲಕೆಲರ ಪುರ್ಬಿನ ಬಿಗುಹಿನಿಂ ಕೆಲಕೆಲರ . . . ತಗಿಬಿಗಿಗೊಳಿಸಿ ಮಗ್ನರನು ಮಾಡಿ (ಅನಂರಾ. ೧-೨೨-೨೦).

[ ತಗಿಬಿಗಿ (<ತಗೆಬಗೆ) + ಕೊಳ್$_1$ + - ಇಸು$_3$ ]

**ತಗಿರಿಟ್** (ನಾ). ಒಂದು ಊರಿನ ಹೆಸರು : ಶ್ರೀಮಜ್ಜಯಸಿಂಹದೇವರ್ ನಿಜವಿಜಯಕಟಕ ಸಮನ್ವಿತಂ ಲೀಳಾವಿಳಾಸದಿಂದೆ ತಗಿರಿಟ ನೆಲೆವೀಡಿನೊಳ್ . . . ಅಭಿನವ ತೇಜಮುಮಂ ಪಡೆದು (ಎಕ. VII, ಶಿಕಾರಿ.೨೦-೯: 1032).

[ ? ]

**ತಗಿಲ್** (ನಾ). ಸಂಬಂಧಪಟ್ಟುದು : "ದೇವಿಕಾ, ದೈವಿಕಂ—ಈ ೨ ದೇವರ ತಗಿಲ್" (ಕಾಶಕ್ಕ. ೧೮೧). [ ತಗು + - ಇಲ್$_3$ ]

**ತಗಿಸು** 'ತಟ್ಗಿಸು' ನೋ.

**ತಗು** (ಕ್ರಿ). ತಕ್ಕ$_2$ (ಭೂತಕೃ). ೧. ಸರಿಯಾಗು : ಹೊಂದು : ಉಚಿತವಾಗು ; ಯೋಗ್ಯವಾಗು : ಅನುರೂಪವಾಗಂ : ದೇವಿಯರ್ಕಳ ಕೈಯೊಳ್ ಋಷಿಯರ್ಕಳ್ಗಣಲುಂ ಕುಡಿಯಲುಂ ತಗದು (ವಡ್ಡಾರಾ. ೧೧೪-೯) ; ಕ್ಷೀರಾಬ್ಧಿಯ ನೀರಲ್ಲದೆ ಧೀರನ ಮಜ್ಜನಕೆ ಪೆಱವು ನೀರ್ ತಗವು (ಆದಿಪು. ೭-೮೧): ಅಲ್ಲಿಗಲ್ಲಿಗೆ ತಕ್ಕತಕ್ಕ ಬಗೆಬಗೆಗಳೊಳವೆಲ್ಲರ್ಕೆ ಕಟ್ಟುಮೆಟ್ಟಂ ಮಾಡಿ (ಪದ್ಮರಾ. ೪-೨೫) ; ತೊಟ್ಟ ಜೋಹಕ್ಕೆ ತಕ್ಕ ನುಡಿಗಳ ಬಿಟ್ಟೆವಲ್ಲದೆ ನಿಮ್ಮ ರಾಯನ ಕಟ್ಟಲಾಪೆನೆ (ಕುಮ್ಯಾದ್ರೋ. ೨-೫೨) : ಅಂಗವಂಗಕ್ಕೆ ತಕ್ಕ ಲಾವಣ್ಯ (ಭರಚ. ೧-೫೨): ಬೆಕ್ಕು ನೀಂ ರಾವಣನೆ ರಾಮನು ಸೊಕ್ಕಿದಾನೆಯು ಪೇಳ್ ಜಗದಲಿ ತಕ್ಕುದೇ ತತ್ಸಾಮ್ಯ ನಿನಗದು ಹಾಸ್ಯಕೆಡೆಯಲ್ತೆ (ಸೀತಾಚ. ೫-೧೭) : ತಗುವ ನೆರವಿತ್ತ ಕಾಳಂ ನಿಲದೆ ನಡೆದು (ಕಾಲೂರ. ೧೪೧-೩೦೫). ೨. ಸಾಕಾಗು ; ಸಾಲು : ನಿನಗಮೆನಗಂ ಬೀಯಕ್ಕೆ ತಕ್ಕನಿತು ಪೊನ್ನಂ ಕೊಂಡು (ಪಂಚತಂ. ೧೭೦-೧೧).

ತಕ್ಕಂದ = ಯೋಗ್ಯವಾದ ರೀತಿ: ಇನ್ನಿದಕ್ಕೆ ತಕ್ಕುದಂ ತಕ್ಕಂದದೊಳ್ ಪೇೞ್ಚಿಂ (ಶಾಂತಿಪು. ೩-೬೬ ವ); ನೆಗಟ್ದ ಶೌರ್ಯಕ್ಕೆ ತಕ್ಕಂದದಿಂ ಪಾಂಡವರುಂ ಕೌರವರುಂ ಕೈಮುಗಿಯೆ ನೆಗಟ್ದ ಪೆಂಪಿಂಗೆ ತಕ್ಕಂದದಿಂ ಬಿಲ್ಲೊವಜಂ ಗಾಂಡೀವಿಯೊಳ್ಕಾದಿದಂ (ಗದಾಯು. ೨-೩೦). ತಕ್ಕ ಮಟ್ಟಿಗೆ = ೧. ಸಾಕಾಗುವಷ್ಟು; ಸಾಕಷ್ಟು : ಇದರಿಂದ ಪ್ರಚಾರವೇನೋ ತಕ್ಕಮಟ್ಟಿಗೆ ನಡೆದರೂ ಉತ್ಪತ್ತಿಯು ಎಣಿಸಿದಷ್ಟು ಬರಲಿಲ್ಲ (ಚಿತಸ. ೧೨೮). ೨ ಸ್ವಲ್ಪ ಮಟ್ಟಿಗೆ ; ಕೆಲಮಟ್ಟಿಗೆ : ನಿಮಗೆ ಚಿತ್ರಕಲೆಯಲ್ಲಿ ಚೆನ್ನಾಗಿ ಪರಿಶ್ರಮವಿದೆಯೆಂದು ಕೇಳಿದ್ದೆ ನಿಜವೆ? ತಕ್ಕಮಟ್ಟಿಗೆ ಉಂಟು (ಚಿಕ್ಕದೇ. ೧೪೭). ತಕ್ಕಷ್ಟು = ಸಾಲುವಷ್ಟು : ಉಚಿತಕೆ ತಕ್ಕಷ್ಟು ಪೇಳ್ವೆನಧ್ಯಾತ್ಮವೆ ನಿಚಿತ ಪ್ರಯೋಜನವೆನಗೆ (ಭರಚ. ೧-೧೫) : ತಕ್ಕವನಲ್ಲಿ ಹೊಕ್ಕಿದ್ದರೆ ತಕ್ಕಷ್ಟು ಆದರೂ ಸಿಕ್ಕುವುದು (ಗಾದೆ). ತಕ್ಕುದು, ತಕ್ಕದ್ದು = ೧. ಸರಿಯಾದುದು; ಉಚಿತವಾದುದು : "ತಕ್ಕುದೆನೆ ಸಹಜಮಕ್ಕು" (ಕಶರ. ೧೨೪) ; ಇಲ್ಲಿಗಿದು ತಕ್ಕುದಿಲ್ಲಿಗೆ ಪೊಲ್ಲದಿದೆಂದಱಿದು . . . ಇದು ಮೃದುಪದಮಂ (ಕವಿರಾ. ೨-೪) ; ಇಱಿಯದೆ ಕೆಮ್ಮನುಂತೆ ಭುವನಂಗಳಸುಂಗೊಳೆ ತಕ್ಕುದೆಂದೊಡೇ ಮಱುಕಮನೆಂಬುದೇವಿರಿದಿದೆನ್ನ ಭುಜಾಸಿಗೆ ತೇದು ಪೂಸಲುಂ ನೆಱಿಯದು (ಕಾವ್ಯಸಾ. ೪೧೧ ಶೂದ್ರಕ) : ನುಡಿಯದೆ ಪೆಱತಂ ದ್ರೌಪದಿ ನುಡಿದಳ್ ತಕ್ಕುದನೆ (ಪಂಪಭಾ. ೭-೫೩) : ತಕ್ಕುದೆ ಬೆರಸಲ್ಕೆ ಘೃತಮುಮಂ ತೈಲಮುಮಂ (ಧರ್ಮಾಮೃ. ೧-೪೨) : ನಂಬಿಕೆ ನೆಚ್ಚಿಕೆಯಿಲ್ಲದ ದೇಶವು ಪ್ರಜಾಪ್ರಭುತ್ವಕ್ಕೆ ಎಂದೂ ತಕ್ಕುದಾಗಲಾರದು (ಯುಕ್ತಪ್ರ. ೬೫) : ಕುಜನರ ಸಂಗ ಅಜಗೂ ತಕ್ಕದ್ದಲ್ಲ (ಗಾದೆ). ೨. ಅಗತ್ಯವಾದುದು, ಬೇಕಾದುದು ಎಂಬ ಅರ್ಥದಲ್ಲಿ ಸೇರುವ ಪದ : ನೀನು ಈ ಕೆಲಸ ಮಾಡತಕ್ಕದ್ದು (ರೂಢಿ). ತಕ್ಕುವು (ಬಹುವ) : ಇವು ಚಮರೀ ಜಾತಂ ದುಗ್ಧವಾರ್ಧಿಫೇನೋಪಮಾನಮಿವು ನಿನಗೆಯೆ ತಕ್ಕುವು (ಆದಿಪು. ೧೩-೧೮). ತಕ್ಕೆಡೆ = ಉಚಿತ ಸ್ಥಳ,-ಅವಕಾಶ,-ಸನ್ನಿವೇಶ : ಮುಂದೆ ನಿಂದರಂ ಕಾಣದೆ ತಕ್ಕೆಡೆಯೊಳ್ ಕ[illegible]ನ ನ.ಪವಿಡಂಬಮಿವು ಲಕ್ಷ್ಮಿ ನಿನ್ನ ದೂಸಱಿನಲ್ತೆಂ (ಗದಾಯು. ೯-೮) : ತಕ್ಕೆಡೆಗೆ ತಕ್ಕುದ[illegible]ಸುವಂ (ಸಮಪ. ೬-೭೮) : ಅಱಿವಿಲ್ಲದೆ ತಕ್ಕೆಡೆಯೊಳ್ ತಱಿಸಲ್ಲದೆ ತೊಡರ್ದ ನಮ[illegible] ನೆಱೆಯೆ ಹಿತಮೆಂದು ಬಗೆದಿದನಱಿಪುವೆಂ (ಜೀವಸಂ ೨-೭).

[ ದೇ ॥ ತಮಿ. ಮಲ. ತಕು; ತೆಲು. ತಗು ]

**ತಗುಣಬಿಗುಣಂಬರಿ** (ಕ್ರಿ). ಸ್ವೇಚ್ಛೆಯಾಗಿ ಓಡಾಡು : ಅಂತು ಕೊಂಡು ಪೋಪುದುಮೊಂದು ಪಡೆಯದಡಹಡಿಸಿ ನೋಡಿ ಕಾಣದೆ ಮಾಣದೆ ಮಗುಟ್ದು ವಱ ಬೆಂಬತ್ತಿ ಸುತ್ತಿ ವಿಯತ್ತಳದೊಳ್ ತಗುಣಬಿಗುಣಂಬರಿದು ಬಂದು ಚಾರುದತ್ತನಿರ್ದ ತಿದಿಯನೊಯ್ದೇಕಾಕ್ಷನಪ್ಪ ಪಕ್ಷಿಯ ಸಮಕ್ಷಮಂ ಸಾರ್ದು (ನೇಮಿಪು. ೪-೧೦೬ ವ). [ ತಗುಣಬಿಗುಣ$_0$ + ಪರಿ$_2$ ]

**ತಗುಣೆ** 'ತಗುಣೆ' ನೋ.

**ತಗುಣೆ, ತಗಣೆ, ತಗಣೆ, ತಗಂಣೆ, ತಿಗಣೆ, ತಿಗಣೆ, ತಿಗುಣೆ** (ನಾ). ಗೋಡೆಯ ಬಿರುಕಂ, ಹಾಸಿಗೆ ಮುಂತಾದ ಕಡೆ ಇದ್ದು ಮನುಷ್ಯನ ರಕ್ತಹೀರುವ ಒಂದು ಬಗೆಯ ಹುಳು ; ಮತ್ಕುಣ : ಗುಡಮಾಕ್ಷಿಕ ಮಳಯಜ ಎಂಬಿವನಿಂಬಾಗೊಡಗೂಡಿ ಧೂಪಂಗೆ ಚಿಕ್ಕಡು ನೊಱಜುಂ ತಗುಣೆ ಬಾವಲೆಂಬಿವು ಕಿಡುಗುಂ (ಲೋಕೋಪ. ೪-೩೯) ; ತಗುಣೆಗಳಂ

ಪೆಱತೇನೊರಸುತ್ತುಂ ಮೆಯ್ಯಮಱಿಯದೆ ಕೊಲುತುಂ ನೊಣಂಗಳಂ ನಿರ್ದಯೆಯಿಂ ಇರ್ಪುದುಂ (ಧರ್ಮಾಮೃ. ೫-೧೭೪) ; ಮಾನವನ ಕ್ಷುದ್ರಶತ್ರುಗಳ ಶ್ರೇಣಿಯಲ್ಲಿ ತಗುಣೆಗೇ ಅಗ್ರತಾಂಬೂಲ (ನಂಟರು. ೪೬). **ತಗಣೆ:** ಮಲಗಿ ಶಿಶುವು ಇರುತಿರಲು ತಗಣೆ ಗುಂಗಾಡಿ ಕಚ್ಚಿ (ಚಿದಾವ. ೧೦೭-೭). **ತಗಣೆ:** ತಗಣಿ, ತಗಣೆ, ತಿಗಣೆ–ಈ ರೂಪಗಳನ್ನೂ ಕಿಟೆಲ್ ಉಲ್ಲೇಖಿಸುತ್ತಾನೆ (ನಂಟರು. ೫೮) : ತಗಣೆ ಉಪದ್ರ ಮಗಳಿಗೂ ಬಿಡಲಿಲ್ಲ (ಗಾದೆ). **ತಗುಣೆ:** ತಗುಣೆ ಹೆಬ್ಬುಲಿಯ ಹಿಡಿದಂದು ಹೆಣ್ಣಿನ ಬಗೆಯ ನಂಬುವದು (ಸರ್ವಜ್ಞ. ೧೭೬೯) : ಚಿಕ್ಕಾಡಿ ತಗುಣೆಯೂ ರಕ್ಕಸರು ಜಾರೆಯುರು ಒಕ್ಕಲಿಕ್ಕುವರು ಇರುಳೆಲ್ಲ ಬೆಳಗಾಗಿ ಸುಕ್ಕಿದಂತಿಹರು (ಸರ್ವಜ್ಞ. ೧೮೫೫). **ತಿಗಣೆ:** ಶೂಲಿಯು ಕೊಂಡು ವಿಷವನು ಕೊರಳ ಪೂಸಲು ಖಂಡಿಯುಲಿ ಸಿಡಿಯುಲಿಕೆ ತಿಗಣೆಗಳಾದವಾಕ್ಷಣಕೆ (ಸಂಭವ. ೬-೨೬೩೬). **ತಿಗಣೆ:** "ಮತ್ಕುಣ – ತಿಗಣೆ" (ಒಷಧಿ. ೧೧೬) : ಗಗನಯಾತ್ರಿಗಳಾದರಾ ಸೂರ್ಯಚಂದ್ರರು ಎಲ್ಲರು ತಿಗಣೆಗಂಜಿದರು (ಇಂದಾಪ. ೧೧೮-೭೮). **ತಿಗುಣೆ:** ಡುಂಡುಕನೆಂಬ ತಿಗುಣೆ ಬಂದು ಆನುಂ ನಿನ್ನ ಸಮೀಪದೊಳಿರ್ಪೆನೆನೆ (ಪಂಚತಂ. ೧೨೩-೧೧) ; ದೇಶಾಂತ್ರಿಯಾದವ ತಿಗುಣೆ ಚಿಕ್ಕುಟ ಪಸಿವು ಬಾಯಾಱಿಕೆಗಂಜಿದರೆಂತಹುದು (ರೇವರ. ಹ. ೩೬೭-೧೨); ಚಿಕ್ಕಟು ತಿಗುಣೆಯು ತಿಕ್ಕುವಂದದಿ ನೆಲಕಿಕ್ಕಿದನರೆಗಳಿಗೆಯೊಳು (ನೇಮಿಸಂ. ೨೯-೩೦).

[ ದೇ.॥ ತುಳು. ತಗುಳೆ, ತಗುಲೆ, ಚಗುಳೆ, ಸಗುಳೆ ]

**ತಗುಣೆಗಾಟ** (ನಾ). ತಗುಣೆಗಳ ಕಾಟ ; ತಗುಣೆಗಳಿಂದಾಗುವ ಹಿಂಸೆ: 'ತಗುಣೆಗಾಟಂಗಾಡು' ಪರಾ. [ ತಗುಣೆ + ಕಾಟ$_1$ ]

**ತಗುಣೆಗಾಟಂಗಾಡು** (ಕ್ರಿ). ತಗುಣೆಯಂತೆ ಬಹಳವಾಗಿ ಹಿಂಸಿಸು,– ಮತ್ತೆ ಮತ್ತೆ ಕಾಡು : ಈ ರಾಜಹಂಸನಂ ಸರಸೀರತಲಂಪಟನನಸುರನೊರ್ವಂ ಗಡ ಕೊಲ್ಗಾರವೊಲುದ್ಯತನಾದನಪಾರಬಲಂ ತಗುಳೆ ತಗುಣೆಗಾಟಂಗಾಡಲ್ (ಶಾಂತಿಪು. ೮-೬೮). [ ತಗುಣೆಗಾಟ + ಕಾಡು$_1$ ]

**ತಗುತ್ತೆಂಗು** (ನಾ). ಒಂದು ಬಗೆಯ ಮೂಲಿಕೆ (?) : ತಗುತ್ತೆಂಗು ಕೋಳಿಜುಟ್ಟಿನ ರಕ್ತದಿಂ ಅರೆದು ಗುಳಿಗೆಯಂ ಮಾಡಿ ಚೆಂದೆಂಗಾಯಿ ಎಲೆ ರಸದಲ್ಲೂ, ಆ ಬೀಜದಲ್ಲೂ ತೇದು ಹಚ್ಚಲು ಇರುಳುಗಣ್ಣು ಮಾಣ್ಗುಂ (ವಿವ್ಯವಿ. ೬೩). [ ? ]

**ತಗುಬಗೆ** 'ತಗೆಬಗೆ' ನೋ.

**ತಗುರು** 'ತಗರ್$_1$' ನೋ.

**ತಗುರೆನಾಡು, ತಗರೆನಾಡು** (ನಾ). ಒಂದು ಪ್ರದೇಶದ ಹೆಸರು : ತಗುರೆನಾಡ ಮಹಾಜನಂ ಪೋಗಿ ಕಣ್ಡರೂ (ಎಕ. VI, ಕಡೂರು. ೧೪೭-೩ ; 972). **ತಗರೆನಾಡು:** ಕೋಗೋಡಿನೊಕ್ಕಲ್ತಗರೆನಾಡ ಕೂಡಿಟ್ಟಲ್ಲಿ (ಮ್ಯಆರಿ. ೧೯೩೯, ೩೬-೦ ; 1034). [ ತಗುರೆ$_0$ + ನಾಡು ]

**ತಗುರ್ಚು** 'ತಗಳ್ಚು' ನೋ.

**ತಗುಲಿಸು** 'ತಗುಳಿಸು' ನೋ.

**ತಗುಲು$_1$** 'ತಗುಳ್$_1$' ನೋ.

**ತಗುಲು$_2$** 'ತಗುಳ್$_2$' ನೋ.

**ತಗುಲುಬೀಳ್, ತಗುಲುಬೀಳು** (ಕ್ರಿ). ೧. ನೇತಂಬೀಳು; ಜೋತುಬೀಳಂ; ಕೈಗೆ ಸಿಕ್ಕು : ತಗುಲುಬಿಳ್ದಪುದೆಂತು ಪಕ್ಷವಿರಹಿತ ಪಕ್ಷಿಗೊಗುಮಿಗೆಯ ಶಾಖಾಗ್ರಫಲ (ಪರಶು. ೭-೨೬). **ತಗುಲುಬೀಳು:** ೧. ಸಲುಗೆಯಲಿ . . . ಮೈದುನನೆಂಬ ಮತ್ತೊಮ್ಮೆ ಬಗೆವ ಸಾಕ್ಷಾದ್ವಿಷ್ಣುವೆಂದೇ ತಗುಲುಬೀಳುವನೊಮ್ಮೆ ಕುತ್ತಿಗೆಗಡುತನ ನರ ಮಾಡೆ ಹರಿ ಸಂತೋಷಿಸುವನೆಂದ (ಜ್ಞಾನಸಿಂ. ೧೪-೯೫). ೨. ಗಂಟುಬೀಳಂ; ಅಂಟು : ದೊಡ್ಡ ಕೆಲಸವೇ ನನಗೆ ತಗುಲು ಬಿತ್ತು (ರೂಢಿ).

[ ತಗುಲು$_1$ (<ತಗುಳ್$_1$) + ಬೀಳ್$_1$ (<ಬೀೞ್$_1$) ]

**ತಗುಲುಬೀಳು** 'ತಗುಲುಬೀಳ್' ನೋ.

**ತಗುಸಿ** (ನಾ). ಕುಂದು ; ದೋಷ: "ತಗುಸಿಯೆಂದೊಡೆ ಕುಂದುಂ" (ಛಾರನಿ. ೬೦). [ ? ]

**ತಗುಳ್$_1$, ತಗಲ್$_1$, ತಗಲು$_1$, ತಗುಲು$_1$, ತಗುಳು$_1$, ತಗುೞ್** (ಕ್ರಿ). ೧. ಸೇರು ; ಕೂಡಿಕೊಳ್ಳು ; ಹೊಂದಿಕೊಳ್ಳು : ಪೆಱಗಸಿದಾಗಿ ಮುಂತಗಲಿತಪ್ಪುದಱಿಂದೆ ಧರಾತಳಂ ತಗುಳ್ದಿಱಪುದಱಿಂದೆ ಕೊಂಕಿಪರಿಯುತ್ತಿರವಿಂದೆ . . . ಪೋಲ್ತುದು ಮಹಾನದಿ ರುಂದ್ರಫಣೀಂದ್ರರಾಜನಂ (ಕಾವ್ಯಸಾ. ೭೪೭ ಶೂದ್ರಕ) : ಕಾರಕವಿಭಕ್ತಿಯೊಳೊಂದೆ ಸಮಾಸಯುಕ್ತಿ ಲೇಸಕ್ಕುಮಭೇದರೂಪಗುಣವಾಗೆ ತಗುಳ್ದಿರೆ ಮೇಣ್ ಕ್ರಿಯಾಪದಂ (ಕವಿರಾ. ೧-೧೧೭) ; ತಳಿರೋಳಿ ತಗುಳ್ದು ತಳ್ತ ಕೇತನತತಿ ಚಾಮರೋತ್ಕರದೆಲರ್ ಮಲಯಾನಿಲನಾಗೆ (ಆದಿಪು. ೧೩-೬) : ತಗುಳ್ದ ವಿಹತಾಂಬುವ ಬಲ್ಸೊನಲಿಂದಿರ್ಪಾಱದ ಬಟ್ಟೆಯೊಳೊಕ್ಕ ಪಲ್ಲವನಿಕಾಯದಿನಂದಱಿದಂ ಕಾಡಾನೆಗಳಾಗಡೆ ಪೋದುದಂ (ಕಾವ್ಯಾವ. ೬೨೬): ಆಗಮದ ಬಗೆಯ ಹೊಗನಗಣಿತಸೂಕ್ಷ್ಮನು . . . ತಗುಳಸಲುಗ ತಿಳಿಯಲು ಹರಿಯಲು ಬಾರದಾರಿಗಗೋಚರನುಭಯಭ್ರಷ್ಟ (ಶಿವಗೀ. ೦೨೨-೬೦೦). ೨. ಅಂಟು ; ಹತ್ತು : ಮನೋಹರಮಾದುದಮರಕಾಂತೆಯುರುರದೊಳ್ ಕುರುಳೊಳ್ತಗುಳ್ದ ದುಗ್ಧಲವಂಗಳ್ (ಆದಿಪು. ೭-೯೩) : ಮಹಾದೋಷಂ ತಗುಳ್ಗುಮೆಂದವಧರಿಸಿ (ವೃಷವಿ. ೩೩-೩೮). ೩. ಮೆಚ್ಚು ; ಇಷ್ಟಪಡು ; ಆಸಕ್ತಿವಹಿಸು : ಯಾಚಕಭೃಂಗಕೋಟಿ ಕೈಕೊಂಡು ನಿರಂತರಂ ತಗುಳ್ದು ಕೀರ್ತಿಸೆ (ಪಂಪಭಾ. ೧-೩): ವರ್ಣಕಂ ಕತೆಯೊಳೊಡಂಬಡಂ ಪಡೆಯೆ ಪೇೞ್ವೊಡೆ ಪಂಪನೆ ಪೇೞ್ಗುಮೆಂದು ಪಂಡಿತರೆ ತಗುಳ್ದು ಬಿಚ್ಚಱಿಸೆ ಪೇೞಲೊಡರ್ಚಿದೆನೀ ಪ್ರಬಂಧಮಂ (ಪಂಪಭಾ. ೧-೧೧) ; ವೀರಲಕ್ಷ್ಮಿಗಧಿನಾಯಕನೆನ್ದು ಧರಾತಳಂ ಮಹೋತ್ಸವದೆ ತಗುಳ್ದು ಬಣ್ನಿಸುತಮಿರ್ಪುದು (ಸೌಇಇ. XX, ೩೦-೨೩ ; 1044). ೪. ಮೋಹಿಸು ; ಪ್ರೀತಿಮಾಡು : ಆತನ ಸುತರ್ ತಾಮಾಗಳೇ ಯೋಗ್ಯರಾಗರೆ ಪಟ್ಟಕ್ಕೆ ತಗುಳ್ದು ಪಾಲನೆಱೆವಿರ್ ಪಾವಿಂಗೆ (ಪಂಪಭಾ. ೨-೮೯). ೫. ಸಮೀಪಿಸು ; ಹಿಂಬಾಲಿಸು ; ಬೆನ್ನಟ್ಟು : "ತಗುಳ್ – ಅನುಧಾವನೇ (ಹಿಂದೋಡು)" (ಶಮಧಾ) : "ಬೆನ್ನಟ್ಟಿನಲು ತಗುಳ್ವುದಕ್ಕುಂ" (ಕವಿಕಂ. ೨೩೧) ; ಕರಿಣಿಯ ಸೀಯನಪ್ಪ ಮೊಲೆವಾಲ್ಗೆ ತಗುಳ್ವುದು ತತ್ಕಿಶೋರಕೇಸರಿ . . . ಇಂದ್ರತನೂಜತಪಃಪ್ರಭಾವದಿಂ (ಪಂಪಭಾ. ೭-೮೦) : ಜಾಯಿಲಂಗಳ್ ಕಂಡು ತಗುಳ್ದು ಬಂದೆಮ್ಮ ಕಡಿದುವಾದೊಡೆ (ಪಂಚತಂ. ೨೦-೨) : ಗಱಿವಱಿಯ ಪಾವಿನಂತೆ ಬೆಂಬಱಿಯಂ ತಗುಳ್ದು ಪರಿತರೆ (ಸುಕುಮಾ. ೬-೫೩): ಗರ್ಭಿಣಿಯನೆಮ್ಮ ತಗುಳ್ದಂತೆ (ಧರ್ಮಾಮೃ. ೨-೭೧) : ಒತ್ತರಿಪ ಸಂಸಾರವಂ ಬೆಂಬತ್ತಿ ಪಾಱಿ ತಗುಳ್ದು ನಲಿದಾಡುತ್ತಲಿಪ್ಪವೊಲೆರಡು ಕಯ್ಯಂ ಬಿಚ್ಚಿಯಾಡುವನು (ಬಸಪು. ೩-೩೬). ೬. ಆವರಿಸು; ಆಕ್ರಮಿಸು; ಮೇಲೆಬೀಳು: ಬಾಚಿಯಿಂ ತಡಂಗಡಿದುಂ ಕೊಂತದಿಂ ತಗುಳ್ದಿಱಿದುಂ (ಧರ್ಮಾಮೃ. ೩-೭೩) ; ವಾರಣವಾಗಿ ಪೋರ್ವ ಪುಲಿಯಾಗಿ ತಗುಳ್ವ . . . ಮಹಾಸ್ತ್ರದಿ ನೆಚ್ಚು ಕಿರೀಟಿ ಕಾದಿದಂ (ಜಗವಿ. ೧೫-೨೧) ; ತಗುಳ್ದು ಪೊಯ್ದು ಗದೆಗೆ (ಚಂದ್ರಪು. ೧೦-೮೦) ; ಕಾಳ್ಗಿರ್ಚು ತಗುಳ್ದ ತೆಱದಿಂ ನಿಳ್ಕೈಸದೆ ನೊಂದು ಬೆಂದು ಬಳಲುತ್ತೆಂದಂ (ಗಿರಿಕ. ೧-೧೧೬) : ಖಳನುರವಣಿಸಿದನು ರಾಹು ತಾರಾಧಿಪನ ತಗುಳ್ವಂತೆ (ಕುವ್ಯಾಸ. ೧೪-೬೨): ಕಯ್ಕೊಳ್ಳಂ ರಾಷ್ಟ್ರದಿಂದೆಂದುಂ ತೆರೆಯಿಂ ಪೆರತೇನನುಂ ತಗುಳ್ವ ಸೊರ್ಕಂ ಪಗೆಯೊಳ್ ಆಳ್ಗಳಿಂದವನಳ್ಗಿಪಂ (ಸೌನಂದ. ೨-೩೩). ೭. ಓಡಿಸು ; ತೊಲಗಿಸು ; ನೀಗು ; ನಿವಾರಿಸು : ಕುಳಿಶಾಸ್ತ್ರಂ ಕುಧರಾಸ್ತ್ರಮಂ . . . ಜ್ವಳನಾಸ್ತ್ರಂ ಗಗನಾಸ್ತ್ರಮಂ ತಗುಳೆ (ವರ್ಧಪು. ೮-೬೩) ; ಆನೆಂತುವುಂ ಹೋಗೆನೆಂದೆನಲುಪಾಯದಲು ನಿನ್ನಂ ತಗುಳಲೆಂದಾಡಿದೆನೆ ಧರೆಯ ಹಿತವನಾಚರಿಸಲಾಡಿದೆನಲ್ಲದೆ (ಸಿದ್ಧರಾ. ೩-೧೭)

ತಾನೊಗೆದತ್ತು ಕಾರ್ಮುಗಿಲ್ ಗಡಣಮೆನಿಪ್ಪ ದಂತಿತತಿಯುಗ್ರದ ಡಿಂಡಿಮ ನಾದದಂತೆ ಪೆರ್ಗುಡುಗು ನಿದಾಘನಂ ತಗುಳಲ್ಕೆದಿದ ನೀರದ ಕಾಲರಾಜನಾ (ರಾಜಶೇ. ೮-೧೦೨). ೮. ವಿವೇಚನೆಯಿಲ್ಲದೆ ಮುಡುಕು : ಏಂ ತಗುಳ್ದೆ ಯೆನ್ನುಸಿರದಿರೀವ ಮಾತನಿವನುಣ್ಬುದು ಪಾಂಡವವಿಮಾತನಗ್ನಿ (ಪಂಪಭಾ. ೫-೭೨). ೯. ತೊಡಗು; ಮೊದಲುಮಾಡು; ಪ್ರಾರಂಭಿಸು: ತಪಂಬಟ್ಟ ದಿವಸದಿಂ ತಗುಳ್ದಿಂದಿಂಗಯ್ದು ದಿವಸವುಮುಣ್ಬುದಿಲ್ಲ (ವಡ್ಡಾ.ರಾ. ೮೨-೫) ; ಭದ್ರಶಾಲದಿಂ ತಗುಳ್ದು ಪಾಂಡುಕವನಂಬರಂ (ಆದಿಪು. ೨-೩೨) ; ಜಯಂ ಬೆಸಗೊಳೆ ಗಂಗಾದೇವಿ ಪೇಟಿಲ್ವಗುಳ್ದಳ್ (ಚಾವುಂಪು. ೮೨-೫) : ಸವಿಸ್ತರಂ ಪೇಟಲ್ ತಗುಳ್ದು (ಪಂಚತಂ. ೬೦-೬). ೧೦. ಅನುಸರಿಸು ; ಆಚರಿಸು ; ಪಾಲಿಸು: ಭೋಗಿಪೆನೆನ್ನ ಜವ್ವನವುಮಿಮಾಧನಮುಂ ತವುವನ್ನೆಗಂ . . . ಅನ್ನೆಗಮತ್ರಜನಂ ತಗುಳ್ವೆನೆಂತಾಗಿಯುಮೆಂಬ ನಿನ್ನ ಮೊಲಗಟ್ಟಲೆಗಾಂ ಬೆಜಗಾದೆಂ (ಆದಿಪು. ೩-೬೩). ೧೧. ಉಂಟಾಗು; ಸಂಭವಿಸು; ಒದಗು; ಬರು: ಗುರುಸಮಕ್ಷಪರೋಕ್ಷವಿನೇಯವೃತ್ತಿಯಿಂದಮ್ಮನಮುಕ್ಕೆವಂ ತಗುಳೆ ನಿರ್ವಹಣಸ್ಥಿತಿಗುಯ್ದುರೀ ಪುರಾಣಂ ಮಹಿರತ್ನಮಿಂತಿದೆಯಳಂಕೃತಿ (ಶಾಂತಿಪು. ೧೨-೬೦) ; ಆರೋಚಕಂ ತಗುಳ್ವಡೆ ಬೞಿಬೇನೆ ಎತ್ತುವಡೆ . . . ತಗುಳ್ಗುಂ ಪುಟ್ಟುಗುದಾತ್ತ ಬಲಕ್ಷಯಂ (ಕಲ್ಯಾಕಾ. ೬-೧): ದೀರ್ಘಕ್ಕೆ ದೀರ್ಘ ಮೊದವೆ ಸಮಸಂದಾ ಯುಗಳಂಗಳೊಳವಮಿನಮಾಗೆಲ್ಲಿಯುಂ ಸವರ್ಣ ವಿಧಾನಂ (ಶಮದ. ೭) ; ತನಗೆ ಕಂತುಹರಕರುಣದಿಂ ತಗುಳ್ದ ರೂಪದೊಳು ಹಿಮವಂತಸುತೆಯಾಸ್ವಾಂತಮತ್ಯಂತಚಂಚಲವಮಾದ ಬಳಿಕ ತಾನೆಂತು ನಿಶ್ಚಿಂತೆಯಿಂದಿರ್ಪೆಂ (ನಂದಿಮಾ. ೯-೩೨). ೧೨. ಬಯ್ಯು; ತೆಗಳು; ಮಂೂದಲಿಸು: ಒರ್ವರೊರ್ವರಿಬಿಯುತ್ತಂ ಮುನಿದು ತಗುಳುತ್ತಂ . . . ಬಿಡದೆ ನರಳುತ್ತಂ ಪುಡಿಯೊಳು ಪೊರಳುತ್ತಮಿಪ್ಪರ್ (ಶ್ರಾವಕಾ. ೨೨-೧೫). 'ತೆಗಟ್$_1$' ಪರಾ. ತಗಲ್$_1$ : ೧೩. ತಾಕು; ಸೋಂಕು; ಸ್ಪರ್ಶಿಸು: ಕಣೆ ಅವಂಗೆ ತಗಲ್ದು ಮೂರ್ಛೆವೋದಂ (ಅದ್ಭುತ. ೩೩-೧೯). ತಗಲು$_1$ : ೧. ಪೊಗಳಿದ ಭಕುತರ ತಗಲಿ ತೊಲಗನೆಂದು ಮಿಗೆ ಕೂಗುತ್ತಿರಲು (ವಿದಾಕ್ಷ. ೭೫-೨) ; ತನುಲತೆಗಳನ್ಯೋನ್ಯಮಾಗಿ ತಗಲಿರೆ . . . ತನುಭಾವವಮಳಿದು ನಿದ್ರಿಪ ಮಾನಿನೀಗಣವ ಕಂಡನಾ ವಾಯುಸುತನು (ವಂಕಾರಾ. ೫-೪-೧೮); ೧೩. ತೆನೆಗಳಿನತಿಶಯಿಯಾ ತಗಲಿ ಪೆರ್ಬಾಗಿಲೊಳು ಚಂದ್ರುನನುಗಿವವು (ಜಿನಭಾ. ೨-೨೨) ; ಈ ಬಾಣವು ಈ ನೀಚನ ಮಗನಿಗೆ ತಗಲಲಿ (ನೀತಿಚಿಂ. XI, ೧೪) ; ಆಕಾಶಬಾಣವನ್ನು (rocket) ಚಂದ್ರುಗ್ರಹಕ್ಕೆ ತಗಲುವಂತೆ ಎಸೆದಿದ್ದಾನೆ (ಶಿಲ್ಪನಾ. ೧೮೨). ೧೪. ಸಂಭೋಗವಮಾಡು: ತಗಲಿದವನಿಗೆ ಹಗಲೇನು ಇರುಳೇನು (ಗಾದೆ). ತಗುಲು$_1$ : ೧. ಸೊಗಸಿಂದಮಾನಂದಗೊಳುವ ಸುಕುಮಾರಾಂಗಿ ಮಿಗೆ ರಕ್ಕಸೀಗಣದಿ ತಗುಲಿ ಸಂಕಟಗೊಂಬ ಬಗೆಯ ನೋಡಲು ವಿಧಿಯ ಬಲಮೆಂತೊ (ವಂಕಾರಾ.೫-೮-೧) ; ಕೇಶಿಧ್ವಜನು ಆ ರಾಜ್ಯಭೋಗಗಳಲ್ಲಿ ತಗುಲಿಕೊಳ್ಳದೆ ಯೋಗನಿಷ್ಠನಾಗಿದ್ದು . . . ಯಜ್ಞವನ್ನು ಮಾಡತೊಡಗಿದನು (ಸಾಹಿಜೀ ೯೬). ೨. ರಾವಣನ ತೇಜಸ್ಸಿಗೆ ಸ್ತ್ರೀವ್ಯಾಮೋಹದ ಕಳಂಕವೊಂದು ತಗುಲದಿದ್ದರೆ ಅವನ ಸಮಾನರು ಯಾರು (ಕಾವ್ಯಸ. ೩); ಒಂದು ಹುಲ್ಲುಕಡ್ಡಿ ನನ್ನ ಬಟ್ಟೆಗೆ ತಗುಲಿಕೊಂಡಿದೆ (ನೀತಿಚಿಂ. IV, ೨೪) : ಅರಸರ ತೈಲಚಿತ್ರಕ್ಕೆ ನಂದಾದೀವಿಗೆ ತಗುಲಿ, ಅದು ಉರಿದುಹೋಗುತ್ತದೆ (ಸಂಸಕ. ೯೯). ೧೫. ಬೆಲೆಯಾಗು ; ವೆಚ್ಚವಾಗು ; ಖರ್ಚಾಗು : ಅಷ್ಟೇ ಕೆಲಸಕ್ಕೆ ಕನಿಷ್ಠಪಕ್ಷ ಹತ್ತು ರೂಬಲ್ ತಗುಲುತ್ತಿತ್ತು (ಪುನರು. ೨೬೪). ತಗುಳು$_1$: ೬. ಮಗನ ಕರೆದರೆ ಯಮನ ದೂತರ ತಗುಳುವಂದು ಸವಿಮಾಪವರ್ತಿಯೆ ನಗಧರ ಶ್ರೀಕಾಂತ ಸಲಹೆನೆ ಮುನಿಕುಮಾರಕನ ಉಗುಳಿಚಿದೆಲಾ (ಕುವ್ಯಾಳ. ೨-೨೯): ಹಾಳಾಹಳಂ ತಗುಳಿ ನಾಲ್ದಿಕ್ಕನಾಂತು ನೆಟ್ ಪರಿಪರಿದು ಸುಡುತ ಬರಲು (ಲಶಿಚಿಂ. ೧೨-೮) ; ಭುಗುಭುಗಿಲು ಭುಗಿಲೆಂದು ಕೇಸುರಿ ತಗುಳಿದುದು (ನಿಭಾಗ. ೧೦-೧೭-೨೦). ೧೨. ಪಾಪಿ ಪೋಗೆಂದಂದು ನಿನ್ನಂ ಕೋಪದಿಂ ನಾಂ ನುಡಿದು ತಗುಳಿದ ಪಾಪವಂ ಸೈರಿಸುವುದು (ಬಸವು. ೦೩-೩೩) ; ಜಿನದತ್ತೆಯಾಲಯಕೆ ಪುಗಲವಳ್ಕಂಡೆಲೇ ಕಡುಪಾಪಿ ಪೋಗೆಂದು ತಗುಳಿದಳ್ (ಸಮ್ಯಕ್ತಾ. ೧೦-೧೮) : ವಿಭಾಡಿಸಿ ತಗುಳಲ್ ದೂತಂ ಬಂದಾಕ್ಷಣದೊಳ್ ವಿಕ್ರಮ ಕೌರವನೆಂದಂದವನೊರೆಯಲ್ (ಜಯುಕಾ. ೬-೧೦). △ತಗುಟ್: ೬. ಅಸಹಾಯಸಿಂಹಂ ತಗುಟ್ದಿಳ್ದ ಬಡಿವಂ ದುಷ್ಟಮನ್ನೆಯ ಪುಳಯಕಾಳಂ (ಸೌಇಇ. XX,೨೪-೬ ; 1034).

ತಗಲು ಹಾಕು, ತಗಲ್ಹಾಕು=ತಗುಲಿಸು; ತೂಗುಹಾಕು; ಅಳವಡಿಸು: ಗುರು ಕೊಟ್ಟ ಚೀಲವೆಂದು ಗೂಟಕ್ಕೆ ತಗಲು ಹಾಕಿದರೆ ಹೊಟ್ಟೆ ತುಂಬೀತೆ (ನೀತಿಚಿಂ. VII, ೩೨) ; ಯಮನ ದೂತರು ಬಂದು ಪಾಶವನು ತಗಲ್ಹಾಕಿ ಮಮತೆಯಿಲ್ಲದೆ ಪ್ರಾಣ ಎಳೆಯುತಿರಲು(ಪುರಂದ.೦-೫೨-೫). ತಗುಳೆ ಗಟಪು= ಮನಸ್ಸಿಗೆ ತಾಕುವಂತೆ ಹರಟು ; ಮರ್ಮೋದ್ಘಾಟನೆ ಮಾಡು : ಪದುಳಂ ಕುಳ್ಳಿರ್ದೆಮಗಾಯುದ ಮಾತಂ ತಗುಳೆ ಗಟಪಿ ಪೋದಂ (ಗದಾಯು. ೨-೧೩). ತಗುಳೆ ಪಾಡು = ಮನಸ್ಸಿಗೆ ಹಿಡಿಸುವಂತೆ ಹಾಡು; ಮನೋಹರವಾಗಿ ಹಾಡು: ಪದ್ಮಜಂ ತಗುಳೆ ಪಾಡಿ ಸಾಮಂಗಳಂ(ಕಾವ್ಯಾವ. ೦೩೫). ತಗುಳೆ ಪೀರು = ಎಡೆಬಿಡದೆ ಕುಡಿ : ಬಡಬಾನಳಂ ಬಿಡದಾಗಳುಂ ತಗುಳೆ ಪೀರೆಯುಮಂತದೆಳ್ಳನಿತಪ್ಪೊಡಂ ತವದಂತೆಪೊಲ್ (ಕಾವ್ಯಾವ. ೭೩೬). ತಗುಳೆ ಬಾಜಿಸು=ಹೊಂದಿಕೆಯಾಗಿ ಬಾರಿಸು: ಕೂಡಿಕೊಂಡು ಬಾಜಿಸು: ವಿತತ ಘನಾವನದ್ಧ ಸುಷಿರಂಗಳನೊರ್ಮೆಯೆ ಕೂಡೆ ಕೂಡಿಕೊಂಡತಿದ್ರುತ ವಾದಕರ್ತಗುಳೆ ಬಾಜಿಸೆ (ಮಲ್ಲಿಪು. ೮-೨೭). ತಗುಳೆವರ್ = ಅನುರೂಪವಾಗು; ಹೊಂದಿಕೊಳ್ಳು; ಸಮನಾಗು: ಈತನುದಾತ್ತ ಪೂರ್ವಭೂಮಿಪರುಮನೊಳ್ಪಿನೊಳ್ ತಗುಳೆವಂದೊಡೆಯಿಾ ಕಥೆಯೊಳ್ ತಗುಳ್ದು ಪೇರಿ ಪೊಡೆನಗಟ್ಟಿಯಾದುದು ಗುಣಾರ್ಣವ ಭೂಭುಜನಂ ಕಿರೀಟಿಯೊಳ್ (ಪಂಪಭಾ. ೧-೧೪).

[ದೇ.॥ ತುಳು. ತಗರು, ತಗರ್ ; ತೆಲು. ತಗುಲು, ತವುಲು]

ತಗುಳ್$_2$ ತಗಲು$_2$, ತಗುಲು$_2$, ತಗುಳು$_2$ (ನಾ). ೧. ಸೇರಿಕೆ; ಹೊಂದಿಕೆ; ಜೋಡಣೆ : " ತಗುಳೆಂದು ಸಂಧಾನಂ " (ಕಶಸಾ. ೨೮-೫೮೭). ತಗಲು$_2$ : ೨. ಸಂಬಂಧ ; ಸಂಪರ್ಕ : ಎಲ್ಲಿಯ ಗುಡಿಯ ಕಟ್ಟಿದ ಸಿದ್ಧರಾಮಯ್ಯ ಎಲ್ಲಿಯ ಬಿಟ್ಟ ಬಂತೆನಗೆ ಎಲ್ಲಿಯ ತಗ[ಗ]ಲು ತಾಪತ್ರಯವೆಂದಾಗ ಮಲ್ಲಿಕಾರ್ಜುನ ಚಿಂತಿಸಿದನು (ಅಮುಸಾಂ. ೫-೭೧) : ತನಗೀ ವೃತ್ತಿಗಸಂಗತ್ವವ ತಿಳಿದನಿಗಘಪುಣ್ಯದ ತಗಲುಂಟೆ (ಕೈಶವ. ೫-೪೮-೪) ; ಹರಿಯ ನೆನೆಸಿದ ಹಗಲು ಮುಕ್ತಿಗೆ ಬಲು ಮಿಗಿಲು ಹರಿಯ ನೆನೆಸದ ಹಗಲು ನರಕಕ್ಕೆ ತಗಲು (ವಿದಾಕ್ಷ. ೨೨-೨). ತಗುಲು$_2$: ೨. ಕೊಂಕು ಕೊಸರುಗಳ ಕಿನಿಸಂಬ ತಗುಲುಗಳ ಸೋಂಕದಿಹ . . . ನೆಲದೊಳು (ವಂಕಾರಾ. ೬-೬೨-೩೫). ತಗುಳು$_2$ : ೩. ಹತ್ತಿರ ಬರುವುದು ; ಸಮಿಾಪಿಸುವುದು.

ತಗುಲಾಗು=ಸೇರುವವಯಾಗು: ರಾಮಚಂದ್ರನ ಸೇವೆಗೆ ಕಲಿ ಹನುಮಂತ ನೇಮದೆ ತಗುಲಾದಂತೆ ಭೂಮಿಪ ಕಂಠೀರವೇಂದ್ರಗೆ ನಂಜೇಂದ್ರ ತಾ ಮನೋಹರದೊಳೊಪ್ಪಿದನು (ಕಂನವಿ. ೪-೦೦೪); ನಿಂಮ ಚರಣಾರವಿಂದದ ಸೇವೆಗೆ ತಗುಲಾಗಿಯಿಧೇವೆ (ಮ್ಯಾಆರಿ. ೧೯೪೩, ೫೦-೪೦ ; ಸು. 1709). ತಗುಳುಮುಗುಳು, ತಗಳುಮುಗುಳು = (ಶತ್ರುವನ್ನು) ತಾಗುವುದು ಮತ್ತು ಹಿಂದಿರುಗುವುದು ; ಆಕ್ರಮಣ ಮಾಡಿ ಶತ್ರುವಿನ ಕೈಗೆ ಸಿಕ್ಕದಂತೆ ತಪ್ಪಿಸಿಕೊಳ್ಳುವುದು : ಎದ್ದು ನಭದೊಳ್ಪಳಂಚುವರೊಮ್ಮೆ ಭೂತಳದೊಳಿದ್ದು ಹೆಣಗುವರೊಮ್ಮೆ ಬಳಸಿ ಮಂಡಲದಿಂದೆ ಹೊದ್ದಿ ಹೋರುವರೊಮ್ಮೆ ತಗುಳುಮುಗುಳಾಗಿ ತಾಗುವರೊಮ್ಮೆ ಸರಿಬರಿಯೊಳು (ಜೈಮಿಭಾ. ೨೨-೨೯) ; ತಗಳುಮುಗುಳಾಗಸಮಸಮರದಲಗಣಿತದ ಭಟನಿವಹ ವಡಗೆಡೆದುಗುಳಿಚಿದರಸುಗಳನು (ಕೋಗಯು. ೨೦-೨೪). [<ತಗುಳ್$_1$]

**ತಗುಳ (ನಾ).** ಒಟ್ಟಾಗಿರುವುದು; ಗೊಂಚಲಂ; ಮಂಜರಿ: ನಗೆಯಿಂದ ಬಿರಿವಂತೆ ಬಿರಿವ ಬಿರಿಮುಗುಳ ತಗುಳದಿಂ ಸೊಗಯಿಸುವ ಮಲ್ಲಿಕಾಲತೆಯ ಜೊಂಪಂಗಳುಂ (ಪುಷ್ಪಪು. ೨-೩೯ ವ); ಚೆಲ್ವಿಂ ಬಳ್ಳಲಾದ ಮಲ್ಲಿಗೆಯ ಮುಗುಳ ತಗುಳದಿಂದೆಸೆವ ಬಾಸಿಗಂಗಳೊಳಮಲಂಕರಿಸೆ (ಪುಷ್ಪಪು. ೪-೮೦ವ). [<ತಗುಳ್$_1$ ?]

**ತಗುಳಿಸು, ತಗಲಿಸಂ, ತಗುಲಿಸು (ಕ್ರಿ).** ೧. ಸೇರಿಸು; ಹೊಂದಿಸು: ಪೊಗಮೆಂಬಲರ್ಗೊಳದ ತಡಿಯೊಳಿರಿಸಿದಳಿವಳಂಚೆಗಳನೆನೆ ಸತಿಯ ಕವಿಯೊಳ್ ತಗುಳಿಸಿದಳ್ ಪಂಸರಚನೆಯೋಲೆಯನೊರ್ವಳ್ (ಪುಷ್ಪಪು. ೯-೭೭). ೨. ತಳ್ಳಿಸು; ಓಡಿಸು; ಹೊರದೂಡಿಸು: ಹರಹರಾಯಿಂದೀ ವ್ರತಭ್ರಷ್ಟರ ದೆಸೆಯನೀಕ್ಷಿಪೊಡೆ ನುಡಿಪೊಡೆ ಪರಮಪಾತಕವೆನುತ ಹುಗಲೀಯದೆ ತಗುಳಿಸಿದೊಡೆ (ಬಸಪು. ೬೦-೩೭). **ತಗಲಿಸು:** ೧. ದಿಟ್ಟನೋಲೆ ಮೊಣಕಾಲಿಗೆ ತಗಲಿಸಿ ಗಟ್ಟಿಕಂಕಣ ಕಿವಿಗಿಟ್ಟು (ಪುರಂದ. ೧-೧೧೧-೪). ೩. ಮುಟ್ಟಿಸು; ತಾಗಿಸು: ಮತ್ತೆ ಪ್ರಾಗ್ನ್ಯಾಸನೆಯ ಪೆಸರಿನ ಸುತ್ತುವಳ್ಳಿಯ ಮಟ್ಟರದ ಮೈ ಪತ್ತುತಿಹ ಸಂಕಲ್ಪ ಚಿಗುರಿಗೆ ಜುಟ್ಟ ತಗಲಿಸದೆ (ಗಗತಾ. ೧೬-೧೮); ನಾನು ಸ್ವಲ್ಪ ರೋಗದ ಸೋಂಕನ್ನು ತಗಲಿಸಿದರೆ ಅವು ಸತ್ತ ಪ್ರಾಣಿಯ ಅಂಗಾಂಗಗಳನ್ನೆಲ್ಲ ವ್ಯಾಪಿಸಿರುತ್ತವೆ (ವಿಕಾಸ.೬೩). **ತಗುಲಿಸು:** ೧. ಉಪ್ಪು ಮೆಣಸು ಜೀರಿಗೆ ಸರಿಯಾಗಿ ಹಾಕಿ ಸ್ವಲ್ಪ ಹಿಂಗು ತಗುಲಿಸಿ ಆಯಕಟ್ಟು ಮಾಡಿ (ಕಥಾಮಂ. IV, ೧೪). ೪. ನಿಂದಿಸು; ದಬಾಯಿಸು: ಆ ಚಿಕ್ಕಮಗು ಆ ಭಾರತದ ದೇವರಾಜ್ಯೈಯ್ಯ ಎಷ್ಟು ಧೈರ್ಯವಾಗಿ ಪಂಡಿತನಿಗೆ ಜವಾಬು ಕೊಟ್ಟ ನೀವೂ ಹಾಗೆಯೇ ಪಂಡಿತನಿಗೆ ತಗುಲಿಸಬೇಕಾಗಿತ್ತು (ಬಂಗಾಳ್ಯ. ೫೭೮). 'ತಗುಳ್ಚು' ಪರಾ. [ತಗುಳ್$_1$ + – ಇಸು$_3$]

**ತಗುಳ್ಚು$_1$** 'ತಗುಳ್$_1$' ನೋ.

**ತಗುಳ್ಚು$_2$** 'ತಗುಳ್$_2$' ನೋ.

**ತಗುಳ್ಚಿಸು (ಕ್ರಿ).** ನೂಕು; ತೊಲಗಿಸು; ನಿವಾರಿಸು; ದೂರಮಾಡು: ಕರಕಪಾಲಮಂ ಕಂಡೊರ್ವ ಶಶಿಮುಖಿಯರಾದೊಡಂ ಭಯ ಬೀಭತ್ಸುಗೆ ಸಂದುದಿಲ್ಲವೆನೆ ಶಿವಮುಖಿದೊಳು ಬೆಸುಗೆಗಣ್ಗಳ್ ಪೆಟಿತು ಕಾಣ್ಬುವೇಮೇಣ್ ಮಿಕ್ಕ ರಸಮೆನಿತ್ತಾದೊಡಂ ಮೋಹರಸಮಂ ತಗುಳ್ಚಿಸಬಲ್ಲುದೇ (ಚಿಬಪು. ೨೦-೨) [ತಗುಳ್ಚು + – ಇಸು$_3$]

**ತಗುಳ್ಚು, ತಗುರ್ಚು (ಕ್ರಿ).** ೧. ಸೇರಿಸು; ಕೂಡಿಸು; ಬೆರಸು: ಅರಸನಜೀದೇಂ ಮಹಾಪುರುಷರತ್ನದೊಳ್ ರತ್ನಮಂ ತಗುಳ್ಚಿದನೊ (ಶಾಂತಿಪು. ೨-೭೫); ಪಟಗನ್ನಡಂ ಪುದುಂಗೊಳೆ ಕೊಟಿ ಸಕ್ಕದಮಂ ತಗುಳ್ಚಿ ಜಾಣ್ ಕಿಡೆ ಮುತ್ತುಂ ಮೆಟಿಸಂ ಕೋದಂತಿರೆ ಪೇಟ್ವಾಟಿಗವಿಗಳ ಕವಿತೆ ಬುಧರನೆರ್ದೆಗೊಳಿಸುಗುಮೇ (ಕಾವ್ಯಾವ. ೫೫); ತದೀಯ ದುಸ್ತರ ಸ್ಮರದಶಾವ್ಯತಿಕರಕ್ಕೆ ತಲ್ಲಟಿಸಿ . . . ನಲ್ಲಳಸುವನಾಂ ಸಾಹಸದೊಳ್ ತಗುಳ್ಚಿ ನಿಲೆ ಪಿಡಿವ ನಯಮಂ ಬಗೆದು (ವರ್ಧಪು. ೪-೮೨ವ). ೨. ಅಳವಡಿಸು; ಸಿಕ್ಕಿಸು: ಮಧುವಂ ಶಚಿ ಪೂತ ಚೂತವಮಂ ನೆರ್ವಿದಶೋಕವಲ್ಲರಿಯ ಪಲ್ಲವಮೊಂದನೆ ಕೊಯ್ದು ರಾಗದಿಂ ಸೋರ್ಮುಡಿಯೊಳ್ ತಗುಳ್ಚಿದೊಡೆ ಸೂಟಿನೆ ಬಾರಿಸಿದಂ (ಪಂಪಭಾ. ೫-೮೨); ಕೋಡ ಮೊನೆಯೊಳ್ ತಗುಳ್ಚಿದ ಸೂನಗಿಗತ್ತಿಯ (ರಾಜಶೇ. ೬-೧೧ವ). ೩. ತೊಡು; ಧರಿಸು: ಸೌಭಾಗ್ಯನಿಧಿಯ ವಿಯೋಗದಿಂ ಜೀವವಿಯೋಗಮಾಗದಿರ್ಕೆಂದು ತಗುಳ್ಚಿದ ರಕ್ಷಾವಳಿಯಂತೆ ಕೊರಲೊಳಿಕ್ಕಿರ್ದಕ್ಷಾವಳಿಯುಮಂ (ಕಾದಂಪೂ. ೭೧೧); ಗಳದೊಳ್ ತುಲಸೀಸ್ರಜಮಂ ತಗುಳ್ಚಿ (ದಿವ್ಯಚ. ೯-೧೯). ೪. ಹೊಂದಿಸು; ಅನ್ವಯಿಸು: ಸಂಖ್ಯೆಗಳೊಳೇಕಬಹುತ್ವವಿಪರ್ಯಯಕ್ಕಸಂಖ್ಯಾತಗುಣಂ ವಿಕಲ್ಪಮದು ಕನ್ನಡದೊಳ್ ಗುಣಮಂ ತಗುಳ್ಚುಗುಂ (ಕವಿರಾ. ೧-೧೧೯); ಈ ಕಥೆಯೊಳ್ ತಗುಳ್ಚಿ ಪೋಲಿಪೊಡೆನಗಟ್ಟಿಯಾದುದು ಗುಣಾರ್ಣವ ಭೂಭುಜನಂ ಕಿರೀಟಿಯೊಳ್ (ಪಂಪಭಾ. ೧-೧೪); ಓಹಿಲಯ್ಯಂಗೆ ಪೆರ್ಮೆಯಂ ತಗುಳ್ಚಿ ನೀಂ ಮಿಗೆ ಪೊಗಳ್ದುದನುಚಿತಮಕ್ಕುಂ (ವೃಷವಿ. ೨೯-೧೬೬ವ); ಬೆಳಕಿನ ಅನುಭವವನ್ನು ಪರಿಭಾವಿಸಿ ಆ ಬೆಳಕನ್ನು ಗಾಂಧೀಜಿಯ ವ್ಯಕ್ತಿತ್ವದ ಚಿತ್ರಣಕ್ಕೆ ತಟಕ್ಕನೆ ತಗುಳ್ಚಿರುವುದು ತುಂಬ ಹಿತವಾಗಿದೆ (ಸೌಂದಸ. ೩೪೬). ೫. ತಗುಲಿಸು; ಗಂಟುಹಾಕು: ಗಾಳಿಗೊಸರಮಂ ತಗುಳ್ಚಿ ಪಳಾಳಮನೇನೊಂದನಪ್ಪೊಡಂ ಗಟಪಿದೊಡು ಬೇಳುಸುಡಿಗೇಳ್ದು ಕಿಮ್ಮನೆ ಬೇಳಲ್ ನಿಮಗಂತು ರಾಜಸೂಯಂ ಪೊಗ್ಗೇ (ಪಂಪಭಾ. ೬-೨೪). ೬. (ಉರಿ) ಹತ್ತಿಸು; ಅಂಟಿಸು: "ತಗುಳ್ಚು–ಉದ್ಯೋಗೇ, ಅಗ್ನಿಬಾಧನೇ ಚ" (ಶಮಥಾ); ಬಳೆದ ತವಮೆಂಬ ಕರಡಮನಳಲ್ಲದೆ ಸುಟ್ಟು ಕಿಡಿಸಲೆಂದಜನುದಯಾಚಳದೊಳ್ ತಗುಳ್ಚೆ ತಳ್ತೊಡನಳುರ್ವ ದವಾಗ್ನಿಯ ಪೊಲರ್ಕನುದಯಂಗೆಯ್ದಂ (ಕಾವ್ಯಸಾ. ೮೭೦ ಶೂದ್ರಕ); ಎನ್ನ ಬಸಿಱೊಳ್ ಕಿಚ್ಚಂ ತಗುಳ್ಚಿದಂ (ಅರ್ಧನೇ. ೬-೭೯ವ). ೭. ಮಾಡು; ನಿರ್ವಿಸು: "ತತುಳ್ಚು–ಉದ್ಯೋಗೇ,ಅಗ್ನಿಬಾಧನೇ ಚ"(ಶಮಥಾ);ಸುರಪತಿಯಿಲ್ಲಿಯಲ್ಲದೆ ಜನಾಭಿಷವೋತ್ಸವಮಂ ತಗುಳ್ಚನಾ ಸುರತರುಯಿಲ್ಲಿಯಲ್ಲದುದಿತೋದಿತಮಾಗದು (ಮಹಾನೇ. ೧-೫೫); ಅಲ್ಪಾರ್ಥವನಾಳ್ದರೆ ವಸ್ತುವಿನರ್ಥವನು ಸಿರುತ್ತಿರೆ ತಗುಳ್ಚುವುದು ಸಂಹಿತೆಯಂ (ಶಮದ. ೬೪). ೮. ಆರಂಭಿಸು; ತೊಡಗು; ಉಪಕ್ರಮಿಸು: ಪಂಕಜೋತ್ಕರಮುಮನಿಂದುಮಂಡಲಮುಮಂ ಮೊದಲೊಳ್ಳಮದಬ್ಜಜಂ ಮನೋಹರಮೆನೆ ಮಾಡಿದೀ ಪೊಗದ ಪೋಲ್ವೆಗೆ ಮುನ್ನೆಗಳಲ್ತಗುಳ್ಚಿ ಬಿತ್ತರಿಸಿದನಲ್ಲದಿಂತು ಸಮವಸ್ತುಗಳಂ ಪಡೆವಂತು ಗಾಂಪನೇ (ಕಾದಂಪೂ. ೬೪೩). ೯. ಆಗಿಸು; ಉಂಟುಮಾಡು: ನುಡಿಯಂ ತಗುಳ್ಚಿ ನೋಟಂ ನುಡಿ ಪರಿಚಯಮಂ ತಗುಳ್ಚೆ ಪರಿಚಯ ಮಳಿಪಂ ತಡೆಯದೆ ತಗುಳ್ಚೆ ಮನದಳಿಪೊಡಗೂ[ಡಿದು]ದಂ ತಗುಳ್ಚುಗುಂ ಕಾಮಿಗಳಾ (ಕವಿರಾ. ೩-೨೦೨); ಉತ್ತರಗೋಗ್ರಹಂ ಪಿರಿದುಮಾಗ್ರಹಮಂ ಮನದೊಳ್ ತಗುಳ್ಚೆ (ಪಂಪಭಾ. ೮-೯೩); ಮಾಡಿದಂ ಸಲೆ ಸಂದೆಯಮಂ ತಗುಳ್ಚದಂತೆ(ವಿಷ್ಣುಪು.೧೦-೦೫೩). ೧೦. ತಲುಪಿಸು;ಮುಟ್ಟಿಸು:ಮಾರಿಯ ಮಸಣೆಯ ಚೂಳಿಯಂ ಪಿಡಿದು ಜಡಿವ ಜವಹುರಮಂ ತಗುಳ್ಚಿ ತಾಮೊಕ್ಕಲಿಕ್ಕುವ . . . ಬಲ್ಗೈ ಬಂಟರ (ರಾಮಾಶ್ವ. ೯೦-೨೫). ೧೧. ತೊಲಗಿಸು; ನಿವಾರಿಸು; ದೂರಮಾಡು: ಸುನಯನಾಂಶುಗಳಿಂ ಕುನಯಾಂಧಕಾರದೊಂದುನ್ನತಿಯಂ ತಗುಳ್ಚಿ ಖರಭಾನುವಿನಂತೆಸೆದಂ ನರೇಶ್ವರಂ (ಬಾಧಪು. ೪-೩೫). **ತಗುರ್ಚು:** ೧. × × × ಪತಿ ಕೊಯ್ದೊಡೆ ನಡು ಕೋಯಿಲ ಪೋದುದು ತಗುರ್ಚಿ ಪೊಡೆಯ ಘರಿಯಲ್ಲೆನಲ್ಕೆ ತೋಳುಡಿದು ನೆಲಕ್ಕೆ ವಿಟ್ಟು(F)ದು (ಸೌಇಇ. IX-1, ೧೬೩-೧೪; 1093). [ತಗುಳ್$_1$ + – ಚು$_1$]

**ತಗುಳ್ಚು (ನಾ).** ೧. ಕೂಡಿಕೊಂಡಿರುವುದು; ಬೆಸುಗೆ; ಜೋಡಣೆ; ಕೂಟ: ನಿಗಳಂಬೊಲ್ ತೊಡರ್ದೊಂದು ಮೋಹನಿಗಳಂ ತಜ್ಜನ್ಮದೊಳ್ ನೋಡೆ ತೊಟ್ಟಗೆ ಮತ್ತಂ ಪೊಸತಾಗೆ ತಮ್ಮ ಮನದೊಳ್ ತಳ್ತೊಯ್ದು ತಳ್ತಾ ತಗುಳ್ಚುಗಳೊಳ್ ಪೊಕ್ಕುವು ವಜ್ರಲೇಪದ ತಗುಳ್ಚಂ ಪೋಲ್ವಿನಂ ವಜ್ರನಾಭಿಗತಿಪ್ರೀತಿಯನುಂಟುಮಾಡಿದರವರ್ ಜನ್ಮಾಂತರಸ್ನೇಹದಿಂ (ಆದಿಪು. ೬-೨೨); ತೊಡೆಯ ತೋಳ ತಗುಳ್ಚಮದೊರ್ಪ್ಪೆ (ಚಂದ್ರಪು. ೮-೯೫). ೨. ಸಂಬಂಧ; ಸಂಪರ್ಕ: ತ್ರಿದಶಾನಕಲಯದಿಂ ನೀರದಪಥದೊಳ್ ನಾರದಂಗೆ ತಾಂಡವದ ತಗುಳ್ಚೊದವಿದುದು (ಶಾಂತಿಪು. ೪-೫೭); ಪತ್ತಿದ ಸ್ವೈಪುವೆಯ್ದಿದತಿದುಃಖಿಮುಮೆನ್ನ ಪುರಾಕೃತಾರ್ಥ ಸದ್ವೃತ್ತಿಯ ದುಶ್ಚರಿತ್ರದ ತಗುಳ್ಚಿನೊಳಾದ ಶುಭಾಶುಭಂಗಳಿಂದೆತ್ತವಿವಾದುಮೆಂದೊಸಗೆಯಂ ಕರ ಮುಬ್ಬೆಗಮಂ ವಿಮೋಹದಿಂ ಚಿತ್ರದೊಳಾಗಲೀಯದೆ (ಜೀವಸಂ. ೭೩-೨೬). ೩. ಆಧಾರ; ಆಶ್ರಯ; ಅವಲಂಬನ: ನೆಲನಂ ಪರ್ವುವ ಬಳ್ಳಿಗಂ ಚದುರನೊಳ್ ಮೈಮ್ಮೆಯೊಡಂಬಟ್ಟು ತಳ್ತಲರ್ವಾ ಕೋಮಳೆಗಂ ತಗುಳ್ಚು ಪೆಱದೊಂದೆಂತಕ್ಕುಂ (ಆದಿಪು.೧೨-೧೯); ನಿನ್ನ ಹೇಮಲತಾವಿತಾನೋಪಮಾನ

ತನುಲತಾಪ್ರತಾನದ ತಗುಳ್ಪಿಂಗೀತನನಲ್ಪಕಲ್ಪಪಾದಪೋಪಮಾನಾನೂನಾಂಗಯಷ್ಟಿಯೆ ದೊರೆ (ಶಾಂತಿಪು. ೫-೧೨೬ ವ). ೪. ಆವರಣ; ಆಚ್ಛಾದನ: ನಗರನಾರೀಕದಂಬದ ಸೋರ್ಮುಡಿಯ ಸೊಂಪು ಕಾರ್ಮುಗಿಲ ತಗುಳ್ಪುವಮಂ ನೆಗಟ್ಟೆಯುಂ (ಪುಷ್ಪಪು. ೫-೩೪ವ). ೫. ಪ್ರದರ್ಶನ (?) : ಅಮರೇಂದ್ರನಘವಿಘಾತಾರ್ಥವೌದ್ಧತ್ಯಾವಗತಮುಮಾರಭಟ್ಯಾಯತ್ತಮುಮೆನಿಸಿದ ತಾಂಡವದ ತಗುಳ್ಪಂ ತೋಱಲುದ್ಯೋಗಂಗೆಯ್ದು (ವುಹಾನೇ. ೯-೭ವ). [ ತಗುಳ್$_1$ + – ಪು$_2$ ]

△ತಗುಟ್ 'ತಗುಳ್$_1$' ನೋ.

ತಗೆ$_1$ (ಕ್ರಿ). ೧. ತಡೆ; ನಿಲ್ಲಿಸು; ಅಡ್ಡಿಪಡಿಸು; ನಿರೋಧಿಸು: "ತಗೆ–ಸ್ತಂಭನೇ (ನಿಲ್ಲಿಸು)" (ಶಮಧಾ): ಅಗಲಲಸಹ್ಯಮೆಂದು ಪೆಱಗೀ ಬಱಸಲ್ವಳೆ ಮುಂದೆ ಬಂದಳೀ ತಗೆವೊಡೆ ಚಿತ್ತದುತ್ಕಲಿಕೆಯಿಂ ನಭಕೀ ನೆಗೆತಂದಳ್ (ಕಾದಂಉು. ೧೮೦): ಕರ್ಮಾಸ್ರವಮಂ ಜನಿಯಿಸಲೀಸದೆ ಸದ್ಗುಣದಿನಂತವಂ ತಗೆವುದದುವೆ ಸಂವರಮಕ್ಕುಂ (ಸುಕುಮಾ. ೮-೩೨); ಆಳವಿಯೊಳ್ ಬಳವದ ಹಂಕಾರದೆ ಬರೆ ತಗೆವಂ[ಪಾಠಾಂ. ತೆಗೆದಂ]ಸ್ತಂಬೇರಮಕಳಭಮಂ (ಕಾವ್ಯಾವ. ೪೬೩); ನೊಂಕೆ ತಂದುಪ್ಪರದ ಬಿಱುವಿಸಿಲ ಬೀದಿಯೊಳು ತಗೆದನವನನಿಬರಂ ನಿಷ್ಕರುಣನು (ಹರಿಕಾ. ೧೦-೪೬); ನೈಪಂ ಪಾವಕನೊಲುರಿದವರ ತಗದು [ಪಾಠಾಂ. ತೆಗೆದ]ದಯದಿಂ ಮುನ್ನ ಧನಗೊಳ್ಳೆನುತ್ತ ಪೇಳೆ (ಸಿಂಗಿರಾ. ೨೨-೦೦); ಬಿಗಿವ ಬಿಡಿಸಿಕೊಳ್ವ ತಗೆವ ತವಕಿಸುವ . . . ಹೋರಾಟದ ವಿಗಡ ಮಲ್ಲರುಗಳೊಪ್ಪಿದರು (ಕಂನವಿ. ೨೧-೯೩). ೨. ತಡೆಯಾಗು; ಅಡ್ಡಿಯಾಗು: ಎನಗೆ ನೀವು ಮಾಡುವ ರಾಜಕಾರ್ಯದ ಮಣಿಹ ನಿಮಗೆ ತಗೆಯಿತು (ಭನವ. ೧೧). ೩. ಸೆಳೆ; ಆಕರ್ಷಿಸು: ನೋಳ್ಪರ ಕಣ್ಣ ತ[ಪಾಠಾಂ. ತೆ]ಗೆವ ಮೊಲೆಯು (ಕುರಾಸಾಂ. ೨೦-೪೬); ಕಣ್ಬುಗುವ ಸೆಣಸುವ ಮುಳಿವ ಚಿತ್ತವ ತಗೆವ ತಾಗಿಸುವೆಳಸಿ ಕೂಡುವ . . . ವೇಶ್ಯಾವೀಧಿಗಳೊಳಸುರಾರಿ ನಡೆತಂದ (ಆಕ್ರೂಚ. ೬-೬೦). ೪. ಸ್ತಂಭೀಭೂತನಾಗು; ದಿಗ್ಭ್ರಮೆಗೊಳ್ಳು: ಸಾಗರದತ್ತನೆಂಬನೊಳ್ ಜೂದಾಡಿ ತನ್ನುಳ್ಳುದೆಲ್ಲಮಂ ಸೋಲ್ತು ಕುಡಲಿಲ್ಲದೆ ಸಮುದ್ರದತ್ತಂ ಸಾರಮೇಯಶಕ್ಯದ್ಭೂಮಾಂತರ್ಗತನಾಗಿ ಬಿಸಿಲೊಳ್ ತಗೆದಿರ್ದುದುಮಂ (ಚಾವುಂಪು. ೯೬-೯); ತಗೆಯಲ್ ಜೈಮಿನಿ ತಿಪ್ಪಿಕೊಂಡು ಪರಿಯಲ್ ವೈಶೇಷಿಕಂ . . . ಅಮ್ಮಮ್ಮ ಪಟ್ಕರ್ಕವೀಧಿಗಳೊಳ್ ತೂಳ್ದಿತು ಗೋಪನಂದಿ ದಿಗಿಭಪ್ರೋದ್ಭಾಸಿ ಗಂಧದ್ವಿಪಂ (ಎಕ. V, ಚನ್ನರಾ. ೧೪೮-೩೮ ; 1094).

ತಗೆತಗೆ (ದ್ವಿರುಕ್ತಿ): ತಗೆತಗೆದು ತಗುಳ್ದಿಲ್ಲರಂ ದಹಿಸತೊಡಗಿತು ದಳ್ಳುರಿ (ಜೈಮಿಭಾ. ೮-೩೯). [ ದೇ.॥ ತಮಿ. ತಕ್ಕೈ ]

ತಗೆ$_2$ (ನಾ). ೧. ತಡೆ; ಅಡ್ಡಿ; ಪ್ರತಿಬಂಧಕ: ಆ ಚಂಡಾಲಕನ್ನಿಕೆ ರೋಮಂ ಬೊರೆದ ಪಂದೊವಲ ಪಂಜರದೊಳಿಕ್ಕಿ ಮಹಾಶ್ವೇತಾವಲೋಕನ[ಕೆ] ತಗೆಯಂ ಮಾಪ್ಪಂತೆ ಪಡಿಯಂ ಕೆತ್ತಗುಟಿಯಾನಿಕ್ಕಿ (ಕಾದಂಉು. ೭೫೨). ೨. ತಂಗುವಿಕೆ; ನಿಲ್ಲುವಿಕೆ: ಬರ್ಪ ವಟಿಯೊಳ್ ಮನದ ಚಿಂತೆಯಿನ್ ಪಲರ್ಮೆ ಪಿನ್‌ದಿರುಗಿದಪೆನೆಂದು ಪಿನ್‌ಮುನ್ ಅಲೆದು, ಪಲ ತಗೆಗಳ್ ಆದುವಯ್ (ಅಂತಿಗೊ. ೧೧-೨೦೭). [<ತಗೆ$_1$]

ತಗೆಪ (ನಾ). ಅಡ್ಡಿ; ನಿರ್ಬಂಧ; ಸ್ತಂಭನ: ತೆಗೆಪಂ, ತಗೆಪಂ, ತೊಡೆಪಂ, ನಡೆಪಂ, ಮೊಗೆಪಂ (ಶಬ್ದಾನು. ೫೬೦ ಪ್ರಯೋ). [ ತಗೆ$_1$ + – ಪ$_3$ ]

ತಗೆಪು, ತಗಪ್ಪು, ತಗವು$_2$, ತಗಹು$_2$ (ನಾ). ೧. ಅಡ್ಡಿ; ನಿರ್ಬಂಧ: ಪೆಱರಜಿದು ತನ್ನ ಸಾಲಂಗೊಟ್ಟೊಡಂ ತಾನಜಿದು ಸಂಸಾರಮೋಹಂ ಗೆಟ್ಟೊಡಂ ಆತನ ತಗೆಪುಮಿತನ ಕರ್ಮದ ಬಿಗಿ(ಗು)ಪುಂ ಪತ್ತುವಿಡುಗುಂ (ಜೀವಸಂ. ೦೭೩-೨೦ವ). ತಗಪ್ಪು: ೨. ಒತ್ತಾಯ; ತಗಾದೆ: ಒರ್ಮ್ಯತ್ತರ್ಗೆ ಇರ್ಕುಳ ಜೋಳವಮ್ ಕುಡುವುದು ತಗಪ್ಪಿಲ್ಲ ಗೋಸನೆ ಇಲ್ಲ ರಾಜಪುರುಷರ್ಗೆ ಪುಗಿಲಿಲ್ಲ (ಇಆ. X, ೧೬೭-೪ ; 7ನೆಯ ಶತ). ತಗವು$_2$: ೧. ಇತ್ತನಂದೇ ಕೃಷ್ಣ ನಿನಗಾ ಪುತ್ರನನು ನೀ ಬೇಡಿಕೊಳಲೇಕುತ್ತವೆನೆ ತಗ[ಪಾಠಾಂ. ಡ]ವೇಕೆ ತನ್ನನು ನಾಚಿಸಲದೇಕೆ (ನಿಭಾಗ. ೧೦-೬೩-೨೦); ತಗವಹುದು ತನಗೆನುತ ಶೈಲನಿತಂಬಕೈತಂದು ವಿಗಡ ರಕ್ಕಸನಾ ಹರಾದ್ರಿಯು ಬಿಗಿದನೈ (ಉತ್ತರಾ. ೫-೫೧). ತಗಹು$_2$: ೧. ತಪವೆಂಬುದು ತಗಹು ನೇಮವೆಂಬುದು ಬಂಧನ (ಅವಚಂ. ೧೫೪-೭೨೩); ಧ್ಯಾನದ ಧ್ಯೇಯವಳವಟ್ಟು ಆನಂದಿಪಂಗೆ ತವದ ತಗಹೆ[ಪಾಠಾಂ. ಫಲವೆ]ಲ್ಲಿಯದೊ (ಚನ್ನವ. ಕ. ೩೦೪-೬೮೩); ಓಲಗದಿಂ ಪಡೆದಂ ತಗಹಿಂ ಸಿಲ್ಕಿದು (ಶಮದ. ೧೨೮ ಪ್ರಯೋ); ಹಗಲು ಹರಿಚಿಂತೆಯನು ಮಾಳ್ಪರೆ ತಗಹಲಾ ಬಹುವಿಧ ಗೃಹವ್ಯಾಪ್ತಿಗಳ ಬಯಲಾಯಾಸ ಕೃತ್ಯದ ಕಾಲುಕಣ್ಣಿಗಳ (ನಿಭಾಗ. ೨-೧-೯); ಗಗನವನೊಳಕೊಂಬ ತಿಳಿವಿದೆ ಇದಱಲ್ಲಿ ತಗಹೇತಕಾಯ್ತೆಂಬನಾಗ (ಭರತ. ೬೦-೩೭). ೩. ಕವಿದಿರುವಿಕೆ; ಆವರಣ; ಮುಸುಕು; ಹೊದಿಕೆ: ಮಱವೆಯ ತ[ಪಾಠಾಂ.ತೆ]ಗಹು ತೆಗೆದೆಚ್ಚಱಕೆ ತೋಱಿತು (ಪ್ರಭುಲೀ. ೯-೦೫); ಉಗಿದವಂಬರವನು ಮಯೂಖಾಳಿಗಳು ಭುವನದ ಜನದ ಕಂಗಳ ತಗಹು ತೆಗೆದುದು ಸೆಱೆಯ ಬಿಟ್ಟರು ಜಕ್ಕವಕ್ಕಿಗಳ (ಕುವ್ಯಾದ್ರೋ. ೧-೪೩); ಕಳೆದರೀ ಚಂಡಾಂಶುವಂಶೋಜ್ವಲರು ಬಳಿಕಾ ಹಿಮಸಮಯವನು ಪುಲಿದೊಗಲ ಹರಿಣಾಜಿನದ ಹಾಸಿಕೆಯ ಹೊದಿಕೆಯುಳಿ ತಳಿರ ತಗಹಿ[ಪಾಠಾಂ. ಡಿ]ನ ಮನೆಗಳಲಿ (ತೊರರಾ. ೩-೨-೫).

[ ತಗೆ$_1$ + – ಪು$_2$./ತಮಿ. ತಕೈಪ್ಪು ]

ತಗೆಬಗೆ, ತಗಿಬಿಗಿ, ತಗುಬಗೆ (ನಾ). ೧. ಅರೆಮನಸ್ಸು; ಅನಿಶ್ಚಿತವಾದ ಮನಸ್ಸು: ಅಕ್ಕುಮಾನುಂ ತಗೆಬಗೆಯೊಳೊಪ್ಪುವೆಂ (ರಾಮಾಶ್ವ. ೦೫-೩). "ಪ್ರತಿಹತವಾದ – ತಡೆದ – ಮನಸ್ಸು" (ರಾ ಪಾ ಶ್ವ. ಕೋಶ). ೨. ಅಸ್ತವ್ಯಸ್ತತೆ: ತಗೆಬಗೆಯ ನಡೆನುಡಿಯ ಮಗಳ ನಡೆವಳಿಯಂ (ಕಾಲೂರ. ೪೬-೬೫); "ಕ್ರಮತಪ್ಪುವಿಕೆ" (ಕಾಲೂರ. ಟಿಪ್ಪಣಿ). ೩. ತೊಂದರೆ; ಹಿಂಸೆ: ಹಾವಿಂಗೆ ಹಾಲನೆಱೆದೊಡೆ ತೀವಿದ ವಿಷವಪ್ಪುದಲ್ಲದಂಗಜನಂ ಸಂಭಾವಿಸಿದೊಡೆ ಕೋಮಳೆಯರ ಜೀವಕೆ ತಗೆಬಗೆಯನೀವನೆಂಬುದು ಪುಸಿಯೇ (ನಳಚಂ. ೨೦೦). ೪. ಸಂಕಟ; ತಳಮಳ: ಉಸುರ ತಗೆಬಗೆಯೊಳ ಸುರೇಂದ್ರು ಬಸವಳಿದು (ಹರಿಕು. ೧೩-೩೮). ೫. ಲಗುಬಗೆ; ಆವಸರ: ತಗಬಗೆಯೊಳೋಡಾಡಿ ಕೆರವೊಂದು ಸವೆಯದಿರೆ (ಕಾಲೂರ. ೭೩-೦೩೨).

ತಗಿಬಿಗಿ: ೪. ತನ್ನ ರೆಕ್ಕೆಯುಂ ನೆಗಪಲೆನುತೆಂದು ಬಿಚ್ಚಿದ ದೆಸೆಗಳೆಂಟು ಮುಚ್ಚಲು ತರಣಿಗುಸುರು ತಗಿಬಿಗಿಯಾಗಲು (ತುರಂಗ. ೪-೩೯). ೫. ಬಗೆ ಬಗೆಯಾಟದಿ ಜಗವ ನಗಿಸುತ ತಗಿಬಿಗಿ ಓಡುತ್ತ ನೆಗೆದು ಕುಪ್ಪಳಿಸಿ (ಶರಂ. ೩೪೨-೮). ೬. ತಬ್ಬಿಬ್ಬು; ದಿಗ್ಭ್ರಮೆ: ಮಗುವಾಗಿ ಪೂತನಿಯ ಮೊಲೆಯನುಂಡೆ ಇಂಥ ತಗಿಬಿಗಿಯಾಟಗಳಲ್ಲಿ ಕಲಿತ್ಯೋ ರಂಗ (ಪುರಂದ. ೪-೦೫೬-೩). 'ತಗಿಬಿಗಿಗೊಳಿಸು' ಪರಾ. ತಗುಬಗೆ: ೩. ಬಿಸಿಗೆ ಬೆಚ್ಚಿದ ಎದೆಯು ಮರುಚಲ ಬಸಿರಿಯ ಬಯಕೆಗೆ ತಗುಬಗೆಯಾಗುತಿರೆ (ಸವೀಗೀ. ೪-೯೨); ಅಗ್ನೀವಹನ ಅವಸ್ಥೆ ತಗುಬಗೆಯಾಯಿತು ಇವನ ಗಂಟಲೂ ಕಟ್ಟಿಕೊಂಡಿತು (ನೀರಸ. ೩೨). 'ತೆಗೆಬಗೆ' ಪರಾ.

[ ತಗೆ$_1$ + ಬಗೆ$_3$ ]

ತಗೆವುಗಿಲ್ (ನಾ). (?) : ಸ್ವಾಂತಂ ಪಂಚೇಷುವಿಂದಂ ತಗೆವುಗಿಲ[ಪಾಠಾಂ. ತಗೆವುಲ, ಜಂತಗೆವುಗಿಲ]ವೊಲಪ್ಪಂತು ಕಂದರ್ಪನೆಚ್ಚೆಚ್ಚೆಂತುಂ ಕೈವಾರದಟ್ಟಾಸುರವೆನೆ ಮುಳಿದೆಚ್ಚಟ್ಟ ಕೋದಂಡದಿಂ ಪೊಯ್ದೆಂತಾನುಂ ನಿನ್ನ ಸೌಂದರ್ಯದಿನೆನಗೊಳಗಾದಂ ದಶಗ್ರೀವನೆಂದಾ ಕಾಂತಾರತ್ನಕ್ಕೆ ವೈದೇಹಿಗೆ ಮಕುಟ ಹಟದ್ರುತ್ನದಿಂದರ್ಘ್ಯಮಿತ್ತಂ (ಪಂರಾಮಾ. ೯-೮೪). [ ? ]

ತಗ್ಗೈರ್ 'ತಗ್ಗೈರು' ನೋ.

ತಗ್ಗೈರು, ತಗ್ಗೈರ್ (ನಾ). (ಕೆಲಸದಿಂದ) ತೆಗೆದುಹಾಕುವುದು; ಉಚ್ಚಾಟನೆ: (ಕ). ತಗ್ಗೈರ್: (ಕ್ರಿಸ್‌ಗೀ. II. ೫೬೨).

[ ← ಹಿಂ. ತಗೀರ್, ತಗೀರೀ ; ಮರಾ. ತಗಿರೀ ; ಅರ. ತಗಯ್ಯುರ್ ]

**ತಗೊಣಿ** (?). (?) : ಶ್ರೀ ಪರದರ ಪನ್ದೆವಿರಿಯನ್ದಗೊಣಿ ರಣದೊಳಾ ಮಣವೊಡ್ಡುವೊನ್ ಮೂಳೆಯೆನೆಯ್ಕಳ[ವೋ]ನ್ ಪೆಣದ ಸಬ್ಬಡಿ ಕಟ್ಟು ವೊನ್ (ಕಇ. I, ೩-೨ ; ೮ನೆಯ ಶತ).

[ ? ]

**ತಗ್ಗಜ್ಜೆ** 'ತಗಚೆ' ನೋ.

**ತಗ್ಗಾಳು** (ನಾ). ಗಿಡ್ಡ ; ಕುಳ್ಳ : (+). [ ತಗ್ಗು$_2$ + ಆಳು$_3$ (<ಆಳ್$_3$) ]

**ತಗ್ಗಿ, ತಂಗಿ$_2$, ತರ್ಗಿ** (ನಾ). ಒಂದು ಬಗೆಯ ಗಿಡ ; ತಕ್ಕಿಲೆ ; ಅಗ್ನಿಮಂಥ; ನರುವಲು: "ಜಯಾ, ಜಯಂತೀ, ತರ್ಕಾರೀ, ನಾದೇಯೀ, ವೈಜಯಂತಿಕಾ–ಈ ೫ ತಗ್ಗಿ" (ನಾಚಿರಾ. ೦೨೮) ; "ವಹ್ನಿಮಂಥಃ–ನರುವಲು, ತಗ್ಗಿ" (ಒಷಧಿ. ೧೪೭) ; ಬಿಲ್ವಂ ತಗ್ಗಿ ಸೀವನ್ನಿ ಪಾದರಿಯಾವುಂಡಗೆಯೆಂಬಿವಂ ತೆಗಪಿ ಸೇಕಂಗೆಯ್ಕೆ ಮಾಣ್ಗುಂ ಕಫಂ (ಲೋಕೋಪ. ೯-೨೨೫) ; ಚಿಲ್ಲವೇ ಹೇಳಕಟ ಎನ್ನೀ ಚಿಲ್ಲತನವೆಂದಿಂಗೆ ಮಾಣ್ಬುದು ಸೊಲ್ಲು ತಗ್ಗಿಯೆ ಎನ್ನಳಲು ತಗ್ಗುವುದರೇತಱಿ (ಬಸಪು. ೪೫-೪೧) ; ತುಲಸಿಯ ನುಗ್ಗಿಯ ತಗ್ಗಿಯ . . . ಪತ್ರಂಗಳನೊಡನೆ ತೆಗಪಿಕೊಂಡದಱೊಳೆ ಸೇಕಂಗೆಯ್ಕೆ (ಅಶ್ವಶಾ. ೧೦-೨೧). **ತಂಗಿ$_2$** : ಸಣ್ಣನಾದ ಎಲುಗಳ ಹಾಕಿ ಮಣ್ಣು ಮೆತ್ತಿ ಆಮೇಲೆ ಒಳಗಿನ ಮಣ್ಣ ತಂದು ತಂಗಿಯ ರಸ ಹೊಯ್ದು ಅರೆದು (ಅಶ್ವಟೀ. ೭೯-೫). △ **ತರ್ಗಿ** : ಉಪಶಮಿಸುಗುಮಾತಪದೊಳ್ ಕಟ್ಟಿ ಪೂಸೆ ತರ್ಗಿಯ ರಸಮುಂ (ಅಶ್ವಶಾ. ೧೧-೬೯).

ತಗ್ಗಿಯ ಮಾನ್ಯ, ತಗ್ಗೆಯ ಮಾನ್ಯ = ಒಂದು ಬಗೆಯ ಮಾನ್ಯ,– ಉಂಬಳಿ : ದೇವರ ನಿವೇದಕ್ಕೆ ತಗ್ಗಿಯ ಮಾನ್ಯದೊಳಗೆ ಕೊಟ್ಟ ಮತ್ತರು ೧೬ ತೋಟ ಮತ್ತರು ೧ (ಕೊಲ್ಹಾ.ಶಾ. ೬-೧೨; 1127): ಸಂಕ್ರಾಂತಿಪರ್ವ್ವನಿಮಿತ್ತಂ ಅಗ್ರಹಾರದ ತಗ್ಗೆಯಮಾನ್ಯದೊಳು ಕಾವಸೆಟ್ಟಿಯಕೆಱೆಏರಿಯ ಕೇಶವೇಶ್ವರದೇವರ ಭೂಮಿಯಿಂಬಡಗಲು (ಕಇ. V, ೨೫-೨೪; 1139). [?]

**ತಗ್ಗಿಲು** 'ತುಗ್ಗಿಲ್' ನೋ.

**ತಗ್ಗಿಸು** 'ತಟ್ಗಿಸು' ನೋ.

**ತಗ್ಗು$_1$** 'ತಟ್ಗು' ನೋ.

**ತಗ್ಗು$_2$, ತರ್ಗು$_2$, ತೆಗ್ಗು$_2$** (ನಾ). ೧. ಕುಣಿ; ಹಳ್ಳ; ಕೆಳಕ್ಕೆ ಕುಸಿದುದಂ; ಗುಂಡಿ : ನೆಲನ ತಗ್ಗಿನಲುಪ್ಪರದ ಮೆಯ್ಯೊಲವಿನಲಿ ಪಾರಗದ ಬಪರಿಯ ಸುಳುಹಿನಲಿ . . . ಖಂಡೆಯದ ಖಣಿಕಟಿಲೆಸೆಯೆ ಕಾದಿದರು (ಕುವ್ಯಾದ್ರೋ. ೧೪-೬) ; ಹಿಡಿಸದೆ ತುಂಬಿದೆ ತಗ್ಗಿಲ್ಲ ತೆವರಿಲ್ಲ (ಸಬೀಗೀ. ೨೪-೪೧೯) ; ನದಿ ಎತ್ತರವಾದ ಕಡೆಯಿಂದ ತಗ್ಗಾಗಿರುವ ಕಡೆಯನ್ನು ಹುಡುಕಿ ಹರಿಯುತ್ತದೆಯಲ್ಲವೆ? (ವ್ಯಾಸಜಿ. ೦೦೭) : ಆಳವಾದ ತಗ್ಗನ್ನು ತೋಡಿ ಆದರಲ್ಲಿ ಹುಗಿದು ಬಿಡುತ್ತಿದ್ದೇನೆ (ಶ್ಯಾಮತಾ. ೫). ೨. ಸಣ್ಣದು; ಕುಳ್ಳುದುದು ; ಎತ್ತರವಲ್ಲದುದು : ಗುಡ್ಡದ ಮೇಲೆ ಅವನ ತಗ್ಗಾದ ಮನೆ ಕಾಣಿಸುತ್ತಿತ್ತು (ಮಹಾತ್ಯಾ. ೧೫). ೩. ಕುಗ್ಗಿರುವ ಸ್ಥಿತಿ; ಕಡಿಮೆಯಾಗಿರುವಿಕೆ ; ಕುಸಿತ : ಕುರುಳು ಜುಂಜುಱುದಲೆಯ ತಗ್ಗಿನ[ಪಾಠಾಂ. ದ]ಕೊರಳ ಕೆಂಗಱಿಗಣ್ಣ ಮೋಱೆಯ ಹಱಿಕುಗಡ್ಡದ (ನಳಚ. ೪-೪). ೪. ಬೆಲೆ ಹೆಚ್ಚಾಗಿರುವಿಕೆ ; ತುಟ್ಟಿಯಾಗಿರುವಿಕೆ : (ಮೈಗಜಿ. IV, ೭೮೭). 'ತಗ್ಗುಕಾಲ' ಪರಾ. ೫. ವ್ಯಾಪಾರದ ವಸ್ತುಗಳ ಪೂರೈಕೆ ಕಡಿಮೆಯಾಗಿರುವುದು. ೬. ಪಾತ್ರೆ ಮೊದಲಾದವು ನೆಗ್ಗಾಗಿರುವಿಕೆ: 'ತಗ್ಗೆತ್ತು' ಪರಾ. ೭. (ಆಲಂ) ಕಷ್ಟಕಾಲ : ತೆರೆಯಲಾರೆನು ಮರೆಯಲಾರೆನು ದೈವವಿತ್ತೀ ಕಷ್ಟವ ತಗ್ಗು ಸಾರುತಲಿರಲಿ ಸ್ಮಾರಕವಾಗಿ ಹಿಗ್ಗಿನ ನಷ್ಟವ (ಹಾಡುಪಾ. ೩೯-೨). **ತರ್ಗು$_2$** : ೪. ಧಾರಣೆಯ ತರ್ಗಂ ಹೋರುವವನು ನಿಂದಿತನು (ವೀಶ್ವಪು. ೪-೧೭-೨೯). **ತೆಗ್ಗು$_2$**: ೧. ನಿಬ್ಬಣದ ಈ ಎತ್ತು ಹುಗ್ಗಿಯ ಮೇದಾವ ತೆಗ್ಗಿನ ನೀರ ಕುಡಿದಾವ (ಲೋಕಗೀ. ೨೭) ; ನೆಲವು ಸಮತಲವಾಗಿರಲಿಲ್ಲ, ಅಲ್ಲಲ್ಲಿ ತೆಗ್ಗುಗಳು (ಕುರಿಹಿಂ. ೬೪).

ತಗ್ಗುತಿಟ್ಟು = ೧. ಏರು ಇಳಿ ; ಹಳ್ಳ ದಿಣ್ಣೆ ; ಕುಳಿ ತೆವರು. ೨. ಹೆಚ್ಚುಕಡಿಮೆ; ನ್ಯೂನಾಧಿಕತೆ : ಅಲ್ಲಿ ರೂಪಗುಣಗಳಿಲ್ಲ. ಸ್ವಲ್ಪ ತಗ್ಗುತಿಟ್ಟುಗಳಿರಬಹುದು, ಆದರೆ ಸತ್ವವೊಂದೇ (ರಾಮಾನ. ೦೧೪). ತಗ್ಗುದಿಂಟೆ = ತಗ್ಗುತಿಟ್ಟು ೧ : ತಗ್ಗುದಿಂಟೆ ಕಲ್ಲುಮುಳ್ಳು ಕೆಸರುನೆಲ ತಾಗುತಳ್ಳು (ಚಟ್ಮಅ. ೧೯೩-೧೧). ತಗ್ಗುದಿನ್ನೆ = ತಗ್ಗುತಿಟ್ಟು ೧ : ಕಿತ್ತಳೇಹಣ್ಣು . . . ಚೆನ್ನಾಗಿ ದಿಟ್ಟಿಸಿ ನೋಡಿದರೆ ಅದರ ಮೇಲೆ ಹಲವು ಸಣ್ಣ ಸಣ್ಣ ತಗ್ಗುದಿನ್ನೆಗಳು ಕಾಣಿಸುವವು (ಮುಂಬಯಿ. ೪-೬೬) : ತಗ್ಗುದಿನ್ನೆಗಳು . . . ಸಾಲುಸಾಲಾಗಿ ನಿಂತಿವೆ (ಅಶ್ವಮೇ. ೨). ತಗ್ಗುಬ್ಬು = ತಗ್ಗುತಿಟ್ಟು ೧ : (+). ತೆಗ್ಗುತೆವರು = ತಗ್ಗುತಿಟ್ಟು ೨ : ಲೇಖಕರ ಸೌಮನಸ್ಯ . . . ಕತೆಯ ಹೇರುಪೇರುಗಳಲ್ಲಿ ತೆಗ್ಗುತೆವರುಗಳಲ್ಲಿ ತನ್ನ ಸಮತೂಕವನ್ನು ರಕ್ಷಿಸಿಕೊಳ್ಳುತ್ತಿದೆ (ಅಬೋಲೀ. I, ಸಂಪಾದಕರ ಮಾತು). [ <ತಟ್ಗು ]

**ತಗ್ಗುಕಾಲ** (ನಾ). ವಸ್ತುಗಳ ಪೂರೈಕೆ ಕಡಿಮೆಯಾಗಿರುವ ಕಾಲ : ಈ ತಗ್ಗುಕಾಲದಲ್ಲಿಯೂ ಸೀರೆಯ ಬೆಲೆ ನೂರ ಅರವತ್ತೇ ರೂಪಾಯಿ (ಶಿವರಾ. ೨೫). [ ತಗ್ಗು$_2$ + ಕಾಲ ]

**ತಗ್ಗುಗನ್ನಡಿ**(ನಾ).ಒಳಮುಖವಾಗಿ ಬಾಗಿರುವ ಕನ್ನಡಿ; ಅಂತರ್ಗೋಲ ಕನ್ನಡಿ : ತಗ್ಗುಗನ್ನಡಿಯನ್ನು ನಮ್ಮ ಮುಖದ ಹತ್ತಿರ ಹಿಡಿದುಕೊಂಡರೆ ಮುಖದ ದೊಡ್ಡ ಪ್ರತಿಬಿಂಬವು ಕಾಣುವುದಲ್ಲದೆ ಈ ಪ್ರತಿಬಿಂಬವು ತಲೆಕೆಳಗಾಗಿರದೆ ನೆಟ್ಟಗಿರುವುದು (ಭೌತವಿ. ೧೭೨). 'ಉಬ್ಬುಗನ್ನಡಿ' ಪರಾ.

[ ತಗ್ಗು$_2$ + ಕನ್ನಡಿ$_1$ ]

**ತಗ್ಗುಗುಟ್ಟು** (ಕ್ರಿ). ತಗ್ಗುವಂತೆ ಕುಟ್ಟು; ಕುಸಿದು ಬೀಳುವಂತೆ ಹೊಡೆ,– ಮೆಟ್ಟು : ಬೆದಱಿದ ಬಾಳವೃದ್ಧರನೆ ಬಾಯ್ಬಿಡೆ ಬಾಯ್ಬಿಡೆ ಸೀಳ್ದು ಪೋಲ್ದು ಬಂದದಿರದೆ ನಿಂದ ಬೀರರನೆ ಬೊಬ್ಬಿಡೆ ಬೊಬ್ಬಿಡೆ ತಗ್ಗು[ಪಾಠಾಂ·ಗ್ಗಿ]ಗುಟ್ಟಿ ಲಾಯದ ತುರಗಂಗಳಂ ತರದೆ ಗೋಟಾಡೆ ಗೋಟಾಡೆ ಕೋಡೊಳೆತ್ತಿ . . . ಕೊಂದುದಾ ಗಜಂ (ಪಾರ್ಶ್ವಪು. ೪-೦೩೬).

[ ತಗ್ಗು$_1$ (<ತಟ್ಗು) + ಕುಟ್ಟು$_1$ ]

**ತಗ್ಗುದನಿ** (ನಾ). ತಗ್ಗಿಸಿದ ದನಿ ; ಕೆಳದನಿ : ಹೆಂಗಸರು ಗಂಡಸರೆಲ್ಲ . . . ತಗ್ಗುದನಿಯಲ್ಲಿ ಮಾತನಾಡುತ್ತ ಕುಳಿತಿದ್ದರು (ಪುನರು. ೨೩೭).

[ ತಗ್ಗು$_1$ (<ತಟ್ಗು) + ದನಿ$_2$ ]

**ತಗ್ಗುನೆಲ** (ನಾ). ಎತ್ತರವಲ್ಲದ ಭೂಮಿ ; ತಗ್ಗಾದ ಭೂಮಿ : ಸಮುದ್ರವು ತಗ್ಗುನೆಲದ ಮೇಲೆ ಹೆಸರೂ ಬಣ್ಣವೂ ಬೇರೆ ಬೇರೆಯಾಗಿ ಮೆರೆಯುತ್ತದೆ (ಅನಂಶ. ೪೧ ಟೀಕೆ). [ ತಗ್ಗು$_2$ + ನೆಲ$_1$ ]

**ತಗ್ಗುಬೀಳು, ತೆಗ್ಗುಬೀಳು** (ಕ್ರಿ). ಹಳ್ಳಬೀಳು ; ನೆಗ್ಗಾಗು : ಮನೆಯ ಪಾತ್ರೆಗಳೆಲ್ಲ ತಗ್ಗುಬಿದ್ದಿವೆ (ರೂಢಿ). **ತೆಗ್ಗುಬೀಳು** : "ಗುಣಿಗಲ್ಲ = ತೆಗ್ಗುಬಿದ್ದಗಲ್ಲ" (ಗಂಗಾಮು. ೦೧೭). [ ತಗ್ಗು$_2$ + ಬೀಳು$_1$ (<ಬೀೞ್$_1$) ]

**ತಗ್ಗುಮುಗ್ಗು** (ನಾ). ೧. ಹೆಚ್ಚು ಕಡಮೆ ; ಏರುಪೇರು : "ವಿಷಮ–ಸಮವಲ್ಲದ್ದು, ತಗ್ಗು ಮುಗ್ಗು" (ಗಂಗಾಮು. ೨೯೩). ೨. (ಆಲಂ) "ಸುಖದುಃಖ" (ಜಾನಕೋ. ೬೩). [ತಗ್ಗು$_2$ + ಮುಗ್ಗು$_3$/ತೆಲು. ತಗ್ಗುಮೊಗ್ಗು]

**ತಗ್ಗುಶ್ರುತಿ** (ನಾ). ತಗ್ಗಿದ ಶ್ರುತಿ; ಮಂದವಾದ ಶ್ರುತಿ : ಅವಳು ಹಾಡುವುದು ಯಾವಾಗಲೂ ತಗ್ಗುಶ್ರುತಿಯಲ್ಲಿಯೇ (ರೂಢಿ). [ತಗ್ಗು$_2$ + ಶ್ರುತಿ]

**ತಗ್ಗುಸಿರು** (ನಾ). ತಗ್ಗಿದ ದನಿ ; ಕೆಳದನಿ : "ಈಗ ತಾನೆ ಬಂದೆ" ಎಂದು ತಗ್ಗುಸಿರಿನಿಂದ ಹೇಳಿದೆ (ಚಿಂಗಾಳ್ಕಿ. ೦೧೬).

[ ತಗ್ಗು$_2$ + ಉಸಿರು$_2$ (<ಉಸಿರ್$_2$) ]

**ತಗ್ಗುಸೋಪಾನ** (ನಾ). ಇಳಿಯುವ ಸೋಪಾನ; ಇಳಿ ಮೆಟ್ಟಿಲು: ತಗ್ಗುಸೋಪಾನದೊಳಿಳಿವಾಗ ಮುನಿಗಳ್ಗೆ ಬೊಗ್ಗನೆ ಕೈಲಾಗುಗೊಡುವಾ ಉಗ್ಗಡದೇಱುಸೋಪಾನದೊಳವರ ಕೈಯೊಗ್ಗಿ ಹಿಡಿದು ಮೇಲೆ ನೆಗೆವಾ (ಭರತ. ೩-೬೮). 'ಏಱುಸೋಪಾನ' ಪರಾ. [ ತಗ್ಗು$_2$ + ಸೋಪಾನ ]

**ತಗ್ಗೆತ್ತು** (ಕ್ರಿ). ಪಾತ್ರೆಗಳ ತಗ್ಗುಗಳನ್ನು ಸರಿಪಡಿಸು : ನುಗ್ಗಾದ ಪಾತ್ರೆಗಳನ್ನು ತಗ್ಗೆತ್ತದಿದ್ದರೆ ಚೆನ್ನಾಗಿ ಕಾಣುವುದಿಲ್ಲ (ರೂಢಿ).

[ ತಗ್ಗು$_2$ + ಎತ್ತು$_1$ ]

**ತಗ್ಗೊತ್ತು, ತರ್ಗೊತ್ತು** (ಕ್ರಿ). ೧. ತಗ್ಗುವಂತೆ ಒತ್ತು ; ಅದುಮು ; ಹತ್ತಿಕ್ಕು ; ನಿಗ್ರಹಿಸು : ಆದರಿಸುತಮರೇಂದ್ರನೆದ್ದನು ಹೋದ ವಜ್ರವ ಕೊಂಡು ನಗುತ ವಿಷಾದವನು ತಗ್ಗೊತ್ತಿ ನುಡಿದನು ದೈತ್ಯಪತಿಯೊಡನೆ (ನಿಘಾಗ. ೬-೧೧-೧೧). **ತರ್ಗೊತ್ತು :** ೨. (ಆಲಂ) ತಗ್ಗಿಸು ; ಕಡಮೆ ಮಾಡು : ಈ ಮತ್ಸರಮಂ ತರ್ಗೊತ್ತಿ . . . ರಕ್ಷಿಪ್ಪುದೆನ್ನಂ (ರಕ್ಷಾಶ. ೧೧).

[ ತಗ್ಗು$_1$ (<ತಱ್ಗು) + ಒತ್ತು$_1$ ]

**ತಚ್ಚಣ** 'ತತ್ಕ್ಷಣ$_3$' ನೋ.

**ತಜವಿಜಿ** 'ತಜವೀಜು' ನೋ.

**ತಜವೀಜಿ** 'ತಜವೀಜು' ನೋ.

**ತಜವೀಜು, ತಜವಿಜಿ, ತಜವೀಜಿ, ತಜುಬಿಜಿ** (ನಾ). ೧. ಏರ್ಪಾಟು ; ವ್ಯವಸ್ಥೆ ; ಸಿದ್ಧತೆ : ನಾ ಬಂದು ಎಷ್ಟೊತ್ತಾತು . . . ಚಹಾದ್ದೇನಾದರೂ ತಜವೀಜು ಮಾಡ್ತೀಯೋ (ದೀಪಹ. I, ೧೯). 'ತಜವೀಜುದಾರಿ' ಪರಾ. ೨. ಪ್ರಯತ್ನ ; ಉದ್ಯೋಗ : (ಮೃಗಜಿ. IV, ೭೮೭). **ತಜವಿಜಿ :** ೨. ತಾಯಿ ತನಗೆ ಬೇರೆ ಮದುವೆ ಮಾಡಿಸುವ ತಜವಿಜಿಯಲ್ಲಿದ್ದಾಳೆಂದು . . . ಅತ್ತೆಯನ್ನು ಇನ್ನಷ್ಟು ಅಂಜಿಸಿದ್ದ (ಹೊಸಕ್ಷಿ. ೨೬). ೩. ವಿಚಾರಣೆ ; ಶೋಧನೆ ; ಚೌಕಸಿ (ಉಕ) : " ತಜವಿಜಿ–ಹುಡುಕುವುದು; ಶೋಧ " (ಜಾನಕೋ. ೬೩). **ತಜವೀಜಿ :** ೨. ಆಸ್ತಿ ವಿಲೇವಾರಿಮಾಡುವ ತಜವೀಜಿಯಲ್ಲಿದ್ದಾರೆ (ರೂಢಿ). **ತಜುಬಿಜಿ :** ೧. ಅಮುದಾ ನಗರಕ್ಕೆ ಬರುವ ಮಧ್ಯಮಾರ್ಗದಲ್ಲಿ ಪಾದಶಹಾರು ತಜುಬಿಜಿಮಾಡಿ (ಕೆಳವಂ. ೫೮-೧೯).

[ ←ಅರ. ಹಿಂ. ತಜವೀಜ್ ]

**ತಜವೀಜುದಾರಿ** (ನಾ). ವಿಚಾರಣೆ ; ಶೋಧನೆ : ಪಟೇಲರ ಬಹಿರಂಗ ಹಾಜರುಬಾಷಿ ಮತ್ತು ತಜವೀಜುದಾರಿ ಹೆಚ್ಚಾದವು (ಕೆಲನೆ. ೩೧೫).

[<ತಜವೀಜು ]

**ತಜಿನೆವಟಿಯಿಗೆ** (ನಾ). ಒಂದು ಬಗೆಯ ಧ್ವಜ (?) : ಬೆಳ್ಗೊಡೆಗಳುಂ ಪಾಳಿಧ್ವಜಂಗಳುಂ ತಜಿನೆವಟಿಯಿಗೆಗಳುಂ ಚಂದ್ರಾದಿತ್ಯರ್ಕಳುಂ ಸಿಂಹ ವ್ಯಾಘ್ರ ಮಕರ ಮತ್ಸ್ಯಗಳೆಂದಿವು ಮೊದಲಾಗೊಡೆಯ ರಾಜ್ಯಚಿಹ್ನಂಗಳ್ ಮುಂದೆ ಪರಿಯೆ (ಪದ್ಮಾರಾ. ೧೩೩-೧೯). [ ತಜಿನೆ$_0$+ ಪಟಿಯಿಗೆ ]

**ತಜಿವಿಜಿ** (ನಾ). ಪಿಸುದನಿ(?): ಗಜಬಜಿಸಿ ಕೆಲಕೆಲರು ಹಾಸ್ಯದ ತಜಿವಿಜಿಗಳಿಂ ಕೆಲರು ಮುಸುಕಿನ ಗುಜುಗುಜುಗಳಿಂ ಕೆಲರು ಸಂಜ್ಞೆಗಳಿಂದ ಕೆಲರಿರಲು (ಅನಂರಾ. ೩-೪-೨೩). 'ಗಜಿಬಿಜಿ' ಪರಾ. [ ? ]

**ತಜುಬಿಜಿ** 'ತಜವೀಜು' ನೋ.

**ತಜ್ಜ್ಞ** (ನಾ). ವಿಷಯವನ್ನು ಬಲ್ಲವನು ; ತಿಳಿದವನು ; ನುರಿತವನು ; ಬುದ್ಧಿವಂತ : ಮೋಹರಾಜನ ಸಂದಾಜ್ಞೆಯನಾವ ತಜ್ಜ್ಞನುಮಣಂ ಮಿಾಱಲ್ಕೆ ಮೇಣ್ ಬರ್ಪನೇ (ನೇಮಿಪು. ೧-೮೯) : ತಜ್ಜ್ಞರ್ ತಲೆದೂಗೆ ದೇವಸಭೆ ಸಂತೋಷಕ್ಕೆ ಪಕ್ಕಾಗೆ (ಪುಷ್ಪಪು. ೧೨-೫೧). [ ಸಂ. ]

**ತಜ್ಞ** (ನಾ). = ತಜ್ಜ್ಞ : ಕಲಿಸಿದ ಭಾರ್ಗವಾತ್ಮಜರ ನೋಡಿದ ತಜ್ಞರ ಮುಯ್ಯ್ವನೆತ್ತಿಯುಂ ಗೆಲೆ ಸಲೆ ರಾಮಲಕ್ಷ್ಮಣರದೇಂ ನೆಱೆ ಕಲ್ತರೊ ಕೈದುವೆಲ್ಲವುಂ (ಪಂರಾಮಾ. ೩-೧೫೦) ; ತಡೆಯದೆ ವಿಚಾರಿಸೆಂಬಜ್ಞತಜ್ಞರ ಬಗೆಗೆ ಸಂಶಯುಂ ಸರಿಯಾದುದು (ಹಚಕಾ. ೧೧-೨೭). [ ಸಂ. ತಜ್ಜ್ಞ]

**ತಜ್ಞತೆ** (ನಾ). ನಿಪುಣತೆ ; ಪಾಂಡಿತ್ಯ : ಉದಾತ್ತಾಳಾಪ ಪ್ರಯೋಗಂಗಳಿಂ ತಜ್ಞತೆಯನಾ ಮಾನಧರರ ಮುಂದಿಡೆಯುಂ (ಶಾಂತಿಪು. ೪-೮೨೮).

[ ಸಂ. ತಜ್ಜ್ಞತಾ ]

**ತಟ$_1$** (ನಾ). ಒಂದು ಅನುಕರಣ ಶಬ್ದ. 'ತಟಗುಟ್ಟು' ಪರಾ.

**ತಟತಟ$_1$** (ದ್ವಿರುಕ್ತಿ) : ಜನಕೆಲ್ಲ ತಟತಟ ಬೆವರು ಸುರಿವುದು (ಸಿದ್ಧಪು. ೫-೪೬) ; ವರುಷವರುಷವೂ ನಾವಿದ್ದಲ್ಲಿಯೆ ಹೊಸ ವಿದ್ಯಾರ್ಥಿಗಳಾಗುವೆವು ಪುಟಗಳ ತೆರೆಯದೆ ತಟತಟ ಓದದೆ ಬಿಸಿಲಿಗೆ ಗಾಳಿಗೆ ಮಾಗುವೆವು (ಶಿಶಾಂ. ೧೬-೧೧).

**-ತಟ$_2$** (ಪ್ರ). ಒಂದು ಭಾವನಾಮ ಪ್ರತ್ಯಯ : 'ಎಳೆತಟ' ಪರಾ.

**ತಟ$_3$** (ನಾ). ೧. ಬೆಟ್ಟದ ತಪ್ಪಲು,-ಇಳುಕಲು : " ಆ ನಗಕಟಕಂ ಪ್ರಸ್ಥಂ ಸಾನು ತಟಂ ಭೃಗು ನಿತಂಬಮಂತದು ತಟ್ಟಿಲ್ ತಾನೆನಿಸುಗುಂ" (ವಸ್ತುಕೋ. ೨೮-೨೭) ; " ಸಾನುಕಟಕಂ ಭೃಗು ಪ್ರಸ್ಥಂ ತಟಂ ನಿತಂಬಂ ಗಿರಿಯ ಹೊರೆಯಕ್ಕು " (ಮಂಗರಾ. ೩೦-೨). ೨. ದಡ ; ಅಂಚು; ತೀರ : "ತೀರಂ ರೋಧಂ ತಟಂ ಪ್ರಪಾತಂ ಕೂಲಂ " (ವಸ್ತುಕೋ. ೨೪-೧೩); "ತಟಂ ದಡಂ " (ಚತುನಿ. ೯೩) ; ಕಾಸಾರದಾ ತಟದಿ . . . ತಪದಿ ಮುನಿಗಳ ಶ್ರೇಷ್ಠ ಮಾರ್ಕಂಡ್ಯನಿರೆ (ಪ್ರೌಢರಾ. ೧೦-೧೮) : ಬಾಲಲೀಲೆಗಳಾಡಿದ್ದು ಯಮುನಾ ತಟದಲ್ಲಿಯೋ (ನನದಿ. ೧೩). ೩. ಸ್ಥಳ; ಪ್ರದೇಶ: ವೃಂದಾವನ ತಟದೊಳ್ ಗೋವೃಂದಾವನ ವಾಂಛೆಯಿಂದೆ ಮನೆಗಟ್ಟಿದನಾ ನಂದ (ಜಗವಿ. ೩-೬೬). ೪. ಹೊಲ; ಕ್ಷೇತ್ರ. ೫. ಆಕಾಶ. ೬. ದಿಗಂತ ; ಕ್ಷಿತಿಜ.

**ತಟತಟ$_2$** (ದ್ವಿ ರು ಕ್ತಿ) : ತಟತಟ ತಾಗಿದ ಪರಮಾನಂದದಿ ಪುಟವೇಱಿದ ತನುಕಾಂತಿಯ ಲಿಂಗದಿ (ಯೋಗಾಂವಿ. ೬-೧೩) : ಅಟಮಟ ಕುಟಿಲೇಂದ್ರಿಯಗಳ ತಟತಟಗಳ ಜಯಿಸಿದವನೆ ಪಟುಭಟನಣುಗ (ಷಶಿಂ. ೨-೩೮). ತಟತಟವಾಗಿ=ಸಂಪೂರ್ಣವಾಗಿ : ನೀವು ತಟತಟವಾಗಿ ಲೋಗರ ಸೇವೆಯಲಿ ಬೆಂದೊಡಲ ಹೊಱುವಿರಿ (ಕುಮಾವ್ಯಾ. ೩-೬೪). [ ಸಂ. ]

**ತಟಂಕ, ತಡಂಗ** (ನಾ). ಕೆರೆ ; ತಟಾಕ : ಗೊಪ್ಪಯ ಸುತನ್ ಪರಮೇಶ್ವರ ದೇವಶಕ್ತಿಯಾಕ್ಷತ್ರಣಿಯಾ ತಟಂಕಮಿದು (ಎಕ. XVI, ಪಾವುಗ. ೧೨-೩ : 754). **ತಡಂಗ :** ಅದೇಂ ನೆಱೆ ಪೋಲ್ತುದೋ ಚಂಡಹುಂಡ ಸಂಸ್ಥಾನದೆ ಗುಂಡುದೀವಿದ ತಡಂಗಮನಂಗದ ಪಾಂಗವಂದಿರಾ (ಆದಿಪು. ೫-೯೦) ; ಕೊಳ್ವೆಸಕದಿಂ ಬಿಸಿನೀರ ತಡಂಗದಂದದಿಂದಿರೆ . . . ಪಾಂಥಜನಂ ನಡೆಯಿತ್ತು ಮಾರ್ಗದೊಳ್ (ಜಗವಿ. ೧೭-೭).

[<ಸಂ. ತಟಾಕ ]

**ತಟಂಕಷ** (ಗು). ೧. ದಡವನ್ನು ಕೊರೆಯುವ. ೨. ಸಮಗ್ರವಾದ ; ಸಂಪೂರ್ಣವಾದ : ಜಿನೇಂದ್ರರುಂದ್ರ ಕಥೆಯೊಳ್ ನವಭಾವರಸಂಗಳಂ ತಟಂಕಷಮೆನೆ ತೋಱಿ (ಪುಷ್ಪಪು. ೧-೩೪). 'ಕೂಲಂಕಷ' ಪರಾ. [ಸಂ.]

**ತಟಂಬಿಡಿ** (ಕ್ರಿ). ದಂಡೆಗುಂಟ ಸಾಗು; ತೀರವನ್ನು ಅನುಸರಿಸು: ಓರಂತು ಪೋಪ ದಿವಿಜರ ಹಾರಿ ತಟಂಬಿಡಿದು ಪೊಕ್ಕು ಪೊಱಮಡುವೊಂದಾಕಾರಂ (ಶಾಂತಿಪು. ೧೦-೨೭). [ ತಟ$_2$ + ಪಿಡಿ$_1$ ]

**ತಟಕನೆ** ' ತಟಕ್ಕನೆ ' ನೋ.

**ತಟಕಾವು** (ನಾ). ಅಡ್ಡಿ; ತಡೆ; ವಿಘ್ನ: ಹೆಂಡ ಮಾರುವುದಕ್ಕೆ 'ತಟಕಾವು' ಮಾಡುವರಂತೆ (ಬೆಳುಮ. ೧೩೯). 'ಅಟಕಾವು' ಪರಾ.

[ ?. / ಮರಾ. ತಟಕಾ = ತಂಟೆ, ವಿವಾದ ]

**ತಟಕಿ** (ನಾ). ತಡಿಕೆ ; ತಟ್ಟಿ : ಮರುಗ ಪಚ್ಚೆಯು ದವನದಿಂದ ತಟಕಿಯ ಬಿಗಿದು ಸುರುಚಿರ ಸುಲಾಮಂಚದಿಂದ ಪಂದರ ರಚಿಸಿ (ನವಮೋ. ೧೦-೬೭).

[ <ತಡಿಕೆ ]

**ತಟಕು$_1$, ತುಟುಕು$_1$, ತೊಟಕು$_1$** (ಕ್ರಿ). ಹನಿ ; ತೊಟ್ಟಿಕ್ಕು : ಒಂಟಿ ಕುಕಿಲಿದು ಕೂಗದೇಕೆ ? ಬಿರಿನನೆ ನಾರು ಬೀರದೇಂ ? ತಟಕದೀ ಎಲೆವನಿ ಇದೇನು ? (ಗಿಳಿವಿಂ. ೨೮-೪೦). **ತುಟುಕು$_1$ :** ಹನಿಗಳು ಬೀಳುತ್ತಲೇ ಇದ್ದುವು. ಮುಖಕ್ಕೊಂದೆರಡು ಬಾರಿ ತುಟುಕಿದಾಗ ಮಾತ್ರ ನನ್ನ ಮೂಗು ಮುರಿದಿರಬೇಕು (ಮ್ಯಾಲಮಾ. ೧೨೨). **ತೊಟಕು$_1$ :** ಮೈಯಿಂದ ಬೆವರು ತೊಟಕುತ್ತಿತ್ತು (ಬಂಗಾಹೆ. ೨೨). ' ತೊಟ್ಟಿಕ್ಕು ' ಪರಾ.

ತಿಪ್ಪರಲಾಗ ಹಾಕು = ೧. ಓಲಾಡು: ಮನಸ್ಸು ತಿಪ್ಪರಲಾಗ ಹಾಕಿತು (ಹೊಸಕ್ಕಿ. ೮೪). ೨. ಕಷ್ಟಪಡು ; ಪ್ರಯತ್ನಿಸು : ಹಾಂಗ ಮಾಡಲಿಕ್ಕೆ ಬರೂದುಲ್ಲೋ ಆಚಾರಿ ; ನಾನು ಭಾಳ ತಿಪ್ಪರಲಾಗಾ ಹಾಕಿದೆ (ತಿಮಗು. ೭೪). ತಿಪ್ಪರಲಾಗ ಹೊಡೆ = ೧.=ತಿಪ್ಪರಲಾಗ ಹಾಕು ೨ : ತಿಪ್ಪರಲಾಗ ಹೊಡೆದರೂ ಅದು ತಪ್ಪುವ ಹಾಗಿರಲಿಲ್ಲ(ಸಮಜೀ. ೧೨೩೪). ೨. ತೇರ್ಗಡೆ ಹೊಂದದಿರು: ರಾಜುವು ಮೂರುರೂಪಾಯಿಯ ಪರೀಕ್ಷೆಯಲ್ಲಿ ಮೂರು ಸಲ ತಿಪ್ಪರಲಾಗ ಹೊಡೆದಿದ್ದ (ಎಡಹೆ. ೧೬). 'ತಿಪ್ಪ' ಪರಾ.

[ <ತಿರಿಪ್ಪು$_2$ ? + ಲಾಗ ]

ತಿಪ್ಪಲ್ (ನಾ). (?) : ಯಾರು ತಿಪ್ಪಲ್ ಬಗೆವರವರೆ ಗೌರಿಯನು ಪುತ್ರಿಯನು ಕುಸುಮಕುಮಾರಿಯನು ಕನಸಿನಲಿ ಕಂಡವ ಜೀವರಲ್ತೇ ಕರಂ (ವಿವೇಥ. ೮-೩೪). [ ? ]

ತಿಪ್ಪಲಾಟ (ನಾ). (ಬುಗುರಿಯಂತೆ) ತಿರುಗುವಿಕೆ ; ಸುತ್ತಾಟ (?) : ಇಂತೊಸೆದ ಬೆಳಕಿನಲಿ ಕೆಲವು ಇದ್ದಲ್ಲೆ ತಿಪ್ಪಲಾಟದಲಿ ತೊಡಗಿವೆ (ಸುನೀತ. ೮೧-೪). 'ತಿಪ್ಪರಲಾಗ' ಪರಾ. [ <ತಿಪ್ಪು$_1$ + ಆಟ ]

ತಿಪ್ಪಲಿ 'ಹಿಪ್ಪಲಿ' ನೋ.

ತಿಪ್ಪಲು (ನಾ). ಪೀಕಲಾಟ ; ತೊಂದರೆ ; ಕಷ್ಟ : "ತಿಪ್ಪಲು. ತಿಪ್ಪಲು ಪಾಟ–ಕಷ್ಟ" (ಗಂಗಾಮ. ೧೩೨). 'ಚಿಪ್ಪಳು' ಪರಾ. [ ? ]

ತಿಪ್ಪಲುಗಾರ (ನಾ). ಅಧಿಕಾರ ನಡೆಸುವವನು; ದಬ್ಬಾಳಿಕೆ ನಡೆಸುವವನು : ಆ ಕಾಲದಲ್ಲಿ ಅರಸರು ತಿಪ್ಪಲುಗಾರರು (ಜುಲುಮೆಯಿಂದ ಆಳುವವರು) (ಅಕ್ಕರ. ೧೨೨). [ ತಿಪ್ಪಲು + – ಕಾರ$_1$ (< – ಗಾರ) ]

ತಿಪ್ಪು 'ತಿರಿಪ್ಪು$_1$' ನೋ.

ತಿಪ್ಪುಳ್ 'ತುಪ್ಪುಳ್' ನೋ.

ತಿಪ್ಪುಳ 'ತುಪ್ಪುಳ್' ನೋ.

ತಿಪ್ಪುಳು 'ತುಪ್ಪುಳ್' ನೋ.

ತಿಪ್ಪುೞ್ 'ತುಪ್ಪುೞ್' ನೋ.

ತಿಪ್ಪೂರ್ (ನಾ). ಒಂದು ಊರಿನ ಹೆಸರು : ತಿಪ್ಪೂರ ಕಾಡಸ್ವಾಮಿಗಳ್ಗೆ ಬ್ರಹ್ಮಾದೆಯ ಕ್ರಮದೆನ ಮೆಲೂರ ಕೆಱೆ ಕೀೞೆ ಪಡಿಕಂಡುಗ ವ್ರಿಹಿ ಭೂಮಿ ದತ್ತಮ್ಮ (ಇಆ. V, ೧೩೬-೧೩ ; 454 ಕ್ರಿಶ). 'ತಿಪ್ಪೆಯೂರ್' ಪರಾ. [ ? + ಊರ್ ]

ತಿಪ್ಪೆ, ತಿರ್ಪೆ (ನಾ). ೧. ಕಸದ ಗುಡ್ಡೆ ; ರಾಶಿ : ತಿಪ್ಪೆ ಮೇಲೆ ಮಲಗಿ ಉಪ್ಪರಿಗೆ ಕನಸು ಕಂಡ ಹಾಗೆ (ಗಾದೆ). ೨. ಕಸಕಡ್ಡಿಗಳನ್ನು ಹಾಕುವ ಸ್ಥಳ : ವಾರಿಜಷಂಡಮಂ ಪಡೆದು ಪೊರ್ದುವವೊಲ್ ಕಳಹಂಸೆ ತಿಪ್ಪೆಯಂ ಪೊರ್ದುಗುಮೆ (ಧರ್ಮಾಮೃ. ೪-೨೦೦) ; ತಿಪ್ಪೆಯ ತಪ್ಪಲಲ್ಲಿ ಬಿದ್ದಿರ್ದ ತಂಡುಲವ ಕಟ್ಟಿಕೊಂಡು (ಶೂನ್ಯಸಂ. ೨೨೫-೧೩) ; ಹತ್ತು ಸಾವಿರ ಹೊನ್ನು ತಿಪ್ಪೆಯಲಿ ಹೂಳಿಟ್ಟು ಮತ್ತೆ ಉಪ್ಪಿಲ್ಲದೆ ಉಂಡೆಯಲ್ಲೊ ಪ್ರಾಣಿ (ಪುರಂದ. ೧-೮೭-೨) ; ಏಳುನೆಲೆಯುಪ್ಪರಿಗೆಯೆತ್ತೀ ಕೀಳುದಿಪ್ಪೆಯದೆತ್ತ (ಸಾಳ್ವಭಾ. ೧೭-೩೪); ಶ್ವಾನ ತಿಪ್ಪೆಯ ಮೇಲೆ ಮಲಗಿರಲು . . . ಏನೋ ವಾಸನೆ ಬೀಸಲದು ಹಾರಿ ದುಮುಕುವುದು (ಮಂಕುಕ. ೯೦೫) : ಕೋಳಿ ಕಾಲಿಗೆ ಗೆಜ್ಜೆ ಕಟ್ಟಿದರೂ ತಿಪ್ಪೆ ಕೆರೆಯದೆ ಇದ್ದೀತೇ (ಗಾದೆ).

△ ತಿರ್ಪೆ : 'ತಿರ್ಪೆಸುಂಕ' ಪರಾ.

ತಿಪ್ಪೆಕೆದರು = ಹಳೆಯಂ ಸಂಗತಿಗಳನ್ನು ಬಯಲಿಗೆಳೆ : ಅವನನ್ನು ರೇಗಿಸಿ ರೇಗಿಸಿ ತಿಪ್ಪೆಕೆದರಿದರು (ರೂಢಿ). ತಿಪ್ಪೆಗುಂಡಿ, ತಿಪ್ಪೆಯಗುಂಡಿ= ಕಸಕಡ್ಡಿಗಳನ್ನು ಹಾಕುವ ಗುಂಡಿ: ವ್ಯವಸಾಯವೇ ಮುಖ್ಯವಾಗಿದ್ದುದರಿಂದ ತಿಪ್ಪೇಗುಂಡಿಗಳು ಊರಿಗೆ ಸಮೀಪವಾಗಿದ್ದುವು (ಹುಟ್ಟಿಹ. ೫) ; ವಿಷಯ ಕೂಪವೆಂಬ ತಿಪ್ಪೆಯ ಗುಂಡಿಯ ನೀರ ಕುಡಿದು (ಸಿದ್ಧೇವ. ೪೨-೧೧೭). ತಿಪ್ಪೆಸಾರಿಸು = ೧. ತಿಪ್ಪೆಮುಚ್ಚಿ ಮೇಲೆ ಅಲಂಕಾರಮಾಡು. ೨. ವಿಷಯವನ್ನು ಮರೆಮಾಚು : ಲೋಪದೋಷಗಳನ್ನು ಮುಚ್ಚಿಡು : ಮೂಲಿಕೆಗಳ ಶಕ್ತಿಯೂ ಅಪಾರವೆಂದೇ ಹೇಳಬೇಕು, ಎಂದು ತಿಪ್ಪೆಸಾರಿಸುವ ಮಾತನ್ನಾಡಿದನು (ಬೆನ್ನಬೇ. ೧೮೨).

[ ದೇ.॥ ತಮಿ ತಿಪ್ಪೈ ; ತುಳು. ತಿಪ್ಪೆ ; ತೆಲು. ತಿಪ್ಪ ]

ತಿಪ್ಪೆಯೂರ್ (ನಾ). ಒಂದು ಊರಿನ ಹೆಸರು: ಕನಕಸೇನ ಭಟಾರರ್ಗ್ಗೆ ತಿಪ್ಪೆಯೂರೊಳಾದ ಅಟ್ಟದೆಱೆಯುಂ ಕುೞುದೆಱೆಯುಮುಟ್ಟಸಾಮನ್ತದೆಱೆ ಯೆಲ್ಲವಮಿಟ್ಟನ್ (ಎಕ. III, ಮಳವ. ೩೦-೧೦ ; 909).

[ ತಿಪ್ಪೆ + ಊರ್ ]

ತಿಪ್ಪೆವಳ್ಳ (ನಾ). ತಿಪ್ಪೆಗುಂಡಿ : ಬಾವಿಯುನಱಿ ಬನ್ನಂಬಟ್ಟು ಬಾಯೊಣಗಿ ಬಸಗೆಟ್ಟು ಅಲ್ಲಿರ್ಪ ತಿಪ್ಪೆವಳ್ಳದೊಳ್ಪಾವಸೆಗಟ್ಟ . . . ಪೊಲಸುಗಂಪಿಡುವ ನೀರನೆ ಕುಡಿದು (ಚಿಕವಂ. ೫೬-೧). [ ತಿಪ್ಪೆ + ಪಳ್ಳ ]

ತಿಪ್ಪೆಸುಂಕ, ತಿರ್ಪೆಸುಂಕ (ನಾ). ತಿಪ್ಪೆಗಳ ಮೇಲಿನ ತೆರಿಗೆ; ಕಂದಾಯ: ತೇಜ ಸಾಮ್ಯಗಾಣಾಯಿಮಂ ಪಡಿಯದೆ ತಿಪ್ಪೆಸುಂಕ ಮನೆದೆಱೆ (ಬೊಂಕಶಾ. ೧೯೩೭, ಸಿಂದಗಿ. ೪೨-೪೩ ; 1097) ; ತಿಪ್ಪೆಸುಂಕ ಗಾಡಿಯ ಸುಂಕಂ ಒಂದು ಗಾಣಂ ಇಪ್ಪ...ರು ಕೆಱೆಯ ಭಣ್ಣಂಗೆ ಬಿಟ್ಟ ಧರ್ಮ್ಮ (ಎಕ. XI, ದಾವಣ. ೧೩೯-೫೨ ; 1106) ; ಹೇಱಿನಲು ಎಲೆ ೧೦೦ ನ್ಯಾಯದಲು ಮುಮ್ಮಾಪಣ ತಿಪ್ಪೆಸುಂಕ ರಾಸಿಯ ದೇವಗೊಳಗ ೨ ಗಾಣದಲೆಣ್ಣೆ ಸೊಳಸಿಗೆ (ಸೌಇಇ. IX i ೨೩೩-೬೨ ; 1138). △ ತಿರ್ಪೆಸುಂಕ : ಬೋವಕ್ಕಳ್ ತಂದು ಮಾಱುವ ಬಾಡುಕಾಯಿಗೆ ತಿರ್ಪ್ಪೆಸುಂಕವ ಕೊಟ್ಟರ್ (ಮುಂಬರಾ. X. ೨೭೦-೭೫ ; 1229). [ ತಿಪ್ಪೆ + ಸುಂಕ ]

ತಿಪ್ಪೆಹೊಳು (ನಾ). ತಿಪ್ಪೆಯಲ್ಲಿ ಮುಚ್ಚುವಂತೆ ರಾಶಿ ಹಾಕಿದ ಕಸಕಡ್ಡಿ ಮುಂತಾದುವು : ಬಂದು ವರುಷದ ತಿಪ್ಪೆಹೊಳಿನ್ನೊಂದು ವರುಷಕೆ ವ್ಯತ್ತಿಕೆಯು (ಬಿಜ್ಜಪು. ೯೮-೩೪). [ ತಿಪ್ಪೆ + ಹೊಳು (<ಪೊಳ್$_2$) ]

ತಿಪ್ಪೇಱು (ನಾ). ಒಂದು ಸ್ಥಳದ ಹೆಸರು : ತಿಪ್ಪೇಱುಮ್ ಅಘುಮ್ ಲಿಹಮ್ ಅತಿಶಯವಾನ್ (ಮ್ಯಆರಿ. ೧೯೩೦, ೧೦-೬೭ ; 967). [ ? ]

ತಿಬು 'ತಿಬ್ಬ$_2$' ನೋ.

ತಿಬ್ಬ$_1$, ತಿಬ್ಬರ, ತೀವರ (ಗು). ೧. ಚುರುಕಾದ ; ಶೀಘ್ರವಾದ : "ತೀವ್ರಕ್ಕೆ ತಿಬ್ಬಮೆಂಬರು ಕವಿಗಳ್" (ಕವಿಕಂ. ೨೦೦) ; ತೀವ್ರ–ತಿಬ್ಬ. ನೇತ್ರ–ನೆತ್ತ (ಶಮವ. ೨೬೧ ಪ್ರಯೋ). ೨. ತೀಕ್ಷ್ಣವಾದ : ಮನದತ್ತಿರ್ಪೋಪಿನಂ ಮೇರುನಗದಕೃತ್ರಿಮ ಜಿನಾಲಯಂಗಳನಿಂತನವರತಂ ನೋಡುವ ಭಾವನೆ ಪೋಗದು ತಿಬ್ಬಮಿನ್ನುಮದು ಕಾರಣದಿಂ (ಧರ್ಮಾಮೃ. ೫-೧೨೨) : ತಿಬ್ಬವೊಗಂ ಬಯಂಬಡಿಪ ತೇಜಮನುಳ್ಳ ದೃಢಾಂಗ (ಹಾಶಾಸ್ತ್ರ.೧-೧೩-೪೭). (ನಾ). ೨. ಅತಿಶಯವಾದದು; ಶ್ರೇಷ್ಠವಾದುದು; ಅಧಿಕವಾದುದು: ಕುಲಜನೀತನೆ ಪಂಡಿತನೀತನುಜ್ಜ್ವಲಯಶೋಧಿಕನೀತನೆ ತಿಬ್ಬಮೆಂದಲಸಿ ಪೇಟ್ಟಿ (ಕವಿರಾ. ೧-೧೩೯) ; ಜಿನವಚನಮೆ ತಿಬ್ಬಮೆಂದು ನಂಬಿದ ಫಲ (ಧರ್ಮಾಮೃ. ೨-೧೫೧) ; ಅಧರವ ಸವಿದನು ತಿಬ್ಬದ ಸುಸಿಲೊಳು ಕೃಷ್ಣ (ವರ್ಧಜ. ೫-೮೩). ೪. ಬೇಗ ; ಜಾಗ್ರತೆ : ಪಡಿಹಾರಿಗಳ ತಿಬ್ಬದಿಂ ಕರೆದು (ಆರಾಚ. ೧೩-೭೬). ತಿಬ್ಬರ: ೪. "ತಿಬ್ಬರಂ ತೀವ್ರನಾಮಂ" (ಕರ್ಣಾನಿ.೫೬). ತೀವರ : ೪. ದೇವತೆಗಳು ಕಾದಲರಿದು ನಾವು ಕೆಡಲು ಬೇಡ ಇದ್ದ ಮರುಳ ಕೂಡಿ ತೀವರದೊಳು ತಿರುಗೆಂದ (ಹರಿಸಾಂ. ೩-೬೭) ; ಹರಿಯೆ ಗತಿ ಹರಿಗೆ ನಿಜವೆಂದು ತಿಳಿದು ತೀವರದಿಂದ ಒಡಂಬಡುವದು ಜನರು (ತೀರ್ಥಮ. ೨೧೭) ; ತೀವರದಿಂದ ವರವನುಗಿದು ಸ್ಥಾವರಕೆ ಸಮಮಾಡುವೆ (ಶ್ರೀಕೃಪಾ. ೭೦). [ ಪ್ರಾ. ತಿವ್ವ./ಸಂ. ತೀವ್ರ ]

ತಿಬ್ಬ$_2$, ತಿಬು (ನಾ). ಒಂದು ಬಗೆಯ ಹೂವು : "ದಿವ್ಯಂ – ಬರ್ಬರ ಚಂದನ. ತಿಬ್ಬ" (ಓಷಧಿ. ೭೫). ತಿಬು : "ದಿವ್ಯಪುಷ್ಪ – ಕಣಿಗಲು.ತಿಬು. ಅತ್ತಿ" (ಓಷಧಿ. ೭೫). [ <ಸಂ. ದಿವ್ಯ? ]

**ತಿಬ್ಬ₃** 'ತಿಬ್ಬಂ' ನೋ.

**ತಿಬ್ಬಂ, ತಿಬ್ಬ₃** (ಅ). ಬೇಗನೆ ; ಶೀಘ್ರವಾಗಿ : ತಿಬ್ಬಂ ನುಡಿದಂ–ತಿಬ್ಬನುಡಿದಂ (ಶಬ್ದಾನು. ೨೯೩ ಪ್ರಯೋ). ಅದಱಿಂ ಮುಂಚಿ ಪಳಂಚಿ ಪಾಱಿದುದು ತಿಬ್ಬಂ ಬಾಣಮನ್ಕಂ (ಶಬಶಂ. ೪-೪೦). ತಿಬ್ಬ₃ : ಮೇಲಿನ 'ಶಬ್ದಾನು' ಪ್ರಯೋಗವನ್ನು ನೋಡಿ. [ <ತಿಬ್ಬ₁ ]

**ತಿಬ್ಬಂಮಾಡು** (ಕ್ರಿ). ೧. ವೇಗಗೊಳಿಸು. ೨. ದೃಢಪಡಿಸು ; ನಿಜಗೊಳಿಸು (?) : ಕೆಲರ್ ಮಿಟ್ಟುಗಾಡಿಯುಂ ಬರ್ದುಂಕಲಾಗದೆಂಬ ಮಾತಂ ತಿಬ್ಬಂಮಾಡಿ ಸೌಜನ್ಯಕಂದಾಂಕುರನ ಶರಕ್ಕಳ್ಕಿ ಬೆಳ್ಕೆತ್ತೋಡೆಯುಂ . . . ಬಿಟ್ಟಿರ್ (ಶಾಂತಿಪು. ೪-೩೦ ವ); ಮನಮಂ ತಿಬ್ಬಂ ಮಾಡಿ (ಧರ್ಮಾಮೃ. ೩-೨೧) ; ತಿಬ್ಬಂ ಮಾಡಿದಂ = ತಿಬ್ಬವೆಹೆಗಹುದಹಗೆ ಮಾಡಿದಂ (ಶಮದ. ೧೪೪ ಪ್ರಯೋ). [ ತಿಬ್ಬ₁ + ಮಾಡು₁ ]

**ತಿಬ್ಬಯಲು** (ನಾ). ಒಂದು ಸ್ಥಳದ ಹೆಸರು (?) : ಹಿರಿಯ ಕೆಱೆಯ ತಿಬ್ಬಯಲಲು ಬಟ್ಟಗ ಗಟ್ಟವೊಂದುವೂರಿನ್ದ ಹಡುವಣ ಹೊಲದಲ್ಲಿ ಬೆದ್ದಲೆ ೪೨ (ಎಕ. V, ಹಾಸನ. ೫೪-೪೮ : 1174).

[ ತಿಬ್ಬ? + ಬಯಲು (<ಬಯಲ್) ]

**ತಿಬ್ಬರ** 'ತಿಬ್ಬ₁' ನೋ.

**ತಿಬ್ಬಳಿ** (ನಾ). ಬುದ್ಧಿ ; ಎಚ್ಚರ ; ಜ್ಞಾನ : ತಿಬ್ಬಳಿಯಡಂಗಿ ಬಿಳ್ದಾ ವೀರಭಟವಿತತಿ ಸಿಬ್ಬದಿಗೊಳುತ್ತ ಸಿಡಿಮಿಡಿಗೊಂಬ ನೃಪಸಮಿತಿ (ಸಮ್ಯಕ್ತ್ವ. ೮-೬೩) : ಏನೋ ಎಲಾ ತಿಬ್ಬಳಿ ಇಲ್ಲದೆ ಮಾತನಾಡುತ್ತೀರಿ (ಕಥಾಮಂ. IV, ೦೮).

**ತಿಬ್ಬಿ** (ಗು). ಯುನಾನಿ ಚಿಕಿತ್ಸೆಗೆ ಸಂಬಂಧಿಸಿದ : 'ತಿಬ್ಬಿವೈದ್ಯ' ಪರಾ.

[ ←ಅರ. ತಿಬ್ಬೀ ]

**ತಿಬ್ಬಿವೈದ್ಯ** (ನಾ). ಯುನಾನಿ ವೈದ್ಯ ; ಹಕೀಮ : ಆಯುರ್ವೇದ ಪಂಡಿತರನ್ನನುಸರಿಸುವಂತೆ ತಿಬ್ಬಿವೈದ್ಯರನ್ನು ಅಪೇಕ್ಷಿಸುವುದಾಗಲಿ ಹಿಂದುಗಳಿಗೆ ಎಂದೂ ಕಷ್ಟವೆಂದೆನಿಸಿರಲಾರದು (ಭಾರದ. ೪೦೪).

[ ತಿಬ್ಬಿ + ವೈದ್ಯ ]

**ತಿಬ್ಬು** 'ತಿರುವು₃' ನೋ.

**ತಿಮರು₁** 'ತಿಮಿರ್₁' ನೋ.

**ತಿಮರು₂** (ನಾ). (?) : ಬಿತ್ತುವ ಮಾ ೩ ಪಣುಮ ತಿಮರು ಬಿತ್ತವ ಮ ೩ (ಸೌಇಎ. ೧೯೩೯, ಮಂಗಳೂರು. ೪೬೫-೧೩ : 1312). [ ? ]

**ತಿಮರೆ** (ನಾ). ಒಂದು ಬಗೆಯ ಸೊಪ್ಪು ; ಒಂದೆಲಗ; ಇಲಿಕಿವಿಸೊಪ್ಪು : ಇಗೋ ತಿಮರೆ. ತಂಬ್ಳಿ ಮಾಡು ನೋಡೋಣ (ಬಾಳಿಗಿ. ೦೦೬).

[ ? ]

**ತಿಮಿ** (ನಾ). ೧. ಮೀನು ; ಮತ್ಸ್ಯ : "ಮೀನಂ ಶಫರಂ ತಿಮಿ ಪಾಠೀನಂ ಝಷಮನಿಮಿಷಂ ವಿಸಾರಂ ಮತ್ಸ್ಯಂ ಮೀನವೆಸರ್" (ವಸ್ತುಕೋ. ೨೨-೫); "ಮೀನಂ ಝಷಂ ತಿಮಿ ವಿಸಾರಮಮಾ ಶಿಲ್ಕಿ . . . ವೈಸಾರಿಣಂ ಮತ್ಸ್ಯಮೆನೆ ಮೀನ್ಗೆ ನಾಮಂ" (ಮಂಗರಾ. ೧೨೧-೬). ೨. ದೊಡ್ಡ ಗಾತ್ರದ ಮೀನು : "ರೀರಲ್ಲಃ, ತಿಮಿಃ, ತಿಮಿಂಗಿಳಃ (ತಿಮಿಂಗಿಳಗಿಳಃ) –ಈ ೪ ಒಂದೊಂದಕ್ಕೆ ಹಿರಿಯುವಪ್ಪ ಮೀನ್" (ಹಲಾಯು. ೦೧೯-೩೪) ; ಜಳಧಿಯೊಳೆ ತಿಮಿ ತಿಮಿಂಗಿಳಗಿಳ ಮಕರ ಪ್ರಕರ ಶಂಕ ಸಂಭವಮಕ್ಕುಂ (ಕಾವ್ಯಾವ. ೮೮೩) ; ಕಿರುಮೀನ್ಗೆ ಕೆರೆ ಕೊಳಂ ಪೊಳೆ ಸಾಲ್ಗುಮಾ ತಿಮಿಗೆ ವೇಳ್ಕುಂ ಜಲಕ್ರೀಡೆಗಾರುಂದ್ರಸಾಗರಸಲಿಲವಿಸ್ತಾರ (ಶ್ರೀರಾಮಾ. ೪-೯೫) ; ತಿಮಿಯಂ ತಿಮಿಂಗಿಳನಡಂಗುವಿನಂ ತವೆ ನುಂಗೆ ಆ ತಿಮಿಂಗಿಳನುಮನೀ ತಿಮಿಂಗಿಳಗಿಳಂ ತವೆ ನುಂಗಿದೆನೊಂದೆ ತುತ್ತಿನೊಳ್ (ಮಂತ್ರಶ. ೫೬-೧೬) ; ಸಮುದ್ರದಡದಲ್ಲಿ ತಿಮಿಜಾತಿಗೆ ಸೇರಿದ ಪ್ರಾಣಿಗಳೂ ಇವೆ (ಪ್ರವಾಇ. I, ೫೬). [ ಸಂ. ]

**ತಿಮಿಂಗಿಲ, ತಿಮಿಂಗಿಳ** (ನಾ). 'ತಿಮಿ' ಎಂಬ ಮೀನುಗಳನ್ನು ನುಂಗುವ ಬಹಳ ದೊಡ್ಡ ಗಾತ್ರದ ಒಂದು ಬಗೆಯ ಮೀನು : ತಿಮಿಂಗಿಲ ಮತ್ಸ್ಯ ಕಚ್ಛಪ ಕರಿ ಮಕರಗಳಡಸಿ ತುಂಬಿದ ಹಗೆಯೆನಿಸಿ . . . ಮೆಱೆದುದರರೆ ಪಶ್ಚಿಮವನನಿಧಿ (ಸೋಮಚ. ೧-೬೦) ; ಮೀಗೆ ತಿಮಿಂಗಿಲ ನೊಡನೆ ಹುಲುಮೀನುಗಳು ಮಾಡುವುದೇನು (ಕುವ್ಯಾದ್ರೋ. ೩-೪೨); ಅಡಿಯ ಮೇಲಾದವೋಲೋಕರಿಪುದದ್ರಿಸಮ ಊರ್ಮಿಮಾಲಾ ಭಯಂಕರ ಸಮುದ್ರಂ, ತಿಮಿಂಗಿಲಂ ತೃಣದ ಕಣವಾಯಿತೆಂಬಂತೆ (ಶ್ರೀರಾಮಾ. ೧೬೫-೧೬೦); ಇದು ತಿಮಿಂಗಿಲ ಮೊಸಳೆ ಮೀನಾಗಳ ಬಾಳ ಕೊಳಗುಳದಾಕರ! (ಮಾನಸ. ೪೦-೩). **ತಿಮಿಂಗಿಳ** : "ರೀರಲ್ಲಃ, ತಿಮಿಃ, ತಿಮಿಂಗಿಳಃ (ತಿಮಿಂಗಿಳಗಿಳಃ)–ಈ ೪ ಒಂದೊಂದಕ್ಕೆ ಹಿರಿಯವಪ್ಪ ಮೀನ್" (ಹಲಾಯು. ೦೧೯-೩೪) ; ಬಾಳೆಗಳಂ ತಿಮಿ ನುಂಗೆ, ನುಂಗಿದಾಗಳೆ ತಿಮಿಯಂ ತಿಮಿಂಗಿಳ ನಡಂಗುವಿನಂ ತವೆ ನುಂಗೆ (ಕಾವ್ಯಾವ. ೮೮೪). [ ಸಂ. ]

**ತಿಮಿಂಗಿಲಗಿಲ, ತಿಮಿಂಗಿಳಗಿಳ** (ನಾ). 'ತಿಮಿಂಗಿಲ' ಎಂಬ ಮೀನುಗಳನ್ನು ನುಂಗುವ ಅತಿ ದೊಡ್ಡ ಗಾತ್ರದ ಒಂದು ಬಗೆಯ ಮೀನು: ಅದಕ್ಕೆ ಮೊದಲು ನಾನು ತಿಮಿಂಗಿಲಗಿಲವಾಗಿದ್ದೆನು (ಮಂತ್ರಶ. ೫೬-೧೪). **ತಿಮಿಂಗಿಳಗಿಳ**: "ರೀರಲ್ಲಃ, ತಿಮಿಃ, ತಿಮಿಂಗಿಳಃ (ತಿಮಿಂಗಿಳಗಿಳಃ) – ಈ ೪ ಒಂದೊಂದಕ್ಕೆ ಹಿರಿಯವಪ್ಪ ಮೀನ್" (ಹಲಾಯು. ೦೧೯-೩೪) ; ತಿಮಿಯಂ ತಿಮಿಂಗಿಳನಡಂಗುವಿನಂ ತವೆ ನುಂಗೆ ತತ್ತಿಮಿಂಗಿಳಮುಮನಾ ತಿಮಿಂಗಿಳಗಿಳಂ ತವೆ ನುಂಗಿದುದೊಂದು ತಾಣದೊಳ್ (ಕಾವ್ಯಾವ. ೮೮೪). [ ಸಂ. ]

**ತಿಮಿಂಗಿಲನ್ಯಾಯ** (ನಾ). ದೊಡ್ಡದು ಚಿಕ್ಕದನ್ನು ತಿಂದು ಜೀವಿಸುವ ನ್ಯಾಯಂ : ಈ ತಿಮಿಂಗಿಲನ್ಯಾಯದಿಂದ ಸ್ವಾತಂತ್ರ್ಯ ಸಿದ್ಧಿಯಾದೀತೆ (ಹಾಡುಹು. ೬೪). [ ತಿಮಿಂಗಿಲ + ನ್ಯಾಯ ]

**ತಿಮಿಂಗಿಲರಾಶಿ** (ನಾ). ಒಂದು ನಕ್ಷತ್ರ ಪುಂಜದ ಹೆಸರು : ಅಗ್ನಿಕುಂಡ ಶಿಲ್ಪಶಾಲೆಗಳ ಮೇಲಕ್ಕೆ ಅಂದರೆ ಉತ್ತರ ವಾಯುವ್ಯಗಳಿಗೆ ಹಬ್ಬಿ ತಿಮಿಂಗಿಲರಾಶಿ ವ್ಯಾಪಿಸಿದೆ (ನಕ್ಷತ್ರ. ೩೧). ℙ ಇದು ಇಂಗ್ಲಿಷಿನ 'Cetus' ಎಂಬುದರ ಕನ್ನಡ ಅನುವಾದ. [ ತಿಮಿಂಗಿಲ + ರಾಶಿ ]

**ತಿಮಿಂಗಿಳ** 'ತಿಮಿಂಗಿಲ' ನೋ.

**ತಿಮಿಂಗಿಳಗಿಳ** 'ತಿಮಿಂಗಿಲಗಿಲ' ನೋ.

**ತಿಮಿತ** (ಗು). ಅಲುಗಾಡದ ; ಅಚಲವಾದ ; ಸ್ಥಿರವಾದ : "ಸ್ತಿಮಿತಂ ತಿಮಿತಂ" (ವಸ್ತುಕೋ. ೧೦೬-೩೦) ; ತಿಮಿತ ಕಪೋಲಾವಳಗ್ನಾಳಕಂ ಯೌವತಮಾದಂ ಕಣ್ಗೆವಂದಿರ್ದುದು ಕೃತಸಲಿಲಕ್ರೀಡಮುತ್ಸೋತ್ಪೀಡಂ (ಚಂದ್ರಪು. ೭-೧೯೪). [ ಸಂ. ]

**ತಿಮಿತ್ತಿಳಕ** (ನಾ). ಕಾಡಿಗೆಯ ತಿಲಕ (?) : ಅದಲ್ಲದೆಯುಂ ತಿಮಿತ್ತಿಳಕಮೆಂಬುದು ಪಸುಗೂಸಿಂಗೆ ಮುಸಿಯೆಂಬುದು ಹುರಿಯೋಡಿಂಗೆ (ಅನಂಪು. ೨-೨೮ ವ).

[ ℙ ಇದು 'ತಿಮಿರ್ತಿಲಕ' ಎಂಬುದರ ಅಪಲಿಖಿತವಿರಬಹುದು ]

**ತಿಮಿರ್₁, ತಿಗುರು₁, ತಿಮಿರು₁, ತಿವುರು₁** (ಕ್ರಿ). ೧. (ಚರ್ಮವನ್ನು) ತಿಕ್ಕಿ ಶುಭ್ರಗೊಳಿಸು ; ಚೊಕ್ಕಟಗೊಳಿಸು: "ತಿಮಿರ್–ತ್ವಙ್ಮಲ ವಿಸರ್ಜನೇ" (ಶಮಧಾ). ೨. ಗಂಧ ಮೊದಲಾದುವನ್ನು ಲೇಪಿಸು,-ಉಜ್ಜು,-ಪೂಸು: ಬಟಱಿಯುಂ ಯಕ್ಷಕರ್ದಮದ ಕೆಯ್ಗುಟ್ಟಿಯೊಳ್ ಕೆಯ್ಯಂ ತಿಮಿರ್ದು ತಂಬುಲಮಂ ಕೊಂಡು (ಪಂಪಭಾ. ೩-೭೯ ವ) : ಕೈಘಟ್ಟಿಯೊಳಂಗೆಯ್ಯಂ ತಿಮಿರ್ದು (ಸುಕುಮಾ. ೧೧-೩೦) ; ಅಗ್ರುಪಲ್ಲವದ ಚಪ್ಪರಣೆಗಳಿಂ ಬೆಪ್ಪಳಿಸಿ ನೆಗೆದು ತಿಮಿರ್ದ ಕುಂಕುಮದಿಂ (ಅನಂಪು. ೨-೨೯ ವ) ; ಬಾರಯ್ ನೀರೆಱೆವೆಂ ಮೀಯಿಸುವೆಂ ಪೂಸುವೆಂ ಬಾವನ್ನದಿಂ ತಿಮಿರ್ವೆಂ ತಿಲಕಮನಿಡುವೆಂ ತನಿವಣ್ಗಳಂ ತಿನಲೀವೆಂ,ನಿನ್ನನಗಲದಾವಗಂ ಸೇವಿಸುವೆಂ(ರಾಮಾಶ್ವ.೬೧-೧೬).